॥ ಶ್ರೀ ಶ್ರೀಭರ್ಗೋಯಾತ್ ॥

# ವಿಚಿತ್ರಕಥಾಪ್ರಪಂಚಂ

ಎಂಬ

## (ಕಾಶೀರಾಮೇಶ್ವರ ಯಾತ್ರೆಯ ಕಥೆಗಳು)


—: ಗ್ರಂಥಕರ್ತ :—

ಪಂಡಿತ ಕವಿ,

ಎ. ಕೇಶವಯ್ಯ.



—: ಪ್ರಕಾಶಕರು :—

ಟಿ. ಕೆ. ಕೃಷ್ಣಸ್ವಾಮಿಶೆಟ್ಟಿ,

ಪ್ರೊಪ್ರೈಟರ್ ಕಳಾನಿಧಿ ಪ್ರೆಸ್,

ಚಿಕ್ಕಪೇಟೆ, ಬೆಂಗಳೂರು ಸಿಟಿ.

[ಪ್ರಥಮ ಮುದ್ರಣ ೧೦೦೦ ಪ್ರತಿಗಳು.]





ಕ್ರಯ 1—8—0. 1936. ಕ್ರಯ ೧-೮-೦.

# ಭಗವತ್ಪ್ರಾರ್ಥನಾದಿಗಳು.

ವೃ|| ಶ್ರೀಮದ್ವೇಂಕಟಶೈಲನಾಥ ನತಶಿಷ್ಟವ್ರಾತ ನಾನಾಗಮ |
ಗ್ರಾಮಾಜ್ಞಾತಗುಣಾಲವಾಲ ಕನಕೋದ್ಯಚ್ಚೇಲ ಪದ್ಮಾಲಯಾ |
ಪ್ರೇಮಾ ಪಾಲಿಸು ಲೋಕಮಂನಿರನಸೂಯಾ ಸಂಪದಾಯುಷ್ಯಸು |
ಕ್ಷೇಮಸ್ಥೈರ್ಯಮನಿತ್ತು ಸಂತತಕೃಪಾಂಚದ್ದೃಷ್ಟಿಯಿಂ ನೋಡುತುಂ||

ಕಂ|| ಶ್ರೀಯೆ ಸುರಸಿದ್ಧಕಿನ್ನರ |
ಗೇಯೆ! ತಟಿಚ್ಛಾಯೆ ಹರಿಯಜಾಯೆ ವಿನಿಹತಾ ||
ಪಾಯೆ ನತೋದ್ಧೃತಿರಚಿತೋ |
ಪಾಯೆ ಸದಾಕಾಯೆ! ತಾಯೆ ಸುರುಚಿರಕಾಯೇ ||೨||

ಕಂ|| ವಾಣಿ ಮೃದುಮಧುರಸುರುಚಿರ |
ವಾಣಿ ಫಣೀದ್ವೇಣಿ ಬಿದಿಯರಾಣಿ ವಿಪಂಚೀ ||
ಪಾಣಿ, ಶುಭಂಕರ ಸುಗುಣ |
ಶ್ರೇಣಿ, ನೆಲಸು! ಮನ್ಮುಖಾಬ್ಜದೊಳನವರತಂ ||೩||

ಕಂ| ಎಡರ್ಗಳ ನುಡುಗಿಪುದೇ ತನ |
ಗಿಡಿದಿಹ ಕಡುಕಜ್ಜಮಾಗೆ ಬೇಳ್ಪರ ಬೇಳ್ಪಂ ||
ನಡೆಯಿತ್ತು ಪೊರೆವ ಬಿಜ್ಜೆಯ |
ಪೊಡೆಯನ ನಾನನಿಶ ಮರ್ಚಿಪೆಂ ಮನದೆನಸುಂ ||೪||

ಶ್ಲೋ|| ಕೌಂಡಿನ್ಯಗೋತ್ರ ಕಲಶಾಂಬುಧಿ ಶೀತಭಾನುಂ |
ಶ್ರೀಚೆನ್ನಮಾರ್ಯಮನಿಶಂ ಹೃದಿತಾತಪಾದಂ ||
ಧ್ಯಾಯೇಹಮಂಚಿತ ಗುಣಾಮೃತಸಾರಸಿಂಧುಂ |
ನಾರಾಯಣಾಂಘ್ರಿ ಭಜನೈಕಪರಾಯಣಂ ತಂ ||೫||

ಆರ್ಯಾಗೀ|| ಭಾರದ್ವಾಜಸುಗೋತ್ರಂ| ಧ್ಯಾಯೇ ಶ್ರೀ ಶ್ರೀನಿವಾಸಗುರುವರ್ಯಂ ||
ಯೋಮಾಂ ಚಕಾರವಿಲಸ| ತ್ಕರ್ಣಾಟವಚೋ ವಿಚಕ್ಷಣಂಕೃಪಯಾ ||೬||

ಆ|| ಗೀ|| ಸಾತವಲಿ ಕೃಷ್ಣಶಾಸ್ತ್ರಿ| ಖ್ಯಾತಂಶ್ರೀ ಮುಲಕನಾಡು ಕುಲಜಾತಂ ||
ಈಡೇ ಯೋಸಾಕೃಷ್ಯಹ| ಮಾಂಧ್ರಾಮರ ವಾಕ್ಪ್ರಮಾಣ ಪಾರೀಣಃ ||೭||

ಆ||ಗೀ|| ಯಸ್ಯಾಶ್ರಯಣಾತ್ತರಣೋ| ಪಾಯಮಹಂ ವಿದಿತವಾನ್ತಮನವರತಂ||
ಶರಣಂ ಭಜಾಮಿ ಸಕರುಣ| ಮನಂತಸಂಯಮಿನ ಮಖಿಲಶಾಸ್ತ್ರವಿದಂ ||

ವೃತ್ತಂ|| ಸರಸಗುಣಾಕರಂ ಸುತಕಲಾನಿಧಿ ಮುದ್ರಣಶಾಲಿಯುದ್ದಿಕಂ |
ಬರೆಯಿನೆ ಕೃಷ್ಣಸ್ವಾಮಿ ಬುಧಮೌಳಿ ವಿಚಿತ್ರಕಥಾಪ್ರಪಂಚಮುಂ ||
ಬರೆದೆನಿದಂ ಸಮಂತು ಕವಿಕೇಶವನೆಂ ಗುಣಮಂ ಗ್ರಹಿಕ್ಕೆ ತ |
ಪ್ಪರಸದೆ ಕೋವಿದರ್ ಪರಮಧೀಮಹಿತರ್ ದಯಮಾನಮಾನಸರ್ ||



# ಪೀಠಿಕೆ.

ಮಹಾಶಯರೇ !

ವಿನೋದಕಾರಿಗಳಾದ ಕೆಲವು ಕಥೆಗಳನ್ನು ಸುಲಭವಾದ ಕನ್ನಡಭಾಷೆಯಲ್ಲಿ ಬರೆದುಕೊಡಬೇಕೆಂದು ಕಲ್ಯಾಣ (ಬೆಂಗಳೂರ್) ನಗರದ ಕಲಾನಿಧಿ ಮುದ್ರಾಶಾಲಾಧ್ಯಕ್ಷರಾದ ಮ॥ ರಾ॥ ಶ್ರೀ॥ ಟಿ. ಕೆ. ಕೃಷ್ಣಸ್ವಾಮಿ ಸೆಟ್ಟಿಯವರು ಕೇಳಿದುದರಿಂದ, ನನಗೆ ಮಹೋಪಕಾರವನ್ನು ಮಾಡಿರುವ ಮಾಡುತ್ತಿರುವ ಮಾಡುವ ಅವರ ಮಾತನ್ನು ಮೀರಲಾರದೆ ಕೆಲವು ವಿಚಿತ್ರಗಳಾದ ಕಥೆಗಳನ್ನು ಬರೆದು ಅದಕ್ಕೆ ವಿಚಿತ್ರಕಥಾಪ್ರಪಂಚವೆಂದು ಹೆಸರಿಟ್ಟಿರುವೆನು ಈ ಚಿಕ್ಕ ಪುಸ್ತಕವು ಒಂದನೆಯ ಭಾಗವಾಗಿರುವುದು. ಎರಡನೆಯ ಭಾಗದಲ್ಲಿ ಮತ್ತೆ ಕೆಲವು ಆಶ್ಚರ್ಯಕರಗಳಾದ ಕಥೆಗಳನ್ನು ಬರೆವ ಉದ್ದೇಶವಿರುವುದು. ಈ ಗ್ರಂಥವು, ಓದುವವರ ಮನಸ್ಸನ್ನು ಒಂದಿನಿಸಾದರೂ ಆಹ್ಲಾದಗೊಳಿಸಿದರೆ ನನ್ನ ಶ್ರಮವು ಸಾರ್ಥಕವಾಯಿತೆಂದು ಭಾವಿಸುವೆನು, "ಸಂತೋಷಂ ಜನಯೇತ್ಪ್ರಾಜ್ಞಃ ತದೇವೇಶ್ವರಪೂಜನಂ" ಎಂದಲ್ಲವೆ ಹಿರಿಯರು ಹೇಳಿರುವರು. ಈ ಭಾಗದಲ್ಲಿ ಹೇಳಿರುವ ಕಥಾಸಮುದಾಯವು ಓದುವುದಕ್ಕೆ ಇಂಪಾಗಿಯೂ, ಸುಗಮವಾಗಿಯೂ, ನೀತಿಧರ್ಮಬೋಧಕವಾಗಿಯೂ ಇದ್ದು, ಓದುವವರ ಮನಸ್ಸನ್ನು ಪ್ರೀತಿಗೊಳಿಸಬಲ್ಲುದೆಂದೂ ಆದುವರಿಂದಲೇ ಸಮಸ್ತ ರಸಿಕಜನಾಂಗೀಕಾರಾರ್ಹವಾಗಿರುವುದೆಂದೂ ನನ್ನ ಭಾವನೆ. ಸೌಹಾರ್ದಹೃದಯರೂ ಮಾತ್ಸರ್ಯರಹಿತರೂ ಸರ್ವಸಮರೂ ಪರೋತ್ಕರ್ಷಸಹಿಷ್ಣುಗಳೂ ಆದ ಪುರುಷೋತ್ತಮರು ಉದಾಸೀನರಾಗದೆ ಈ ಕಥೆಗಳನ್ನೋದಿ ಗುಣಗ್ರಹಣವನ್ನು ಮಾಡಬೇಕೆಂದು ಅತ್ಯಂತ ವಿನಯಪೂರ್ವಕವಾಗಿ ಪ್ರಾರ್ಥಿಸುತ್ತೇನೆ ಮತ್ತು ದೋಷಗಳನ್ನು ಮನ್ನಿಸಬೇಕೆಂದು ಬೇಡುತ್ತೇನೆ.

ಇಂತು ವಿದ್ವಜ್ಜನಪಾದ ಪರಾಗಪ್ರಾಯಂ,

೨೭—೧೨—೩೪.
ಚಿಕ್ಕಬಳ್ಳಾಪುರ.

ಪಂಡಿತ ಕವಿ ಎ. ಕೇಶವಯ್ಯ,
ಕರ್ನಾಟಕ ವಾಙ್ಮಯ ಮಹೋದಧೀತ್ಯಾದಿ.

# ವಿಚಿತ್ರ ಕಥಾ ಪ್ರಪಂಚದ

## ವಿಷಯಾನುಕ್ರಮಣಿಕೆ.



# ಕಾಶೀರಾಮೇಶ್ವರ ಯಾತ್ರೆಯ ಕಥೆಗಳು

ಎಂಬ

# ವಿಚಿತ್ರ ಕಥಾ ಪ್ರಪಂಚಂ.

## ಕಥಾವತರಣಂ.

ಶ್ರೀಮದನಂತಕೋಟಿ ಬ್ರಹ್ಮಾಂಡನಾಯಕನೂ, ಆದಿಮಧ್ಯಾಂತರಹಿತನೂ, ಅಪ್ರಮೇಯನೂ, ಅಖಿಲಹೇಯ ಪ್ರತ್ಯನೀಕ ಕಲ್ಯಾಣಗುಣನಿಧಾನನೂ, ಅವಾಙ್ಮನಸಗೋಚರನೂ, ಹರವಿರಂಚಿಪ್ರಮುಖನಿಖಿಲದೇವತಾ ಸಾರ್ವಭೌಮನೂ ಆದ ಭಗವಂತನ ಸೃಷ್ಟಿವೈಚಿತ್ರ್ಯಕ್ಕೆ ಪ್ರದರ್ಶನಸ್ಥಾನವಾಗಿ ಪ್ರಕಾಶಿಸುತ್ತಿರುವ ಭೂಮಂಡಲಕ್ಕೆ, ನಾವೀಗ ವಾಸಮಾಡುತ್ತಿರುವ ಭರತಖಂಡವು ಮುಂಡನಪ್ರಾಯವಾಗಿ ಸರ್ವಸಂಪತ್ಸಮೃದ್ಧಿಯಿಂದಲೂ, ಗಂಗಾ ಯಮುನಾ ಗೋದಾವರೀ ಕಾವೇರ್ಯಾದಿ ಪುಣ್ಯತೀರ್ಥಗಳಿಂದಲೂ, ಕಾಶೀ ಪ್ರಯಾಗ ನಾಸಿಕಾ ಪ್ರಮುಖಾನೇಕ ಶತಸಂಖ್ಯಾಕ ಪುಣ್ಯಕ್ಷೇತ್ರಗಳಿಂದಲೂ, ವಿಚಿತ್ರತರ ಶಿಲ್ಪಕೌಶಲ್ಯಮಂ ಪ್ರದರ್ಶಿಪ ಬಹುಪಾವನ ದೇವತಾಯತನಗಳಿಂದಲೂ, ಸಮಸ್ತವ್ಯಾಧಿ ಬಾಧಾನಿವಾರಣ ಪಟುತರ ತರು ಗುಲ್ಮ ಲತಾದಿ ಪರಿಶೋಭಿತ ಮಹಾರಣ್ಯ ಪರಿವೇಷ್ಟಿತ ಶೈಲಜಾಲಂಗಳಿಂದಲೂ, ಸಕಲ ಮುನಿಜನ ಭಾಗಧೇಯಂಗಳೆನಿಸಿ ತನ್ನಿವಾಸಯೋಗ್ಯಂಗಳಾವ ನಿರ್ಮಲ ನೀರಪೂರ ರಾರಾಜಿತ ಕಾಸಾರಂಗಳಿಂದಲೂ ಕಂಗೊಳಿಸುತ್ತಿರುವುದೆಂಬುದು ಸರ್ವವಿದಿತವಾಗಿರುವುದಲ್ಲವೆ? ಹೀಗೆ ಉತ್ತಮೋತ್ತಮತೆಯಿಂದೊಪ್ಪುತ್ತಿರುವ ಈ ಭವ್ಯತರ ಭಾರತ ಭೂಮಿಯಲ್ಲಿ ಧರಣೀ ರಮಣೀಮಣಿಗೆ ಸೀಮಂತಮಣಿಯೆನೆ ವೇಂಕಟಾಚಲವು *ನೂರಇಪ್ಪತ್ತು ದಿವ್ಯತಿರುಪತಿಗಳಲ್ಲಿ ಬಹು ಮುಖ್ಯವಾಗಿರುವುದೂ, ಅದು ಕಲಿ

---

* ೧೨೦ **ದಿವ್ಯತಿರುಪತಿಗಳು:**—೧ ಶ್ರೀವೈಕುಂಠ, ೨ ಆಮೋದ, ೩ ಪ್ರಮೋದ, ೪ ಸಂಮೋದ, ೫ ಸತ್ಯಲೋಕ, ೬ ಸೂರ್ಯಮಂಡಲ, ೭ ಕ್ಷೀರಾಬ್ಧಿ, ೮ ಶೇಷದ್ವೀಪ, ೯ ಬದರೀಕ್ಷೇತ್ರ, ೧೦ ನೈಮಿಶಾರಣ್ಯ. ೧೧ ಹರಿಕ್ಷೇತ್ರ, ೧೨ ಅಯೋಧ್ಯೆ, ೧೩ ಮಧುರೆ, ೧೪ ಮಾಯೆ, ೧೫ ಕಾಶಿ, ೧೬ ಅವಂತಿ, ೧೭ ದ್ವಾರವತಿ, ೧೮ ವ್ರಜ, ೧೯ ಬೃಂದಾವನ, ೨೦ ಕಾಳೀಯಹ್ರದ, ೨೧ ಗೋವರ್ಧನ ೨೨ ಭವಷ್ನ, ೨೩ ಗೋಮಂತಪರ್ವತ, ೨೪ ಹರಿದ್ವಾರ, ೨೫ ಪ್ರಯಾಗ, ೨೬ ಗಯಾ, ೨೭ ಗಂಗಸಾಗರ, ೨೮ ಚಿತ್ರಕೂಟ, ೨೯ ನಂದಿಗ್ರಾಮ, ೩೦ ಪ್ರಭಾಸ, ೩೧ ಶ್ರೀಕೂರ್ಮ, ೩೨ ನೀಲಾದ್ರಿ, ೩೩ ಸಿಂಹಾಚಲ, ೩೪ ತುಲಸೀವನ, ೩೫ ಕೃತಶೌಚ, ೩೬ ಶ್ವೇತಾದ್ರಿ, ೩೭ ಧರ್ಮಪುರಿ, ೩೮ ಕಾಕುಲ, ೩೯ ಅಹೋಬಲ, ೪೦ ಗಾರುಡಾದ್ರಿ, ೪೧ ಪಂಡರಾಪುರ, ೪೨ ವೇಂಕಟಾದ್ರಿ, ೪೩ ಯಾದವಾದ್ರಿ,

ಯುಗ ವೈಕುಂಠವೆಂಬುದೂ ಆಬಾಲಗೋಪಾಲಜ್ಞಾತವಾಗಿ ಲೋಕಪ್ರಸಿದ್ಧಿಯನ್ನು ಪಡೆದು, ಸಕಲ ಜನಾಭೀಷ್ಟ ಪ್ರದಾಯಕವಾಗಿರುವುದೆಂಬುದೂ ಎಲ್ಲರೂ ತಿಳಿದ ವಿಷಯವೇ ಆಗಿದೆ.

ಈ * ವೇಂಕಟಾಚಲಕ್ಕೆ ಶೇಷಶೈಲ, ಗರುಡಾಚಲ, ನಾರಾಯಣಾದ್ರಿ, ವೃಷಭಾದ್ರಿ, ವೃಷಾದ್ರಿ ಮೊದಲಾದ ಹೆಸರುಗಳನೇಕವುಂಟು. ಇದು ಮಹೋನ್ನತವಾಗಿ, ಸಂದರ್ಶನ ನಿಮಿತ್ತಾಗತ ನಾನಾಜನಪದ ಜನಸಂಕುಲದಿಂದೊಪ್ಪುತ್ತ, ಹೋಗಿಬರುವ ಭಕ್ತಕೋಟಿಯ ಸೌಕರ್ಯಕ್ಕಾಗಿ ನಿರ್ಮಿಸಲ್ಪಟ್ಟಿರುವ ವಿಶಾಲ ಸೋಪಾನಗಳಿಂದಲೂ, ವಿಚಿತ್ರತರ ಶಿಲ್ಪಕಲ್ಪನೆಗಳಿಂದ ಸುಂದರಂಗಳಾದ ಗೋಪುರ ಮಂಟಪಾದಿಗಳಿಂದಲೂ, ಬಗೆಬಗೆಯ ತರು ಲತಾ ಗುಲ್ಮ ನಿಕುಂಜ ಪುಂಜಂಗಳಿಂದಲೂ, ಸುಗಂಧ ಬಂಧುರ ಪ್ರಸೂನ ಫಲಭಾರ ನಮ್ರ ಶಾಖಿಶಾಖಾಪುಂಖ ಸಮಾಶ್ರಯ ವಿಹಂಗ ಸಮುತ್ತುಂಗಾಭಂಗ ಕಲಕೂಜಿತಂಗಳಿಂದಲೂ, ಅನೇಕವಿಧ ವಿಚಿತ್ರ ಜಂತುಸಂತಾನ ನಿವಿಡ ಸಂಚಾರ ಸಂಕಲಿತ ವನ ಪ್ರದೇಶಂಗಳಿಂದಲೂ ಕಂಗೊಳಿಸುತ್ತಿರುವ ಮಾರ್ಗಂಗಳು ಚತುರ್ದಿಕ್ಕುಗಳ

---

೪೪ ಘಟಿಕಾಚಲ, ೪೫ ಹಸ್ತಿಗಿರಿ, ೪೬ ಕಾಂಚೀ, (ಈ ಕಾಂಚಿಯಲ್ಲಿಯೇ ಇನ್ನೂ ೧೭ದಿವ್ಯ ಕ್ಷೇತ್ರಗಳು.) ೬೪ ಗೃಧ್ರಸರಸ್ಸು, ೬೫ ಶೀಕ್ಷಾರಣ್ಯ, ೬೬ ತೋತಾದ್ರಿ, ೬೭ ಗಜಸ್ಥಲ, ೬೮ ಕುವಲ, ೬೯ ವನ (ತಿರುವಲಿಕ್ಕೇಣಿ,) ೭೦ ಬಲಿಪುರ, ೭೧ ಭಕ್ತಿಸಾರ, ೭೨ ಅಹೀಂದ್ರ, ೭೩ ಗೋಪಪುರಿ, ೭೪ ಶ್ರೀಮುಷ್ಣಂ, ೭೫ ಮಹೀಶ, ೭೬ ಶ್ರೀರಂಗ, ೭೭ ಸಾರಕ್ಷೇತ್ರಂ, ೭೮ ಕುಂಡಿನಪುರಂ, ೭೯ ದಕ್ಷಿಣದ್ವಾರಕೆ, ೮೦ ಶ್ರೀನಿವಾಸಸ್ಥಲ, ೮೧ ವ್ಯಾಘ್ರಪುರಿ, ೮೨ ಸ್ವರ್ಣಮಂದಿರ, ೮೩ ಆಕಾಶನಗರ, ೮೪ ಉತ್ಪಲಾವತಕ, ೮೫ ಮಣಿಕೂಟ, ೮೬ ಕೃಷ್ಣಪುರಿ, ೮೭ ಭಕ್ತಿಸ್ಥಾನ, ೮೮ ಶ್ವೇತಗ್ರಹ, ೮೯ ಮಣಿಪುರ, ೯೦ ಭಾರ್ಗವಸ್ಥಾನ, ೯೧ ಪುರುಷೋತ್ತಮ, ೯೨ ಚಕ್ರತೀರ್ಥ, ೯೩ ಕುಂಭಘೋಣ, ೯೪ ಭೂತಿಸ್ಥಾನ, ೯೫ ಕಪಿಸ್ಥಲ, ೯೬ ಉತ್ತಮಸ್ಥಲ, ೯೭ ಪೌಂಡ್ರಸ್ಥಲ, ೯೮ ವೃಷ್ಣಕೋಟಿ, ೯೯ ನಂದಪುರಿ, ೧೦೦ ವೃದ್ಧಪುರಿ, ೧೦೧ ಸಂಗಗ್ರಾಮ, ೧೦೨ ಶರಣಾಹ್ವಯ, ೧೦೩ ಸಿಂಹಕ್ಷೇತ್ರ, ೧೦೪ ಮಣಿಮಂಟಪ, ೧೦೫ ನಿಬಿಡ, ೧೦೬ ಧಾನುಷ್ಕ, ೧೦೭ ಮೌಹೂರ, ೧೦೮ ಮಧುರ, ೧೦೯ ವೃಷಭಾದ್ರಿ, ೧೧೦ ವರಗುಣ, ೧೧೧ ಕುರುಕಾಸ್ಥಲ, ೧೧೨ ಗೋಷ್ಠೀಪುರ, ೧೧೩ ದರ್ಭಶಯನ, ೧೧೪ ಮಂಗಳಕ, ೧೧೫ ಭ್ರಮರಸ್ಥಲ, ೧೧೬ ಕುರಂಗ, ೧೧೭ ವಟಸ್ಥಲ, ೧೧೮ ಕೃಷ್ಣಾನದಿ, ೧೧೯ ಅನಂತಶಯನ ಏತಾನಿ ವಿಷ್ಣು ಸ್ಥಾನಾನಿ ಪೂಜಿತಾನಿ ಮಹಾತ್ಮಭಿಃ॥ ಈ ನೂರಿಪ್ಪತ್ತರಲ್ಲಿ ೮ ಸ್ವಯಂ ವ್ಯಕ್ತಸ್ಥಲಗಳು—ಆದ್ಯಂ ಸ್ವಯಂ ವ್ಯಕ್ತಮಿದಂ ೧ ವಿಮಾನಂ ರಂಗಸಂಜ್ಞಕಂ । ೨ ಶ್ರೀಮುಷ್ಣಂ ೩ ವೇಂಕಟಾದ್ರಿಂಚ ೪ ಸಾಲಗ್ರಾಮಂಚ ೫ ನೈಮಿಶಂ । ೬ ತೋತಾದ್ರಿಂ ೭ ಪುಷ್ಕರಂಚೈವ ೮ ನರನಾರಾಯಣಾಶ್ರಮಂ। ಅಷ್ಟೌಮೇ ಮೂರ್ತಯಸ್ಸಂತಿ ಸ್ವಯಂ ವ್ಯಕ್ತಾ ಮಹೀತಲೇ ॥

* ವೇಂ=ಪಾಪಂ, ಕಟತಿ=ದಹತಿ, ಇತಿ=ವೇಂಕಟಃ, ಕಟಗತೌ=ಪಾಪಗಳನ್ನು ಸುಡುವುದು. ಆದುದರಿಂದ ವೇಂಕಟಾಚಲವೆಂಬ ಹೆಸರು ಸಾರ್ಥಕವಾಗಿರುವುದು.

ಲ್ಲಿಯೂ ತೋರುತ್ತಿರೆ ಯಾತ್ರಾರ್ಥಿಗಳ ಕಣ್ಮನಂಗಳಿಗದೊಂದುಬಗೆಯ ಆನಂದವನ್ನು ಬೀರುತ್ತಿರುವುದು. ಆ ಮಹಾಪರ್ವತದಲ್ಲಿ ತಪಸ್ವಿಗಳ ತಪೋನಿಯಮಕ್ಕೆ ಅರ್ಹಗಳಾದ ಮಹಾ ಗುಹಾಂತರಾಳಗಳೂ, ಅದ್ಭುತಗಳಾದ ಜಲಪಾತಗಳೂ, ಮನೋಹರಗಳಾದ ಬುಗ್ಗೆಗಳೂ, ಅನೇಕವಾಗಿರುವುವು. ಆದರೆ ಆ ಪ್ರಾಂತಗಳು ದುಷ್ಟಮೃಗ ಸಂಚಯ ಸಂಚಾರದಿಂದ ಭಯಂಕರಗಳಾಗಿರುವುದರಿಂದ ಮನುಷ್ಯಸಂಚಾರಕ್ಕೆ ಅನರ್ಹಗಳಾಗಿರುವುವು. ಇಂತಹ ಶ್ರೀ ಶೇಷಶೈಲದಲ್ಲಿ ದೇವದೇವನಾದ *ಶ್ರೀ ವೇಂಕಟೇಶ್ವರನು ಭಕ್ತಜನರನ್ನು ಉದ್ಧರಿಸುವುದಕ್ಕೆ ಅರ್ಚಾರೂಪದಿಂದ ಅವತರಿಸಿ ತನ್ನ ನಿರ್ವ್ಯಾಜವಾದ ಕೃಪೆಗೆ ಪಾತ್ರರಾದವರ ಕಣ್ಗಳಿಗೆ ಪರಮಾನಂದವನ್ನು ಬೀರುತ್ತ, ಅವರನ್ನು ಆನಂದಾಬ್ಧಿಯಲ್ಲಿ ಓಲಾಡಿಸುತ್ತ **ಕಲೌ ವೇಂಕಟನಾಯಕಃ** ಎಂಬ ಅಭಿಯುಕ್ತೋಕ್ತಿಯನ್ನು ಸಾರ್ಥಕಗೊಳಿಸಿ ಸಮಸ್ತ ಸಮಯಗಳಲ್ಲಿಯೂ ಅಭಿನವ ವೈಭವಗಳಿಂದೊಪ್ಪುತ್ತಿರುವನು. ಆ ವೈಭವಗಳನ್ನು ನೋಡುವುದಕ್ಕೆ ಸಾವಿರ ಕಣ್ಗಳಾದರೂ ಸಾಲದು. ಯಾತ್ರಿಕರಾಗಿ ಬರುವ ಭಕ್ತಜನರು ವೇಂಕಟೇಶ್ವರನ ಮಂಗಳಮೂರ್ತಿಯನ್ನು ಕಂಡುಕಂಡು ಧನ್ಯಂಮನ್ಯರಾಗಿ ತಂತಮ್ಮ ಗ್ರಾಮಗಳಿಗೆ ಹಿಂದಿರುಗುವಾಗ ಬಿಟ್ಟುಹೋಗಲಾರದೆ ಹಲವುಬಗೆಯಿಂದ ಹಂಬಲಿಸುತ್ತಿರುವುದನ್ನು ಕಂಡರೆ ಎಂತಹ ನಾಸ್ತಿಕನಿಗಾದರೂ ಅವನ ಹೃದಯದಲ್ಲಿ ಆಸ್ತಿಕತ್ವವುಂಟಾಗದೆ ಇರದು.

ಹೀಗೆ ಸರ್ವವೈಭವೋಪೇತವಾಗಿ ಸುರ ಗಂಧರ್ವ ಕಿನ್ನರ ಕಿಂಪುರುಷಾದಿಗಳ ಕಣ್ಮನಗಳನ್ನು ಆಕರ್ಷಿಸುತ್ತಿರುವ ಆ ಪರ್ವತದಲ್ಲಿ ಕಂಗೊಳಿಸುತ್ತಿರುವ ಅನೇಕ ಗುಹಾಕುಹರಗಳಲ್ಲೊಂದರಲ್ಲಿ ಉತ್ತರಪ್ರಾಂತದಿಂದ ಬಂದು ನೆಲೆಗೊಂಡ ಒಬ್ಬ ಮಹಾ ತಪಸ್ವಿಯು ಏಕಾಂತವಾಗಿ ತಪಸ್ಸು ಮಾಡುತ್ತಿದ್ದನು. ಆತನು ಅಷ್ಟಾಂಗಯೋಗ ನಿಷ್ಣಾಗರಿಷ್ಠನೆಂಬುದು ಯಜ್ಞೇಶ್ವರನ ಕಾಂತಿಯನ್ನು ಅಲ್ಲಗಳೆಯುತ್ತಿರುವ ಆತನ ತೇಜಸ್ಸಿನಿಂದಲೇ ತೋರುತ್ತಿದ್ದಿತು. ಆತನು ವಾಸಿಸುತ್ತಿದ್ದ ಗವಿಯು ಉಳಿದ ಗವಿಗಳಂತೆ ದುರ್ಗಮವಾಗಿಯೂ ಭಯಂಕರವಾಗಿಯೂ ಬಹುದೂರವಾಗಿಯೂ ಇರದೆ ಸುಗಮವಾಗಿಯೂ ಮೋದಂಕರವಾಗಿಯೂ ಸಮೀಪಸ್ಥವಾಗಿಯೂ ಇದ್ದುದರಿಂದ ಶ್ರೀ ವೇಂಕಟೇಶ್ವರ ದೇವಾಲಯಕ್ಕೆ ಬರುವ ಯಾತ್ರಿಕರು ಸ್ವಾಮಿಯ ಸಂದರ್ಶನವನ್ನು ಮಾಡಿಕೊಂಡು ಅಲ್ಲಲ್ಲಿರುವ ಪವಿತ್ರ ಸ್ಥಲಗಳೆಲ್ಲವನ್ನೂ ನೋಡಿ ಬರುವಾಗ ಗುಹೆಯನ್ನು ಹೊಕ್ಕು

* ವೇಂಕಟೇಶ್ವರ—ವೇಂಕಟಸ್ಯಾಸೌ ಈಶ್ವರಶ್ಚ ಅಂದರೆ ಪಾಪಗಳನ್ನು ನಾಶಪಡಿಸುವ ಭಗವಂತನೆಂದರ್ಥವು. ಬ್ರಹ್ಮಾಂಡಪುರಾಣೇ — ಸರ್ವಪಾಪಾನಿ ವೇಂಪ್ರಾಹುಃ ಕಟಸ್ತದ್ದಾಹ ಉಚ್ಯತೇ । ಸರ್ವಪಾಪದಹೋ ಯಸ್ಮಾದ್ವೇಂಕಟೇಶ್ವರ ಇತ್ಯಭೂತ್ ॥

ಆ ಮಹಾ ಯೋಗಿಪುಂಗವನನ್ನು ಸಂದರ್ಶಿಸಿ ಮಹಾತ್ಮನೆಂದು ಬಗೆದು ಅಧಿಕ ಭಕ್ತಿಯಿಂದ ನಮಸ್ಕರಿಸಿ ನಿಶ್ಚಲಚಿತ್ತನಾಗಿ ಕುಳಿತಿದ್ದ ಆತನ ರೀತಿಯನ್ನು ಕುರಿತು ವಿಸ್ಮಯಾವಿಷ್ಟರಾಗಿ ಹೋಗುತ್ತಿರುವರು. ಯಾತ್ರಾರ್ಥಿಗಳಿಗೆ ಆ ಯೋಗೀಂದ್ರನನ್ನು ಸಂದರ್ಶಿಸುವ ಕಾರ್ಯವು ಕೂಡ ಮುಖ್ಯ ಕಾರ್ಯವಾಗಿದ್ದಿತಲ್ಲದೆ ಅವರ ಹೃದಯದಲ್ಲಿ ಸ್ವಲ್ಪವಾದರೂ ಔದಾಸೀನ್ಯವು ಉಂಟಾಗುತ್ತಿರಲಿಲ್ಲ.

ಆ ಯೋಗೀಶ್ವರನು ಆ ಸ್ಥಲಕ್ಕೆ ಯಾವಾಗ ಬಂದನೋ ಎಲ್ಲಿಂದ ಬಂದನೋ ಆತನ ಆಹಾರವಿಹಾರಗಳೆಂಥವೋ ಯಾರಿಗೂ ತಿಳಿಯದಿದ್ದರೂ ಉತ್ತರದೇಶದ ಯಾವುದೋ ಒಂದು ಮಹಾಸ್ಥಲದಿಂದ ಬಂದಿರುವನೆಂದೇ ಆ ವೇಂಕಟೇಶ್ವರ ಸನ್ನಿಧಿಯಲ್ಲಿ ವಾಸಿಸುತ್ತಿರುವ ಕೆಲವರು ಹೇಳಿಕೊಳ್ಳುತ್ತಿದ್ದರು. ಆತನ ಆಕಾರಸೌಷ್ಠವವನ್ನು ಕಂಡು ಯಾತ್ರಾರ್ಥಿಗಳು ಕೂಡ ಆತನನ್ನು ಔತ್ತರೀಯನೆಂದೇ ನಂಬುತ್ತಿದ್ದರು. ಆತನ ನಿಜವಾದ ನಾಮಧೇಯವನ್ನು ತಿಳಿಯಲವಕಾಶವಿಲ್ಲದಿದ್ದುದರಿಂದ ಆತನನ್ನು ಚಿದಾನಂದನೆಂದೂ ಪೆಸರಿಸಿ ಕರೆಯುತ್ತಿದ್ದರು. ಪ್ರತಿದಿನವೂ ಅನೇಕ ಭಕ್ತರು ಅಲ್ಲಿಗೆ ಬಂದು ಆತನನ್ನು ಕಂಡು ತಮ ತಮಗೆ ತೋರಿದಂತೆ ಹೇಳಿಕೊಂಡು ತೆರಳುತ್ತಿದ್ದರೇ ಹೊರತು ಆ ಮಹಾತ್ಮನು ಎಂದೂ ಯಾರೊಡನೆಯೂ ಮಾತನಾಡಿದುದನ್ನು ಕಂಡವರು ಯಾರೂ ಇಲ್ಲ. ಆದುದರಿಂದ "ಚಿದಾನಂದಮೌನಿ" ಎಂಬ ಹೆಸರೇ ಸ್ಥಿರವಾಗಿ ನಿಂತಿದ್ದಿತು. ಹೀಗೆ ಸ್ವಲ್ಪ ಕಾಲವು ಕಳೆಯಿತು. ಅನೇಕ ಯಾತ್ರಿಕರು ಬಂದುಬಂದು ನೋಡಿ ಸಾಷ್ಟಾಂಗ ದಂಡಪ್ರಣಾಮಗಳನ್ನು ಮಾಡಿ ಅವರವರಿಗೆ ತೋರಿದಂತೆ ಫಲಪುಷ್ಪಾದಿಗಳನ್ನು ಸಮರ್ಪಿಸಿ ಹೋಗುತ್ತಿದ್ದರು. ಇಂತಿರಲೊಂದು ದಿನ ಒಬ್ಬಾನೊಬ್ಬ ಯಾತ್ರಿಕನು ಆ ಬೆಟ್ಟದಲ್ಲಿ ತನ್ನ ಮನಸ್ಸುಬಂದಂತೆ ದಿಕ್ಕುದಿಕ್ಕುಗಳಲ್ಲಿ ತಿರುಗಿ ಪಾಪನಾಶಿನ್ಯಾದಿ ತೀರ್ಥಗಳಲ್ಲಿ ಮಿಂದು ಆನಂದತುಂದಿಲ ಹೃದಯಾರವಿಂದನಾಗಿ ಬಂದು ಪೂರ್ವೋಕ್ತ ಗುಹೆಯನ್ನು ನೋಡಿ ಜನಸಂಘವನ್ನು ಓರೆಮಾಡಿ ಆ ಮೌನಿಯನ್ನು ಕಂಡು ನಮಸ್ಕರಿಸಿ ಸ್ವಲ್ಪದೂರದಲ್ಲಿ ಕುಳಿತುಕೊಂಡು ಆ ಯೋಗೀಂದ್ರನ ಮುಖದಲ್ಲಿ ನಟ್ಟದಿಟ್ಟಿಯಿಂದ ಭಕ್ತಿಪರವಶನಾಗಿ ಕುಳಿತಿದ್ದನು. ಅವನ ವಯಸ್ಸು ಹೆಚ್ಚುಕಡಿಮೆ ಇಪ್ಪತ್ತೆರಡು ವರುಷವಿರಬಹುದು. ಸಂದರ್ಶನಕ್ಕಾಗಿ ಬಂದಿದ್ದ ಭಕ್ತರು ಎಲ್ಲಿನವರಲ್ಲಿ ತೆರಳಿದರು ಉಳಿದವನಿವನೊಬ್ಬನೇ ಇದು ಸಮಯವೆಂದು ಆ ಯೌವನಸ್ಥನು ಬಗೆದು *ಸಾಷ್ಟಾಂಗ ನಮ

---

* ಸಾಷ್ಟಾಂಗ ನಮಸ್ಕಾರ:— ಎಂಟು ಅಂಗಗಳಿಂದ ಕೂಡಿದ ವಂದನೆಯು. "ಜಾನುಭ್ಯಾಂಚ ತಥಾ ಪದ್ಭ್ಯಾಂ ಪಾಣಿಭ್ಯಾ ಮುರಸಾಧಿಯಾ। ಶಿರಸಾ ವಚಸಾ ದೃಷ್ಟ್ಯಾ ಪ್ರಣಾಮೋಷ್ಟಾಂಗ ಈರಿತಃ ॥ ಮೊಣಕಾಲು, ಪಾದಗಳು, ಕೈಗಳು, ಎದೆ, ಬುದ್ಧಿ, ಶಿರಸ್ಸು, ಮಾತು, ಕಣ್ಣುಗಳು ಇವು ಎಂಟಂಗಗಳು.

ಸ್ಕಾರಗಳನ್ನು ಮಾಡಿ ಮುಕುಳಿತಕರಯುಗಳನಾಗಿ ನಿಂತನು. ಆದರೇನು ಎಷ್ಟು ಹೊತ್ತಿನವರೆಗೆ ನಿಂತಿದ್ದರೂ ಆ ಯೋಗೀಂದ್ರನು ಕಣ್ಣು ತೆರೆಯಲಿಲ್ಲ ಮಾತಾಡಲೂ ಇಲ್ಲ. ಆದರೂ ಆ ಯುವಕನು ಬೇಸರವೆ ಅಡಿಗಡಿಗೆ ಭಕ್ತಿಯು ಹೆಚ್ಚುತ್ತಿರಲು ಆ ಯೋಗಿಯ ಸನ್ನಿಧಿಯಲ್ಲಿಯೇ ತಾನಿದ್ದುಬಿಡುವಂತೆ ನಿಶ್ಚಯಿಸಿ ತನ್ನ ಮನಸ್ಸಿನಲ್ಲಿ " ಆಹಾ ಈ ತಪಸ್ವಿಯು ಮಹಾನುಹಿಮೋಪೇತನಂತೆ ಕಾಣುತ್ತಿರುವನು. ಸುಜ್ಞಾನಪರಿಪೂರ್ಣನೂ ಮಹಾಮಹಿಮನೂ ಆಗಿರುವ ಈತನು ನನ್ನ ಪುರಾಕೃತ ಪುಣ್ಯವಶದಿಂದ ದೊರೆತಿರುವನು. ನಾನು ಈ ಮಹಾನುಭಾವನನ್ನಾಶ್ರಯಿಸಿ ಈತನ ಪಾದಸೇವೆಯನ್ನು ಮಾಡುತ್ತಾ ಈತನ ಕೃಪೆಗೆ ಪಾತ್ರನಾಗುವೆನು. ಈ ಲೋಕದಲ್ಲಿ ಸತೀ ಸುತ ಬಂಧು ಧನ ಧಾನ್ಯಗಳು ಸ್ಥಿರವಾದುವುಗಳಲ್ಲ ಸಂಸಾರದಲ್ಲಿ ಯಾವ ಸುಖವೂ ಕಾಣುವುದಿಲ್ಲ ಸಂಸಾರವು ಅಪಾರವಾದುದೆಂದೂ ದುಃಖ ಮಯವಾದುದೆಂದೂ ಜ್ಞಾನಿಗಳು ಹೇಳಿರುವರು. ಆದುದರಿಂದ ಭವಜನಿತಭಯವನ್ನು ನೀಗಿಕೊಳ್ಳುವುದು ಒಳ್ಳೆಯದಲ್ಲವೇ ? ಈತನು ಅನುಗ್ರಹಿಸಿದರೆ ಮುಕ್ತಿಯು ಕರತಲಾಮಲಕವಾಗುವುದರಲ್ಲಿ ಸಂಶಯವಿಲ್ಲ ನಾನು ಅನೇಕತೀರ್ಥಕ್ಷೇತ್ರಗಳನ್ನು ಪರಿಕಿಸಿದೆನು ಎಲ್ಲಿಯೂ ಇಂತಹಮೂರ್ತಿಯು ಗೋಚರಿಸಲಿಲ್ಲ ಭಾಪು ! ನನ್ನ ಭಾಗ್ಯವೇ ಭಾಗ್ಯ ಆದರೆ ನಾನು ಬಂದು ಇಷ್ಟುಹೊತ್ತು ಆದರೂ ಒಂದು ಮಾತನ್ನಾದರೂ ಆಡಲಿಲ್ಲ ಕಣ್ಣನ್ನಾದರೂ ತೆರೆಯಲಿಲ್ಲ ಸಮಾಧಿನಿಷ್ಠನಾಗಿರುವನು. ಕ್ಲಿಷ್ಟಾಕ್ಲಿಷ್ಟಗಳಾದ ಚಿತ್ತವೃತ್ತಿಗಳನ್ನು ನಿರೋಧಪಡಿಸಿ ನಿಜವಾಗಿಯೂ ಯೋಗಿಯಾಗಿರುವನು ಈತನಲ್ಲವೇ? ಸ್ನೇಹನು ಈತನಲ್ಲವೇ ದರ್ಶನೀಯನು? ಈತನಲ್ಲವೇ ಸಚ್ಚಿದಾನಂದಮಯನು? ಆಗಲಿ ಯಾವಾಗಲಾದರೂ ಈತನು ಬಹಿರ್ಮುಖನಾಗದಿರುವನೇ ! " ಎಂದು ಆ ಮೌನಿಯ ಬಹಿರ್ಮುಖತೆಯನ್ನು ನಿರೀಕ್ಷಿಸುತ್ತಿದ್ದನು. ಒಳ್ಳೆಯ ಕಾಲವು ಬರುವವೇಳೆಗೆ ಸಮಸ್ತ ಪ್ರಯತ್ನಗಳೂ ಸಮುಚಿತಫಲಪ್ರದಗಳೇ ಆಗುವುವಲ್ಲವೆ ? ಈ ಕಾಲವನ್ನು ತಿಳಿದವರು ದೈವ, ಬ್ರಹ್ಮ ಮೊದಲಾದ ಶಬ್ದಗಳಿಂದ ಕರೆವರು ವಾಚಕರೇ, ಒಬ್ಬ ಪಂಡಿತನು ಹೀಗೆ ಹೇಳಿರುವನು.

ಅನುಕೂಲೇ ಸತಿಧಾತರಿ ಭವತ್ಯನಿಷ್ಟಾದಪೀಷ್ಟಮವಿಲಂಬಂ |
ಪೀತ್ವಾವಿಷಮಪಿಶಂಭುಃ ಮೃತ್ಯುಂಜಯತಾಮವಾಪತತ್ಕಾಲಂ ||

ಅರ್ಥ:—ವಿಧಿಯು ಅನುಕೂಲನಾದರೆ ಬಹು ತ್ವರೆಯಾಗಿ ಅನಿಷ್ಟಕಾರ್ಯದಿಂದಲೂ, ಇಷ್ಟಫಲವೇ ಪ್ರಾಪ್ತವಾಗುವದು. ಶಿವನು ವಿಷವನ್ನು ಕುಡಿದರೂ ಒಳ್ಳೆಯಕಾಲವು ಸನ್ನಿಹಿತವಾದುದರಿಂದ ಮೃತ್ಯುವನ್ನು ಗೆದ್ದು ಮೃತ್ಯುಂಜಯನೆನಿಸಿಕೊಂಡನು.

ಇದಕ್ಕೆ ತಾರ್ಕಾಣೆಯಾಗಿ ಎಷ್ಟುದಿನಗಳಿಂದಲೋ ಯಾರೊಡನೆಯೂ ಮಾತನಾಡದೆ ಮೌನಮುದ್ರೆಯನ್ನು ವಹಿಸಿದ್ದ ಆ ಯೋಗಿಶ್ರೇಷ್ಠನು ತನ್ನ ಮನಸ್ಸಿನಲ್ಲಿ—"ಆಹಾ! ಈ ಯುವಕನು ಅನನ್ಯಸಾಮಾನ್ಯವಾದ ಭಕ್ತಿಯನ್ನು ನನ್ನಲ್ಲಿ ನೆಲೆಗೊಳಿಸಿ, ದೃಢಚಿತ್ತನಾಗಿ ನಾನು ಬಹಿರ್ಮುಖನಾಗುವುದನ್ನು ನಿರೀಕ್ಷಿಸಿಕೊಂಡಿರುವನಲ್ಲವೆ? ಇವನ ತಾರುಣ್ಯವು ಇವನನ್ನು ತರುಣೀಮೋಹ ಮಗ್ನನನ್ನಾಗಿ ಮಾಡಲಿಲ್ಲ. ಇದನ್ನು ನೋಡಿದರೆ ಇವನು ಬಹಳ ದಿಟ್ಟನೆಂದು ತೋರುವುದು. ಚಿಳ್ಳೆಯ ಬೀಜದಿಂದ ಕದಡಿದ ಜಲವು ತಿಳಿಯಾಗುವಂತೆ ವಿವೇಕದಿಂದ ಇವನ ಭಾವವು ಅತಿ ನಿರ್ಮಲವಾಗಿರುವದು. ಇವನ ಹೃದಯವೀಗ ಉಪದೇಶ ಬೀಜವನ್ನು ಬಿತ್ತಲು ತಕ್ಕ ಹದವುಳ್ಳುದಾಗಿರುವುದು ಎಂದಾಲೋಚಿಸಿ ಕಣ್ದೆರೆದು ತನ್ನ ಕೃಪಾದೃಷ್ಟಿಯನ್ನು ಅವನಮೇಲೆ ಒಂದಿನಿಸುಹೊತ್ತು ನಿಲಿಸಿ ಮೌನವನ್ನು ಬಿಟ್ಟು ಮೃದುಮಧುರವಾದ ವಚನರಚನೆಯಿಂದ ಹೀಗೆ ಸಂಭಾಷಿಸಿದನು.

"ಎಲೈ ವತ್ಸ; ನೀನು ಯಾರು? ನಿನ್ನ ಹೆಸರೇನು? ಜನಶೂನ್ಯವಾದ ಮತ್ತು ಸಿಂಹ ವ್ಯಾಘ್ರಾದಿ ನಾನಾ ಕ್ರೂರಮೃಗ ನಿಬಿಡವಾದ ಈ ಕಾಡನ್ನು ಹೊಕ್ಕು ಈ ಗುಹೆಯನ್ನು ಪ್ರವೇಶಿಸಿ, ಮೃಗಪ್ರಾಯನಾಗಿ ಏಕಾಂತದಿಂದ ಕುಳಿತು ಸಮಾಧಿನಿಷ್ಠನಾಗಿದ್ದ ನನ್ನ ಸಮೀಪದಲ್ಲಿ ಏತಕ್ಕೆ ಕುಳಿತುಕೊಂಡೆ? ನಿನ್ನ ಉದ್ದೇಶವೇನು? ನನ್ನಿಂದ ನಿನಗಾಗಬೇಕಾದ ಕಾರ್ಯವೇನು?"

ಎಂದು ಈಪರಿಯಾಗಿ ಪ್ರಶ್ನೆಮಾಡಿದ ಯೋಗಿವರ್ಯನನ್ನು ಕುರಿತು, ತನ್ನ ಮನಸ್ಸಿನಲ್ಲಿ, "ಆಹ! ಈ ಮುನಿಶ್ರೇಷ್ಠನು ಮೌನನಿಷ್ಠೆಯನ್ನು ಬಿಟ್ಟು ನನ್ನೊಡನೆ ಮಾತನಾಡಿದನಲ್ಲ! ನಾನಿಲ್ಲಿಗೆ ಬಂದುದು ಮೊದಲು ಈತನ ಸಂದರ್ಶನಕ್ಕಾಗಿ ಬಂದುಹೋಗುತ್ತಿರುವ ಯಾರೊಡನೆಯೂ ಮಾತನಾಡಲಿಲ್ಲವಲ್ಲ! ನನ್ನ ಭಾಗ್ಯವೇ ಭಾಗ್ಯ! ಪೂರ್ವಜನ್ಮದ ಪುಣ್ಯವಾಸನೆಯಿಂದ ಈತನ ದರ್ಶನವು ಲಭಿಸಿತೆಂದು ಸಂತೋಷಪಡುತ್ತಿದ್ದ ನನ್ನಹೃದಯಕ್ಕೆ ಈತನು ತನ್ನ ವಾಕ್ಯಾಮೃತವನ್ನು ಎರಚಿ ನನ್ನನ್ನು ಕೃತಾರ್ಥನನ್ನಾಗಿ ಮಾಡಿದನು. ನನ್ನ ಸುಕೃತಕ್ಕೆಣೆಯುಂಟೆ?" ಎಂದು ಭಾವಿಸಿ, ಅಡಿಗಡಿಗೆ ಭಕ್ತಿಯು ಅತಿಶಯಿಸುತ್ತಿರಲು ನಮ್ರಭಾವದಿಂದ ಪೊಡಮಟ್ಟು ಯೋಗಿವರ್ಯನ ಪ್ರಶ್ನೆಗಳಿಗೆ ಉತ್ತರವನ್ನು ಕೊಡತೊಡಗಿ ಇಂತೆಂದನು.

## ಸತ್ಯಶೀಲನು ತನ್ನ ವೃತ್ತಾಂತವನ್ನು ಯೋಗಿಯೊಡನೆ ಹೇಳಿದುದು.

"ಯತಿವರ್ಯ, ನಾನು ಅನಾಥನಾದ ಒಬ್ಬ ಬ್ರಾಹ್ಮಣ ಕುಮಾರನು. ಶ್ರೇಯಸ್ಕಾಮನಾದ ಪುರುಷನು * ತನ್ನ ಹೆಸರನ್ನಾಗಲಿ, ಗುರುವಿನ ಹೆಸರನ್ನಾ

* ಆತ್ಮನಾಮ ಗುರೋರ್ನಾಮ ನಾಮಾತಿಕೃಪಣಸ್ಯಚ |
ಶ್ರೇಯಃಕಾಮಸ್ತು ನವದೇ ಜ್ಯೇಷ್ಠಾಪತ್ಯ ಕಲತ್ರಯೋಃ ||

ಗಲಿ, ಅತಿ ಲೋಭಿಯಾಗಿರುವನ ಹೆಸರನ್ನಾಗಲಿ, ಜ್ಯೇಷ್ಠಕುಮಾರನ ಹೆಸರನ್ನಾಗಲಿ, ಹೆಂಡತಿಯ ಹೆಸರನ್ನಾಗಲಿ ಹೇಳಬಾರದೆಂದು ಹಿರಿಯರು ಹೇಳುವರು. ಮಹಾತ್ಮಾ, ನನ್ನ ಹೆಸರನ್ನಿಗೋ ಬರೆದು ತೋರುವೆನು.'' ಎಂದು ಹೇಳಿ ತನ್ನ ಹೆಸರನ್ನು ಬರೆದು ತೋರಿಸಿದನು. ಯೋಗಿಯದನ್ನು ನೋಡಿ "ಎಲೈ ವಿಪ್ರಕುಮಾರ, ಭಾಪು! ನಿನ್ನ ಹೆಸರು ಸತ್ಯಶೀಲನೆಂದೋ! ಸರಿ! ಸರಿ! ನಿನಗೆ ಈ ನಾಮವು ಅನ್ವರ್ಥವಾದುದೆಂದು ಭಾವಿಸುವೆನು. ಎಲೈ ಸತ್ಯಶೀಲನೇ, ನಿನ್ನ ಜನ್ಮದಿಂದ ಯಾವ ನಾಡು ಪವಿತ್ರವಾಗಿರುವುದು. ನಿನ್ನ ವೃತ್ತಾಂತವನ್ನು ಸವಿಸ್ತರವಾಗಿ ಹೇಳು.'' ಎಂದು ಕೇಳಿದ ಯೋಗಿಪುಂಗವನಿಗೆ ಬಾರಿಬಾರಿಗೂ ನಮಸ್ಕಾರವನ್ನು ಮಾಡುತ್ತ, "ಸ್ವಾಮಿಾ! ನಾನು ಪಶ್ಚಿಮ ಸಮುದ್ರತೀರದ ತುಳುದೇಶದ ಗಡಿಯೆಂದೆನಿಸುವ, ಕನ್ನಡದೇಶಕ್ಕೆ ಸಂಬಂಧಿಸಿದ ಒಂದು ಹಳ್ಳಿಯಲ್ಲಿ ಹುಟ್ಟಿದವನು. ನನ್ನ ತಾಯಿತಂದೆಗಳಿಗೆ ನಾನೊಬ್ಬನೇ ಮಗನು. ನಮ್ಮ ಕುಟುಂಬವು ಕೇವಲ ದಾರಿದ್ರ್ಯಾವಸ್ಥೆಯುಳ್ಳದು. ನನಗೆ ೫-೬ ವರ್ಷಗಳ ವಯಸ್ಸಾಗುವ ವೇಳೆಗೆ ನನ್ನ ತಂದೆತಾಯಿಗಳು ಪರಲೋಕಗತರಾದರು. ಹೀಗೆ ಅನಾಥನಾದ ನನ್ನನ್ನು ಆ ಗ್ರಾಮದ ನಿವಾಸಿಗಳಾದ ಹಲವು ಮಂದಿ ಬ್ರಾಹ್ಮಣರು ಅತ್ಯಂತ ಕೃಪೆಯಿಂದ ಪಾಲಿಸುತ್ತ ಬಂದರು. ಅವರು ಸ್ವಲ್ಪವಾದರೂ ಭೇದಬುದ್ಧಿಯಿಲ್ಲದೆ ತಮ್ಮ ಮಕ್ಕಳಂತೆಯೇ ಭಾವಿಸಿ ಅನ್ನವಸ್ತ್ರಗಳನ್ನು ಕೊಟ್ಟು ಕಾಪಾಡಿದುದಲ್ಲದೆ ಆ ಗ್ರಾಮದಲ್ಲಿದ್ದ ಪಾಠಶಾಲೆಯಲ್ಲಿ ಓದಿಸುತ್ತಿದ್ದರು. ನಾನು ಉಪಾಧ್ಯಾಯರಿಗೂ ಆ ನನ್ನ ಪೋಷಕರಿಗೂ ವಿಧೇಯನಾಗಿದ್ದು ತಕ್ಕಮಟ್ಟಿಗೆ ವಿದ್ಯಾವಿವೇಕಗಳನ್ನು ಸಂಪಾದಿಸಿ ವರ್ಧಿಷ್ಣುವಾಗುತ್ತಿರುವ ಸಮಯದಲ್ಲಿ ವಿಪರೀತವಾಗಿ ಮಳೆಸುರಿದು ಪ್ರಚಂಡಮಾರುತವು ಬೀಸತೊಡಗಿತು. ಮಹಾತ್ಮಾ, ಏನೆಂದು ಹೇಳಲಿ? ಪುರಾಕೃತ ಪಾಪಫಲವೋ ಎಂಬಂತೆ ಸಮುದ್ರವು ಉಲ್ಲೋಲಮಾಲಾಕುಲವಾಗಿ ಉಕ್ಕಿ ತೀರದಲ್ಲಿದ್ದ ನನ್ನ ಜನ್ಮಗ್ರಾಮದಮೇಲೆ ನುಗ್ಗಿ ನಾಶಗೊಳಿಸಿತು. ನನ್ನನ್ನು ಬಹುಪ್ರೀತಿಯಿಂದ ಕಾಪಾಡುತ್ತಿದ್ದ ಆ ಬ್ರಾಹ್ಮಣೋತ್ತಮರು ಮೊದಲಾಗಿ ಸಮಸ್ತ ಪ್ರಜೆಗಳೂ ಪಶ್ವಾದಿಗಳೂ ಸಮುದ್ರಪಾಲಾದರು. ಆ ಗ್ರಾಮವಿರುವ ಸ್ಥಲವನ್ನು ಗುರ್ತಿಸುವುದಕ್ಕೂ ಆಗದಂತೆ ಆ ಪ್ರದೇಶದಲ್ಲೆಲ್ಲ ಉಸುಬು ತುಂಬಿಕೊಂಡಿತು. ಹಿಂದಿನ ಜನ್ಮದಲ್ಲಿ ಮಾಡಿದ ಅಪಾರವಾದ ಪಾಪವನ್ನು ಅನುಭವಿಸುವುದಕ್ಕೋ ಏನೋ! ನಾನಾಸಮಯದಲ್ಲಿ ಯಾವುದೋ ಒಂದು ಕೆಲಸಕ್ಕಾಗಿ ನನ್ನ ಉಪಾಧ್ಯಾಯನಿಂದ ಕಳುಹಲ್ಪಟ್ಟು ಆ ಗ್ರಾಮಕ್ಕೆ ಐದಾರು ಹರಿದಾರಿಗಳ ದೂರದಲ್ಲಿರುವ ಇನ್ನೊಂದೂರಿಗೆ ಹೋಗಿದ್ದುದರಿಂದ ಆ ಗ್ರಾಮಸ್ಥರಿಗೆ ಆಕಸ್ಮಾತ್ತಾಗಿ ಪ್ರಾಪ್ತವಾದ ವಿಪತ್ತು ನನಗೆ ತಟ್ಟದೆ ತಪ್ಪಿಹೋಯಿತ. ಆದರೇನು? "**ಪಾಪೀ ಚಿರಾಯುಃ**'' ಎಂಬಂತೆ ನಿರಾಧಾರನಾಗಿ ಬದು

ಕಬೇಕಾಯಿತು. ದುಃಖವು ಉಕ್ಕಿಯುಕ್ಕಿ ಬಂದಿತು. ಆಲೋಚನೆಯು ಅನಂತವಾಯಿತು ಮುಂದಣ ಕರ್ತವ್ಯವು ತೋರದೆಹೋಯಿತು ಅಲ್ಲಿಂದ ಹೊರಟೆನು. ಊರೂರು ತಿರುಗುತ್ತ, ದೊರೆತರೆ ಭುಜಿಸುತ್ತ, ದೊರೆಯದಿದ್ದರೆ ಉಪವಾಸವಿರುತ್ತ ಅಲೆದಾಡಿದೆನು. ಇಂತಹ ಕಷ್ಟದಶೆಯಲ್ಲಿಯೂ ನನ್ನ ಹೃದಯದಲ್ಲಿ ಈ ಆಲೋಚನೆಯೊಂದು ಹೊರಟಿತು.

ಶ್ಲೋ || ಪ್ರಚಂಡವಾಸನಾ ವಾತೈರುದ್ಧೂತಾ ನೌರ್ಮನೋಮಯೀ |
ವೈರಾಗ್ಯಕರ್ಣಧಾರೇಣ ವಿನಾರೋದ್ಧುಂನಶಕ್ಯತೇ || ೧ ||

ಅರ್ಥ—ಪೂರ್ವಜನ್ಮವಾಸನೆಯೆಂಬ ಬಿರುಗಾಳಿಯಿಂದ ಮನಸ್ಸೆಂಬ ನಾವೆಯು ಮೇಲಕ್ಕೆ ಹಾರಿಸಲ್ಪಡುತ್ತದೆ. ಆಗ ವೈರಾಗ್ಯವೆಂಬ ನಾವಿಕನಿಂದ ಹೊರತು ಆ ನಾವೆಯನ್ನು ಸರಿಯಾಗಿ ನಿಲ್ಲಿಸುವುದಕ್ಕೆ ಮತ್ತಾರಿಂದಲೂ ಸಾಧ್ಯವಿಲ್ಲ.

ಶ್ಲೋ || ನಿಸ್ನೇಹೋಯಾತಿನಿರ್ವಾಣಂ ಸ್ನೇಹೋನರ್ಥಸ್ಯಕಾರಣಂ |
ನಿಸ್ನೇಹೇನಪ್ರದೀಪೇನ ಯದೇತತ್ಪ್ರಕಟೀಕೃತಂ || ೨ ||

ಅರ್ಥ—ಸ್ನೇಹ (ಲೌಕಿಕ ವಸ್ತುಗಳಮೇಲಿರುವ ಪ್ರೀತಿ) ವನ್ನು ತೊರೆದವನು ಮೋಕ್ಷವನ್ನು ಪಡೆಯುತ್ತಾನೆ. ಅಂತಪ್ಪ ಸ್ನೇಹವು ಎಲ್ಲಕೇಡುಗಳಿಗೂ ಕಾರಣವಾಗಿರುತ್ತದೆ. ಸ್ನೇಹ (ಎಣ್ಣೆ) ಶೂನ್ಯವಾದ ದೀಪದಿಂದ ಇದು ವ್ಯಕ್ತಗೊಳಿಸಲ್ಪಟ್ಟಿರುವುದು.

ಶ್ಲೋ || ಗತಸಾರೇತ್ರಸಂಸಾರೇ ಸುಖಭ್ರಾಂತಿಶ್ಶರೀರಿಣಾಂ |
ಲಾಲಾಜಲಮಿಪಾಂಗುಷ್ಠೇ ಬಾಲಾನಾಂಸ್ತನ್ಯವಿಭ್ರಮಃ || ೩ ||

ಅರ್ಥ—ಮಕ್ಕಳಿಗೆ ಹೆಬ್ಬೆರಳಿನ ಜೊಲ್ಲಿನ ನೀರಿನಲ್ಲಿ ತಾಯಿಯ ಸ್ತನ್ಯದ ಭ್ರಾಂತಿಯಿರುವಂತೆ ಸಾರವಿಲ್ಲದ ಸಂಸಾರದಲ್ಲಿ ಮಾನವರಿಗೆ ಸುಖದ ಭ್ರಾಂತಿಯಿರುವುದು.

ಈ ಆಲೋಚನೆಯಿಂದ ನನ್ನ ಮನಸ್ಸಿನಲ್ಲಿ ಒಂದುಬಗೆಯ ಪರಿಣಾಮವುಂಟಾಯಿತು ಆಗ ನಾನು “ಅಕಟಾ! ನಿರಂತರ ದುಃಖಪೂರ್ಣಮಾದ ಈ ಸಂಸಾರದ ಭ್ರಾಂತಿಗೆ ಸಿಲುಕಬಾರದು. ಲೋಕದಲ್ಲಿ ಜೀವನವು ಅಸ್ಥಿರವಾದುದು ಧನಯೌವನಾದಿಗಳು ಸ್ಥಿರವಾಗಿ ನಿಲ್ಲುವುದಲ್ಲ ಮಹಾತ್ಮರನ್ನಾಶ್ರಯಿಸಿ ಅವರ ಕೃಪೆಗೆ ಪಾತ್ರನಾಗಿ ಅವರಿಂದ ಉಪದೇಶವನ್ನು ಪಡೆದು ಸಮ್ಯಗ್ಜ್ಞಾನಸಂಪನ್ನನಾಗಿ ಅಸ್ಥಿರವಾದ ಈ ಪ್ರಪಂಚದ ಸಂಬಂಧದಿಂದ ಬಿಡುಗಡೆಯನ್ನು ಹೊಂದಿ ಮೋಕ್ಷಮಾರ್ಗವನ್ನು ಪಡೆವುದಕ್ಕೆ ತಕ್ಕಪ್ರಯತ್ನವನ್ನು ಮಾಡಬೇಕು. ಇನ್ನುವೃಥಾ ಕಾಲವನ್ನು ಕಳೆಯಬಾರದು. (ಮಹತಾಪುಣ್ಯಪಣ್ಯೇನ ಕ್ರೀತೇಯಂ ಕಾಯನೌಸ್ತ್ವಯಾ | ಸಂಸಾರಸಾಗರಂ ಘೋರಂ ಕರಯಾವನ್ನಭಿದ್ಯತೇ || )

ಅಧಿಕವಾದ ಪುಣ್ಯವೆಂಬ ಬೆಲೆಯನ್ನು ಕೊಟ್ಟು ಶರೀರವೆಂಬ ನಾವೆಯನ್ನು ಪಡೆದುದಾಗಿದೆ. ಇದು ಒಡೆದುಹೋಗುವುದಕ್ಕೆ ಮೊದಲೆ ಜನನ ಮರಣವೆಂಬ ಸಮುದ್ರವನ್ನು ದಾಟಬೇಕು. ಎಂದು ಆಲೋಚಿಸಿದೆನು. ಈ ಬುದ್ಧಿಯು ನನ್ನಲ್ಲಿ ಅಂಕುರಿಸಿದುದು ಮೊದಲು ಅದು ದಿನದಿನಕ್ಕೂ ವಿಸ್ತರಿಸುತ್ತ ಬಂದಿತು ಆದರೆ, "ಅಕಟಕಟಾ! ನಿರ್ಭಾಗ್ಯ ಜನ್ಮವಾದುದರಿಂದ ನನಗೆ ಬಾಲ್ಯದಲ್ಲಿಯೇ ಜನನೀಜನಕರು ಸ್ವರ್ಗಸ್ಥರಾದರು. ನನ್ನನ್ನು ಅಂದಿನಿಂದ ತಾಯಿತಂದೆಗಳಂತೆ ಸಲಹುತ್ತಿದ್ದ ಬ್ರಾಹ್ಮಣ ದಂಪತಿಗಳೂ ಸಮುದ್ರದಪಾಲಾದರು. ಇಂತಹ ನನಗಿನ್ನು ಸದ್ಗುರುಲಾಭವೆಂದರೆ ಎಂಥದು ? ಅಂತಹ ಮಹಾನುಭಾವರ ಸಂದರ್ಶನವು ಗಗನಕುಸುಮ ಪ್ರಾಯವೇ ಅಲ್ಲವೆ ? ಒಂದುವೇಳೆ ದೊರೆತರೂ ಅವರಿಗೆ ನನ್ನಲ್ಲಿ ಕೃಪೆಯುಂಟಾಗುವುದೆಂಬುದೂ ಶಶವಿಷಾಣಪ್ರಾಯವಲ್ಲವೆ? ಅಯ್ಯೋ! ನನ್ನ ಈಜನ್ಮವು ನಿರರ್ಥಕವಾಯಿತಲ್ಲ!, ಎಂಬ ಭಾವನೆಯೂ ಆ ಬುದ್ಧಿಯೊಡನೆಯೇ ಹುಟ್ಟಿ ಅಡಿಗಡಿಗೆ ನನ್ನ ಆಸೆಗೆ ವಿಘ್ನಕಾರಿಯಾಗುತ್ತಿದ್ದಿತು. ಯೋಗಿವರ್ಯ! ಹಾಗಾದರೂ (1) "ಉತ್ತಿಷ್ಠತಜಾಗ್ರತ ಪ್ರಾಪ್ಯವರಾನ್ನಿಬೋಧತ" ಎಂಬ ಶ್ರುತ್ಯರ್ಥವನ್ನು ಸ್ಮರಿಸಿ, ತತ್ಪ್ರಯತ್ನದಲ್ಲಿಯೇ ನಿರತನಾಗಿ, (2) "ಉದ್ಯಮೇನ ಹಿಸಿಧ್ಯನ್ತಿ ಕಾರ್ಯಾಣಿ ನಮನೋರಥೈಃ | ನಹಿಸುಪ್ತಸ್ಯ ಸಿಂಹಸ್ಯ ಪ್ರವಿಶನ್ತಿ ಮುಖೇ ಮೃಗಾಃ" ಎಂಬ ಆರ್ಯೋಕ್ತಿಯನ್ನು ಬಾರಿಬಾರಿಗೆ ಪಠಿಸುತ್ತ, (3) "ಉದ್ಯಮಂ ಸಾಹಸಂ ಧೈರ್ಯಂ ಬುದ್ಧಿ ಶ್ಶಕ್ತಿಃ ಪರಾಕ್ರಮಃ | ಷಡೈತೇ ಯತ್ರವರ್ತಂತೇ ತತ್ರದೇವಸ್ಸಹಾಯಕೃತ್‌॥" ಎಂಬ ಮಾತಿನಲ್ಲಿ ನಂಬಿಕೆಯಿಟ್ಟು, "ಆಗಲಿ! ನೋಡುವೆನು. ಅವ್ಯಾಜಕರುಣಾಪೂರ್ಣನಾದ ಭಗವಂತನಿಗೆ ನನ್ನಲ್ಲಿ ಎಂದಿಗಾದರೂ ದಯವುಂಟಾಗದಿರುವುದೆ? ಅವನು ಮಹಾತ್ಮರ ಸಂದರ್ಶನವನ್ನಾಗಿಸಿ ನನ್ನನ್ನು ಕೃತಾರ್ಥನನ್ನಾಗಿ ಮಾಡದಿರುವನೆ ?" ಎಂದು ಧೈರ್ಯವನ್ನವಲಂಬಿಸಿ, ಹಿಡಿದಪಟ್ಟನ್ನು ಬಿಡದೆ ಮಹಾತ್ಮರನ್ನೇ ಅನ್ವೇಷಿಸುತ್ತ ಎಲ್ಲೆಲ್ಲಿಯೋ ತಿರುಗಿದೆನು. ಹೀಗೆ ಅಲ್ಲಲ್ಲಿ ಸಂಚರಿಸುತ್ತಿರಲು ಒಂದೆರಡು ವಾರಗಳ ಹಿಂದೆ ಕೆಲಯಾತ್ರಿಕರು ಪುತ್ರ ಮಿತ್ರ ಕಳತ್ರ ಸಮೇತ

---

1 ಏಳು ಎಚ್ಚರವನ್ನು ಪಡೆ, ಶ್ರೇಷ್ಠ ಗುರುಗಳನ್ನು ಸೇರು, ಜ್ಞಾನಾರ್ಜನೆಯನ್ನು ಮಾಡು.

2 ಬಯಸಿದ ಮಾತ್ರಕ್ಕೆ ಇಷ್ಟಾರ್ಥವು ಫಲಿಸದು. ಪ್ರಯತ್ನವನ್ನು ಪಟ್ಟಾಗಿ ಮಾಡಬೇಕು ಮಲಗಿ ನಿದ್ರಿಸುತ್ತಿರುವ ಸಿಂಹದ ಬಾಯಿಯಲ್ಲಿ ಮೃಗಗಳು ತಾವಾಗಿ ಬಂದು ಬೀಳುವುದಿಲ್ಲ.

3 ಪ್ರಯತ್ನ, ಸಾಹಸ, ಧೈರ್ಯ, ಬುದ್ಧಿ, ಸಾಮರ್ಥ್ಯ, ಪರಾಕ್ರಮ ಈ ಆರು ಯಾವನಲ್ಲಿ ಇರುತ್ತವೆಯೋ ಅವನಿಗೆ ದೈವವು ಸಹಾಯ ಮಾಡುತ್ತದೆ.

ರಾಗಿ ಹೊರಟು ಅರ್ಚಾವತಾರದಿಂದವತರಿಸಿ, ಭಕ್ತರಿಗೆ ಸಮಸ್ತ ಮನೋರಥ ಗಳನ್ನು ಅನುಗ್ರಹಿಸುತ್ತಿರುವ ಶ್ರೀ ವೇಂಕಟೇಶ್ವರನನ್ನು ಸಂದರ್ಶಿಸಿ, ತಂತಮ್ಮ ಹರಕಗಳನ್ನು ಸಮರ್ಪಿಸಿ ಧನ್ಯರಾಗಲು ಗುಂಪುಗುಂಪಾಗಿ ಬಂದು ಹೋಗು ತ್ತಿರುವುವನ್ನು ಕಂಡೆನು. ಹಳದಿಯ ಬಣ್ಣದ ಬಟ್ಟೆಗಳನ್ನುಟ್ಟು ಊರ್ಧ್ವ ತ್ರಿಪುಂಡ್ರಗಳನ್ನು ಧರಿಸಿ, ಪುಷ್ಪಮಾಲಿಕೆಗಳನ್ನ ಹಾಕಿಕೊಂಡು, ಶ್ರೀಗಂಧವನ್ನು ತೊಡೆದು, **ಗೋವಿಂದನಾಮ** ಸಂಕೀರ್ತನೆಯನ್ನು ಮಾಡುತ್ತ, ಅಲ್ಲಲ್ಲಿ ಕೇಳು ವವರಿಗೆ "**ನಾವು ತಿರುಪತಿಗೆ ಹೋಗುವೆವು**" ಎಂದು ಹೇಳುತ್ತ, ಆಡಂಬರ ದಿಂದ ನಡೆಯುತ್ತಿರುವ ಭಕ್ತರ ಭಕ್ತಿವಿಶೇಷವನ್ನು ಕಂಡು ಮಹದಾಶ್ಚರ್ಯ ಪಟ್ಟೆನು. ನಾನೂ ಉತ್ಸಾಹಪೂರಿತನಾಗಿ ಆ ಯಾತ್ರಿಕರೊಡನೆ ಸೇರಿ ಪ್ರಯಾ ಣಮಾಡಿ, ಈ ವೇಂಕಟಾದ್ರಿಯನ್ನು ಸೇರಿದೆನು. ಈ ಮಂಗಳಕ್ಷೇತ್ರದಲ್ಲಿ ನೆಲೆ ಗೊಂಡಿರುವ ವೆಂಕಟೇಶ್ವರನನ್ನು ಸಂದರ್ಶಿಸಿದೆನು. ಆನಂದಮಗ್ನನಾಗಿ,

ಶ್ಲೋ॥ ಶ್ರೀಶಾನ ಮರ್ಯಮುಪದ ಶತಭೂರಿಭಾಸಂ ।
ಕಾರುಣ್ಯಸಾಗರ ಮನಂತ ಗುಣಾಲವಾಲಂ ॥
ಸದ್ಭಕ್ತಪೋಷಣರತಂ ಸರಸೀರುಹಾಕ್ಷಂ ।
ಶ್ರೀ ವೇಂಕಟಾದ್ರಿನಿಲಯಂ ಶರಣಂ ಪ್ರಪದ್ಯೇ ॥ ೧ ॥

ಶ್ಲೋ॥ ಪದ್ಮಾಪತೀ ಹೃದಯ ಪಂಕರುಹಾರ್ಯಮಂತಂ ।
ಪಾಪಾಟವೀಪರಸುದಾವ ಮಜಾದಿವಂದ್ಯಂ ॥
ಆಪಾದಮೌಳಿ ರುಚಿರಾಂಗ ವಿರಾಜಮಾನಂ ।
ಶ್ರೀವೆಂಕಟಾದ್ರಿನಿಲಯಂ ಶರಣಂ ಪ್ರಪದ್ಯೇ ॥ ೨ ॥

ಶ್ಲೋ॥ ಯೋಗೀಂದ್ರಗಮ್ಯಮಖಿಲೈಕವಿಭುಂ ಮುಕುಂದಂ ।
ರಾಗಾದಿದೋಷರಹಿತಂ ರಮಣೀಯಗಾತ್ರಂ ॥
ದೇವಾದಿದೇವ ಮಿಭರಾಡ್ವರದಂ ಚಿರತ್ನಂ ।
ಶ್ರೀ ವೇಂಕಟಾದ್ರಿ ನಿಲಯಂ ಶರಣಂ ಪ್ರಪದ್ಯೇ ॥ ೩ ॥

ಶ್ಲೋ॥ ಶ್ರೀವತ್ಸವಕ್ಷಸ ಮನಂತಶಯೇಶ ಯಾನಂ ।
ಸರ್ವಜ್ಞಮೂರ್ತಿ ಹರ ಮಾದ್ಯಮನಾದ್ಯನಂತಂ ॥
ವೇದಸ್ವರೂಪ ಮಖಿಲಾಗಮ ವೇದಸಾರಂ ।
ಶ್ರೀ ವೇಂಕಟಾದ್ರಿನಿಲಯಂ ಶರಣಂ ಪ್ರಪದ್ಯೇ ॥ ೪ ॥

ಶ್ಲೋ॥ ಭಾಸಜ್ಞ ಮದ್ಭುತದರಾರಿ ಧರಂ ಮುರಾರಿಂ ।
ಶ್ರೀಕೌಸ್ತುಭಾಕಲಿತ ಚಾರು ವಿಶಾಲ ವತ್ಸಂ ॥
ಕೇಯೂರ ಹಾರ ಮಣಿಕುಂಡಲ ಭಾಸಮಾನಂ ।
ಶ್ರೀ ವೇಂಕಟಾದ್ರಿನಿಲಯಂ ಶರಣಂ ಪ್ರಪದ್ಯೇ ॥ ೫ ॥

ಯಃ ಪಠೇದ್ವೇಂಕಟಾಧೀಶ ಪಂಚರತ್ನಮಿದಂಮುದಾ |
ಕೇಶವಸ್ತೂತಮಿಷ್ಟಾರ್ಥಂ ಲಭತೇ ಸರ್ವದಾಸದಾ ||

ಎಂದು ಶರಣಾಗತಿಯನ್ನು ಸಮರ್ಪಿಸಿ ಧನ್ಯಂಮನ್ಯನಾದೆನು-ಮಹಾತ್ಮ, ಅಲ್ಲಿಂದ ಹೊರಟು ಪಾಪನಾಶಿನ್ಯಾದಿ ಸಮಸ್ತ ತೀರ್ಥಗಳಲ್ಲಿಯೂ ಮಿಂದು, ಅಲ್ಲಲ್ಲಿರುವ ಆಶ್ಚರ್ಯಗಳನ್ನು ಮನದಣಿಯೆ ನೋಡಿದೆನು-ಇದೆಲ್ಲವೂ ನಿನ್ನೆಯ ಸಂಜೆಯವರೆಗೆ ನಡೆದ ವೃತ್ತಾಂತ ಈ ದಿನ ಉಷಃಕಾಲಕ್ಕೆದ್ದು, ಸ್ವಾಮಿ ಪುಷ್ಕರಿಣಿಯಲ್ಲಿ ಸ್ನಾನಮಾಡಿ, ದೇವಾಲಯಕ್ಕೆ ಹೋಗಿ ಪರಮಾತ್ಮನನ್ನು ಮತ್ತೆ ಸಂದರ್ಶಿಸಿ, ಅರ್ಚಕರಿತ್ತ ತೀರ್ಥವನ್ನೂ ಪತ್ರಪುಷ್ಪಗಳನ್ನೂ, ಭಗವಂತನಿಗೆ ನಿವೇದನೆಮಾಡಿದ ಮಧುರ ಪದಾರ್ಥಗಳನ್ನೂ ಸ್ವೀಕರಿಸಿ, ಪುಣ್ಯಾತ್ಮನೊಬ್ಬನು ಮಾಡುತ್ತಿದ್ದ ಬ್ರಾಹ್ಮಣ ಸಮಾರಾಧನೆಯಲ್ಲಿ ತೃಪ್ತಿಯಾಗಿ ಊಟಮಾಡಿ, ಅಲ್ಲಿಂದ ತೆರಳಿ ಮತ್ತೆ ಕೆಲವು ವಿಶೇಷ ಸ್ಥಳಗಳನ್ನು ನೋಡಿಕೊಂಡು, ಈ ಪ್ರಾಂತಕ್ಕೆ ಬಂದೆನು. ಶ್ರೀನಿವಾಸನ ದರ್ಶನದಿಂದಲೂ, ತೀರ್ಥಸ್ನಾನಗಳಿಂದಲೂ ಜನ್ಮಾಂತರಕೃತ ಪಾಪಗಳೆಲ್ಲವೂ ಕಳೆದುಹೋಗಿ ಯಾವುದೋ ಒಂದು ಪುಣ್ಯವಿಶೇಷವು ಒಡನೆಯೇ ಫಲಿಸಿತೋ, ಎಂಬಂತೆ ಈ ಸ್ಥಲದಲ್ಲಿ ತಮ್ಮ ದರ್ಶನವು ಲಭಿಸಿತು. ತಮ್ಮನ್ನು ನೋಡಿದಬಳಿಕ, ಬಹುಕಾಲದಿಂದ ಯಾವುದನ್ನು ಕುರಿತು ನಾನು ನಾನಾದೇಶಗಳನ್ನೂ ಸುತ್ತಿನೆನೋ, ಯಾವುದನ್ನು ಅರಸುತ್ತಿದ್ದೆನೋ ಆ ದುರ್ಲಭ್ಯಮಾದ ಫಲವು ಇಂದಿಗೆ ಲಭಿಸಿತೆಂದು ಭಾವಿಸಿ, ತಮ್ಮ ಕೃಪೆಯಿಂದ ಕೃತಾರ್ಥತೆಯನ್ನು ಪಡೆಯಬಯಸಿ, ತಮ್ಮ ದರ್ಶನದಿಂದ ನನ್ನ ಹೃದಯದಿಂದ ತನಗೆತಾನೆ ಉಕ್ಕಿದ ದೃಢಭಕ್ತಿಯಿಂದ ಪೂರ್ಣತೆಯನ್ನು ಪಡೆದು, ತಮ್ಮ ಪಾದಪದ್ಮಗಳನ್ನಾಶ್ರಯಿಸಲು ನಿರ್ಧರಿಸಿ, ತಾವು ಮೌನಮುದ್ರೆಯಿಂದಿದ್ದರೂ ತಮ್ಮಲ್ಲಿ ನೆಲೆಗೊಂಡ ನಂಬುಗೆಯಿಂದ ಈ ಸಾನ್ನಿಧ್ಯವನ್ನು ಬಿಟ್ಟುಹೋಗಲಾರದೆ ನಿಂತೆನು ಕರಣತ್ರಯ ಶುದ್ಧಿಯಾದ ಮಾತಿದು ಪೂಜ್ಯರೆ, ಇನ್ನು ತಮ್ಮ ಚಿತ್ತ ನನ್ನ ಭಾಗ್ಯ ಎಂದು ನುಡಿದು ಸುಮ್ಮನಾದನು.

ಆಗ ಯೋಗೀಶ್ವರನು “ ಸತ್ಯಶೀಲನ ಮಾತುಗಳೆಲ್ಲವೂ ಮೃದುಮಧುರಗಳಾಗಿವೆ ಈತನ ಆಕೃತಿಯು ಸೌಮ್ಯವಾಗಿದೆ ಈತನ ಹೃದಯವು ನಿಷ್ಕಪಟವಾದುದೆಂದೇ ತೋರುವುದು ಹಾಗಿದ್ದರೂ ಪರೀಕ್ಷಿಸದೆ ಈತನನ್ನು ಹತ್ತಿರದಲ್ಲಿ ಸೇರಿಸುವುದು ಹೇಗೆ? ” ಎಂದು ತನ್ನ ಮನಸ್ಸಿನಲ್ಲಿ ಆಲೋಚಿಸುತ್ತ ಸ್ವಲ್ಪ ಕಾಲದವರೆಗೆ ಮೌನವಾಗಿಯೇ ಇದ್ದು, ಅನಿಮೇಷದೃಷ್ಟಿಯಿಂದ ಅವನನ್ನ ನೋಡುತ್ತಿದ್ದನು.

ಸತ್ಯಶೀಲನು ಮತ್ತೆ ಆ ಯೋಗೀಶ್ವರನಿಗೆ ಕೈಮುಗಿದು, ಸ್ವಾಮಿಾ “ ನನ್ನ ಅರಿಕೆಗೆ ಉತ್ತರವನ್ನು ಕೊಡದೆ ತೂಷ್ಣೀಂಭಾವದಿಂದಿರುವ ಕಾರಣವೇನೋ

ತಿಳಿಯಲಿಲ್ಲ ನಾನು ನುಡಿದುದು ನನ್ನ ನಿಜವಾದ ಚರಿತ್ರೆಯಲ್ಲದೆ ಬೇರೆಯಿಲ್ಲ ಸ್ವಲ್ಪವೂ ವ್ಯತ್ಯಾಸವಿಲ್ಲದಂತೆ ಬಿನ್ನವಿಸಿರುವೆನು. ದೀನನೂ, ಅನಾಥನೂ, ನಿರಾಧಾರನೂ ಆದ ನನಗೆ ಸರ್ವಜ್ಞನೂ ಸರ್ವಶಕ್ತನೂ ಆದ ಭಗವಂತನೇ ಇಷ್ಟು ದಿನಗಳಿಗೆ ಸುಲಭವಾಗಿ ತಮ್ಮ ದರ್ಶನವಾಗುವಂತೆ ಅನುಗ್ರಹಿಸಿದನು. ನನ್ನ ಪಾಪಗಳೂ ಕಷ್ಟಗಳೂ ತೊಲಗಿಹೋದುವು. ನಾನು ಧನ್ಯನಾಗುವುದಕ್ಕೆ ತಕ್ಕ ಮಾರ್ಗವು ದೊರೆಯಿತು. ನನ್ನಲ್ಲಿ ತಾವು ನಿರರ್ಗಳ ಕೃಪಾದೃಷ್ಟಿಯನ್ನು ಪೂರ್ಣವಾಗಿ ನೆಲೆಗೊಳಿಸಿ, ನನ್ನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿ ಕಾಪಾಡಬೇಕು. ನಾನಿನ್ನು ಭವದೀಯ ಪಾದಪದ್ಮಗಳನ್ನು ಸೇವಿಸುತ್ತ ತಮ್ಮಲ್ಲಿಯೇ ಇರುವೆನಲ್ಲದೆ ತಮ್ಮನ್ನು ಬಿಟ್ಟು ಹೋಗಲೊಲ್ಲೆನು ಬಡವನು ಕಡವರವಂ ಕಂಡಂತಾಯ್ತು ಕಲ್ಪವೃಕ್ಷವು ಕೈಗೆ ಬಂದಂತಾಯ್ತು ದೇವ, ನನ್ನ ಬಿನ್ನಹವನ್ನು ನಿರಾಕರಿಸದೆ ನನ್ನ ಮನೋರಥವನ್ನು ನೆರವೇರಿಸಬೇಕು ” ಎಂದು ಪೊಡಮಟ್ಟು ಬೇಡಿಕೊಳ್ಳಲಾಗ ಚಿದಾನಂದ ಯೋಗಿಯು ಸತ್ಯಶೀಲನ ವೃತ್ತಾಂತವನ್ನು ಶಾಂತವಾಗಿ ಕೇಳಿ ತನ್ನಲ್ಲಿ “ ಇವನ ಮುಖವು ಪ್ರಸನ್ನವಾಗಿರುವುದು ಅಲ್ಲದೆ ಅಂಗವಿಕಾರಗಳನ್ನು ಮಾಡುತ್ತ ಮಾತನಾಡುತ್ತಿಲ್ಲ. “ ಯತ್ರಾಕೃತಿ ಸ್ತತ್ರ ಗುಣಾಃ ” ಎಂದಲ್ಲವೆ ಹಿರಿಯರು ಹೇಳುವರು ? ಮತ್ತು ಇವನ ವಿಷಯದಲ್ಲಿ ನನಗೆ ಕನಿಕರವು ಮಾತ್ರವೇ ಹುಟ್ಟುತ್ತಿರುವುದು. ಇವನೊಡನೆ ಮಾತಾಡಲು ಸ್ವಲ್ಪವಾದರೂ ಬೇಸರವಾಗದು. ಇವನಿಗೆ ಬಾಲ್ಯದಶೆಯಲ್ಲಿಯೇ ಈತೆರನಾದ ಸದ್ಬುದ್ಧಿಯುಂಟಾಗಿರುವುದು, ಆಶ್ಚರ್ಯಕಾರಿಯಾಗಿರುವುದು ” ಎಂದು ಭಾವಿಸಿ, ತನಗೆ ಇತರರ ಸಂಬಂಧವು ಅನವಶ್ಯಕವೆಂಬ ದೃಢವ್ರತವುಳ್ಳವನಾದರೂ ಆ ಅನಾಥ ವಿಪ್ರಕುಮಾರನನ್ನು ಜ್ಞಾನವಂತನನ್ನಾಗಿ ಮಾಡಬೇಕೆಂದು ನಿಶ್ಚಯಿಸಿ ಆವನನ್ನು ಕಂಡು ಪ್ರಿಯೋಕ್ತಿಗಳಿಂದಿಂತೆಂದನು.

## ಚಿದಾನಂದ ಯೋಗಿಯು ಸತ್ಯಶೀಲನನ್ನು ಶಿಷ್ಯನನ್ನಾಗಿ ಪರಿಗ್ರಹಿಸಿದುದು.

ಎಲೈ ಸತ್ಯಶೀಲನೇ, ನಿನ್ನ ಚರಿತ್ರವು ಅತಿಕಠಿನ ಹೃದಯನ ಮನಸ್ಸನ್ನು ಕೂಡ ಕರಗಿಸುವುದು ನಿನ್ನ ಉದ್ದೇಶವು ಬಹು ಗೌರವನೀಯವಾದುದು ಅಸಾಧಾರಣವಾದುದು ಸುಲಭವಾಗಿ ಲಭಿಸುವುದಲ್ಲ ನಿನ್ನ ಪೂರ್ವಜನ್ಮ ಸಂಸ್ಕಾರ ವಿಶೇಷದಿಂದ ನಿನಗೀ ಜ್ಞಾನವು ಲಭಿಸಿರುವುದು.

“ ಮನುಷ್ಯಾಣಾಂಸಹಸ್ರೇಷು ಕಶ್ಚಿದ್ಯತತಿಸಿದ್ಧಯೇ |
ಯತತಾಮಪಿಸಿದ್ಧಾನಾಂ ಕಶ್ಚಿನ್ಮಾಂವೇತ್ತಿತತ್ವತಃ || ” ಗೀ. ೭-೩.

(ಅರ್ಥ—ಶಾಸ್ತ್ರಾಧಿಕಾರ ಯೋಗ್ಯತೆಯುಳ್ಳ ಸಾವಿರಾರು ಮಂದಿಯಲ್ಲಿ ಯಾವನೋ ಒಬ್ಬನು ಆತ್ಮಜ್ಞಾನಸಿದ್ಧಿಗಾಗಿ ಪ್ರಯತ್ನಿಸುವನು ಹಾಗೆ ಪ್ರಯ

ತ್ನಮಾಡುವ ಸಾವಿರಾರು ಮಂದಿಯಲ್ಲಿ ಯಾವನೋ ಒಬ್ಬನು ನನ್ನನ್ನು ತಿಳಿದು ಕೊಳ್ಳುವನು.)

"ಬಹೂನಾಂಜನ್ಮನಾಮನ್ತೇ ಜ್ಞಾನವಾನ್ಮಾಂಪ್ರಪದ್ಯತೇ |
ವಾಸುದೇವಸ್ಸರ್ವಮಿತಿ ಸಮಹಾತ್ಮಾಸುದುರ್ಲಭಃ ||" ಗೀ. ೭-೧೯

(ಅರ್ಥ—ಯಾವ ಮನುಷ್ಯನು ಅನೇಕ ಪುಣ್ಯಜನ್ಮಗಳನ್ನು ಪಡೆದು, ಕೊನೆಯಲ್ಲಿ ಜ್ಞಾನವಂತನಾಗಿ ಸರ್ವವೂ "**ವಾಸುದೇವನೇ**" ಎಂದು ನನ್ನನ್ನು ಉಪಾಸಿಸುವನೋ ಅಂತಹ ಪುಣ್ಯಾತ್ಮನು ಬಹಳ ದುರ್ಲಭನು.)

ಎಂದು ಶ್ರೀ ಕೃಷ್ಣಪರಮಾತ್ಮನು ಅಪ್ಪಣೆ ಕೊಡಿಸಿರುವಂತೆ ಜ್ಞಾನಮಾರ್ಗವನ್ನು ಅವಲಂಬಿಸಬೇಕಾದರೆ ಬಹು ಜನ್ಮಗಳನ್ನು ಕಳೆದು ಕಡೆಯ ಜನ್ಮವನ್ನು ಪಡೆದವನಾಗಿರಬೇಕು ಅಂಥವನಿಗೆಯೇ ನಿಜತತ್ವವನ್ನು ಪದೇಶಿಸಬೇಕು. ಅವನೇ ಸದುಪದೇಶಕ್ಕೆ ತಕ್ಕ ಪಾತ್ರವು. ವತ್ಸ! ಸತ್ಯಶೀಲ! ನೀನು ಅಂತಹ ಜಿಜ್ಞಾಸುಗಳಲ್ಲಿ ಒಬ್ಬನಾಗಿರುವನೆಂದು ಭಾವಿಸಿರುವೆನು ನಾನು ಸರ್ವಸಂಗವರ್ಜಿತನು ಏಕಾಕಿಯಾಗಿರಬೇಕೆಂಬುದೇ ನನ್ನ ವ್ರತ. ಆದರೆ ಈ ನಿನ್ನನ್ನು ಕಂಡಬಳಿಕ, ನಿನ್ನ ಚರಿತ್ರೆಯನ್ನು ಕೇಳಿದಮೇಲೆ ನೀನು ಗುಣವಂತನೆಂದು ನನ್ನ ಹೃದಯವು ನಂಬಿದ ತರುವಾಯ, ನಿನ್ನ ಸದುದ್ದೇಶವು ಮನಸ್ಸಿಗೆ ಅರಿಕೆಯಾದ ಅನಂತರ ಕೈಲಾದಮಟ್ಟಿಗೆ ನಿನಗೆ ಉಪಕಾರವನ್ನು ಮಾಡಬೇಕೆಂಬ ಭಾವನೆಯು ನನಗುಂಟಾಗಿರುವುದು ಇದು ನಿನ್ನ ಪೂರ್ವಜನ್ಮದ ಪುಣ್ಯವಾಸನೆಯಿಂದ ಜನಿಸಿದ ಭಗವತ್ಪ್ರೇರಣೆಯೆಂದು ನಾನು ಬಗೆದಿರುವೆನು. ನಿನಗಾಗಿ ನನ್ನ ಪೂರ್ವವ್ರತವನ್ನು ಬಿಟ್ಟು, ನಿನ್ನನ್ನು ನನ್ನ ಶಿಷ್ಯನನ್ನಾಗಿ ಅಂಗೀಕರಿಸಿರುತ್ತೇನೆ ಇನ್ನುಮೇಲೆ ನೀನು ನಿಶ್ಚಿಂತನಾಗಿ ನನ್ನಬಳಿಯಲ್ಲಿ ಇರಬಹುದು. ಆದರೆ ನಿನಗೆ ತತ್ವೋಪದೇಶವನ್ನು ಮಾಡುವುದಕ್ಕೆ ಸಮಯವಿದಲ್ಲ ಕೆಲವುಕಾಲ ಕಳೆಯಬೇಕು ಬಳಿಕ ನಿನ್ನ ಮನೋರಥವು ಫಲಿಸುವುದು ಆ ಕಾಲವನ್ನು ನಿರೀಕ್ಷಿಸಿಕೊಂಡು ನಿರ್ವಿಚಾರನಾಗಿರು ಇನ್ನೊಂದು ವಿಚಾರವನ್ನು ನಿನಗೆ ಹೇಳಬೇಕಾಗಿರುವುದು ಅದನ್ನು ಲಾಲಿಸು ಐದು ಸಂವತ್ಸರಗಳಿಗೊಮ್ಮೆ ನಾನು ತೀರ್ಥಯಾತ್ರೆಯನ್ನು ಮಾಡುವ ವಾಡಿಕೆಯನ್ನಿಟ್ಟುಕೊಂಡಿರುವೆನು. ಇಲ್ಲಿಂದ ಹೊರಟು ಪುಣ್ಯತೀರ್ಥಗಳನ್ನು ಸೇವಿಸುತ್ತ ವಾರಾಣಸೀ ಕ್ಷೇತ್ರಕ್ಕೆ ಹೋಗಿ, ಅಲ್ಲಿ ಅನ್ನಪೂರ್ಣಾಸನಾಥನಾದ ವಿಶ್ವನಾಥನನ್ನು ಸಂದರ್ಶಿಸಿ, ಅಲ್ಲಿಂದ ಹಿಂದಿರುಗಿ ದಾರಿಯಲ್ಲಿ ದೊರೆಯುವ ಮಹಾಕ್ಷೇತ್ರಗಳನ್ನು ಸೇವಿಸುತ್ತಾ ಹೊರಟು, ರಾಮೇಶ್ವರಕ್ಕೆ ಹೋಗಿ ರಾಮಲಿಂಗೇಶ್ವರನನ್ನಾರಾಧಿಸಿ ಅಲ್ಲಿಂದ ಇಲ್ಲಿಗೆ ಬರುವುದು ರೂಢಿಯಾಗಿರುವುದು, ಕಳೆದ ಯಾತ್ರೆಯನ್ನು ಮಾಡಿ ಐದು ಸಂವತ್ಸರಗಳಾದುವು, ನಾಳೆಯ ದಿನವೇ ಇಲ್ಲಿಂದ ಹೊರಡಲು ನಿಶ್ಚಯಿಸಿರುವೆನು, ನೀನೂ ನನ್ನನ್ನು

ಬಳಿಸಂದು ಅಲ್ಲಲ್ಲಿ ಕಂಗೊಳಿಸುವ ದಿವ್ಯಕ್ಷೇತ್ರಗಳನ್ನು ನೋಡಿ ಕೃತಾರ್ಥನಾಗು, ಯಾತ್ರೆಯನ್ನು ಮುಗಿಸಿಕೊಂಡು ನಾವಿಲ್ಲಿಗೆ ಬಂದಮೇಲೆ ನಿನಗೆ ಜ್ಞಾನೋಪದೇಶವನ್ನು ಮಾಡುವೆನು ನಿನಗೆ ಶುಭವಾಗಲಿ ಎಂದಪ್ಪಣೆ ಮಾಡಿದನು. ಸತ್ಯಶೀಲನಿಗೆ ಮೇರೆಯಿಲ್ಲದ ಆನಂದವುಂಟಾಯಿತು, ಚಿದಾನಂದಯೋಗಿ ತನ್ನನ್ನನುಗ್ರಹಿಸಿದುದಕ್ಕೆ ಪರವಶಾತ್ಸ್ವರ್ಯಪಟ್ಟನು, ಒಡನೆ ಆ ಯೋಗಿಶ್ರೇಷ್ಠನ ಮುಖದಲ್ಲಿ ದೃಷ್ಟಿಯಿಟ್ಟು "ದೇವ" ಮಹಾನುಗ್ರಹವಿದು, ತಾವು ತಮ್ಮ ಮನಸ್ಸಿನಂತೆ ಮಾಡಬಹುದು, ಎಂದು ನುಡಿದು ವಿನಯ ವಿನಮಿತಗಾತ್ರನಾಗಿ ಚಿದಾನಂದನು ನಿಗೆ ಪ್ರದಕ್ಷಿಣಪೂರ್ವಕನಾಗಿ ನಮಸ್ಕಾರವನ್ನು ಮಾಡಿ. ತನ್ನ ಜನ್ಮವು ಸಾರ್ಥಕವಾಯಿತೆಂದು ಉತ್ಸಾಹಭರಿತನಾಗಿದ್ದನು. ಯೋಗಿಪುಂಗವನು ಸತ್ಯಶೀಲನಲ್ಲಿ ವಾತ್ಸಲ್ಯವುಳ್ಳವನಾದನು ಮಾರನೆಯದಿನದ ಪ್ರಯಾಣವನ್ನು ಕುರಿತು ಪ್ರಸಂಗಿಸುತ್ತ ಗುರುಶಿಷ್ಯರಿಬ್ಬರೂ ಆ ರಾತ್ರಿಯನ್ನು ಕಳೆದರು.

ಮಾರನೆಯ ದಿನದ ಪ್ರಾತಃಕಾಲದಲ್ಲಿದ್ದು ಆ ಯೋಗಿಶ್ರೇಷ್ಠನು ಸ್ನಾನಸಂಧ್ಯಾದ್ಯನುಷ್ಠಾನಗಳನ್ನು ತೀರಿಸಿಕೊಂಡು, ತನ್ನ ಆಜ್ಞಾನುಸಾರವಾಗಿ ಪ್ರಯಾಣಸನ್ನದ್ಧನಾದ ಸತ್ಯಶೀಲನನ್ನು ಕರೆದುಕೊಂಡು, ತೀರ್ಥಯಾತ್ರಾಸಮುತ್ಸುಕನಾಗಿ ಆ ಗುಹಾಕುಹರದಿಂದ ಹೊರಟನು. ಇಬ್ಬರೂ ಶೇಷಾಚಲವನ್ನಿಳಿದರು ಉತ್ತರಾಭಿಮುಖವಾಗಿ ಹೊರಟರು, ಆಗ ಶಿಷ್ಯನಾದ ಸತ್ಯಶೀಲನನ್ನು ಕುರಿತು ಇಂತೆಂದನು:—"ವತ್ಸ" ಸತ್ಯಶೀಲ, ಆಕಾಶಮಾರ್ಗದಲ್ಲಿ ಸಂಚರಿಸುವ ಶಕ್ತಿಯು ನನಗಿರುವುದು, ಆದರೂ ಪಾದಚಾರಿಯಾಗಿ ತೀರ್ಥಯಾತ್ರೆಗಳನ್ನು ಮಾಡಬೇಕೆಂದು ಸಂಕಲ್ಪಿಸಿರುವುದರಿಂದ ಈಗ ನಡೆದುಕೊಂಡೇ ಹೋಗಬೇಕಾಗಿರುವುದು. ಆದುದರಿಂದ ಕ್ರಮಕ್ರಮವಾಗಿ ನಡೆಯುತ್ತ ದಾರಿಯಲ್ಲಿ ಅನುಕೂಲವಾದ ಸ್ಥಲದಲ್ಲಿ ತಂಗಿ ಮಾರ್ಗಾಯಾಸವನ್ನು ಪರಿಹರಿಸಿಕೊಳುತ್ತ ಹೋಗುವ ನಾವು ತಂಗಿದ ಸ್ಥಲದಲ್ಲಿ ನೀನು ಅಡಿಗೆಯನ್ನುಮಾಡಿ ಊಟಮಾಡುತ್ತಿರು ನಾನಾದರೋ ಜಲಪಾನವನ್ನಳಿದು ಮತ್ತಾವುದನ್ನೂ ಸ್ವೀಕರಿಸುವನಲ್ಲ ನನ್ನ ವಿಚಾರದಲ್ಲಿ ನೀನು ಯಾವಸಟ್ಟಿಗೂ ಆಲೋಚಿಸಬೇಡ ಪೂರ್ವಭಾವಿಯಾಗಿಯೇ ನನ್ನ ವಿಧಾನವನ್ನು ತಿಳಿಸಬೇಕಾದುದರಿಂದ ತಿಳಿಸಿರುವೆನು ಎಂದನು. ಶೀಲನಾನುಡಿಗಳನ್ನು ಕೇಳಿ ಚಿಂತಾಕ್ರಾಂತನಾಗಿ, "ಸ್ವಾಮಿ! ಉಚಿತಗಳಾದ ಪದ್ಧತಿಗಳನ್ನೇ ಹೇಳಿದಿರಿ ಆದರೆ ತಮ್ಮ ನಿರಾಹಾರತೆಯು ನನ್ನ ಮನಸ್ಸಿಗೆ ಒಡಂಬಡಲಿಲ್ಲ ತಮ್ಮನ್ನು ಬಿಟ್ಟು ನಾನು ಭುಜಿಸುವುದೆಂದರೆ ನನಗದು ಬಹು ಗರ್ಹ್ಯವಾದುದು ಆದುದರಿಂದ ಗುರುಪುಂಗವ ನಾನೂ ತಮ್ಮಹಾಗೆಯೇ ಜಲಪಾನವನ್ನು ಮಾಡುತ್ತ ತಮ್ಮ ಸೇವೆಯಲ್ಲಿ ನಿರತನಾಗಿರುವೆನು" ಎಂದು ವಿಜ್ಞಾಪಿಸಿದನು. ಆಗ ಯೋಗಿಪುಂಗವನು ತನ್ನಲ್ಲಿ ಆ ಸತ್ಯಶೀಲನಿಗಿರುವ ಭಕ್ತಿಗೆ

ಮೆಚ್ಚಿ ಕಿರುನಗೆಯಂಜಿನುಂಗಿಸಿ, "ಎಲೈ ಛಾತ್ರಶಿರೋಮಣಿ, ನೀನು ನನ್ನಂತೆ ಜಲಪಾನದಿಂದ ಜೀವಿಸುವುದೆಂದರೇನು? ಅಂತಪ್ಪ ಸಾಮರ್ಥ್ಯವು ನಿನಗಿಲ್ಲ ಆ ಆಲೋಚನೆಯನ್ನು ಬಿಟ್ಟುಬಿಡು ನನಗಾದರೆ ಆ ಶಕ್ತಿಯು ತಪೋಬಲ ಲಬ್ಧವಾದುದು ಆಹಾರವಿಲ್ಲದಿದ್ದರೆ ನೀನು ನಡೆಯಲಾರೆ ನನಗಾಗಿ ನೀನಾಹಾರವನ್ನು ಬಿಡುವುದಾದರೆ ನಾನೇ ನಿನಗಾಗಿ ಆಹಾರವನ್ನು ಸ್ವೀಕರಿಸುವೆನು ನನ್ನ ನಿರಶನವ್ರತವನ್ನು ಬಿಡುವೆನು ಸಂಶಯವನ್ನು ಬಿಡು, ವತ್ಸ ನೀನು ಅಡಿಗೆಯನ್ನು ಮಾಡು ಭಗವನ್ನಿವೇದನವಾದ ಬಳಿಕ ಇಬ್ಬರೂ ಊಟವನ್ನು ಮಾಡುವ ಎಂದು ಹೇಳಿದನು. ಸತ್ಯಶೀಲನಿಗೆ ಬಹಳ ಸಂತೋಷವಾಯಿತು ಅಷ್ಟರಲ್ಲಿ ಮಧ್ಯಾಹ್ನವಾಯಿತು ಇಬ್ಬರೂ ಮಾಧ್ಯಾಹ್ನಿಕಕೃತ್ಯಗಳನ್ನು ನೆರವೇರಿಸಿದರು ಆ ದಿನ ಒಂದು ಗ್ರಾಮವನ್ನು ಸೇರಿ ಅಲ್ಲಿ ನಿಂತರು.

ಹಿಂದೆ ಹೇಳಿದಂತೆ ಚಿದಾನಂದ ಸತ್ಯಶೀಲರು ಆ ದಿನದ ಮಧ್ಯಾಹ್ನ ಆ ಹಳ್ಳಿಗೆ ಸಮೀಪದಲ್ಲಿರುವ ಒಂದು ದೊಡ್ಡ ಕೊಳವನ್ನು ಕಂಡರು. ಅದರತೀರದಲ್ಲಿ ದೊಡ್ಡ ಆಲದಮರವೊಂದಿದ್ದಿತು, ಅದರ ನೆರಳು ಆನಂದಕರವಾಗಿದ್ದುದರಿಂದ ಅದರಡಿಯಲ್ಲಿ ಅಡಿಗೆಯನ್ನು ಮಾಡುವಂತೆ ಚಿದಾನಂದಯೋಗಿ ಶಿಷ್ಯನಿಗೆ ಆಜ್ಞೆಮಾಡಿ, ಭೋಜನ ಸಾಮಗ್ರಿಯನ್ನು ತರುವುದಕ್ಕೆ ಒಂದು ಚಿನ್ನದನಾಣ್ಯವನ್ನು ಅವನ ಕೈಯೊಳಿಟ್ಟನು. ಅದು ಆಕಾಲದಲ್ಲಿ ಸ್ವಲ್ಪ ನಾಣ್ಯವಾಗಿಯೇ ಇದ್ದಿತು. "ಎಲೈ ಸತ್ಯಶೀಲನೆ, ಈ ನಾಣ್ಯಕ್ಕೆ ನಮಗಿರ್ವರಿಗೆ ತಕ್ಕಷ್ಟು ಸಾಮಗ್ರಿ ಬರುವುದು. ನೀನೀಗಲೆಹೋಗಿ ಅಕ್ಕಿ, ಬೇಳೆ, ಉಪ್ಪು, ತುಪ್ಪ ಮೊದಲಾದುವನ್ನು ತೆಗೆದುಕೊಂಡುಬಾ, ಕೇಳಿದರೆ ಧರ್ಮಿಷ್ಠರಾರಾದರೂ ಅಡಿಗೆಯ ಪಾತ್ರೆಗಳನ್ನು ಕೊಡುವರು. ತೆಗೆದುಕೊಂಡು ಬೇಗನೆ ಬರಬೇಕು ನೋಡು." ಎಂದಾ ಆಚಾರ್ಯನು ಹೇಳಿದನು. ಶಿಷ್ಯನು "ಗುರುವಿನ ಬಳಿಯಲ್ಲಿ ದಂಡ ಕಮಂಡಲುಗಳು, ನಾಲ್ಕು ಕಾಷಾಯ ವಸ್ತ್ರಗಳು ಹೊರತು ಮತ್ತೇನೂ ಇಲ್ಲವಲ್ಲ! ಎಲ್ಲಿಯೋ ಬಚ್ಚಿಟ್ಟಿದ್ದಂತೆ ಇದನ್ನವರು ಕೊಟ್ಟರಲ್ಲ! ತಮ್ಮ ಪ್ರತಿದಿನದ ವೆಚ್ಚಕ್ಕಾಗಿ ಮಹಾಯೋಗಿಗಳು ಮೂಲಿಕಾವಿಶೇಷದಿಂದ ಚಿನ್ನವನ್ನು ಮಾಡುವರೆಂದು ಕೆಲವರು ಹೇಳುತ್ತಿದ್ದುದನ್ನು ಕೇಳಿದ್ದೆನು- ಆಕಾಶಗಮನಾದಿ ಸಿದ್ಧಿಗಳನ್ನು ಪಡೆದಿರುವ ನಮ್ಮ ಗುರುಗಳಿಗೆ ಚಿನ್ನವನ್ನು ಮಾಡುವುದೊಂದುದೊಡ್ಡಿತೇ?" ಎಂದಾಲೋಚಿಸುತ್ತ ತೆರಳಿ, ಅಂಗಡಿಬೀದಿಗೆ ಹೋಗಿ ಬೇಕಾದ ಪದಾರ್ಥಗಳನ್ನು ಕೊಂಡು, ಒಬ್ಬ ಧರ್ಮಿಷ್ಠನು ಎರವಲಾಗಿ ಅಡಿಗೆಯ ಪಾತ್ರೆಗಳನ್ನು ಕೊಡಲು, "ಅಪರಿಚಿತನಾದ ನನಗೆ ಎರವಾಗಿ ಪಾತ್ರೆಗಳನ್ನಾತನು ಕೊಟ್ಟುದೂ ಯೋಗಿವರ್ಯನ ಪ್ರಭಾವವೇ" ಎಂದು ಆನಂದಿಸುತ್ತ, ಆತನ ಮಹಿಮೆಯನ್ನು ಕೊಂಡಾಡುತ್ತ, ಹಿಂದಿರುಗಿ ಬೇಗನೆ ತಾವಿಳಿದಿದ್ದ ಸ್ಥಳವನ್ನು ಸೇರಿ, ಆ ಕೊಳದ

ನಿರ್ಮಲವಾದ ನೀರಿನಲ್ಲಿ ಮಿಂದು, ಕಾಲೋಚಿತವಾಗಿ ಅಡಿಗೆಯನ್ನು ಸಿದ್ಧಪಡಿಸಿದನು. ಇದಕ್ಕೆ ಮೊದಲೆ ಸ್ನಾನಾದಿ ನಿತ್ಯಕೃತ್ಯವನ್ನು ತೀರಿಸಿಕೊಂಡು ಕುಳಿತಿದ್ದ ಯೋಗಿಪುಂಗವನಿಗೆ ಸತ್ಯಶೀಲನು ಅಡಿಗೆಯನ್ನು ಬಡಿಸಿದನು. ಯೋಗೀಂದ್ರನು ಭೋಜನವನ್ನು ಮಾಡಿದಬಳಿಕ ಶಿಷ್ಯನು ಭುಜಿಸಿ, ಪಾತ್ರೆಗಳನ್ನು ತೊಳೆದಿಟ್ಟು, ಆ ವಟತರುಚ್ಛಾಯೆಯಲ್ಲಿ ವಿಶ್ರಮಿಸಿದ್ದ ಗುರುವರ್ಯನಬಳಿಯಲ್ಲಿ ಕುಳಿತು ಆತನ ಪಾದಗಳನ್ನೊತ್ತುತ್ತ ಕುಳಿತುಕೊಂಡು ಆತನೊಡನಿಂತೆಂದನು.

ಸಚ್ಚಿದಾನಂದರೂಪಾಯ ನಿತ್ಯಭೂತಿಪ್ರದಾಯಿನೇ |
ಶ್ರೀ ಭೂನೀಳಾಸಮೇತಾಯ ಶ್ರೀನಿವಾಸಾಯತೇನಮಃ ||

## ಪದ್ಮಾವತೀ ಧರ್ಮವರ್ಮರ ಕಥೆ.

“ ಮಹಾಮಹಿಮ, ಯೋಗಿಲಲಾಮ ” ತಮ್ಮ ಆಜ್ಞೆಯನ್ನು ಶಿರಸಾವಹಿಸಿ ಭೋಜನಸಾಮಗ್ರಿಯನ್ನು ತರುವುದಕ್ಕೆ ಹೋದೆನಷ್ಟೆ? ಆಗ ಆ ಗ್ರಾಮದ ನಡುವೆ ನಾನೊಂದು ವಿನೋದವನ್ನು ಕಂಡೆನು, ಅಂಗಡಿಬೀದಿಯಿಂದ ಬರುತ್ತಲೇ ಅರಿಕೆಮಾಡಬೇಕೆಂದಿದ್ದೆನು, ಆಗ ತಾವು ಸ್ನಾನಸಂಧ್ಯೆಗಳನ್ನು ಮುಗಿಸಿ ಸಮಾಧಿನಿಷ್ಠರಾಗಿ ಕುಳಿತುಕೊಂಡಿದ್ದುದರಿಂದ ಅವಕಾಶವಿಲ್ಲವಾಯಿತು, ಅಪ್ಪಣೆಯಾದರೆ ಈಗ ಬಿನ್ನವಿಸುವೆನು, ಎಂದು ಸತ್ಯಶೀಲನು ಕೇಳಿದೊಡನೆಯೇ, “ ಎಲೈ ಪ್ರಿಯಶಿಷ್ಯನೇ, ನೀನು ಕೇಳಬಾರದುದನ್ನು ಕೇಳುವನಲ್ಲ ” ಎಂಬುದನ್ನು ಬಲ್ಲೆನು ನಿರ್ಭಯವಾಗಿ ಕೇಳು ಯೋಗಮಹಿಮೆಯಿಂದ ನಾನರಿಯದ ವಿಚಾರವಾವುದೂ ಇರುವುದಿಲ್ಲ ಎಂದು ವಾತ್ಸಲ್ಯದಿಂದ ಕೇಳಿದ ಆ ಯೋಗಿವರ್ಯನನ್ನು ವಂದಿಸಿ ಆತನಿಂತು ಬಿನ್ನೈಸಿದನು.

“ ಗ್ರಾಮದ ನಡುವೆ ವಿಶಾಲವಾದ ಒಂದು ಬಯಲಿರುವುದು ಅದರಲ್ಲಿ ಎತ್ತರವಾದ ಶಿಲಾಸ್ತಂಭಗಳೆರಡು ಒಂದೊಂದಕ್ಕೆ ಹತ್ತುಗಜಗಳ ದೂರದಲ್ಲಿ ನೆಡಲ್ಪಟ್ಟು ಅವೆರಡರಮೇಲೆ ಅಗಲಿತಾದ ಒಂದು ಬಂಡೆಯ ಹಲಗೆಯು ಅಡ್ಡವಾಗಿ ಇಡಲ್ಪಟ್ಟಿರುವುದು, ಅದರನಡುವೆ ರಂಧ್ರಗಳನ್ನು ಮಾಡಿ ಹತ್ತಿರ ಹತ್ತಿರದಲ್ಲಿ ದೃಢಗಳಾದ ಕಬ್ಬಿಣದ ಸರಪಣಿಗಳನ್ನು ತಗುಲಿಸಿರುವರು ಆ ಎರಡು ಸರಪಣಿಗಳೂ ಎರಡು ಕಾಲುಗಳಿಗೆ ಬಿಗಿದಿರಲು ತಲೆಕೆಳಗಾಗಿ ಒಬ್ಬ ಪುರುಷನು ನೇತಾಡುತ್ತಿರುವಂತೆ ಸ್ವಲ್ಪದೂರಕ್ಕೆ ಕಾಣಬರಲು ನಾನು ಆಶ್ಚರ್ಯಗೊಂಡು ಅಕಟಾ! ಇವನಾರು? ಇವನ ಈ ದುಸ್ಥಿತಿಗೆ ಕಾರಣವೇನಿರಬಹುದು? ” ಎಂದು ಅನುತಾಪಪಟ್ಟು ಸಮೀಪಕ್ಕೆ ಹೋಗಿ ನೋಡಿದೆನು ಪುರುಷಾಕೃತಿಯನ್ನು ಪಡೆದ ಕಾರ್ಬೋನ್ನಿನ ವಿಗ್ರಹವೆಂದರಿತುಕೊಂಡೆನು. ಹೀಗೆ ಈ ಪುರುಷಾಕೃತಿಯ ಅಯೋಮಯ ವಿಗ್ರಹವನ್ನು ಈ ಸರಪಣಿಗಳಿಗೆ ನೇತಾಡಕಟ್ಟಿರುವುದಕ್ಕೆ ಕಾರಣವೇನೆಂದು ಆ ಗ್ರಾಮಸ್ಥರನ್ನು ಕೇಳಿದೆನು ಅವರು “ ಅದೇನು ಕಾರ

ಣವೋ ನಮಗೆ ತಿಳಿಯದು ಬಹುಕಾಲದಿಂದಲೂ ಹೀಗೆಯೇ ಇದೆ ನಮ್ಮ ಹಿರಿಯರೂಕೂಡ ಇದರ ಕಾರಣವನ್ನರಿಯರು " ಎಂದು ಹೇಳಿದರು ನಾನಲ್ಲಿಂದ ಆ ವಿಚಾರವನ್ನು ಸಮಗ್ರವಾಗಿ ತಿಳಿಯಬೇಕೆಂಬ ಇಷ್ಟವುಳ್ಳವನಾದರೂ ನಿರಾಶನಾಗಿ ಹೊರಟುಬಂದೆನು

"ಮಹಾತ್ಮಾ ಆ ವಿಚಾರವನ್ನು ತಿಳಿಯಬೇಕೆಂಬ ಆಸೆಯು ಇನ್ನೂ ನನ್ನನ್ನು ಬಿಟ್ಟಿರುವುದಿಲ್ಲ ತಾವು ಜ್ಞಾನದೃಷ್ಟಿಯುಳ್ಳವರು ತದ್ವೃತ್ತಾಂತವನ್ನು ತಾವಲ್ಲದೆ ಮತ್ತೆ ಯಾರೂ ಹೇಳಲಾರರು ದಯವಿಟ್ಟು ಹೇಳಬೇಕು " ಎಂದಾ ಸತ್ಯಶೀಲನು ಬಹಳವಾಗಿ ಪ್ರಾರ್ಥಿಸಿದನು. ಬಳಿಕ ಚಿದಾನಂದರು ಸ್ವಲ್ಪಹೊತ್ತು ಕಣ್ಣುಮುಚ್ಚಿ ಧ್ಯಾನಿಸಿ ಕಣ್ದೆರೆದು, "ವತ್ಸ ! ಜ್ಞಾನದೃಷ್ಟಿಯಿಂದ ವೃತ್ತಾಂತವನ್ನೆಲ್ಲ ತಿಳಿದುಕೊಂಡೆನು. ಸತ್ಯಶೀಲ ! ನೀನು ಕಂಡುಬಂದ ಆಶ್ಚರ್ಯಸ್ಪದಕ್ಕೆ ನಿಮಿತ್ತವಾದ ಒಂದು ಚರಿತ್ರಾಂಶವುಂಟು ಅದು ಅತ್ಯಾಶ್ಚರ್ಯಕರವಾದುದು ಸಾವಧಾನದಿಂದಾಲಿಸು " ಎಂದಿಂತು ಹೇಳಲಾರಂಭಿಸಿದನು

"ಈಗ ಈ ಗ್ರಾಮವಿರುವ ಸ್ಥಲದಲ್ಲಿ ಬಹಳ ಕಾಲದಹಿಂದೆ ಒಂದು ದೊಡ್ಡ ಪಟ್ಟಣವಿದ್ದಿತು. ಆಗ ಅದು ಅಪರಿಮಿತೈಶ್ವರ್ಯದಿಂದ ಒಪ್ಪುತ್ತಿದ್ದಿತು ಮತ್ತು ಸಕಲಾಲಂಕಾರಶೋಭಿತವಾಗಿಯೂ ಅಸಂಖ್ಯೇಯಜನ ಸಂಕುಲ ನಿಬಿಡವಾಗಿಯೂ ಕಲಾಶಿಲ್ಪಾದಿ ಸಮಸ್ತ ವಿಷಯಗಳಲ್ಲಿ ಲೋಕಪ್ರಸಿದ್ಧಿಯನ್ನು ಪಡೆದುದಾಗಿಯೂ ಇದ್ದಿತು ಆ ನಗರಕ್ಕೆ ಶ್ರೀನಗರವೆಂದು ಹೆಸರು. ಆ ನಗರವನ್ನು ರಾಜಧಾನಿಯನ್ನಾಗಿ ಮಾಡಿಕೊಂಡು ವಿಕ್ರಮವರ್ಮನೆಂಬ ರಾಜನು ಅನಂತಸತ್ವಸಂಪನ್ನತೆಯಿಂದ ಮೆರೆಯುತ್ತ, ನಾನಾದೇಶಾಧೀಶರನ್ನು ಗೆದ್ದು ಅವರನ್ನು ತನ್ನ ಸಾಮಂತರಾಜರನ್ನಾಗಿ ಮಾಡಿಕೊಂಡು ಅತಿವಿಶಾಲವಾದ ತನ್ನ ದೇಶವನ್ನು ನಿರಂಕುಶನಾಗಿ ಪಾಲಿಸುತ್ತಿದ್ದನು. ಭೂಪಾಲರಿಗಿರಬೇಕಾದ ಸದ್ಗುಣಗಳೆಲ್ಲವೂ ಆತನಲ್ಲಿ ನೆಲೆಗೊಂಡಿದ್ದುವು. ಆತನ ಮಂತ್ರಿಯು ದೇವಶರ್ಮನೆಂಬ ಬ್ರಾಹ್ಮಣೋತ್ತಮನು, ಆತನು ಬುದ್ಧಿಯಲ್ಲಿ ಬೃಹಸ್ಪತಿ ಸಾಮ್ಯವನ್ನು ವಹಿಸುತ್ತ, ತನ್ನ ಕೌಶಲ್ಯದಿಂದ ರಾಜ್ಯತಂತ್ರವನ್ನು ಬಹಳ ಚೆನ್ನಾಗಿ ನಡೆಯಿಸುತ್ತ ಎಲ್ಲಪ್ರಜೆಗಳ ಮನ್ನಣೆಗೂ ಪಾತ್ರನಾಗಿ ವರ್ತಿಸುತ್ತಿದ್ದನು. ರಾಜನಲ್ಲಿ ಹೇಗೋ ಹಾಗೆ ಈತನಲ್ಲಿಯೂ ಸತ್ಯ ನಾಚಿಲ್ಯ ಗಾಂಭೀರ್ಯೌದಾರ್ಯ ಧೈರ್ಯಾದಿ ಗುಣಗಳು ತುಂಬಿ ತುಳುಕುತ್ತಿದ್ದುವು. ಅಸಾಮಾನ್ಯವಾದ ಪರೇಂಗಿತ ಜ್ಞಾನವೂ, ಶರಣಾಗತ ರಕ್ಷಾದಕ್ಷತೆಯೂ, ಸಮಯೋಚಿತ ವಚನರಚನಾವೈಶದ್ಯವೂ, ದೀನವಾತ್ಸಲ್ಯವೂ, ದುಷ್ಟಶಿಕ್ಷಣ ಶಿಷ್ಟರಕ್ಷಣ ವಿಧಾನವೂ, ಭೂತದಯೆಯೂ ಈತನಲ್ಲಿ ತುಂಬಿದ್ದಿತು.

" ಸ್ವದೇಶಜಂಕುಲಾಚಾರಂ ವಿಶುದ್ಧಮಥವಾಶುಚಿಂ |
ಮಂತ್ರಜ್ಞಮವ್ಯಸನಿನಂ *ವ್ಯಭಿಚಾರವಿವರ್ಜಿತಂ |
ಅಧೀತವ್ಯವಹಾರಜ್ಞಂ †ಮೌಲಂಖ್ಯಾತಂವಿಪಶ್ಚಿತಂ |
ಅರ್ಥಸ್ಯೋತ್ಪಾದಕಂಚೈವ ವಿದಧ್ಯಾನ್ಮಂತ್ರಿಣಂನೃಪಃ ‖ "

ಅರ್ಥ—ತನ್ನ ದೇಶದಲ್ಲಿ ಹುಟ್ಟಿದವನೂ, ನಿರ್ದುಷ್ಟಕುಲದಲ್ಲಿ ಹುಟ್ಟಿ ಸದಾಚಾರಸಂಪನ್ನನಾದವನೂ, ಕರಣಶುದ್ಧಿಯುಳ್ಳವನೂ, ಆಲೋಚನೆಯನ್ನು ಚೆನ್ನಾಗಿ ಅರಿತವನೂ, ಕಾಮಕ್ರೋಧಾದಿಗಳಿಂದ ಹುಟ್ಟಿದ ದೋಷಗಳ ಸ್ಪರ್ಶವಿಲ್ಲದವನೂ, ವ್ಯಭಿಚಾರರಹಿತನೂ, ಲೋಕದ ವ್ಯವಹಾರವನ್ನು ಚೆನ್ನಾಗಿ ಬಲ್ಲವನೂ, ಪೂರ್ವಾಚಾರವನ್ನತಿಕ್ರಮಿಸದವನೂ, ಪ್ರಸಿದ್ಧನಾದ ಲೋಕೋಪಕಾರ ಕಾರ್ಯಗಳನ್ನು ಮಾಡಿದವನೂ, ವಿದ್ಯಾವಂತನೂ, ಪ್ರಜೆಗಳಿಗೆ ಯಾವ ಬಾಧೆಯೂ ಆಗದಂತೆ ಹಣವನ್ನು ಕೂಡಿಸಬಲ್ಲವನೂ ಆಗಿರುವವನನ್ನೇ ರಾಜನು ಮಂತ್ರಿಯನ್ನಾಗಿ ಏರ್ಪಡಿಸಿಕೊಳ್ಳಬೇಕು ಎಂಬ ನೀತಿಯಂತೆ ವಿಕ್ರಮವರ್ಮನು ಬಯ್ದಾಯನ್ನು ಮಂತ್ರಿತ್ವಕ್ಕೆ ದೇವಶರ್ಮನನ್ನು ನಿಯಮಿಸಿಕೊಂಡಿದ್ದನು. " ದೌರ್ಮಂತ್ರ್ಯಾನ್ನೃಪತಿರ್ವಿನಶ್ಯತಿ " ಕೆಟ್ಟಮಂತ್ರಿತ್ವದಿಂದ ರಾಜನು ನಾಶವನ್ನು ಪಡೆವನು, ಎಂಬುದನ್ನು ಅರಸನು ಚೆನ್ನಾಗಿ ತಿಳಿದಿದ್ದನು.

ಹೀಗೆ ವಿಕ್ರಮವರ್ಮನು ಅರಸುತನವನ್ನು ಮಾಡುತ್ತಿದ್ದ ಕಾಲದಲ್ಲಿ ಕಾಂಭೋಜ ದೇಶಾಧಿಪತಿಯಾದ ಸೋಮವರ್ಮನು ಕುಸುಮಪುರವೆಂಬ ಪಟ್ಟಣವನ್ನು ರಾಜಧಾನಿಯಾಗಿ ಮಾಡಿಕೊಂಡು ಪ್ರಜಾಪಾಲನತತ್ಪರತೆಯಿಂದ ಆಳುತ್ತಿದ್ದನು ಆತನಿಗೆ ಸುಕುಮಾರಿಯಾದ ಕುಮಾರೀಮಣಿಯೊಬ್ಬಳಿದ್ದಳು. ಆಕೆಯ ಹೆಸರು ಪದ್ಮಾವತಿ ಆಕೆಯು ದಿನದಿನ ಪ್ರವರ್ಧಮಾನೆಯಾಗಿ ಕಲ್ಯಾಣಲಕ್ಷಣಲಕ್ಷಿತೆಯಾಗಿ ಆ ಕಾಲದಲ್ಲಿದ್ದ ಯುವತೀಜನದಲ್ಲಿ ಖ್ಯಾತಿಯನ್ನು ಹೊಂದಿದ ಸೌಂದರ್ಯದಿಂದ ಕಂಗೊಳಿಸುತ್ತಿದ್ದಳು, ಚಿನ್ನಕ್ಕೆ ಪರಿಮಳವು ಪ್ರಾಪ್ತವಾದಂತೆ ಆಕೆಗೆ ಯೌವನವು ಪ್ರಾಪ್ತವಾಯಿತು, ಸೋಮವರ್ಮನು ತನ್ನ ಕುಮಾರೀರತ್ನಕ್ಕೆ ಮದುವೆಯನ್ನು ಮಾಡಬೇಕೆಂದು ಬಗೆದು ತಕ್ಕ ವರನನ್ನರಸುತ್ತಿದ್ದನು. ಆದರೆ ಆ ಸುಂದರೀಮಣಿಯು ಪೂರ್ವದಲ್ಲಿ ಸ್ವತಂತ್ರನಾಗಿದ್ದು ಈಗ ವಿಕ್ರಮವರ್ಮನಿಗೆ ಅಧೀನನಾಗಿ ಪ್ರತಿವರ್ಷವೂ ಪಗದಿಯನ್ನು ಕೊಡುತ್ತ ಸಾಮಂತರಾಜನಾಗಿರುವನೂ, ಕಂತುಜಯಂತ ನಳಕೂಬರರಿಗೆ ಸಮವಾದ ಸೌಂದರ್ಯವುಳ್ಳವನೂ, ಸಮಸ್ತ ಸದ್ಗುಣಗಳಿಂದ ಶೋಭಿಸುವನೂ, ವಿಜಯಪುರದ ಅರಸನೂ ಆದ ಧರ್ಮವರ್ಮ ನರಪಾಲನ ಶುಭಲಕ್ಷಣಗಳನ್ನು ಕೇಳಿ ತನಗವನೇ ತಕ್ಕವರ

---

* ವ್ಯಭಿಚಾರ—ಅಮಾರ್ಗದಲ್ಲಿ ನಡೆಯುವಿಕೆ, ಜಾರತ್ವ

† ಮೌಲ—ಪೂರ್ವಾಚಾರ, ವೈಭವವುಳ್ಳ ಸತ್ಕುಟುಂಬದಲ್ಲಿ ಹುಟ್ಟಿದವನು.

ನೆಂದು ನಿಶ್ಚಯಿಸಿ, ಮನಃಪೂರ್ವಕವಾಗಿ ಪ್ರೇಮಿಸಿ, ಗೋಪ್ಯವಾಗಿ ಪತ್ರವ್ಯವಹಾರದಿಂ ತನ್ನ ಆಶಯವನ್ನು ಆತನಿಗೆ ತಿಳಿಯಿಸಿದಳು. ಅದಕ್ಕೆ ಮೊದಲೇ ಆ ಸುದತೀಮಣಿಯ ಸೌಂದರ್ಯ ಸೌಶೀಲ್ಯಾದಿಗಳನ್ನು ಕೇಳಿ ಬಹಳವಾಗಿ ತ್ವರೆಪಡುತ್ತಿದ್ದ ಧರ್ಮವರ್ಮನು ಆ ನಾರೀರತ್ನದ ಲೇಖಾವಲೋಕನದಿಂದ ಆನಂದ ಭರಿತನಾಗಿ, ತನ್ನ ಅಂಗೀಕಾರವನ್ನು ಬರೆದುಕಳುಹಿಸಿ ಅದಕ್ಕೆ ತಕ್ಕಪ್ರತ್ಯುತ್ತರಗಳನ್ನು ಮಾಡುತ್ತಿದ್ದನು. ಅಂತಹವೇಳೆಯಲ್ಲಿ ಸಾರ್ವಭೌಮನಾದ ವಿಕ್ರಮವರ್ಮನು, ಸೋಮಶರ್ಮನ ಪತ್ರಿಕೆಯ ತಾರುಣ್ಯ ಲಾವಣ್ಯರೂಪ ರೇಖಾವಿಲಾಸಗಳನ್ನು ಕರ್ಣಾಕರ್ಣಿಕೆಯಾಗಿ ಕೇಳಿ ಆ ಲತಾಂಗಿಯನ್ನು ಮದುವೆಮಾಡಿಕೊಳ್ಳಬೇಕೆಂದು ಬಗೆದು, ತನ್ನ ಅಭಿಪ್ರಾಯವನ್ನು ಕಾಂಭೋಜರಾಜನಿಗೆ ಪತ್ರಿಕಾಮುಖವಾಗಿ ತಿಳಿಯಿಸಿದನು. ಸೋಮಶರ್ಮರಾಜನು ಚಕ್ರವರ್ತಿಯ ಅಭಿಲಾಷೆಗೆ ವಿರೋಧವಾಗಿ ನಡೆಯಲಿಷ್ಟವಿಲ್ಲದೆ ತನ್ನ ಅಮಾತ್ಯವರ್ಗವನ್ನು ಕರೆಯಿಸಿ, ಅವರೊಡನೆ ಆಲೋಚನೆಮಾಡಿ, ಆತನಿಗೆಯೇ ತನ್ನ ಕುಮಾರಿಯನ್ನು ಕುಡುವುದು ಕ್ಷೇಮಕರವೆಂದು ನಿರ್ಧರಿಸಿ, ತನ್ನ ಈ ಅಭಿಪ್ರಾಯವನ್ನು ಆಕೆಗೆ ತಿಳಿಸುವುದುಚಿತವೆಂದು ಬಯಸಿ, ಆ ಸಾರ್ವಭೌಮನು ಬರೆದ ಪತ್ರವನ್ನು ಕೊಟ್ಟು, ತನಗೆ ಬೇಕಾದ ಕೆಲವರನ್ನು ಆಕೆಯಬಳಿಗೆ ಕಳುಹಿಸಿದನು. ಪದ್ಮಾವತಿಯು ತನ್ನ ತಂದೆಯು ಕಳುಹಿದ ಆ ಚಕ್ರವರ್ತಿಯ ಕಾಗದವನ್ನು ಓದಿಕೊಂಡು, ತಂದೆಯ ಉದ್ದೇಶವಿಂಥದೆಂದು ಮನಸ್ಸಿನಲ್ಲಿ ತಿಳಿದು, ತಂದೆಗಿಂತು ಉತ್ತರವನ್ನು ಬರೆದಳು.

" ತೀರ್ಥರೂಪರಾದ ತಂದೆಯವರ ದಿವ್ಯ ಪಾದಪದ್ಮಂಗಳ ಸನ್ನಿಧಿಯಲ್ಲಿ ಬಾಲಕಿ ಪದ್ಮಾವತಿ ಮಾಡುವ ನಮಸ್ಕಾರಪೂರ್ವಕ ವಿಜ್ಞಾಪನೆಗಳು.

ನಿಮ್ಮ ಆಶೀರ್ವಾದದಿಂದ ನಾನು ಕ್ಷೇಮ ನಿಮ್ಮ ಕ್ಷೇಮಕ್ಕೆ ಬರೆಯಿಸಬೇಕು. ಈಗ ಬಾಲಕಿಯು ಮಾಡುವ ಬಿನ್ನಹವನ್ನು ಸಾವಧಾನದಿಂದ ಲಾಲಿಸಿ, ನಿಮ್ಮ ಆಜ್ಞಾತಿಕ್ರಮಣ ಮಾಡಿದ ಅಪರಾಧವನ್ನು ಮನ್ನಿಸಬೇಕೆಂದು ಪ್ರಾರ್ಥಿಸುತ್ತೇನೆ.

ಮೊದಲೇ ನಾನು ಧರ್ಮವರ್ಮ ನರಪತಿಯ ಸೌಂದರ್ಯ ಸೌಕುಮಾರ್ಯ ತಾರುಣ್ಯ ಕಾರುಣ್ಯ ಸೌಶೀಲ್ಯಾದಿಗಳನ್ನು ಕೇಳಿ. ನನಗೆ ಆತನೇ ಪತಿಯೆಂದು ಮಾನಸಿಕವಾಗಿ ವರಿಸಿರುವೆನು. " ಕನ್ಯಾವರಯತೇರೂಪಂ " ಎಂಬ ಆರ್ಯೋಕ್ತಿಯು ನಿಮಗೆ ತಿಳಿಯದುದಲ್ಲ ಆತನೂ ನನ್ನನ್ನು ಒಪ್ಪಿರುವನು ಇಬ್ಬರಿಗು ಒಡಂಬಡಿಕೆಯಾಗಿರುವುದು- ಸಾಧ್ವಿಯಾದ ನಾರಿಯು ತಾನು ಒಮ್ಮೆ ವರಿಸಿದ ವರನನ್ನು ಉಳಿದು ಇತರ ಪುರುಷರನ್ನು ಮನಸ್ಸಿನಲ್ಲಿ ಸ್ಮರಿಸುವುದುಕೂಡ ಧರ್ಮವಿರುದ್ಧವೆಂದೂ, ಹಾಗೆ ಅಪೇಕ್ಷಿಸುವ ಸೀಮಂತಿನಿಯು ಪತಿವ್ರತೆಯಲ್ಲವೆಂದೂ

ನಮ್ಮ ಹಿರಿಯರು ಹೇಳುತ್ತಿರುವರು. ಜನಕ, ನನ್ನ ಅಭಿಮತವನ್ನು ಪೂಜ್ಯಚರಣರಲ್ಲಿ ಬಿನ್ನೈಸಿರುವೆನು. ಇದಕ್ಕೆ ವಿರೋಧವಾದರೆ ಮರಣವನ್ನು ಶರಣು ಹೊಂದುವೆನು. ಇಂತು ಬಾಲಕಿ ಪದ್ಮಾವತಿ. ''

ಸೋಮವರ್ಮನು ತನ್ನ ಕುಮಾರೀರತ್ನದಲ್ಲಿ ತನಗಿರುವ ಪ್ರೀತ್ಯತಿರೇಕದಿಂದ ಅವಳ ಅಭಿಪ್ರಾಯಕ್ಕೆ ವ್ಯತಿರೇಕವಾಗಿ ಮಾಡಲು ಇಷ್ಟವಿಲ್ಲದವನಾಗಿ, ಅವಳ ಉದ್ದೇಶವನ್ನು ಒಂದು ಕಾಗದದಲ್ಲಿ ಬರೆದು ಕಳುಹಿದನು ಅದರಲ್ಲಿ ಒಕ್ಕಣೆಯು ಹೀಗಿದ್ದಿತು.

" ಪ್ರಭೂತ್ತಮಾ, ವಿಕ್ರಮವರ್ಮ '' ಅವಧರಿಸುವುದು ನನ್ನ ಕುಮಾರಿಯನ್ನು ನಿಮಗೆಯೇ ಕೊಟ್ಟು ಮದುವೆ ಮಾಡಬೇಕೆಂದು ಬಗೆದು, ತಾವು ಬರೆದಿದ್ದ ಪತ್ರದೊಡನೆ ನಿಮ್ಮನ್ನೆ ವಿವಾಹಮಾಡಿಕೊಳ್ಳುವುದಕ್ಕೆ ತಕ್ಕ ಬರಿವಣಿಗೆಯಿಂದ ನಾನೊಂದು ಪತ್ರವನ್ನು ನನ್ನ ಮಗಳಬಳಿಗೆ ಕಳುಹಿಸಿದೆನು, ಆದರೆ ಆಕೆಯು ಅದಕ್ಕೆ ಮೊದಲೇ ತಾನು ವಿಜಯಪುರದ ಅರಸನಾದ ಧರ್ಮವರ್ಮನನ್ನು ಮನಸ್ಸಿನಿಂದ ವರಿಸಿರುವೆನೆಂದೂ ಆತನನ್ನು ಬಿಟ್ಟು ಬೇರೊಬ್ಬನನ್ನು ವರಿಸುವುದು ಆರ್ಯಧರ್ಮಕ್ಕೆ ವಿರೋಧವೆಂದೂ, ಆ ಅಕಾರ್ಯಕ್ಕೆ ನಾನು ಕೈಹಚ್ಚುವಳಲ್ಲವೆಂದೂ, ಒಂದುವೇಳೆ ಬಲಾತ್ಕಾರವಾಗಿ ನನ್ನ ಸಂಕಲ್ಪಕ್ಕೆ ವಿರೋಧವಾಗಿ ನಡೆಯಿಸಿದೆಯಾದರೆ ನಾನು ಪ್ರಾಣತ್ಯಾಗವನ್ನು ಮಾಡುವುದಕ್ಕೆ ಸಿದ್ಧಳಾಗಿರುವೆನೆಂದೂ ಉತ್ತರವನ್ನು ಬರೆದಿರುವಳು. ಪುತ್ರಿಕಾವಾತ್ಸಲ್ಯದಿಂದ ನಾನು ನನ್ನ ಕುಮಾರಿಯ ಸಂಕಲ್ಪಕ್ಕೆ ಪ್ರತಿಕ್ರಿಯೆಯನ್ನು ಮಾಡಲಾರದವನಾಗಿರುವೆನು, ತಮ್ಮ ಇಷ್ಟವನ್ನು ನೆರವೇರಿಸಲಾಗದೆಂಬದನ್ನು ಹೀಗೆ ಸನ್ನಿಧಿಯಲ್ಲಿ ಅರಿಕೆ ಮಾಡಬೇಕಾಗಿ ಬಂದುದಕ್ಕೆ ಕ್ಷಮಾಪಣೆಯನ್ನು ಬೇಡುವೆನು.

ಇಂತು ತಮ್ಮ ವಿಧೇಯ ಸೇವಕನು, ಸೋಮವರ್ಮ.

ಆ ಪ್ರತ್ಯುತ್ತರವನ್ನು ಕಂಡೊಡನೆಯೇ ವಿಕ್ರಮವರ್ಮನು ಕೋಪಾವಿಷ್ಟನಾಗಿ, " ಅಕಟಕಟಾ ! ಮಂದಮತೀ ! ಪದ್ಮಾವತೀ ! ಧರ್ಮವರ್ಮನನ್ನುಳಿದು ಅನ್ಯನನ್ನೊಲ್ಲೆಯಾ ? ಆಗಲಿ ! ನೀನವನನ್ನು ಮದುವೆಯಾದರೂ ನಿನಗಾಗಿ ಅವನನ್ನು ರಾಜ್ಯಭ್ರಷ್ಟನನ್ನಾಗಿಮಾಡಿ ಹಿಡಿದುತಂದು ಸೆರೆಗೈದು ಬಳಿಕ ನಿನ್ನನ್ನು ವಶಪಡಿಸಿಕೊಳ್ಳುವೆನು, ಆಗ ನಿನ್ನ ಸಾಧ್ವೀತ್ವವು ಹೇಗಿರುವುದೋ ನೋಡುವೆನು ಈ ವಿಕ್ರಮವರ್ಮನ ಮಹಿಮೆಯು ನಿನಗಾಗ ತಿಳಿಯಬರುವುದು '' ಎಂದೆಲ್ಲ ಸಭ್ಯರು ಕೇಳುತ್ತಿರಲು ನುಡಿದು, ತದಾರಂಭವಾಗಿ ಧರ್ಮವರ್ಮನಮೇಲೆ ಶತ್ರುತ್ವವನ್ನೆ ಸಾಧಿಸುತ್ತ, ಹೇಗಾದರೂ ಅವನನ್ನು ಪದಭ್ರಷ್ಟನನ್ನಾಗಿ ಮಾಡುವುದಕ್ಕೆ ಸಮಯವನ್ನು ನಿರೀಕ್ಷಿಸುತ್ತಿದ್ದನು. ಕೆಲವು ದಿನಗಳಲ್ಲಿಯೇ ಧರ್ಮವರ್ಮ ಪದ್ಮಾವತಿಯರಿಗೆ ಮಹಾವೈಭವದಿಂದ ವಿವಾಹಮಹೋತ್ಸವವು ನೆರವೇರಿತು, ಆ

ಸುಂದರಿಯು ತನ್ನ ಪತಿಯೊಡನೆ ವಿಜಯಪುರಕ್ಕೆ ಬಂದು ತನ್ನ ಭರ್ತೃವಿನಿಂದ ಸಮಸ್ತ ಕಾಮ್ಯಗಳನ್ನು ಪಡೆದು ಸುಖವನ್ನು ಅನುಭವಿಸುತ್ತಿದ್ದಳು.

ಧರ್ಮವರ್ಮನೆಂದರೆ ಸಾಮಾನ್ಯ ಪುರುಷನಲ್ಲ, ತನ್ನ ಹೆಸರಿಗೆ ತಕ್ಕಂತೆ ಧರ್ಮಿಷ್ಠನಾಗಿ ತನ್ನ ಪ್ರಜೆಗಳನ್ನು ಮಕ್ಕಳನ್ನು ಹೇಗೋ ಹಾಗೆ ಕಾಪಾಡುತ್ತ ಸತ್ಯಸ್ವಭಾವವುಳ್ಳವನಾಗಿದ್ದನು. ವಾಮದೇವನೆಂಬ ಬ್ರಾಹ್ಮಣೋತ್ತಮನು ಆ ರಾಜಪುಂಗವನಿಗೆ ಮಂತ್ರಿಯಾಗಿದ್ದನು. ಆತನಾದರೋ ಕರಣತ್ರಯದಿಂದಲೂ ತನ್ನ ದೊರೆಗೆ ಹಿತವನ್ನು ಬಯಸುತ್ತ ಯುಗಂಧರ, ಚಾಣಕ್ಯ, ಭಟ್ಟಿ ಮೊದಲಾದವರನ್ನು ಮೀರುವ ನೀತಿ, ಯುಕ್ತಿಗಳಿಂದ ಕೂಡಿ ಸರ್ವಸ್ತುತ್ಯನಾಗಿದ್ದನು. ಸಕಲ ಕಲಾಕುಶಲನೂ, ಮಾಯಾತಂತ್ರದಕ್ಷನೂ, ರಾಜ್ಯತಂತ್ರ ಚತುರನೂ ಆಗಿದ್ದ ಆ ಸಚಿವಶ್ರೇಷ್ಠನ ಹೆಸರು ಕಿವಿಯಲ್ಲಿ ಬಿದ್ದೊಡನೆಯೇ ಹಗೆಗಳ ಹೃದಯಗಳು ತಲ್ಲಣಿಸುತ್ತಿದ್ದುವು. ಅವನ ಪಟ್ಟಣವನ್ನು ನೆಟ್ಟಗೆ ನಿಟ್ಟಿಸುವುದಕ್ಕೆ ಕೂಡ ಶತ್ರುವರ್ಗವು ಸಮರ್ಥವಾಗಿರುತ್ತಿರಲಿಲ್ಲ. ವಿಕ್ರಮವರ್ಮನು ಉದ್ದಾಮವಾದ ಸಾಮರ್ಥ್ಯವುಳ್ಳವನೂ, ಗೌರವಶಾಲಿಯೂ, ಧೈರ್ಯವಂತನೂ ಆದರೂ, ಧರ್ಮವರ್ಮನನ್ನು ಸೋಲಿಸಿ ಸಾಧ್ವೀಮಣಿಯಾದ ಪದ್ಮಾವತಿಯನ್ನು ಪರಿಗ್ರಹಿಸುವುದಕ್ಕೆ ಹಿಂದೆಮುಂದೆ ತುಳಿಯುತ್ತಿದ್ದನು. ಎರಡುಮೂರಾವೃತ್ತಿ ಪ್ರಯತ್ನಿಸಿ ಸೇನಾಸಹಿತನಾಗಿ ಬಂದು ವಿಜಯನಗರವನ್ನು ಮುತ್ತಿ ತಂತ್ರಜ್ಞನಾದ ವಾಮದೇವನ ಮಾಯಾಜಾಲಕ್ಕೆ ಸಿಕ್ಕಿ, ಬಗೆಬಗೆಯ ಕಷ್ಟಗಳಿಗೊಳಗಾಗಿ, ಪರಾಜಯವನ್ನು ಪಡೆದು ಓಡಿಹೋದನು. ಮತ್ತು ವಾಮದೇವನಿಲ್ಲದ ಸಮಯದಲ್ಲಿ ಹೋಗಿ ಹೇಗಾದರೂ ಧರ್ಮವರ್ಮನನ್ನು ಬೀಳಿಸಿ, ತನ್ನ ಪಂತವನ್ನು ಸಾಧಿಸಬೇಕೆಂದಿದಿರು ನೋಡುತ್ತಿದ್ದನು, ಇವನು ಕಾರಣವಿಲ್ಲದೆ ಅಕ್ರಮವಾಗಿ ತಮ್ಮ ಪಟ್ಟಣದಮೇಲೆ ದಂಡೆತ್ತಿಬಂದುದರಿಂದ ತಾವಿನ್ನು ಇವನಿಗೆ ಕಪ್ಪಕಾಣಿಕೆಗಳನ್ನು ಕಟ್ಟಬಾರದೆಂದು ನಿರ್ಣಯಿಸಿ, ಧರ್ಮವರ್ಮನಿಗೆ ಉಪದೇಶವನ್ನು ಮಾಡಿ ಸ್ವೇಚ್ಛೆಯಾಗಿ ಸ್ವಾತಂತ್ರ್ಯದಿಂದ ವರ್ತಿಸುವಂತೆ ವಾಮದೇವನು ಆತನನ್ನು ಪ್ರೋತ್ಸಾಹಿಸಿದನು, ರಾಜನಾ ತನ್ನ ಪಗೆಯನ್ನು ನಿರಾಕರಿಸಿ ಮಂತ್ರಿಯ ಬೋಧೆಯನ್ನೆಳ್ಳಷ್ಟನ್ನಾದರೂ ಮೀರದಿದ್ದನು.

ಚಕ್ರವರ್ತಿಯಾದ ವಿಕ್ರಮವರ್ಮನು, ವಾಮದೇವನು ತನಗೆ ವಿರೋಧವಾಗಿ ನಡೆಯುತ್ತಿದ್ದ ಕಾರ್ಯಗಳನ್ನು ಕೇಳಿ, ಅವುಗಳಿಗೆ ಯಾವ ಪ್ರತಿಕ್ರಿಯೆಯನ್ನೂ ಮಾಡಲಾರದೆ, ಸಮಯವೊದಗಿದಾಗ ಅವನನ್ನು ನಾಶಗೊಳಿಸಬೆಳಸಿ ಆಗ ಸೈತಿರುತ್ತಿದ್ದನು.

ಹೀಗಿರುತ್ತಿರಲು ಪದ್ಮಾವತೀದೇವಿಯು ಗರ್ಭವತಿಯಾದಳು ಆಕೆಗೆ ೭ ೮ ತಿಂಗಳು ತುಂಬಿದಾಗ ಯಾವುದೋ ಒಂದು ಕೆಲಸಕ್ಕೋಸ್ಕರ ೭-೮ ಗಾವುದಗಳ

ದೂರದಲ್ಲಿದ್ದ ರಾಜನಗರವೆಂಬ ಒಂದು ಪಟ್ಟಣಕ್ಕೆ ಹೋಗಬೇಕಾದ ಕಾರ್ಯವು ಆ ಮಂತ್ರಿವರ್ಯನಿಗೆ ತಟಸ್ಥಿಸಿತು, ಆತನಾಗ ಸತ್ಯಪ್ರಿಯನೆಂಬ ದ್ವಿತೀಯ ಸಚಿವನಂ ಕರೆದು, ತನ್ನ ಪ್ರಯಾಣದ ಆವಶ್ಯಕತೆಯನ್ನು ತಿಳಿಯಿಸಿ ಇಂತೆಂದನು.

"ಪ್ರಿಯಮಿತ್ರ ಸಾವಧಾನದಿಂದಾಲಿಸು, ವಿಕ್ರಮವರ್ಮನು ನಿಷ್ಕಾರಣ ವೈರದಿಂದ ನಮ್ಮ ಮಹಾರಾಜನಮೇಲೆ ಕ್ರೋಧೋದ್ರಿಕ್ತ ಮಾನಸನಾಗಿರುವನಷ್ಟೆ? ಮೇಲೆ ಬೀಳುವುದಕ್ಕೆ ಸಮಯವನ್ನು ನಿರೀಕ್ಷಿಸುತ್ತಿರುವನೆಂಬುದನ್ನು ನೀನು ಚೆನ್ನಾಗಿಬಲ್ಲೆ. ನಾನು ಪಟ್ಟಣದಲ್ಲಿಲ್ಲವೆಂಬುದು ಆ ನೀಚನಿಗೆ ತಿಳಿದರೆ ಅವನು ತಪ್ಪದೆ ನಮ್ಮ ಪಟ್ಟಣವನ್ನು ಮುತ್ತುವನು ಸಂಶಯವಿಲ್ಲ, ಆದುದರಿಂದ ಅಪ್ರಮತ್ತನಾಗಿ ವರ್ತಿಸು ನಾನು ಬೇಗನೆ ಹೋಗಿ ಅಲ್ಲಿನ ಕಾರ್ಯವನ್ನು ಮುಗಿಸಿಕೊಂಡು ಬರುವೆನು" ಎಂದು ಆತನಿಗೆ ಹೇಳಬೇಕಾದ ಮಾತುಗಳನ್ನು ಸಾಂಗವಾಗಿ ಹೇಳಿ ತಕ್ಕ ಕೆಲವು ತಂತ್ರಗಳನ್ನುಪದೇಶಿಸಿ ರಾಜಾಜ್ಞೆಯನ್ನು ಪಡೆದು, ಗೂಢವಾಗಿ ಪಟ್ಟಣವನ್ನು ಬಿಟ್ಟು ಹೊರಟುಹೋದನು.

ಈ ರಹಸ್ಯವಿಚಾರವು ಹೇಗೋ ಹೊರಪಟ್ಟಿತು, ಗೂಢಚಾರರಿಂದ ವಾಮದೇವನ ಪ್ರವಾಸವು ಚಕ್ರವರ್ತಿಯ ಕಿವಿಗಳಿಗೆ ಗೋಚರವಾಯಿತು, ಅವನು ಓಹೋ! ವಾಮದೇವ ವಿಶ್ಲಿಷ್ಟನಾಗಿರುವನಲ್ಲವೆ ಈಗ ಧರ್ಮವರ್ಮನು! ಇದೀಗ ತಕ್ಕ ಸಮಯವು, ಎಂದು ಬಗೆದು ವಿಕ್ರಮವರ್ಮನು ಅಪರಿಮಿತಸೇನಾಸಮನ್ವಿತನಾಗಿ ತ್ವರೆಯಾಗಿ ಬಂದು ವಿಜಯಪುರವನ್ನು ಮುತ್ತಿ ಪಟ್ಟಣದವರು ಹೊರಕ್ಕೂ ಹೊರಗಿನವರು ಪಟ್ಟಣದೊಳಕ್ಕೂ ಹೋಗದಿರುವಂತೆ ಕಾವಲಿಟ್ಟು ಕಟ್ಟಾಪುಮಾಡಿ ಯುದ್ಧಸನ್ನದ್ಧನಾದನು. ಧರ್ಮವರ್ಮನಿಗೆ ಶತ್ರುವಿನ ಯಾವ ವಿಚಾರವೂ ಅಗೋಚರವಾಗಿದ್ದುದರಿಂದ ಯಾವ ಪ್ರಯತ್ನಮಾಡದೆ ಸುಮ್ಮನಿದ್ದನು, ಆತನ ಅತ್ಯಲ್ಪಸೈನ್ಯವು ಸಹಿತವಾಗಿ ಅಸನ್ನದ್ಧವಾಗಿದ್ದಿತು, ಆಗ ಏನುಮಾಡುವುದಕ್ಕೂ ದಿಕ್ಕುತೋರದೆ, ವಾಮದೇವನಿಲ್ಲದಿದ್ದುದಕ್ಕೆ ಕಳವಳಗೊಂಡು, ಸೇನಾಪತಿಯಾದ ಶೂರಸೇನನನ್ನು ಬರಿಸಿ, ತನಗಿರುವ ಅಲ್ಪಸೈನ್ಯವನ್ನೇ ತೆಗೆದುಕೊಂಡು ಕೋಟೆಕೊತ್ತಳಗಳನ್ನು ರಕ್ಷಿಸಿಕೊಳ್ಳುತ್ತ ಶತ್ರುಗಳೊಡನೆ ಹೋರಾಡುವಂತೆ ಅಪ್ಪಣೆಮಾಡಿದನು. ಸೇನಾಪತಿಯು ರಾಜಾಜ್ಞೆಯಂತೆ ಕೆಲವರನ್ನು ದುರ್ಗಸಂರಕ್ಷಣೆಗೂ ಮತ್ತೆ ಕೆಲವರನ್ನು ಯುದ್ಧಮಾಡುವುದಕ್ಕೂ ನಿಯಮಿಸಿದನು. ಯುದ್ಧವು ಬಹು ಭಯಂಕರವಾಗಿ ನಡೆಯಿತು ಶೂರಸೇನನ ಸೇನೆಯು ಅತ್ಯಲ್ಪವಾಗಿದ್ದರೂ ತನ್ನ ಪ್ರತಾಪದಿಂದಲೂ ಚಾತುರ್ಯದಿಂದಲೂ ಶತ್ರುಸೈನ್ಯವನ್ನು ಕಳವಳಗೊಳಿಸಿತು, ಶತ್ರುಗಳಿಗೆ ದುರ್ಗವು ದುರ್ಗಮವಾಯಿತು, ಆದರೇನು? ವಿರೋಧಿಸೈನ್ಯವು ಅಪಾರವಾಗಿದ್ದುದರಿಂದ ಆ ಶೂರಸೇನನೆಷ್ಟು ಸಮರ್ಥನಾಗಿದ್ದರೂ ಸೇನಾಹೀನಸ್ಥಿತಿಯಿಂದ ಆತನ ಶಕ್ತಿಯು ಯಾವಮಟ್ಟಿಗೂ

ಕಾರ್ಯಕಾರಿಯಾಗಲಿಲ್ಲ, ಶತ್ರುಗಳು ಕೋಟೆಯ ಗೋಡೆಗಳನ್ನು ಹತ್ತಿ ಒಳಕ್ಕೆ ಹೋಗಲು ಪ್ರಯತ್ನಿಸುತ್ತಿದ್ದರು. ಅವರು ಪ್ರಯೋಗಿಸುತ್ತಿದ್ದ ಫಿರಂಗಿಗಳ ಗುಂಡುಗಳು ಪಟ್ಟಣದಲ್ಲಿ ಬೀಳುತ್ತಿದ್ದುದರಿಂದ ನಗರದ ಜನರು ಭಯಪಟ್ಟು ಕಳವಳಗೊಳ್ಳುತ್ತಿದ್ದರು. ಆ ದಿನದ ಸಂಜೆಯಲ್ಲಿ ವಿಕ್ರಮವರ್ಮನು ಯುದ್ಧವನ್ನು ಸಾಕುಮಾಡಿ, ವಿಶ್ರಾಂತಿಗೊಳ್ಳಲಾ ಸೇನೆಗಳಿಗಾಜ್ಞಾಪಿಸಿ, ಮಾರನೆಯ ದಿನದಲ್ಲಿ ಕೋಟೆಯೊಳಕ್ಕೆ ನುಗ್ಗಿ ರಾಜನನ್ನು ಸೆರೆಗೊಂಡು, ಪದ್ಮಾವತಿಯನ್ನು ಪರಿಗ್ರಹಿಸಬೇಕೆಂದು ನಿಶ್ಚಯಿಸಿ ತನ್ನ ಬಿಡಾರವನ್ನು ಸೇರಿದನು. ಆ ರಾತ್ರಿಯಲ್ಲಿ ನಡುಹೊತ್ತಿನಲ್ಲಿ ಒಬ್ಬ ವೀರನು ಉನ್ನತಾಶ್ವವನ್ನೇರಿ ಆ ಶತ್ರುಗಳ ಸೈನ್ಯವನ್ನು ಹೊಕ್ಕು ಸಾರ್ವಭೌಮನ ಶಿಬಿರದಕಡೆಗೆ ಬರುತ್ತಿದ್ದನು. ಸೇನಾನಾಯಕರವನನ್ನು ಕಂಡು ಅಡ್ಡಯಿಸಿ, "ನೀನಾವನು? ಒಂಟಿಯಾಗಿ ನೀನೆಲ್ಲಿಗೆ ಹೋಗುತ್ತಿರುವೆ? ಕಾರ್ಯವೇನು?" ಎಂದು ಕೇಳಿದರು, ಅದಕ್ಕವನು "ಅಯ್ಯಾ! ನಾನೊಂಟಿಯಾಗಿರುವೆನು, ನನ್ನಲ್ಲಿ ಆಯುಧಗಳಾವುವೂ ಇಲ್ಲ, ನನ್ನ ವೃತ್ತಾಂತವನ್ನು ಸಾರ್ವಭೌಮನಿಗಲ್ಲದೆ ಮತ್ತೊಬ್ಬನಿಗೆ ಹೇಳಲಾಗದು, ಆದುದರಿಂದ ನೀವು ಯಾವ ಸಂಶಯವನ್ನೂ ತಾಳದೆ ನನ್ನೊಡನೆ ಬಂದರೆ ಅಲ್ಲಿ ನನ್ನ ವೃತ್ತಾಂತವನ್ನು ನೀವು ತಿಳಿದುಕೊಳ್ಳಬಲ್ಲಿರಿ, ನಾನು ನಿಮ್ಮ ಶತ್ರುವಲ್ಲ ಬೇಕಾದರೆ ಪರೀಕ್ಷಿಸಿರಿ" ಎಂದನು. ಸೇನಾನಾಯಕರು ಆತನ ಗಂಭೀರವಾಗ್ಗುಂಫನವನ್ನು ಕೇಳಿ, ಆತನನ್ನು ನಿರಾಯುಧನೆಂದು ತಿಳಿದು ಸಂಶಯವನ್ನು ಬಿಟ್ಟು ಕರೆದುಕೊಂಡುಹೋಗಿ ಆತನು ತನ್ನೊಡನೆ ಹೇಳಿದ ಮಾತುಗಳನ್ನು ಅರಿಕೆಮಾಡಿದರು.

ಆ ವೀರಾಗ್ರಣಿಯು, ವಿಕ್ರಮವರ್ಮ ಸಾರ್ವಭೌಮನಿಗೆ ವಂದನೆಯನ್ನು ಮಾಡಿ, ಎಲೈ ಸಾರ್ವಭೌಮಾ, ನಾನು ಈ ಪುರಾಧಿಪತಿಯಾದ ಧರ್ಮವರ್ಮನ ಸೇನಾಪತಿಯು. ನಿಮ್ಮ ಸೈನಿಕರ ಪ್ರವೇಶವಿಲ್ಲದಂತೆ ಈವರೆಗೂ ಕೋಟೆಯನ್ನು ಕಾಪಾಡಿದವನು ನಾನೇ. ನನ್ನ ಹೆಸರು ಶೂರಸೇನನು. ಈದಿನ ನಾನು ನನ್ನೊಡೆಯನ ಬಳಿಗೆ ಹೋಗಿ, "ಸ್ವಾಮಿ! ನಮಗೆ ಸೈನ್ಯವು ಸಾಲದು. ಮಹಾಸೈನ್ಯಸಂಪನ್ನನಾದ ಚಕ್ರವರ್ತಿಯೊಡನೆ ವಿರೋಧಿಸಿ, ನಾವು ಜಯವನ್ನು ಪಡೆಯಲಾರೆವು. ತನ್ನ ಬಲವನ್ನೂ ಶತ್ರುವಿನ ಬಲವನ್ನೂ ಮನಸ್ಸಿನಲ್ಲಿ ಚೆನ್ನಾಗಿ ವಿಚಾರಮಾಡದೆ ಶತ್ರುವನ್ನು ಗೆಲ್ಲುವುದಕ್ಕೆ ಪ್ರಯತ್ನಮಾಡುವವನಿಗೆ ವಿಪತ್ತುಗಳು ಸಿದ್ಧವಾಗಿ ಪ್ರಾಪ್ತವಾಗುವುವು. ಇದು ನೀತಿಜ್ಞರ ಅಭಿಪ್ರಾಯವು. ಅನವಮಾನವಾದ ಪ್ರತಾಪವುಳ್ಳ ಹಗೆಯು ದೂರದಲ್ಲಿದ್ದರೂ ತನ್ನ ರಿಪುವಿನ ಬಲವನ್ನು ನಾಶಪಡಿಸಬಲ್ಲನು. ಅಲ್ಪನಾದ ಶತ್ರುವು ಆಯುಧಪಾಣಿಯಾಗಿ ಸಮೀಪದಲ್ಲಿದ್ದರೂ ತನ್ನ ಶತ್ರುವನ್ನು ಸಂಹರಿಸುವುದಕ್ಕೆ ಶಕ್ತನಾಗಲಾರನು. ಗರ್ವೋದ್ರಿ

ಕ್ತರಾದವರಿಗೂ, ಕ್ರೋಧಾವಿಷ್ಟರಾದವರಿಗೂ, ದಂಡನೀತಿಯು ಸುಲಭವಲ್ಲ. ಮರ್ಯಾದೆಯನ್ನು ತಪ್ಪದೆ, ಗರ್ವಪಡದೆ ಕರ್ತವ್ಯವನ್ನು ಚೆನ್ನಾಗಿ ವಿಚಾರಿಸುತ್ತ, ತಾಳ್ಮೆಯನ್ನು ಪಡೆದು, ಉಪಾಯಗಳನ್ನು ಮನಗಂಡು, ಮೌಢ್ಯವಿಲ್ಲದಿರುವವರಿಗೆ ದಂಡನೀತಿಯು ಸುಲಭವು. ರಕ್ಕೆಗಳಿಲ್ಲದಿರುವ ಹಕ್ಕಿಗೆ ಆಕಾಶಗಮನವು ಹೇಗೆ ಕೊನೆಗಾಣದಿರುವುದೋ ಹಾಗೆ ಸಹಾಯಸಂಪತ್ತಿಯಿಲ್ಲದವನಿಗೆ ಯಾವ ಪ್ರಯತ್ನವಾಗಲಿ ಕೊನೆಗಾಣುವುದಿಲ್ಲ. ಸ್ವಶಕ್ತಿಯನ್ನರಿಯದೆ ಗರ್ವಾಂಧನಾಗಿ ದೊಡ್ಡ ಕೆಲಸವನ್ನಾರಂಭಿಸಿದ ಮಾನವನು ಬಾವಿಯಲ್ಲಿ ಬಿದ್ದ ಕುರುಡನಂತೆ ನಾಶವನ್ನು ಪಡೆವನು. ಆದುದರಿಂದ ಎಲೈ ರಾಜಪುಂಗವನೆ, ಈಗ ಚಕ್ರವರ್ತಿಯೊಡನೆ ನಮಗೆ ಯುದ್ಧವು ಕರ್ತವ್ಯವಲ್ಲ. ನಾವು ಪ್ರತಿವರ್ಷದಲ್ಲಿಯೂ ಕೊಡುತ್ತಿದ್ದ ಕಪ್ಪಕಾಣಿಕೆಗಳನ್ನು ಕೊಡದೆ ಬಿಟ್ಟುದು ತಪ್ಪು. ಆತನಿಗೂ ನಮಗೂ ಪದ್ಮಾವತೀದೇವಿಯ ವಿಷಯದಲ್ಲಿ ವಿರೋಧವು ಹುಟ್ಟಿರುವುದೇ ಹೊರತು ಮತ್ತೇನೂ ಇಲ್ಲ. ಆತನು ಸಾರ್ವಭೌಮನು. ಆತನಿಗೆ ನಾವಧೀನರು. ಪದ್ಮಾವತಿಯನ್ನು ಅತನಿಗೆಯೇ ಕೊಡಬೇಕೆಂದು ಆಕೆಯ ಜನಕನು ನಿಶ್ಚಯಿಸಿದ್ದನು. ಆಕೆಯನ್ನು ನೀನು ಮದವೆಯಾದುದು ಮಹಾಪರಾಧವು. ಆದುದರಿಂದ, ಎಲೈ ಧರ್ಮವರ್ಮನೆ! ನೀನಾಕೆಯನ್ನು ಆತನಿಗೆ ಕಾಣಿಕೆಯಾಗಿ ಸಮರ್ಪಿಸಿ, ಆತನನ್ನು ಶರಣುಹೊಕ್ಕರೆ, ದಯಾನಿಧಿಯಾದ ಆತನು ಆ ಸುಂದರಿಯ ಲಾಭದಿಂದಲೇ ತೃಪ್ತಿಪಡೆದು ನಮ್ಮ ರಾಜ್ಯವನ್ನು ನಮಗೆ ಕೊಟ್ಟು ಯುದ್ಧವನ್ನು ಬಿಟ್ಟು ನಮ್ಮಲ್ಲಿ ಸ್ನೇಹದಿಂದಿರುವನು. ಬಳಿಕ ನಾವು ಸುಖದಿಂದಿರಬಹುದು. ಬಲವದ್ವಿರೋಧವು ತಕ್ಕುದಲ್ಲ. ಅಲ್ಪವಿಷಯಕ್ಕಾಗಿ ,ರಾಜ್ಯಸಂಪತ್ತನ್ನು ಕಳೆದುಕೊಳ್ಳುವುದು ಯುಕ್ತವಲ್ಲ. ಇದು ನೀತಿಜ್ಞರ ಲಕ್ಷಣವಲ್ಲ ಹೇಗಾದರೂ ಆತನು ತನ್ನ ಪೂಣ್ಕೆಯನ್ನು ನೆರವೇರಿಸಿಕೊಳ್ಳದೆ ಬಿಡುವನಲ್ಲ. ನನ್ನ ಹಿತೋಕ್ತಿಗಳನ್ನು ಕೇಳಿ, ಒಬ್ಬ ಹೆಂಗಸಿಗೋಸ್ಕರ ಯುದ್ಧಮಾಡುವುದನ್ನು ತೊರೆದು, ನಾನು ಹೇಳಿದಂತೆ ಮಾಡಿ, ಸುಖದಿಂದಿರುವುದು ಒಳ್ಳೆಯದು. ನನ್ನ ನುಡಿಯಂತೆ ನಡೆಯಿಸುವುದಕ್ಕೆ ನೀನು ಸಂದೇಹಪಡುವೆಯಾದರೆ, ನಾನೇಹೋಗಿ ಚಕ್ರವರ್ತಿಗೆ ಅರಿಕೆಮಾಡಿ ನಿನಗೆ ಮನ್ನಣೆಯನ್ನುಂಟುಮಾಡುವೆನು.'' ಎಂದು ಬಹುವಾಗಿ ಬೋಧಿಸಿದೆನು.

ಧರ್ಮವರ್ಮನು ನನ್ನ ನುಡಿಗಳನ್ನು ಕೇಳುತ್ತಲೇ ಅವಿವೇಕದಿಂದ ಮುಂದಣ ತನ್ನ ನಾಶವನ್ನರಿಯದೆ, ಕ್ರೋಧಾವಿಷ್ಟನಾಗಿ ಕಣ್ಣುಗಳಲ್ಲಿ ಕಿಡಿಗಳನ್ನುದಿರಿಸುತ್ತ, "ಎಲಾ ಭೀರುವೆ! ಹೀನಮತಿಯೇ! ಅಧಮಾಧಮನಾದ ಆ ಚಕ್ರವರ್ತಿ ನಾಮಧಾರಿಗೆ ಭಯಪಟ್ಟು ಪ್ರಾಣಸಮಾನಳಾದ ನನ್ನ ಕುಲಾಂಗನೆಯನ್ನು ಸಮರ್ಪಿಸಲೇ? ನೀಚನೆ! ಒಳ್ಳೆಯ ಉಪದೇಶವನ್ನು ಮಾಡಿದೆಯಲ್ಲ!

ಅಯ್ಯೋ ! ಅವಿವೇಕಿಯೇ ! ಇದೆಂತಹ ನಡತೆ ? ಇದೆಯೇ ನಿನ್ನ ಹಿತಬೋಧೆ ? ಎಲಾ ವಿಪಕ್ಷಪಕ್ಷ! ಶಾತ್ರವ ಸ್ತೋತ್ರಪರಾಯಣಾ ! ಕೃತಘ್ನಾ ! ನೀಚಮತೀ ! ಸ್ವಲ್ಪವಾದರೂ ಹೆದರದೆ ನನ್ನೊಡನೆ ಈ ದುರಾಲಾಪಗಳನ್ನು ನುಡಿದ ನಿನ್ನನ್ನು ಈಗಳೇ, ಈ ಕರಾಳ ಕರವಾಳಕ್ಕೆ ಬಲಿಗೊಡಬೇಕಾಗಿದ್ದಿತು. ಆದರೆ ಬಹುದಿನಗಳಿಂದಲೂ ನನ್ನ ಪಾಲನೆಗೆ ಒಳಪಟ್ಟು ನನ್ನ ಬಳಿಯಲ್ಲಿ ಇದ್ದವನಾದುದರಿಂದ ವಧಿಸದೆ ತೊರೆದಿರುವೆನು. ಛೀ! ಛೀ! ಇನ್ನು ನಿನ್ನ ಮುಖವನ್ನು ನೋಡುವುದುಚಿತವಲ್ಲ. ಈಗಳೇ ಇಲ್ಲಿಂದ ಹೊರಟುಹೋಗು. ನೀನು ಹೊಗಳುತ್ತಿರುವ ರಾಜಾಧಮನನ್ನು ಆಶ್ರಯಿಸಿ ಜೀವಿಸು ಹೊರಡು, ನಡೆ, ಭ್ರಷ್ಟಾ!" ಎಂದು ಬಯ್ದು ನನ್ನ ಮೋರೆಯಮೇಲೆ ಉಗುಳಿ ನಿರಾಯುಧನನ್ನಾಗಿ ಮಾಡಿತಳ್ಳಿಬಿಟ್ಟನು. "ಸಾರ್ವಭೌಮಾ! ಆಗ, "ಮೂರ್ಖಸ್ಯ ಬೋಧಕಶ್ಶತ್ರುಃ" ಎಂಬ ಆರ್ಯೋಕ್ತಿಯು ನೆನಪಿಗೆ ಬಂದಿತು. ಹಿಂದೆ ದುರ್ಯೋಧನನಿಗೆ ಹಿತೋಪದೇಶವನ್ನು ಮಾಡಿದ ಭೀಷ್ಮಾಚಾರ್ಯರಿಗೆ, ದ್ರೋಣಾಚಾರ್ಯರಿಗೆ ಎಂತಪ್ಪ ಗತಿ ಬಂದಿತೋ ಅಂತಪ್ಪ ಗತಿಯೇ ನನಗೆ ಬಂದಿತೆಂದು ಭಾವಿಸಿದೆನು ಸಾರ್ವಭೌಮಾ,

" ಅವಿವೇಕಿನಿ ಭೂಪಾಲೇ ನಶ್ಯನ್ತಿ ಗುಣಿನಾಂಗುಣಾಃ |
ಪ್ರವಾಸರಸಿಕೇ ಕಾಂತೇ- ಯಥಾ ಸಾಧ್ವ್ಯಾಃ ಸ್ತನೋನ್ನತಿಃ || "

ಅರ್ಥ— ರಾಜನವಿವೇಕಿಯಾದರೆ ಅವನನ್ನಾಶ್ರಯಿಸಿದ ಗುಣವಂತರ ಗುಣಗಳು, ದೇಶಾಂತರ ಗಮನದಲ್ಲಿ ಆಸಕ್ತನಾದವನ ಸಾಧ್ವಿಯಾದ ಹೆಂಡತಿಯ ಸ್ತನಗಳ ಔನ್ನತ್ಯವು ಹೇಗೋ ಹಾಗೆ ನಾಶವಾಗುತ್ತವೆ.

" ನಕಶ್ಚಿಚ್ಚಂಡಕೋಪಾನಾ ಮಾತ್ಮೀಯೋ ನಾಮಭೂಭೃತಾಂ |
ಹೋತಾರಮಪಿಜುಹ್ವಂತಂ ದಹತ್ಯೇವ ಹುತಾಶನಃ || "

ಅರ್ಥ—ಪ್ರಚಂಡಕೋಪರಾದ ರಾಜರಿಗೆ ಇವನು ತನ್ನವನೆಂಬ ವಿವೇಕವೇ ಇರುವುದಿಲ್ಲ.ಹವಿಸ್ಸನ್ನು ಕೊಡುತ್ತಿರುವ ಹೋತೃವು ತನ್ನವನೆನ್ನದೆ ಅಗ್ನಿಯು ಅವನನ್ನು ಸುಡಲೇ ಸುಡುತ್ತದೆ.

ಈ ಶ್ಲೋಕಾರ್ಥವು ಸ್ಮರಣೆಗೆ ಬಂದಿತು. ಬಳಿಕ ನಾನು ಕರ್ತವ್ಯತಾವಿಮೂಢನಾಗಿ ದುಃಖಿಸುತ್ತ ಅಲ್ಲಿಂದ ಹೊರಟು ಕುದುರೆಯನ್ನೇರಿ, ಆ ವಿವೇಕಹೀನನನ್ನು ಓಲಗಿಸುವುದಕ್ಕಿಂತ ಉಚಿತಾನುಚಿತಗಳನ್ನು ಚೆನ್ನಾಗಿ ಬಲ್ಲ ನಿಮ್ಮ ಚರಣಗಳನ್ನೆ ಆಶ್ರಯಿಸಿ ಜೀವಿಸಬಹುದೆಂಬ ಉದ್ದೇಶದಿಂದ ನನ್ನ ದುಸ್ಥಿತಿಯನ್ನು ಅರಿಕೆಮಾಡಲು ಈ ಯುದ್ಧ ವಿರಾಮ ಸಮಯದಲ್ಲಿ ಬಂದಿರುವೆನು. ದೇವಾ! ಇನ್ನು ನಿಮ್ಮ ಇಷ್ಟ. ದೀನನಾದ ನನ್ನನ್ನು ಶಿಕ್ಷಿಸುವುದಕ್ಕಾಗಲಿ, ರಕ್ಷಿಸುವುದಕ್ಕಾಗಲಿ ನೀವೇ ಕರ್ತರು." ಎಂದು ನುಡಿದು ಕಂಬನಿಮಿಡಿದನು.

ವಿಕ್ರಮವರ್ಮನು, ಶೂರಸೇನನ ಮಾತುಗಳನ್ನು ಸಾವಧಾನದಿಂದ ಕೇಳಿ, ತನ್ನ ಮನಸ್ಸಿನಲ್ಲಿ—"ಇದೇನಿದು? ಶೂರನಾದ ಶೂರಸೇನನು ದೀನವೃತ್ತಿಯನ್ನು ಪಡೆದು ಈಬಗೆಯಾಗಿ ಬಂದಿರುವುದು ನಿಜವೇ? ಧರ್ಮಜ್ಞನೂ ನೀತಿಶಾಸ್ತ್ರಕೋವಿದನೂ ಆದ ಆ ಧರ್ಮವರ್ಮನು ಇವನು ಹೇಳುವಂತೆ ದುರಾಲಾಪಗಳನ್ನಾಡಿರುವುದು ಸತ್ಯವಿರಬಹುದೆ? ಹಾಗಿಲ್ಲದಿದ್ದರೆ ಇವನು ನನ್ನ ಬಳಿಗೆ ಏತಕ್ಕೆ ಬಂದಾನು? ಇರಬಹುದು. ಇವನು ಹೇಳಿದ ಮಾತುಗಳು ಅವನ ಮನಸ್ಸನ್ನು ನೋಯಿಸಿದುದರಿಂದ ಅವನೊಂದುವೇಳೆ ಬಯ್ದು ನೂಕಿರಬಹುದು, ಅಕಟಾ! ಇವನು ಹೀಗೆ ಅಳುತ್ತಿರುವನಲ್ಲ! ಸುಮ್ಮನೆ ಕಣ್ಣೀರನ್ನುಬಿಡಲು ಸಾಧ್ಯವೆ! ಇವನ ದೈನ್ಯಯುಕ್ತವಾದ ಮುಖವು ಇವನ ಹೃದಯದ ಸ್ಥಿತಿಯನ್ನು ಹೊರಪಡಿಸುತ್ತಿರುವುದು, ಅಥವಾ ಇವನು ಕಪಟೋಪಾಯದಿಂದಲೇ ಬಂದಿರಲಿ ನನಗಾಗುವ ತೊಂದರೆಯೇನು? ಇವನೊಬ್ಬನು ಚಕ್ರವರ್ತಿಯಾದ ನನ್ನನ್ನು ವಂಚಿಸಲಾರ್ಹನೆ? ಅದಂತಿರಲಿ! ಶತ್ರುಪಕ್ಷದವನಿವನು ಅವನ ಸಕಲ ಮರ್ಮಗಳನ್ನೂ ಬಲ್ಲವನು, ಮಹಾ ಪರಾಕ್ರಮವಂತನಾದ ಇವನು ನನ್ನ ಸಮೀಪದಲ್ಲಿರುವುದು ಲಾಭಕರವೆಂದೇ ತೋರುವುದು ಮತ್ತು ಈ ವೀರನು ನಮ್ಮ ಸೈನ್ಯಕ್ಕೆ ಭೂಷಣಪ್ರಾಯನಾಗಿಯೂ ಇರುವನು" ಎಂದು ಭಾವಿಸಿ, "ಮಿತ್ರ! ಶೂರಸೇನ! ಬಾಬಾ ನೀನು ಯಾವಬಗೆಯಲ್ಲಿಯೂ ಚಿಂತಿಸಬೇಡ ನಾನಿಂದು ನಿನಗಾಶ್ರಯವನ್ನು ಕೊಟ್ಟಿರುವೆನು, ಆ ನೀಚನಬಳಿಯಿರುವುದಕ್ಕಿಂತ ನನ್ನಬಳಿಯಿರುವುದು ನಿನಗೆ ಸರ್ವವಿಧಗಳಲ್ಲಿಯೂ ಕ್ಷೇಮಕರವು ಶೂರಸೇನನೇ!

"ಯಾನ್ತಿನ್ಯಾಯಪ್ರವೃತ್ತಸ್ಯ ತಿರ್ಯಞ್ಚೋಽಪಿಸಹಾಯತಾ |
ಅಪಂಥಾನಂತುಗಚ್ಛಂತಂ ಸೋದರೋಽಪಿವಿಮುಂಚತಿ ||"

ಅರ್ಥ—ನ್ಯಾಯಮಾರ್ಗದಲ್ಲಿ ನಡೆವ ಪುರುಷನಿಗೆ ತಿರ್ಯಗ್ಜಂತುಗಳು ಕೂಡ ಸಹಾಯವನ್ನು ಮಾಡುತ್ತವೆ ದುರ್ಮಾರ್ಗಪ್ರವರ್ತಕನಾದವನನ್ನು ಸಹೋದರನು ಕೂಡ ತೊರೆದುಬಿಡುವನು.

ಎಂಬಂತೆ ಅನ್ಯಾಯವನ್ನಾಚರಿಸಿದ ಅವನನ್ನು ಬಿಟ್ಟುಬಂದುದೇ ಲೇಸಾಯಿತು, ಬುದ್ಧಿಯನ್ನು ಹೇಳಿದರೆ ಕೇಳದೆ ದುರ್ವಾಕ್ಯಗಳನ್ನಾಡಿದ ರಾವಣನನ್ನು ವಿಭೀಷಣನು ಬಿಟ್ಟುಬಂದು ರಾಮನನ್ನಾಶ್ರಯಿಸಿ ಬದುಕಲಿಲ್ಲವೆ? ನ್ಯಾಯಮಾರ್ಗದಲ್ಲಿದ್ದ ಶ್ರೀರಾಮನಿಗೆ ಕಪಿಗಳು ಸಹಾಯಮಾಡಲಿಲ್ಲವೆ? ವೀರವರ್ಯ! ನೀನು ನನ್ನ ಸೇನೆಯಲ್ಲಿ ಪ್ರಧಾನ ಸೇನಾನಾಯಕನಾಗಿರು, ಅನುಗ್ರಹಪೂರ್ವಕವಾಗಿ ನಿನಗಾಪದವಿಯನ್ನು ಕೊಟ್ಟಿರುತ್ತೇನೆ, ನೀನು ಸಾಹಸಪರನೂ ಪರಮಪರಾಕ್ರಮಿಯೂ ಆಗಿರುವ ವಿಚಾರವನ್ನು ನಾನನೇಕ ವೀರರಮುಖದಿಂದ ಕೇಳಿರುವೆನು, ನೀನು ನಿನ್ನ ವಿಷಯವಾಗಿ ಹೇಳಿಕೊಳ್ಳಬೇಕಾದ ಪ್ರಕೃತವಿರುವುದಿಲ್ಲ,

ನೀನು ನನ್ನ ಪ್ರತಿಪಕ್ಷದವನ ಸಕಲ ಮರ್ಮಗಳನ್ನು ತಿಳಿದಿರುವೆಯಾದುದರಿಂದ ನಿನ್ನನ್ನು ಹಾಗೆ ಅವಮಾನಗೊಳಿಸಿದ ಆ ಭಂಡನ ಗರ್ವವಡಗುವಂತೆ ಹಿಡಿದು ತಂದು ನಾಳೆಯದಿನ ಕೋಟೆಯಲ್ಲಿ ಪ್ರವೇಶಗೊಳಿಸಿ ಆ ಕಾಂತಾಲಲಾಮವನ್ನು ನನಗೆ ಸಮರ್ಪಿಸು, ನಿನಗೆ ಅಧಿಕವಾದ ಪಾರಿತೋಷಿಕವನ್ನು ಕೊಡುವೆನು, ಇನ್ನು ನೀನಿಲ್ಲಿಂದ ಹೊರಟು ಜಾಗರೂಕತೆಯಿಂದ ಕಾರ್ಯನಿರ್ವಾಹವನ್ನು ಮಾಡು ಎಂದಾಜ್ಞಾಪಿಸಿ, ತನ್ನ ಇತರ ಸೇನಾನಾಯಕರನ್ನು ಕರೆದು, "ಓ ದಳಪತಿಗಳಿರಾ ! ಇದು ಮೊದಲು ನಿಮ್ಮೆಲ್ಲರಿಗೂ ಈ ಶೂರಸೇನನು ಮುಖ್ಯಾಧಿಪತಿಯಾಗಿರುವನು, ನೀವೆಲ್ಲರೂ ಈತನ ಅಪ್ಪಣೆಯಂತೆ ವರ್ತಿಸುತ್ತಿರತಕ್ಕುದು" ಎಂದು ನುಡಿದು, ಎಲ್ಲರನ್ನೂ ಅವರವರ ಬಿಡಾರಗಳಿಗೆ ಕಳುಹಿಸಿಕೊಟ್ಟು, ತನ್ನ ಮನಸ್ಸಿನಲ್ಲಿ "ಶತ್ರುಸೇನಾನಾಯಕನಾದ ಶೂರಸೇನನು ನನಗೆ ವಶನಾದನು, ಆದುದರಿಂದ ನಮಗೆ ತಪ್ಪದ ಗೆಲವು ಲಭ್ಯವಾಗುವುದು, ವಾಮದೇವನೆಂಬ ಧರ್ಮವರ್ಮನ ಮಂತ್ರಿಯು ಬರುವುದರೊಳಗಾಗಿ ಪದ್ಮಾವತಿಯನ್ನು ಪರಿಗ್ರಹಿಸಿ, ಧರ್ಮವರ್ಮನನ್ನು ಕಾರಾಗಾರದಲ್ಲಿ ಬಂಧಿಸಿ ನನ್ನ ಪಟ್ಟಣಕ್ಕೆ ಹಿಂದಿರುಗಬಹುದು" ಎಂದು ಬಗೆದು, ಆನಂದಸಮುದ್ರದಲ್ಲಿ ಮುಳುಗಾಡಿ, ನಿದ್ರಾಸಮಯವು ಪ್ರಾಪ್ತವಾಗುತ್ತಲೇ ತನ್ನ ಸಿಬಿರಕ್ಕೆ ಬಂದು ಹಂಸತೂಲಿಕಾತಲ್ಪದಲ್ಲಿ ಪವಡಿಸಿದನು.

ಸೈನಿಕರು ಆ ದಿನ ವೀರಶೇಖರನೊಡನೆ ಭಯಂಕರವಾಗಿ ಹೋರಿದ್ದುದರಿಂದ ಬಳಲಿ ಕೋಟೆಯಸುತ್ತಲೂ ಎಲ್ಲಿನವರಲ್ಲಿ ಮಲಗಿ ಮೈಮರೆತು ನಿದ್ರಿಸುತ್ತಿದ್ದರು, ಆ ದಿನವೇ ಚಕ್ರವರ್ತಿಯಬಳಿಗೆ ಬಂದಿದ್ದ ಶೂರಸೇನನು ಸರ್ವಸೇನಾಧಿಪತ್ಯವನ್ನೂ ವಹಿಸಿ, ಇತರ ಸೇನಾನಾಯಕರನ್ನು ನಾಲ್ಕು ದಿಕ್ಕುಗಳಲ್ಲಿಯೂ ನಿಲ್ಲಿಸಿ ಜಾಗರೂಕರಾಗಿರಿ ಎಂದಾಜ್ಞಾಪಿಸಿ, ಅಶ್ವಾರೂಢನಾಗಿ ಕೋಟೆಯಸುತ್ತಲೂ ತಿರುಗುತ್ತ, ಪಟ್ಟಣದ ಪ್ರಜೆಗಳಲ್ಲಿ ಯಾವನೊಬ್ಬನೂ ಪಟ್ಟಣದ ಹೊರಕ್ಕೆ ಬಾರದಿರುವಂತೆ ಕಟ್ಟಳೆಯನ್ನು ಮಾಡಿದ್ದನು, ಹೀಗಿರುತ್ತಿರಲು ಆ ದಿನದ ನಟ್ಟಿರುಳಲ್ಲಿ ನಾಲ್ಕುಮಂದಿ ಬೋಯಿಗಳು ಒಂದು ಪಲ್ಲಕ್ಕಿಯನ್ನು ಹೊತ್ತುಕೊಂಡು ಒಂದು ದಿಡ್ಡಿಯಬಾಗಿಲಿಂದ ಹೊರಟುಬಂದುದನ್ನೂ ಅದರ ಮುಂದೆ ಒಬ್ಬ ಯೌವನಪುರುಷನು ನಡೆಯುತ್ತಿರುವುದನ್ನೂ, ಅವರು ಆ ಸೇನೆಯ ಮಧ್ಯದಲ್ಲಿ ಹೋಗುತ್ತಿರುವುದನ್ನೂ ಕಂಡು, ಅಲ್ಲಿದ್ದ ದಳವಾಯಿಯೊಬ್ಬನು ಅವರನ್ನು ತಡೆದು ನಿಲ್ಲಿಸಿ, ಓಡಿಬಂದು ಶೂರಸೇನನನ್ನು ಸಂದರ್ಶಿಸಿ, "ಅಯ್ಯಾ ಪ್ರಭುವೆ ! ಯಾರೋ ಕಳ್ಳತನದಿಂದ ಕೋಟೆಯಿಂದ ಒಂದು ಚಿಕ್ಕಬಾಗಿಲಿಂದ ಹೊರಕ್ಕೆಬಂದು ಹೊರಟುಹೋಗುತ್ತಿದ್ದರು, ನಾನವರನ್ನು ತಡೆದು ನಿಲ್ಲಿಸಿದೆನು, ಬೇಗನೆ ತಾವಲ್ಲಿಗೆ ದಯಮಾಡಿ ಅವರ ವೃತ್ತಾಂತವನ್ನು ವಿಚಾರಿ

ಬೇಕು ” ಎಂದು ವಿನಯದಿಂದ ಬಿನ್ನೈಸಿದನು. ಆ ವರ್ತಮಾನವನ್ನು ಕೇಳು ್ಲೇ ಸರ್ವಸೇನಾಧಿಪತಿಯಾದ ಶೂರಸೇನನು ಕುದುರೆಯನ್ನು ಹತ್ತಿ ತ್ವರಿತಗ ಯಿಂದ ಆ ಪಲ್ಲಕ್ಕಿಯನ್ನು ನಿಲ್ಲಿಸಿದ್ದ ಸ್ಥಲಕ್ಕೆ ಬಂದು ವಿಚಾರಿಸಿದನು ಆಗ ಲ್ಲಕ್ಕಿಯ ಮುಂದೆ ನಡೆಯುತ್ತಿದ್ದ ಯೌವನಪುರುಷನು ಶೂರಸೇನನೊಡನಿಂ ಂದನು.

“ಅಯ್ಯಾ! ನಾವು ಈ ಪಟ್ಟಣದ ನಿವಾಸಿಗಳಲ್ಲ. ಇಲ್ಲಿಗೆ ಎರಡು ಯೋಜ ಗಳ ದೂರದಲ್ಲಿರುವ ವಂಗಪುರವೆಂಬ ಗ್ರಾಮದಲ್ಲಿ ವಾಸಮಾಡುವವರು. ಈ ಪಲ್ಲಕ್ಕಿಯಲ್ಲಿರುವ ಹರೆಯದ ಹುಡುಗನು ರೋಗಿಷ್ಠನು. ಹೊಟ್ಟೆಯಲ್ಲಿ ಬಲ್ಮವು ದೊಡ್ಡದಾಗಿ ಆದರಿಂದ ತುಂಬ ಬಾಧೆಪಡುತ್ತಿರುವನು. ಈ ಪಟ್ಟಣ ಲ್ಲ ಒಳ್ಳೆಯ ವೈದ್ಯನಿರುವನೆಂದು ತಿಳಿದು ಚಿಕಿತ್ಸೆಗಾಗಿ ಬಂದು ನಾಲ್ಕು ದಿನಗ ಾಗಿರುವುವು. ನಾವಿಲ್ಲಿಗೆ ಬಂದ ದಿನವೇ ಯುದ್ಧವು ಪ್ರಾರಂಭವಾದುದರಿಂದ ಚಿಕಿತ್ಸೆಯನ್ನು ಮಾಡಿಸುವುದಕ್ಕೆ ಅವಕಾಶವಿಲ್ಲದೆಹೋಯಿತು. ಪಟ್ಟಣವಾಸಿ ಗಳಲ್ಲಿ ಯಾರೂ ಹೊರಕ್ಕೆ ಹೋಗದಂತೆ ನಿರ್ಬಂಧವುಂಟಾದುದರಿಂದ ಕರ್ತವ್ಯ ವಿರಾಜ್ಮುಖರಾಗಿದ್ದೆವು. ಆದರೆ ಈ ಯುವಕನಿಗೆ ಗುಲ್ಮವ್ಯಾಧಿಯ ಬಾಧೆಯು ಹೆಚ್ಚಾದುದರಿಂದ ಚಿಕಿತ್ಸೆಗಾಗಿ ಮತ್ತೆಲ್ಲಿಗಾದರೂ ಕರೆದುಕೊಂಡು ಹೋಗಬೇ ಂದೂ ಒಂದುವೇಳೆ ಶತ್ರುಸೈನಿಕರು ತಡೆದರೆ ಅವರಿಗೆ ರೋಗಿಯನ್ನು ತೋರಿಸಿ ಬೇಡಿಕೊಂಡು ಹೇಗಾದರೂ ಈ ಪಟ್ಟಣವನ್ನು ಬಿಟ್ಟು ಹೋಗಬಹುದೆಂದೂ ಾಗೆದು, ಒಬ್ಬಾನೊಬ್ಬ ಪುಣ್ಯಾತ್ಮನಿಂದ ಈ ಪಲ್ಲಕ್ಕಿಯನ್ನು ಎರವಲಾಗಿ ತೆಗೆದು ಕೊಂಡು, ಇದರಲ್ಲಿ ರೋಗಿಯನ್ನು ಮಲಗಿಸಿ, ಭಗವಂತನಮೇಲೆ ಭಾರವನ್ನಿಟ್ಟು ಹೇಗೋ ಧೈರ್ಯವನ್ನು ತಾಳಿ ಹೀಗೆ ಹೊರಟುಬಂದೆವು. ಇದರಲ್ಲಿರುವ ರೋಗಿಯನ್ನು ಬೇಕಾದರೆ ತಾವು ನೋಡಬಹುದು. ಸನ್ನಿಧಿಯಲ್ಲಿ ಸುಳ್ಳನ್ನು ಹೇಳಲಾರೆವು. ರೋಗಿಯನ್ನು ನೋಡಿ ಕೃಪೆಯಿಂದ ನಮ್ಮನ್ನು ಬಿಟ್ಟರೆ, ಪ್ರಾಣ ದಾನಫಲವು ತಮಗೆ ಸಿದ್ಧಿಸುತ್ತದೆ. ಈ ಪಟ್ಟಣಕ್ಕಾಗಲಿ, ಈ ರಾಜನಿಗಾಗಲಿ, ಈ ಯುದ್ಧಕ್ಕಾಗಲಿ, ಯಾವ ವಿಧದಿಂದಲೂ ಎಷ್ಟುಮಟ್ಟಿಗೆಯಾದರೂ ನಾವು ಸಂಬಂಧಿಸಿದವರಲ್ಲ, ಅನುಗ್ರಹಿಸಿ ನಮ್ಮನ್ನು ಬಿಟ್ಟುಬಿಟ್ಟರೆ ಮುಂಜಾನೆಯೊ ಳಗಾಗಿ ವೈದ್ಯನಿರುವಲ್ಲಿಗೆ ಹೋಗಿ ಕಷ್ಟದಶೆಯಲ್ಲಿರುವ ಈ ರೋಗಿಗೆ ಚಿಕಿತ್ಸೆ ಯನ್ನು ಮಾಡಿಸುವೆವು” ಎಂದು ಕನಿಕರ ಹುಟ್ಟುವಂತೆ ಕಡು ದೈನ್ಯದಿಂದ ಬೇಡಿಕೊಂಡನು. ಶೂರಸೇನನು ಒಂದಿನಿಸಾಲೋಚಿಸಿ ಪಲ್ಲಕ್ಕಿಯ ಆವರಣ ವನ್ನೋರೆಮಾಡಿ, ಅಲ್ಲಿ ಮಲಗಿ ಮೂಲುಗುತ್ತಿದ್ದ ರೋಗಿಯನ್ನು ಕಂಡು ತಲೆ ತೂಗಿ, ಉಳಿದ ಸೇನಾಪತಿಗಳನ್ನು ನೋಡಿ, “ ಎಲೈ ಪತಿವರರೆ! ಅಹುದು, ಈತನು ಹೇಳುತ್ತಿರುವುದು ಸತ್ಯವೆಂದೇ ತೋರುವುದು. ನೋಡಿದಿರಾ ? ಬಾಧ

ಯಿಂದ ಮುಲುಕುತ್ತಿರುವನು. ಹೊಟ್ಟೆಯುಬ್ಬರಿಸಿರುವುದು ಸ್ಪಷ್ಟವಾಗಿ ಕಾಣು ತ್ತಿರುವುದು. ಪಾಪ! ಆಪತ್ಕಾಲವು. ಇವರಿಂದ ನಮಗೆ ಯಾವ ಕಷ್ಟವಾದರೂ ಪ್ರಾಪ್ತವಾಗುವಹಾಗೆ ನನಗೆ ತೋರಲಿಲ್ಲ. ಹೋಗಲಿ ಬಿಟ್ಟುಬಿಡಿರಿ" ಎಂದು ನುಡಿದು, ಪಲ್ಲಕ್ಕಿಯೊಡನೆ ಬಂದ ಯೌವನ ಪುರುಷನನ್ನು ನೋಡಿ, "ನೀನು ಹೇಳಿದುದು ಸತ್ಯವಾಗಿ ತೋರಿದುದರಿಂದಲೂ, ಈ ರೋಗಿಯ ಬಾಧೆಯನ್ನು ನಾವು ಕಣ್ಣಾರೆ ಕಂಡುದರಿಂದಲೂ ನಮಗೆ ದಯೆಯು ಉಂಟಾಗಿರುವುದು. ಆದುದರಿಂದ ನಿಮ್ಮನ್ನೀಗ ಬಿಟ್ಟುಕೊಡುವೆವು. ಒಂದು ವೇಳೆ ನಮಗೆ ನಿಮ್ಮ ವಿಚಾರದಲ್ಲಿ ಸಂಶಯವುಂಟಾಗಿದ್ದರೆ ನಿಮ್ಮೆಲ್ಲರನ್ನೂ ಕಾರಾಗೃಹದಲ್ಲಿಡುತ್ತಿದ್ದೆವು. ಹೊರಡಿ ಹೊರಡಿ, ತ್ವರೆಯಾಗಿ ಈ ಸೇನಾನಿವೇಶವನ್ನು ದಾಟಿ ಹೋಗಿರಿ" ಎಂದಾಜ್ಞಾಪಿಸಿದನು. ಹಾಗೆಯೇ ಅವರು ಮುಂದಕ್ಕೆ ಹೊರಟರು. ಶೂರಸೇನನು ಹಾಗೆ ಅವರನ್ನು ಬಿಟ್ಟುಕೊಟ್ಟುದು ಉಳಿದ ಸೇನಾಪತಿಗಳಿಗೆ ಇಷ್ಟವಾಗಿರಲಿಲ್ಲ. ಆದರೂ ಸರ್ವಸೇನಾನಾಯಕನ ಮಾತುಗಳಿಗೆ ಪ್ರತಿಯಾಗಿ ಹೇಳುವುದಕ್ಕೆ ಹೆದರಿ ಎಂಜಲು ನುಂಗುತ್ತ ಸುಮ್ಮನಿದ್ದರು. ಕೋಟೆಯೊಳಗಿಂದ ಹೊರಕ್ಕೆ ಬಂದವರು ಪಲ್ಲಕ್ಕಿಯನ್ನೆತ್ತಿಕೊಂಡು ಬೇಗಬೇಗನೆ ಸೇನಾಪ್ರದೇಶವನ್ನು ದಾಟಿಹೋದರು. ಬಳಿಕ ಪ್ರಧಾನ ಸೇನಾಪತಿಯು ಸೈನ್ಯಾಧಿಪತಿಗಳನ್ನು ಮೊದಲಿನಂತೆ ಕಾವಲಿರಲು ನಿಯಮಿಸಿ, ತಾನು ಅಲ್ಲಿಂದಲ್ಲಿಗೆ ತಿರುಗಾಡುತ್ತಿದ್ದನು.

ಆಕಡೆ ಬೋಯಿಗಳು ಆ ಪಲ್ಲಕ್ಕಿಯನ್ನೆತ್ತಿಕೊಂಡು ಸ್ವಲ್ಪದೂರ ಹೋಗುತ್ತಲೂ ಯಾರೋ ಕರೆದಂತೆ ಒಂದು ಶಬ್ದವಾಬೋಯಿಗಳ ಕಿವಿಗಳಿಗೆ ಬಿದ್ದಿತು. ಆಗ ಅವರು "ಓಹೋ! ಯಾರೋ ನಮ್ಮನ್ನು ಹಿಡಿದು ಸೆರೆಗೊಳ್ಳಲು ಬರುತ್ತಿರುವರಲ್ಲ! ಈಗ ಮಾಡುವುದೇನು?" ಎಂದು ಹೆದರಿ ನೋಡುತ್ತಿರುವಷ್ಟರಲ್ಲಿ, ದೀರ್ಘಾಂಗನಾದ ಒಬ್ಬನು ತುರಗಾರೂಢನಾಗಿ ಪಲ್ಲಕ್ಕಿಯ ಮುಂದೆ ನಡೆಯುತ್ತಿದ್ದ ಯುವಕನ ಬಳಿಗೆ ಬಂದು "ಅಯ್ಯಾ! ನಾನು ಭಾವಿಸಿದಂತೆಯೇ ನಮ್ಮ ಎಲ್ಲಕಾರ್ಯಗಳೂ ನಿರ್ವಿಘ್ನವಾಗಿ ನೆರವೇರಿದುವು. ಮುಂದಣ ಕಾರ್ಯಗಳನ್ನು ಕುರಿತು ತಕ್ಕ ಏರ್ಪಾಡುಗಳನ್ನು ಮಾಡುವದಕ್ಕೆ ನಾನು ಹೊರಟು ಹೋಗುವೆನು. ನೀವು ಶೀಘ್ರವಾಗಿ ಗಮ್ಯಸ್ಥಾನವನ್ನು ಸೇರಿ ಮೊದಲಿನ ನಮ್ಮ ನಿಯಮಗಳಂತೆ ಇರಿ" ಎಂದು ನುಡಿದು ಕುದುರೆಯನ್ನು ಹಿಂದಿರುಗಿಸಿ, ಮತ್ತೊಂದು ಮಾರ್ಗವನ್ನು ಹಿಡಿದು ಹೊರಟುಹೋದನು. ಆ ಯುವಾನನು ತುರಗಾರೂಢನಾಗಿ ಬಂದವನ ಪರಿಚಯವುಳ್ಳವನಾದುದರಿಂದ ಆತನು ಸಮೀಪಕ್ಕೆ ಬಂದರೂ ಹೆದರದೆ, ಆತನ ಆಜ್ಞೆಯನ್ನು ಸ್ವಲ್ಪವೂ ತಪ್ಪದೆ ನಡೆಸುವಂತೆ ಹೇಳಿ, ಆ ಸವಾರನು ಹೋದಬಳಿಕ ಪಲ್ಲಕ್ಕಿಯನ್ನೆತ್ತಿಸಿಕೊಂಡು ಅತಿವೇಗದಿಂದ

ನಡೆದು ಬೆಳಗಾಗುವುದಕ್ಕೆ ಮೊದಲೆ ತಾವು ಉದ್ದೇಶಿಸಿದ ಸ್ಥಲವನ್ನು ಸೇರಿ, ತಾವು ನಿಯಮಿಸಿಕೊಂಡಿದ್ದ ಪ್ರಕಾರವಾಗಿ ಸಮಸ್ತ ಕಾರ್ಯಗಳನ್ನೂ ಗುಟ್ಟಾಗಿ ನಡೆಯಿಸಿದರು.

ಈಕಡೆ ಚಕ್ರವರ್ತಿಯು ಮಾರನೆಯದಿನದ ಉದಯಕಾಲದಲ್ಲಿದ್ದು ಕಾಲ್ಯೋಚಿತ ಕೃತ್ಯಗಳನ್ನು ಮುಗಿಸಿಕೊಂಡು, ವಿಜಯಪುರದ ದುರ್ಗವನ್ನು ಭೇದಿಸಿ, ನಗರವನ್ನು ಪ್ರವೇಶಿಸಿ, ತನ್ನ ಪ್ರಯತ್ನವನ್ನು ಕೊನೆಗಾಣಿಸಲೆಳಸಿ, ಶೂರಸೇನನಿಗೆ ಹೇಳಿಕಳುಹಿದನು. ಉಳಿದ ಸೇನಾನಾಯಕರೆಲ್ಲರೂ ಬಂದು ಸಾರ್ವಭೌಮನನ್ನು ಸಂದರ್ಶಿಸಿ ದಂಡವತ್ಪ್ರಣಾಮಗಳನ್ನು ಮಾಡಿ, ಸ್ವಾಮಿ, ಪ್ರಧಾನ ಸೇನಾಧ್ಯಕ್ಷನು ಅರ್ಧರಾತ್ರಿಯವರೆಗೆ ಕೋಟೆಯಸುತ್ತಲೂ ತಿರುಗುತ್ತಿದ್ದನು. ಈಗ ಒಂದೆರಡು ತಾಸುಗಳಿಂದ ಆತನು ಕಾಣಲಿಲ್ಲ. ಎಲ್ಲಿಗೆ ಹೋದನೋ ನಮಗೆ ತಿಳಿಯದು'' ಎಂದು ಬಿನ್ನೈಸಿದರು. ಚಕ್ರವರ್ತಿಯು ಅಲ್ಲಲ್ಲಿ ಹುಡುಕಿಸಿದನು ಆದರೂ ಆತನು ದೊರೆಯಲಿಲ್ಲ.

ವಿಕ್ರಮವರ್ಮನು, ನಡೆದ ವಿಚಾರವನ್ನು ಕುರಿತು ಸ್ವಲ್ಪಹೊತ್ತು ಆಲೋಚಿಸಿದನು. ಅದ್ಭುತಾಂಬುಧಿಮಗ್ನನಾದನು, ಸ್ತಬ್ಧನಾದನು. “ಅಕಟಕಟಾ! ವಂಚಿತರಾದೆವು. ಅವನು ಸತ್ಯವಾಗಿಯೂ ಧರ್ಮವರ್ಮನ ಸೇನಾನಾಯಕನಾದ ಶೂರಸೇನನಲ್ಲ! ಯಾವನೋ ಶತ್ರುಪಕ್ಷದಲ್ಲಿದ್ದವನೊಬ್ಬನು ವೇಷಾಂತರವನ್ನು ತಾಳಿ ಬಂದು, ತನ್ನ ಮಾಯಾಜಾಲವನ್ನು ಬೀಸಿ, ರೌಳಿಯನುಸಿರ್ದ ಠಕ್ಕುದ್ರೋಹಿ, ತನ್ನಲ್ಲಿ ನಮಗೆ ನಂಬುಗೆಯುಂಟಾಗುವಂತೆ ಮಾಡಿ, ತಾನುಬಂದ ಕಾರ್ಯವನ್ನು ಸಾಧಿಸಿಕೊಂಡು ಹೋಗಿರುವನೆಂದು ತೋರುತ್ತಿರುವುದು'' ಎಂದು ನುಡಿದನು. ಬಳಿಕ ಸೇನಾಧ್ಯಕ್ಷರು ಆದಿನದ ರಾತ್ರಿಯಲ್ಲಿ ನಡೆದ ಪಲ್ಲಕ್ಕಿಯ ವೃತ್ತಾಂತವನ್ನು ವಿವರವಾಗಿ ಹೇಳಿದರು. ಚಕ್ರವರ್ತಿಯು ತಾನು ಮೋಸಹೋದ ವಿಚಾರವನ್ನು ತಿಳಿದು ಪಶ್ಚಾತ್ತಾಪ ಸಮನ್ವಿತನಾಗಿ, ಆ ಠಕ್ಕುಗಾರನ ಚಾತುರ್ಯವನ್ನು ಮೆಚ್ಚಿ ತಲೆದೂಗಿ, ಕಳೆದುಕೊಂಡುದಕ್ಕಿನ್ನು ಚಿಂತಿಸುವುದು ಅನವಶ್ಯಕವೆಂದು ನಿಶ್ಚಯಿಸಿ ಕೋಟೆಕೊತ್ತಳಗಳನ್ನು ಒಡೆದು ಪಟ್ಟಣದಲ್ಲಿ ಪ್ರವೇಶಿಸಿರೆಂದು ಸೈನಿಕರಿಗೆ ಆಜ್ಞೆಮಾಡಿದನು. ಅಸಂಖ್ಯೇಯಗಳಾದ ಸೇನೆಗಳು ಫಿರಂಗಿಗಳನ್ನು ಸುಟ್ಟು ಕೋಟೆಯ ಗೋಡೆಗಳನ್ನು ಕೆಡಹುವುದಕ್ಕೆ ಪ್ರಾರಂಭಿಸಿದುವು. ಅಲ್ಪಸೇನೆಯುಳ್ಳ ಧರ್ಮವರ್ಮನೂ ಅವನ ಸೇನಾಪತಿಯಾದ ಶೂರಸೇನನೂ ಕೈಲಾದಮಟ್ಟಿಗೆ ಶತ್ರುಗಳ ಪುರಪ್ರವೇಶಕ್ಕೆ ಅವಕಾಶವಿಲ್ಲದಂತೆ ಹೋರಾಡಲುಜ್ಜುಗಿಸಿದರು. ಆದರೆ, ದೈವ ಬಲವಿಲ್ಲದುದ್ದರಿಂದ ಅವರ ಅಲ್ಪಸೈನ್ಯವು ಕೂಡ ಹತವಾಯಿತು. ಕೋಟೆಯ ಗೋಡೆಗಳುರುಳಿಕೊಂಡುವು. ಶತ್ರುಗಳು ಪಟ್ಟಣದೊಳಕ್ಕೆ ನುಗ್ಗಿದರು. ಎಡೆಬಿಡದೆ ಬೀಳು

ತ್ತಿದ್ದ ಪಿರಂಗಿಯ ಗುಂಡುಗಳ ಪೆಟ್ಟನ್ನು ಸೈರಿಸಲಾರದ್ದೆ ಕೆಲವರು ಓಡತೊಡಗಿದರು. ಶೂರಸೇನನು ಆ ಗುಂಡಿನ ಪೆಟ್ಟಿಗೆ ಗುರಿಯಾಗಲೊಲ್ಲದೆ ಪ್ರಾಣರಕ್ಷಣೆಗಾಗಿ ರಾಶಿರಾಶಿಯಾಗಿ ಬಿದ್ದಿದ್ದ ಹೆಣಗಳ ನಡುವೆ ಅಡಗಿ ರಾಜನಿಗುಂಟಾದ ಉಪದ್ರವವನ್ನು ಬಗೆದು ಚಿಂತಾಕ್ರಾಂತನಾಗಿ ಸತ್ತವನಂತೆ ಬಿದ್ದಿದ್ದನು.

ವಿಕ್ರಮನ ಆಣತಿಯಂತೆ ಸೇನಾಪತಿಗಳು ನಗರವನ್ನು ಹೊಕ್ಕು, ಸೋಲಿಯನ್ನು ಕಳೆದ ಕಾಲಸರ್ಪದಂತೆ ಮೇಲೆಬಿದ್ದು ಬರುತ್ತಿರುವ ಧರ್ಮವರ್ಮನನ್ನು ಹಿಡಿದು, ಬಂಧಿಸಿ ತೆಗೆದುಕೊಂಡು ಬಂದು ವಿಕ್ರಮನ ಮುಂಗಡೆಯಲ್ಲಿ ನಿಲ್ಲಿಸಿದರು, ಕೆಲವರು ಸುಂದರೀರತ್ನವಾದ ಪದ್ಮಾವತೀದೇವಿಯನ್ನು ತರುವುದಕ್ಕೆ ಹೋಗಿ ಅರಮನೆಗಳಲ್ಲಿಯೂ ಅಂತಃಪುರಗಳಲ್ಲಿಯೂ ಅನ್ವೇಷಿಸಿದರು, ಎಲ್ಲಿಯೂ ಆಕೆಯು ಗೋಚರಿಸಲಿಲ್ಲ, ಪಟ್ಟಣದ ಪ್ರತಿಮಂದಿರವನ್ನೂ ಶೋಧಿಸಿದರು ಉದ್ಯಾನಗಳನ್ನೂ, ಏಕಾಂತನಿವಾಸಗಳನ್ನೂ, ಕ್ರೀಡಾಪರ್ವತಗಳನ್ನೂ ಹೊಕ್ಕು ನೋಡಿದರು ಲಾಭವಾಗಲಿಲ್ಲ ಯಾರನ್ನು ಕೇಳಿದರೂ " ನಮಗಾಕೆಯ ಸುಳಿವೇ ತಿಳಿಯದು " ಎಂದು ಹೇಳಿದರು. ಆಕೆಯನ್ನು ಹುಡುಕುವುದಕ್ಕೆ ಹೋಗಿದ್ದವರು ಚಕ್ರವರ್ತಿಯಬಳಿಗೆ ಬಂದು, " ದೇವ ! ಪದ್ಮಾವತೀದೇವಿಯನ್ನು ಎಲ್ಲೆಲ್ಲಿಯೋ ಹುಡುಕಿದೆವು ಆಕೆಯ ಸುಳಿವೇ ನಮಗೆ ದೊರೆಯಲಿಲ್ಲ ಎಂದು ಬಿನ್ನವಿಸಿದರು ಸಾರ್ವಭೌಮನಾ ವೃತ್ತಾಂತವನ್ನು ಕೇಳಿ, " ಅಕಟಕಟಾ ! ಎಷ್ಟೋ ಮಹಾ ಪ್ರಯತ್ನವನ್ನು ಮಾಡಿದೆನಲ್ಲ ! ಸುಂದರೀರತ್ನವು ದೊರೆಯಲಿಲ್ಲವಲ್ಲ ! ನನ್ನ ಪ್ರಯತ್ನಗಳೆಲ್ಲವೂ ನಿಷ್ಫಲಗಳಾದುವಲ್ಲ ಮುಂದೆ ನಾನು ಮಾಡುವುದೇನು ? ನಿಷ್ಪ್ರಯೋಜನವಾಗಿ ಇಂತಹ ಮಹಾ ಪ್ರಯತ್ನವನ್ನು ಮಾಡಿದಬಗ್ಗೆ ಲೋಕವು ನನ್ನನ್ನೆಷ್ಟು ನಿಂದಿಸುವುದೋ ? " ಎಂದು ತನ್ನಲ್ಲಿ ಆಲೋಚಿಸಿ, ನಾಚಿಕೆಯೊಂದುಕಡೆ ವ್ಯಾಕುಲವೊಂದುಕಡೆ ಕೋಪೋದ್ರೇಕವೊಂದುಕಡೆ ಮುಪ್ಪುರಿಗೊಳ್ಳುತ್ತಿರಲು, ಸಿಗಳಬದ್ಧನಾಗಿ ತನ್ನಮುಂದೆ ನಿಂತಿರುವ ಧರ್ಮವರ್ಮನನ್ನು ನೋಡಿ, " ಎಲಾ ! ಅಧಮಾ ! ಮೊದಲೆ ನಾನು ಪಾಣಿಗ್ರಹಣಮಾಡಲು ನಿಶ್ಚಯಿಸಿಕೊಂಡಿದ್ದ ಪದ್ಮಾವತಿಯನ್ನು ಭಯವಿಲ್ಲದೆ ಹೇಗೆ ಪರಿಗ್ರಹಿಸಿದೆ ಚಕ್ರವರ್ತಿಯಪೇಕ್ಷಿಸಿರುವ ವಸ್ತುವನ್ನು ನೀನಪೇಕ್ಷಿಸಬಹುದೆ ? ಧರ್ಮವಿರುದ್ಧವಾಗಿ ಕೈಹಿಡಿದುದಲ್ಲದೆ ಅವಳನ್ನು ಈಗ ಎಲ್ಲಿ ಬಚ್ಚಿಟ್ಟಿರುವೆ ? ಹೇಳು ನೀನು ಸತ್ಯವಾಗಿ ಅವಳ ನೆಲೆಯನ್ನು ತಿಳಿಸದಿದ್ದರೆ, ನಿನ್ನನ್ನೀ ನನ್ನ ಕರವಾಲದಿಂದ ಕಡಿದು ನಾಯಿ ನರಿಗಳಿಗೆ ಔತಣವನ್ನು ಮಾಡಿಸುವೆನು ಮೂಢ ! ಈಗಲಾದರೂ ಬುದ್ಧಿಯನ್ನು ಯನ್ನು ತಂದುಕೊಂಡು, ನನ್ನ ಆಧಿಪತ್ಯವನ್ನೊಪ್ಪಿಕೊಂಡು, ನಾನು ಬಯಸಿರುವ ನಿನ್ನ ಪತ್ನಿಯನ್ನು ತಂದು ನನಗೆ ಸಮರ್ಪಿಸು " ರತ್ನಹಾರೀತುಪಾರ್ಥಿವಃ " ಎಂಬ ನಾಣ್ನುಡಿಯನ್ನು ಕೇಳಿಲ್ಲವೆ ? ಬುದ್ಧಿಹೀನನೇ ! ನೀನು ಹಾಗೆ ಮಾಡಿದಕೆ

ಈಗ ನಾನು ಹಿಡಿದಿರುವ ನಿನ್ನ ರಾಜ್ಯವನ್ನು ನಿನಗೆ ಕೊಟ್ಟು ನಿನ್ನನ್ನು ಕಾಪಾಡುವೆನು ಹಾಗೆ ಮಾಡದಿದ್ದರೆ ನಿನಗೆ ಉಳಿಗಾಲವಿಲ್ಲ ನೋಡು ” ಎಂದು ಸಾರಿ ಸಾರಿ ಬೆದರಿಸಿದನು.

ಧರ್ಮವರ್ಮನಾದರೋ ಚಕ್ರವರ್ತಿಯ ಬಿರುನುಡಿಗಳಿಗಂಜದೆ ರೋಷಭೀಷಣನಾಗಿ ಬಿರುದಿಟ್ಟಗಳಿಂದಾ ವಿಕ್ರಮನಂ ನಿಟ್ಟಿಸಿ, “ ಎಲಾ ಪಾಪಾತ್ಮನೇ ! ನಿನ್ನ ಬಿರುಮಾತುಗಳ್ಗಾನಂಜುವನಲ್ಲ ನಿನಗಧೀನನಾಗುವುದೂ ಇಲ್ಲ ನಿನಗೆ ವಿನಾಶಕಾಲವು ಸಮೀಪಿಸಿರುವುದು ಆದುದರಿಂದಲೇ ಈ ದುರ್ಬುದ್ಧಿಯು ಹುಟ್ಟಿರುವುದು, ಪರಕಾಂತಾ ಕಾಮುಕನಾದ ನೀನು ಚಕ್ರವರ್ತಿಯ ಪದವಿಗೆ ತಕ್ಕವನೇ ಅಲ್ಲ, ಪರಕಾಂತಾರತನಾದ ದಶಕಂಠನಿಗಾದ ಗತಿಯನ್ನು ಸ್ಮರಿಸು ದುರುಳಾ !

ಸೀ॥ ಪರಕಾಮಿನಿಯರೊಳಾಸೆಪಟ್ಟವಂ ಗಭಿಮಾನಮಾನಹೀನತೆಯುಸಮಾನದುಃಖ ।
ಮಾರಯೆ ಚಿತ್ತದೊಳ್ಮೀರಿದ ಸಂತಾಪಮುಟ್ಟುವಯತಿಭೀತಿಕೆಟ್ಟವಾಸಿ ।
ಆಚಾರಶೂನ್ಯತೆನಾಚಿಕೆಧನನಾಶ ಮುದ್ಯೋಗರಾಹಿತ್ಯಮುಮ್ಮಳಿಕೆಯು ।
ಮಾರೋಗ್ಯನಾಶವುಮಹಿತತ್ವಮುಂ ಸದಾಪರಲೋಕಹಾನಿಸಂಪತ್ತಿನಳಿವು ॥
ತನ್ನಪೆಂಡತಿಯಾಕ್ರೋಶತತದುರುಕ್ತಿ ।
ಯುವಳಪತಿಕಂಡೊಡಸುಗಳಬವಣಿಗಸಣಿ ।
ಅಕ್ಕುಮಕ್ಕಟ ತಕ್ಕುಮೇಅನ್ಯವನಿತೆ ।
ಯರನಪೇಕ್ಷಿಪ್ಪುದೀ ವಸುಂಧರೆಯೊಳಕಟ ॥

ಪರಕಾಮಿನಿಯರನ್ನಾಶಿಸಿದವನಿಗಾಗುವ ಕೇಡುಗಳನ್ನು ಕೇಳಿದೆಯಾ ಮೊದಲು ಪದ್ಮಾವತಿಯನ್ನು ಮದುವೆಮಾಡಿಕೊಳ್ಳುವ ಆಸೆಯು ನಿನಗಿದ್ದಮಾತ್ರಕ್ಕೆ ಅವಳು ನಿನಗೆ ಹೆಂಡತಿಯಾದಳೆ ? ಮೂಢ ! ತಾಳಿಯನ್ನು ಕಟ್ಟಿದವನು ನಾನು ತಾನೆ ? ಹಾಗಾದಬಳಿಕ ಅವಳು ಪರಕಾಂತೆಯೇ ಆದಳಲ್ಲವೆ ? ನೀನು ಮಹಾ ಚಕ್ರವರ್ತಿಯಾಗಿ ಹೀಗೆ ದುರಾಚಾರಕ್ಕೆ ಮನಗೊಟ್ಟರೆ, “ ಯಥಾರಾಜಾತಥಾಪ್ರಜಾಃ ” ಎಂಬ ಗಾದೆಯಂತೆ ನಿನ್ನ ಪ್ರಜೆಗಳೂ ದುರ್ಮಾರ್ಗಕ್ಕಿಳಿದರೆ ನಿನಗಪಕೀರ್ತಿಯು ಬರುವುದಿಲ್ಲವೆ ಅಪಯಶಸ್ಸಿಗೂ ಮೃತ್ಯುವಿಗೂ ವ್ಯತ್ಯಾಸವುಂಟೆ ? ಧೀರಾಗ್ರಣಿಯಾದ ನೀನು ಈ ಕೆಟ್ಟಹಾದಿಯನ್ನು ತುಳಿವುದನ್ನು ಬಿಡು ಪರಲೋಕದಮೇಲೆ ಆಸೆಯಿಡು ಎಲ್ಲ ಸಾಧುಗಳಿಗೂ ಮಾರ್ಗದರ್ಶಿಯಾಗು ನಿನ್ನನ್ನು ನಾನು ಹಳಿದಿಲ್ಲ ನಿನ್ನ ಆಜ್ಞಾತಿಕ್ರಮಣವನ್ನು ಮಾಡಿಲ್ಲ ವ್ಯರ್ಥವಾಗಿ ನನ್ನಲ್ಲಿ ಪಗೆಯನ್ನು ಮಾಡಬೇಡ, ಮಾಡಿ ನಾಶವಾಗಬೇಡ ” ಎಂದು ನಿರ್ಲಕ್ಷ್ಯವಾಗಿ ಮಾತನಾಡಿದನು.

ತನ್ನ ನಿರ್ಬಂಧಕ್ಕೆ ಸಿಲುಕಿದ್ದರೂ ಲಕ್ಷ್ಯವಿಲ್ಲದೆ ಈ ಬಗೆಯಿಂದ ಮಾತನಾಡುತ್ತಿರುವ ಧರ್ಮವರ್ಮನನ್ನು ಬಿರುದಿಟ್ಟಿಯಿಂದ ನೋಡುತ್ತ, ತನ್ನ ಕತ್ತಿಯನ್ನು ಒರೆಯಿಂದುಗಿದು, ಅವನನ್ನು ಕಡಿಯುವುದಕ್ಕೆ ಮುಂದಡಿಯಿಟ್ಟ ಆ ಚಕ್ರವರ್ತಿಯನ್ನು ಅವನ ಸಚಿವಶ್ರೇಷ್ಠನಾದ ದೇವವರ್ಮನು ತಡೆದು, " ರಾಜೇಂದ್ರಲಲಾಮ ! ನಿನಗೇತಕ್ಕೀ ದುರ್ಬುದ್ಧಿ ? ಬಿಡು ಈ ಸಾಹಸವಿನ್ನು ಸಾಕು ಒಂದುವೇಳೆ ನೀನಿವನನ್ನು ಕೊಂದರೆ ಆ ರಮಣಿಗೆ ವೈಧವ್ಯವು ಪ್ರಾಪ್ತವಾಗುವುದಲ್ಲವೆ ? ಬಳಿಕ ನೀನವಳನ್ನು ವರಿಸಲಾಗುವುದೆ ? ಅವಳಾ ಬಳಿಕ ಮಂಗಳದ್ರವ್ಯಗಳನ್ನು ಧರಿಸಲರ್ಹಳೆ ? .ರಾಜಾಗ್ರಣೀ ! ಮಂಗಳದ್ರವ್ಯಗಳನ್ನು ಧರಿಸದ ನಾರಿ ದರ್ಶನಸ್ಪರ್ಶನಾದಿಗಳಿಗೆ ತಕ್ಕವಳಾಗುವಳೆ ? ನೀನರಿಯದ್ದು ದೇನು ? ವ್ಯಥೆಯನ್ನು ಪಡಬೇಡ ಎಂದಿಗಾದರೂ ಲಭ್ಯವಿದ್ದರೆ ಸುದತೀರತ್ನವು ನಿನಗೆ ದೊರೆಯದಿರುವಳೆ ? ಹುಡುಕಿಸಿ ಅವಳನ್ನು ಹಿಡಿದುತರೋಣ ಅವಳೀ ಲೋಕವನ್ನೆ ಬಿಟ್ಟು ಹೋಗುವಳೇನು ? ಇವನನ್ನು ಪ್ರಾಣದೊಡನೆ ಇಟ್ಟಿದ್ದು ಇವನು ನೋಡುತ್ತಿರಲು ಆ ಮತ್ತಕಾಶಿನಿಯನ್ನು ಕೈಹಿಡಿವುದೇ ದೊಡ್ಡಸ್ತಿಕೆ " ಎಂದು ಬೋಧಿಸಿದನು.

ದೇವಶರ್ಮನ ವಾಕ್ಯಗಳು ಯುಕ್ತವಾಗಿ ತೋರಿದುದರಿಂದ ವಿಕ್ರಮವರ್ಮ ಸಾರ್ವಭೌಮನು ಧರ್ಮವರ್ಮನನ್ನು ಕೊಲ್ಲುವ ಆಲೋಚನೆಯನ್ನು ಬಿಟ್ಟು, ಅವನ ಪಟ್ಟಣದಲ್ಲಿ ತನಗೆ ಪ್ರತಿನಿಧಿಯಾಗಿದ್ದು ಪಾಲನೆ ಮಾಡುವುದಕ್ಕೆ ವೀರವರ್ಮನೆಂಬ ಸಾಮಂತರಾಜನೊಬ್ಬನನ್ನು ನಿಯಮಿಸಿ, ವಿಜಯಪುರಾಧಿಪತಿಯನ್ನು ಸೆರೆಗೊಂಡು, ಸೈನ್ಯದೊಡನೆ ಹೊರಟು, ನಿಜನಗರವನ್ನು ಸೇರಿ ಅವನನ್ನು ಕಾರಾಗೃಹದಲ್ಲಿಟ್ಟು ಬಲಿಷ್ಠರನ್ನು ಕಾವಲಿಟ್ಟನು

ಬಳಿಕ ಆ ವಿಕ್ರಮವರ್ಮನು, " ಪದ್ಮಾವತೀದೇವಿಯುನ್ನಾವನಾದರೆ ಹುಡುಕಿತರುವನೋ ಅಥವಾ ಅವಳಿರುವ ಸ್ಥಲವನ್ನಾವನು ಕಂಡುತಿಳಿಸುವನೋ ಅಂಥವನಿಗೆ ವಿಶೇಷವಾದ ಬಹುಮಾನವು ದೊರೆವುದು " ಎಂದು ಪ್ರತಿಯೊಂದು ಪಟ್ಟಣದ ಕೇರಿಕೇರಿಯಲ್ಲಿಯೂ ಡಂಗುರವನ್ನು ಹೊಡೆಯಿಸಿದನು. ಆಶಾಪರರಾದ ಕೆಲವರು ಬಹು ಕಷ್ಟಪಟ್ಟು ಅನೇಕ ಸ್ಥಲಗಳಲ್ಲಿ ಹುಡುಕಿನೋಡಿದರು ಆದರೆ ಅವಳೆಲ್ಲಿಯೂ ದೊರೆಯಲಿಲ್ಲ ಇರುವ ಸ್ಥಲವು ಕೂಡ ಗೋಚರವಾಗಲಿಲ್ಲ.

ಕೆಲವು ತಿಂಗಳುಗಳು ಕಳೆದುವು ಚಕ್ರವರ್ತಿಯು ನಿರಂತರ ಚಿಂತಾಕ್ರಾಂತನಾಗಿರುತ್ತಿದ್ದನು, ಹೀಗಿರುತ್ತಿರಲು ಒಂದಾನೊಂದು ದಿನ ಒಬ್ಬ ಯೌವನಪುರುಷನು ಚಕ್ರವರ್ತಿಯನ್ನು ಉಚಿತರೀತಿಯಿಂದ ಕಂಡು ನಮಸ್ಕರಿಸಿ, " ಅಯ್ಯಾ ! ನಾನೊಬ್ಬ ಬಡಬ್ರಾಹ್ಮಣನು ನನ್ನ ಹೆಸರು ವಸುಪ್ರಿಯನು ನಾನೊಬ್ಬ ರಾಜನಬಳಿಯಲ್ಲಿದ್ದು ಆತನನ್ನು ಚಿತ್ರಕಥಾಪರಂಪರೆಯಿಂದ ವಿನೋದಪಡಿಸುತ್ತಿದ್ದನು

ನನ್ನ ದೌರ್ಭಾಗ್ಯದದೆಸೆಯಿಂದ ಆತನಿಗಂತ್ಯಕಾಲವು ಪ್ರಾಪ್ತವಾಯಿತು, ಆಶ್ರಯಹೀನನಾಗಿ ಹೊರಟು ನಿನ್ನ ಯಶಸ್ಸನ್ನು ಕೇಳಿ ನಿನ್ನಲ್ಲಿದ್ದು ಜೀವಿಕೆಯನ್ನು ನಡೆಯಿಸಿಕೊಳ್ಳಬೇಕೆಂದು ಬಯಸಿ ಬಂದಿರುವೆನು ನೀನು ದಯವಿಟ್ಟು ಆಶ್ರಯವನ್ನು ಕೊಟ್ಟರೆ, ನಿನಗೆ ಹಿತನಾಗಿದ್ದು ಕಾಲಯಾಪನವನ್ನು ಮಾಡಿಕೊಳ್ಳುವೆನು ” ಎಂದು ಹೇಳಿದನು. ವಿಕ್ರಮವರ್ಮನವನ ಆಕಾರಚೇಷ್ಟಾದಿಗಳನ್ನು ನೋಡಿ, ಇವನು ಆಕಾರಸೌಷ್ಠವದಿಂದ ಶೋಭಿಸುತ್ತಿರುವನು. “ ಯತ್ರಾಕೃತಿಸ್ತತ್ರಗುಣಾಃ ” ಎಂಬುದು ಸತ್ಯವು ಇವನ ಮಾತುಗಳು ಅತಿರಮಣೀಯಗಳು ಇವನು ನನ್ನಲ್ಲಿರಲಿ ಎಂದು ಬಗೆದು ಅವನನ್ನು ತನ್ನಬಳಿಯಿರಿಸಿಕೊಂಡು ಅವನಿಗೆ ಉಚಿತವಾದ ಒಂದುದ್ಯೋಗವನ್ನು ಕೊಟ್ಟನು, ಕ್ರಮಕ್ರಮವಾಗಿ ಅವನು ತನ್ನ ಬುದ್ಧಿವಿಶೇಷದಿಂದ ಚಕ್ರವರ್ತಿಯ ಒಲುಮೆಗೆ ಪಾತ್ರನಾಗಿ ಪರಮಾಪ್ತನೆನಿಸಿಕೊಂಡು ವರ್ತಿಸುತ್ತಿದ್ದನು. ಅವನ ಬುದ್ಧಿಯು ಆ ಸಾರ್ವಭೌಮನಿಗೆ ವೇದವಾಕ್ಯವಾಗಿದ್ದಿತು, ಎಲ್ಲರಿಗೂ ಅವನಲ್ಲಿ ಅಧಿಕಗೌರವವುಂಟಾಗಿದ್ದಿತು, ಪದ್ಮಾವತೀದೇವಿಯನ್ನು ಸಾಗಿಸಿಕೊಂಡು ಬರುವುದಕ್ಕೆ ಅವನು ಅನೇಕ ಪ್ರಯತ್ನಗಳನ್ನು ಮಾಡಿದನು, ರಾಜಪುಂಗವನವನ ವಿಷಯದಲ್ಲಿ ಬಹು ಸಂತೋಷವನ್ನು ಪಡೆದು, ಅವನನ್ನು ತನಗೆ ಸಮಾನನನ್ನಾಗಿ ಭಾವಿಸಿ ಗೌರವಿಸುತ್ತಿದ್ದನು.

ಹೀಗೆ ಒಂದೆರಡು ತಿಂಗಳು ಕಳೆಯಿತು, ಆವೇಳೆ ಒಂದುದಿನ ಅಷ್ಟಸಿದ್ಧಿಯೆಂಬ ಸಿದ್ಧಪುರುಷನೊಬ್ಬನು ಶಿಷ್ಯಚತುಷ್ಟಯಸಮೇತನಾಗಿ ಸಾರ್ವಭೌಮನ ಪಟ್ಟಣಕ್ಕೆ ಬಂದು, ಪಟ್ಟಣದ ಹೊರಗಣ ಒಂದು ಶಿವಾಲಯದಲ್ಲಿ ಇಳಿದು ಅಲ್ಲಿಯೇ ವಸತಿಮಾಡಿಕೊಂಡು ನಿಂತನು, ಅವನು ಯಾರನ್ನೂ ಯಾಚಿಸುತ್ತಿರಲಿಲ್ಲ. ಅವನು “ ಸ್ಪರ್ಶವೇಧಿ ” ಎಂಬ ಒಂದು ವಸ್ತುವಿನಿಂದ ಚಿನ್ನವನ್ನುಮಾಡಿ ಅದನ್ನು ಶಿಷ್ಯರಮೂಲಕವಾಗಿ ಮಾರಿ ಅದರಿಂದ ಆಹಾರವಸ್ತುಗಳನ್ನು ಕೊಂಡು ಜೀವಿಸುತ್ತಿದ್ದನೆಂಬ ಕಿಂವದಂತಿಯು ಹರಡಿತು, ಒಬ್ಬೊಬ್ಬರಾಗಿ ಅನೇಕರು ಆ ಶಿವಾಲಯಕ್ಕೆ ಬಂದು ಆತನನ್ನು ಸಂದರ್ಶಿಸಿ ಫಲಪುಷ್ಪಾದಿಗಳನ್ನು ಸಮರ್ಪಿಸಿ ಹೋಗುವ ವಾಡಿಕೆಯುಂಟಾಯಿತು, ಮಹಾತ್ಮನೀತನೆಂದು ಎಲ್ಲರೂ ಭಾವಿಸುತ್ತಬಂದರು. ಆ ಸಿದ್ಧನು ಶಕುನಶಾಸ್ತ್ರಗಳನ್ನು ಹೇಳುವುದಕ್ಕೆ ಪ್ರಾರಂಭಿಸಿದನು, ಜನರು ಲಕ್ಷೋಪಲಕ್ಷನಾಗಿ ಬರಲು ತೊಡಗಾಯಿತು. ಈತನು ಭೂತಭವಿಷ್ಯದ್ವರ್ತಮಾನ ವಿಚಾರಗಳನ್ನು ಚೆನ್ನಾಗಿ ಹೇಳುವನೆಂಬ ಖ್ಯಾತಿಯು ಹಳ್ಳಿಗಳಲ್ಲಿಯೂ ತುಂಬಿತು, ಇಷ್ಟಾಗುವವೇಳೆಗೆ ಒಂದೆರಡು ತಿಂಗಳುಗಳಾದುವು. ಒಂದುದಿನ ವಸುಪ್ರಿಯನು ಚಕ್ರವರ್ತಿಯನ್ನು ಬಳಿಸಂದು, “ ದೇವ ! ಯಾವನೋ ಒಬ್ಬ ಸಿದ್ಧಪುರುಷನು ಬಂದಿರುವನಂತೆ ಅವನು ಮಹಾತ್ಮನಂತೆ ಅವನು ಯಾರನ್ನೂ ಬೇಡದೆ ಶಿಷ್ಯರೊಡನೆ ಹೇಗೋ ಜೀವನವನ್ನು ಮಾಡುತ್ತಿರುವನಂತೆ, ಆಗ

ತಾನಾಗತ ವರ್ತಮಾನಗಳನ್ನು ಬಲ್ಲನಂತೆ, ಪ್ರಭುವೆ! ನಾವಾತನಬಳಿಗೆ ಹೋಗಿ "ಪದ್ಮಾವತಿಯು ನಮಗೆ ದೊರೆವಳೆ? ಅವಳು ಎಲ್ಲಿ ಹೇಗೆ ಎಂದು ವಶಳಾಗುವಳ ?" ಎಂಬ ವಿಚಾರವನ್ನು ಕೇಳೋಣವೆ?" ಎಂದತಿವಿನಯದಿಂದ ಕೇಳಿದನು.

ಚಕ್ರವರ್ತಿಯಾ ಮಾತನ್ನು ಕೇಳಿ ಒಪ್ಪಿ, ಒಂದು ಶುಭದಿನವನ್ನು ನೋಡಿ ಫಲಪತ್ರ ಪುಷ್ಪಾದಿಗಳನ್ನು ತೆಗೆಯಿಸಿಕೊಂಡು, ವಸುಪ್ರಿಯನೊಡನೆ ಸಿದ್ಧಪುರುಷನಬಳಿಗೆ ಹೋಗಿ ಪಲ್ಲಕ್ಕಿಯಿಂದಿಳಿದು, ಉಚಿತರೀತಿಯಿಂದ ಆ ಸಿದ್ಧನನು ಸಂದರ್ಶಿಸಿ, ಅಲ್ಲಿದ್ದವರನ್ನು ಹೊರಕ್ಕೆ ಕಳುಹಿಸಿ ಹೀಗೆಂದನು.

"ಮಹಾತ್ಮಾ! ನನಗೆ ರಹಸ್ಯವಾದೊಂದು ಕೋರಿಕೆಯಿರುವುದು ಅದು ಸಿದ್ಧಿಸುವುದೇ ಇಲ್ಲವೆ? ಯಾವಾಗ? ಹೇಗೆ ಸಿದ್ಧಿಸುವುದು? ದಯವಿಟ್ಟು ಅಪ್ಪಣೆಕೊಡಿಸಬೇಕು ಎಂದು ಕೇಳಿದನು. ಸಿದ್ಧಪುರುಷನು ಸ್ವಲ್ಪ ಆಲೋಚಿಸಿ ಚಕ್ರವರ್ತಿಯನ್ನು ಸಂಬೋಧಿಸಿ, "ರಾಜಕುಲಲಲಾಮ! ನಿನ್ನ ಕೋರಿಕೆಯ ವಿಚಾರವನ್ನು ನಾನು ತಿಳಿದುಕೊಂಡೆನು, ಅದು ಒಂದು ವಾರದೊಳಗಾಗಿ ಸಿದ್ಧಿಸುವುದು ಹೇಗೆಂದರೆ:— ಒಬ್ಬ ರಾಜನನ್ನು ಸೆರೆಹಿಡಿದು ಕಾರಾಗಾರದಲ್ಲಿ ಬಂಧಿಸಿರುವೆಯಷ್ಟೆ? ಅವನನ್ನು ನೀನು ನಿಗ್ರಹಿಸಿ ತಂದಾಗ ಆ ರಾಜನ ಮುಖ್ಯಮಂತ್ರಿಯು ರಾಜಧಾನಿಯಲ್ಲಿರಲಿಲ್ಲ ಆತನೀಗ ಪಟ್ಟಣಕ್ಕೆ ಬಂದು ನಡೆದ ವರ್ತಮಾನವನ್ನೆಲ್ಲ ಕೇಳಿ ದುಃಖಿಸಿ, ಹೇಗಾದರೂ ತನ್ನ ದೊರೆಯನ್ನು ಬಿಡಿಸಿಕೊಂಡು ಬರಬೇಕೆಂದು ನಿಶ್ಚಯಿಸಿ, "ಅಕಟಾ! ಒಬ್ಬ ಹೆಂಗಸಿಗಾಗಿ ರಾಜ್ಯವನ್ನು ಕಳೆದುಕೊಳ್ಳುವುದೂ, ಸೆರೆಯಲ್ಲಿರುವುದೂ ಮೋಘಾಪಿಗಳ ಲಕ್ಷಣವಲ್ಲ" ಎಂದು ಭಾವಿಸಿ ಮಂತ್ರಿಯು ನೀತಿಶಾಸ್ತ್ರಪಾರಂಗತನಾದುದರಿಂದ, ನಿನ್ನ ಹುಡುಕುವಿಕೆಯಿಂದ ಗೋಚರಿಸದೆ ಅಡಗಿಕೊಂಡಿರುವ ಆ ಲಲನಾಮಣಿಯನ್ನು ಹೇಗಾದರೂ ಕಂಡುಹಿಡಿದು ಅವಳನ್ನು ತಂದು ನಿನಗೆ ಕಾಣಿಕೆಯಾಗಿ ಸಮರ್ಪಿಸಿ ತನ್ನ ದೊರೆಯನ್ನು ಸೆರೆಮನೆಯಿಂದ ಬಿಡಿಸಿಕೊಂಡು ಮತ್ತೆ ತಮ್ಮ ರಾಜ್ಯವನ್ನು ನಿನ್ನಿಂದ ಪಡೆದು ಸುಖವಾಗಿರಬೇಕೆಂದು ಬಗೆದು ನಿಮ್ಮ ಸಂದರ್ಶನಕ್ಕೆ ಬರಲಿರುವನು ನನ್ನ ಮಾತು ತಪ್ಪದು ನೀನು ಇದಕ್ಕಾಗಿ ಆಲೋಚಿಸಬೇಕಾದುದಿಲ್ಲ ತನಗೆತಾನೆ ನಿನ್ನ ಇಷ್ಟಪೂರಣವಾಗುವುದು" ಎಂದು ನುಡಿದನು.

ಆಗಳಾ ಸಾರ್ವಭೌಮನಿಗುಂಟಾದ ಸಂತೋಷಾತಿಶಯವನ್ನು ಹೇಳುವುದಕ್ಕೀ ಒಂದು ಬಾಯಿಯು ಸಾಲದು ಸತ್ಯಶೀಲನೇ! ಲಾಲಿಸು ವಿಕ್ರಮವರ್ಮನು ಸಿದ್ಧಪುರುಷನಿಗೆ ನಮಸ್ಕಾರಮಾಡಿ ಆತನ ಅಪ್ಪಣೆಯನ್ನು ಪಡೆದುಹೋಗಿ, ಅದು ಮೊದಲು ಪ್ರತಿದಿನವೂ ಬಂದು ಸಿದ್ಧನನ್ನು ಸಂದರ್ಶಿಸಿ ಹೋಗುತ್ತಿದ್ದನು ಆರು ದಿನಗಳು ಕಳೆದುವು ಏಳನೆಯದಿನ ಸಂಜೆಹೊತ್ತಿನಲ್ಲಿ ತನ್ನ ಸಂದರ್ಶನಕ್ಕೆಬಂದ

ಚಕ್ರವರ್ತಿಯನ್ನು ಸಾದರದಿಂದ ಸತ್ಕರಿಸಿ, “ ಎಲೈ ರಾಜನ್ಯಮಾನನೆ ! ನಾಳೆಯು ರಾತ್ರಿಯಲ್ಲಿ ನಿನ್ನ ಇಷ್ಟವು ಸಿದ್ಧಿಸುವುದು ಎಂದು ನುಡಿದನು, ರಾಜಶ್ರೇಷ್ಠನು ಆನಂದಭರಿತನಾಗಿ “ಮಹಾತ್ಮಾ ! ಇದೆಲ್ಲವೂ ಭವದೀಯ ಕೃಪಾಫಲವಲ್ಲವೆ? ” ಎಂದು ನುಡಿದು ಸ್ವಕೀಯ ಪ್ರಾಸಾದವನ್ನು ಸೇರಿ, ಸಿದ್ಧಪುರುಷನು ನುಡಿದ ಸಮಯವನ್ನು ನಿರೀಕ್ಷಿಸುತ್ತಿದ್ದನು. ಮಾರನೆಯ ದಿನದಲ್ಲಿ ಸಾಯಂಕಾಲದವರೆಗೂ ನಿರೀಕ್ಷಿಸಿದನು ಯಾವ ಸೂಚನೆಯೂ ಕಂಡುಬರಲಿಲ್ಲ, ಸಿದ್ಧಪುರುಷನ ವಿಚಾರದಲ್ಲಿ ಸಂದೇಹವುಂಟಾಯಿತು ಅವನ ಮಾತುಗಳನ್ನೆಲ್ಲ ಸುಳ್ಳಾಗಿ ಭಾವಿಸಿದನು, ಆ ವಿಚಾರವನ್ನು ತಿಳಿಯಬೇಕೆಂದು ಓಲಗಶಾಲೆಗೆ ಬಂದನು, ಅಷ್ಟರಲ್ಲಿ ಒಬ್ಬ ರಾವುತನು ಬಂದು ನಮಸ್ಕರಿಸಿ ಒಂದು ಕಾಗದವನ್ನು ಕೊಟ್ಟನು, ಬಳಿಕ ಚಕ್ರವರ್ತಿ ಆ ಕಾಗದವನ್ನು ಬಿಚ್ಚಿ ಹೀಗೆ ಓದಿಕೊಂಡನು.

ಶ್ರೀಮದಖಂಡ ಭೂಮಂಡಲಾಖಂಡಲ ಪ್ರಚಂಡದೋರ್ದಂಡಮಂಡಿತ ಮಂಡಲಾಗ್ರ ಖಂಡಿತವೈರಿ ಮಂಡಲರೆನಿಸ ಶ್ರೀಮದ್ವಿಕ್ರಮಾರ್ಕ ಮಹಾರಾಜರ ಸನ್ನಿಧಿಗೆ—ಧರ್ಮವರ್ಮ ನರಪಾಲನ ಮಂತ್ರಿಯಾದ ವಾಮದೇವಶರ್ಮನು ವೇದೋಕ್ತಾಶೀರ್ವಾದಗಳನ್ನು ವಿರಚಿಸಿ ಬರೆದುಕೊಂಡ ಬಿನ್ನವತ್ತಳೆಯೇನೆಂದರೆ:—

ಪ್ರಭುವತಂಸ ! ಒಬ್ಬ ಕಾಮಿನಿಗಾಗಿ ನೀವು ನಮ್ಮ ಪುಟಭೇದನವನ್ನು ಹಾಳುಮಾಡಿ ನಮ್ಮ ಮನುಜಪತಿಯನ್ನು ಸೆರೆಹಿಡಿದುದು ಯಾವಬಗೆಯಿಂದಲೂ ನ್ಯಾಯವಾಗಿ ತೋರಲಿಲ್ಲ, ನೀವು ಬಂದಾಗ ನಾನಿಲ್ಲದಿದ್ದುದರಿಂದ ಇಷ್ಟರಕಷ್ಟಕ್ಕೆ ಒಳಪಡಬೇಕಾಯಿತು, ನಮ್ಮರಸನು ಸಾಕಾದಷ್ಟು ಬುದ್ಧಿಬಲವಿಲ್ಲದವನಾದುದರಿಂದ ಒಬ್ಬ ಹೆಂಗಸಿಗಾಗಿ ರಾಜ್ಯವನ್ನು ಕಳೆದುಕೊಂಡು ಕಾರಾಗಾರಬದ್ಧನಾದನು. ಆ ಸಮಯದಲ್ಲಿ ನಾನು ಪಟ್ಟಣವಲ್ಲಿದ್ದಿದ್ದರೆ ತಕ್ಷಣದಲ್ಲಿ ಆ ಸ್ತ್ರೀಯನ್ನು ನಿಮಗರ್ಪಿಸಿ, ನಿಮ್ಮ ಕೃಪಾಕಟಾಕ್ಷಕ್ಕೆ ಪಾತ್ರರಾಗಿ ಸುಖದಿಂದ ಜೀವಿಸುವುದಕ್ಕೆ ಪ್ರಯತ್ನಮಾಡುತ್ತಿದ್ದೆನು ಕಳೆದುಹೋದುದನ್ನು ಚಿಂತಿಸಿ ಲಾಭವಿಲ್ಲ ಈಗ ನನ್ನದೊಂದು ಬಿನ್ನಪ, ನಮ್ಮಂಥವರಿಗೆ ಬಲವದ್ವಿರೋಧವು ತಕ್ಕುದಲ್ಲ ನಿಮ್ಮಲ್ಲಿ ಕೇವಲ ಮೈತ್ರಿಯನ್ನು ಮಾಡಿ ವರ್ತಿಸಬೇಕೆಂಬುದೇ ಮುಖ್ಯವಾದ ನನ್ನ ಆಶಯವು, ಯಾರಬಾಳೂ ಶಾಶ್ವತವಾದುದಲ್ಲ, ಅಲ್ಪಾಲೋಚನೆಗಳಿಂದ ಮನಸ್ಸನ್ನು ಹೊಲಗೆಡಿಸುವುದು ಯುಕ್ತವಲ್ಲ, ನೀವು ಅಪೇಕ್ಷಿಸುವುದು ಯಾವ ದೊಡ್ಡವಸ್ತು ? ಅದನ್ನು ನಿಮಗೆ ಸಮರ್ಪಿಸುವುದರಿಂದ ಆಗುವ ನಷ್ಟವೇನು ? ರಾಜಾಗ್ರಣೀ ! ಹಿಂದಿನ ವೈರಗಳನ್ನು ಬಿಟ್ಟುಬಿಡಿ, ನೀವು ಅಪೇಕ್ಷಿಸಿರುವ ನಾರಿಯನ್ನು ನಾನೇ ಕರೆದುಕೊಂಡು ನಾಲ್ಕನೆಯ ದಿನದ ಸಾಯಂಕಾಲಕ್ಕೆ ನಿಮ್ಮ ಪಟ್ಟಣದ ಹೊರಗಣ ಪ್ರದೇಶವನ್ನು ಸೇರಿ, ನಮ್ಮ ಆಗಮನವನ್ನು ನಿಮ್ಮಡಿಗಳಿಗೆ ತಿಳಿಸುತ್ತೇನೆ ಆಗ ನೀವು ಬಂದು ಆಕೆಯನ್ನು ಪರಿಗ್ರಹಿಸಿ, ನಮ್ಮ

ದೊರೆಯನ್ನು ಬಿಟ್ಟು ನಮ್ಮ ರಾಜ್ಯವನ್ನು ನಮಗೆ ಕೊಟ್ಟು ತ್ರಿಕರಣಶುದ್ಧಿಯಾಗಿ ನಮ್ಮಮೇಲಣ ಶತ್ರುತ್ವವನ್ನು ಬಿಟ್ಟುಬಿಡಬೇಕೆಂದು ಅತ್ಯಂತ ವಿನಯಪೂರ್ವಕ ವಾಗಿ ಪ್ರಾರ್ಥಿಸುತ್ತೇನೆ.

ಇಂತು ಮಹಾಶೀಃ ಪೂರ್ವಕ ವಿಜ್ಞಾಪನೆಗಳು.

" ವಾಮದೇವ. "

ಚಕ್ರವರ್ತಿಯ ಆನಂದವು ಮೇರೆಮೀರಿತು ಒಂದು ಕ್ಷಣಕಾಲ ಸ್ತಂಭೀ ಭೂತನಾದನು, ಬಳಿಕ ಸಮೀಪದಲ್ಲಿದ್ದ ವಸುಪ್ರಿಯನವಶಕ್ಕಾ ಕಾಗದವನ್ನು ಕೊಟ್ಟನು, ಆತನು ಓದಿದನು " ಪ್ರಭುವೇ ! ಈ ಕಾಗದವು ನಾಲ್ಕು ದಿನಗಳ ಕೆಳಗೆ ಬರೆಯಲ್ಪಟ್ಟುವು, ವಾಮದೇವನು ಈ ದಿನದ ಸಾಯಂಕಾಲಕ್ಕೆಯೇ ಇಲ್ಲಿಗೆ ಬರಬಹುದೆಂದು ತೋರುವುದು, ವಿಜಯನಗರವು ಇಲ್ಲಿಗೆ ಬಹುದೂರದ ಲ್ಲಿರುವುದರಿಂದ ಆಳು ಇದನ್ನು ತರುವುದಕ್ಕೆ ಆಲಸ್ಯವಾಗಿರಬಹುದು, ಇನ್ನು ತಾವು ಉಚಿತವಾದ ಉಡಿಗೆತೊಡಿಗೆಯನ್ನು ಧರಿಸಿರಿ, ಓಲಗವನ್ನು ಬಿಟ್ಟು ಊರಮುಂದೆ ಅವರ ಆಗಮನವನ್ನು ನಿರೀಕ್ಷಿಸುತ್ತಿರುವ " ಎಂದನು. ರಾಜನು ಆ ಪ್ರಕಾರವಾಗಿಯೇ ಅಮೌಲ್ಯಗಳಾದ ಆಭರಣಗಳನ್ನೂ ವಸ್ತ್ರಗಳನ್ನೂ ಧರಿಸಿ ದನು, ವಸುಪ್ರಿಯನೊಡನೆ ಹೊರಟು ಬಾಗಿಲಬಳಿಗೆ ಬರುವಷ್ಟರಲ್ಲಿ ಒಬ್ಬ ಸೇವ ಕನು ಓಡಿಬಂದು, " ಬುದ್ಧಿ ! ಒಬ್ಬಯಿನೋರು ಬಂದವನೆ ಊರ ಬಾಗಿಲ ಅತ್ತಿರಕ್ಕೆ, ಈ ಕಾಗಜವನ್ನು ತಮ್ಮಕೈಗೆ ಕೊಡೆಂತ ಏಳ್ತವನೆ, ಎಂದು ಹೇಳಿ ಕಾಗದವನ್ನು ವಸುಪ್ರಿಯನ ಕೈಗೆಕೊಟ್ಟು ಹೊರಟುಹೋದನು, ಅವನದನ್ನು ಓದಿಕೊಂಡು ಚಕ್ರವರ್ತಿಗೆ ಹೀಗೆ ಹೇಳಿದನು. " ಸಾರ್ವಭೌಮ ! ವಾಮದೇ ವನು ಪದ್ಮಾವತೀದೇವಿಯನ್ನು ಪಾಲಕ್ಕಿಯಲ್ಲಿ ಕುಳ್ಳಿರಿಸಿ ಕರೆದುತಂದಿರುವನಂತೆ ತಾವು ಬರಬೇಕಂತೆ ಪರಿವಾರವು ಅತ್ಯಲ್ಪವಾಗಿರಬೇಕಂತೆ ಆ ನಾರೀರತ್ನವು ಆಡಂಬರವಾಗಿ ಬರುವುದಕ್ಕೆ ನಾಚುತ್ತಿರುವಳಂತೆ ಎಂದರಿಕೆ ಮಾಡಿದನು.

ಪ್ರಭುವು "ಆಗಲಿ! ನಾವು ಅತ್ಯಲ್ಪ ಪರಿವಾರದೊಡನೆಯೇ ಹೋಗುವ, ಕಾರಾಗೃಹದಿಂದ ಧರ್ಮವರ್ಮನನ್ನು ಕರೆಯಿಸಿ ಒಂದು ಪಲ್ಲಕ್ಕಿಯಲ್ಲಿ ಕುಳ್ಳಿರಿಸಿ ನಮ್ಮೊಡನೆ ತೆಗೆದುಕೊಂಡು ಹೋಗುವ, ನೀವೆಲ್ಲರೂ ಕಾಣುತ್ತಿರಲು, ಅವನ ಗರ್ವವು ಮುರಿದುಬೀಳುವಂತೆ ಅವನ ಕಣ್ಣಳಮುಂದೆಯೇ ಅವಳನ್ನು ಪರಿಗ್ರಹಿ ಸುವೆನು. ನೋಡಿ" ಎಂದು ಹೆಮ್ಮೆಗೊಂಡು ಹೇಳಿದನು. ಧರ್ಮವರ್ಮನನ್ನು ಬರಮಾಡಿದರು. ಪಲ್ಲಕ್ಕಿಯಲ್ಲಿ ಆತನನ್ನು ಹತ್ತಿಸಿದರು ಅರಸನು ವಸುಪ್ರಿ ಯನೊಡನೆ ಪಲ್ಲಕ್ಕಿಯಲ್ಲಿ ಕುಳಿತನು. ಐದಾರುಮಂದಿ ಸೇವಕರು ಸಿದ್ಧರಾ ದರು. ಎಲ್ಲರೂ ಪಟ್ಟಣದ ಮುಂಭಾಗದಲ್ಲಿರುವ ಒಂದು ಮಂಟಪದ ಬಳಿಗೆ ಹೊರಟು ಆ ಸ್ಥಲವನ್ನು ಮುಟ್ಟಿದರು ಆವೇಳೆಗೆ ರಾತ್ರಿ ಹತ್ತುತಾಸು ಹೊಡೆ

ಯಲ್ಪಟ್ಟಿತು. ಆಗ ಆಕಾಶಭೂಮಿಗಳು ಅಂಧಕಾರ ಬಂಧುರವಾಗಿದ್ದುವು. ವಾಮದೇವನು ಹೇಳಿಕಳುಹಿಸಿದ್ದುದರಿಂದ ಧೀವಟಿಗೆಗಳ ಸಿದ್ಧತೆಯು ಇರಲಿಲ್ಲ. ಶಿವಾಲಯದ ಬಳಿಯಲ್ಲಿ ಆಚ್ಛಾದಿತವಾದ ಒಂದು ಪಲ್ಲಕ್ಕಿಯೂ, ಅದರೊಡನೆ ೫-೬ ಮಂದಿ ಬೋಯಿಗಳೂ ವಾಮದೇವನೂ ನಿಂತಿದ್ದರು. ಅವರು ತಂದಿದ್ದ ಒಂದು ಕಂದೀಲು ಬೆಳಕಿನಲ್ಲಿ ಸಾರ್ವಭೌಮನವರ ಗುರುತನ್ನು ಹಿಡಿದನು.

ಆಗ ವಾಮದೇವನುನಾ ಚಕ್ರವರ್ತಿಯನ್ನು ಸಮೀಪಿಸಿ, "ಮಹಾಪ್ರಭುವೆ ಇಗೋ! ಈ ಪಲ್ಲಕ್ಕಿಯಲ್ಲಿ ಧರ್ಮವರ್ಮನ ಹೆಂಡತಿಯಾದ ಪದ್ಮಾವತೀದೇವಿ ಯಿರುವಳು. ಪರಿಗ್ರಹಿಸಿ ನಮ್ಮ ರಾಜನನ್ನು ಬಿಟ್ಟುಕೊಟ್ಟು ರಾಜ್ಯವನ್ನುಕೂಡ ಅನುಗ್ರಹಮಾಡಿ ಕೊಡು. ನೀನೀಗಲೆ ಹೋಗಿ ಆ ಪಲ್ಲಕ್ಕಿಯಲ್ಲಿ ಕುಳಿತು, ನಿನ್ನ ಪ್ರಿಯೆಯೊಡನೆ ಸರಸಸಲ್ಲಾಪಗಳನ್ನಾಡು" ಎಂದು ಹೇಳಲು ಚಕ್ರವ ರ್ತಿಯು ಹರುಷದಿಂದುಬ್ಬಿ ತನ್ನ ಪಲ್ಲಕಿಯನ್ನಿಳಿದು ಆ ಪಲ್ಲಕ್ಕಿಯಲ್ಲಿ ಕುಳಿತು ಕೊಂಡನು. ಒಡನೆಯೇ ವಸುಪ್ರಿಯನು, ಪಲ್ಲಕ್ಕಿಯನ್ನು ಪಟ್ಟಣದೊಳಕ್ಕೆ ತೆಗೆದುಕೊಂಡು ಹೋಗುವಂತಾಜ್ಞಾಪಿಸಿದನು. ಬೋಯಿಗಳು ಪಟ್ಟಣದ ಕಡೆ ಪಲ್ಲಕ್ಕಿಯನ್ನು ಹೊತ್ತುಕೊಂಡು ಹೊರಟರು. ಅಷ್ಟರಲ್ಲಿ ಧರ್ಮವರ್ಮನನ್ನು ಕುಳ್ಳಿರಿಸಿದ್ದ ಪಾಲಕಿಯನ್ನು ಬೋಯಿಗಳಿಳಿಸಿದರು. ಕೂಡಲೆ ಸಮೀಪದಲ್ಲಿ ಅಡಗಿಕೊಂಡಿದ್ದ ಯಮಭಟರಂ ಪೋಲ್ವ ಕೆಲಸೇವಕರು ಬಂದು ಮೇಲೆ ಬಿದ್ದು ಅಜಾಗರೂಕತೆಯಿಂದಿದ್ದ ಬೋಯಿಗಳನ್ನೂ ಚಕ್ರವರ್ತಿಯನ್ನು ಹಿಂಬಾಲಿಸಿ ಬಂದ ಅತ್ಯಲ್ಪಸಂಖ್ಯಾಕರಾದ ಭಟರನ್ನು ಚಕ್ಕನೆ ಈಟಿಗಳಿಂದ ತಿವಿದುಕೊಂದರು ಪಟ್ಟಣದ ಕಡೆಗೆ ಹೊರಟ ಚಕ್ರವರ್ತಿಗೆ ಅಲ್ಲಿ ನಡೆದ ಯಾವ ವಿಷಯವೂ ತಿಳಿ ಯಲೇ ಇಲ್ಲ. ಅವನು ಹತ್ತಿದ್ದ ಪಲ್ಲಕ್ಕಿಯನ್ನು ಬೋಯಿಗಳು ಬೇಗಬೇಗನೆ ಎತ್ತಿಕೊಂಡು ನಡೆಯುತ್ತಿದ್ದುದರಿಂದಲೂ, ಚಕ್ರವರ್ತಿಯು ಕಾಮಿನೀಮೋಹಾ ಯತ್ತಚಿತ್ತನಾಗಿದ್ದುದರಿಂದಲೂ ಅವನಿಗೆ ಬೇರೆ ವಿಷಯಗಳಲ್ಲಿ ಆಲೋಚನೆಯೇ ಪ್ರಸರಿಸದಿದ್ದಿತು. ಅವನು ತನ್ನ ನಗರದೊಳಕ್ಕೆಯೇ ಪಲ್ಲಕ್ಕಿಯು ಹೋಗು ತ್ತಿರುವುದೆಂದು ಭಾವಿಸಿ ಆ ಕತ್ತಲೆಯಲ್ಲಿ ಕಣ್ಣುಬಿಟ್ಟು ನೋಡಲು, ತದೇಕ ಧ್ಯಾನನಿಷ್ಠೆಯಿಂದ ಕುಳಿತುಕೊಂಡಿರುವ ವ್ಯಕ್ತಿಯನ್ನು ಯುವತಿಯೆಂದೇ ಬಗೆದು ಸರಸಸಲ್ಲಾಪಗಳನ್ನಾಡುತ್ತ ಮೆಲ್ಲನೆ ಕೈಯ್ಯನ್ನು ಹಿಡಿದನು. ಆ ಸ್ತ್ರೀಯು— ಛೀ! ಛೀ! ದುರಾತ್ಮನೆ! ನನ್ನನ್ನು ಮುಟ್ಟದಿರು ಎಂದು ನುಡಿದು, ಛಟ್ಟನೆ ಕೈಯನ್ನು ಬಿಡಿಸಿಕೊಂಡು, ತನ್ನ ಬಳಿಯೊಳಿಟ್ಟುಕೊಂಡಿದ್ದ ಸಂಕೋಲೆಗಳನ್ನು ಚಕ್ರವರ್ತಿಯ ಕಾಲುಗಳಿಗೆ ಹಾಕಿ ಬಿಗಿದು, ತನ್ನ ಸ್ತ್ರೀವೇಷವನ್ನು ತೆಗೆದು ಹಾಕಿ ನಗುತ್ತ, "ಎಲಾ! ದುಶ್ಶೀಲಾ! ಪರಾಂಗನೆಯೂ, ಪತಿವ್ರತೆಯೂ, ಪರ ಮಪುಣ್ಯವತಿಯೂ ಆದ ನಮ್ಮ ರಾಣಿಯನ್ನು ಮೋಹಿಸಿ, ನಿಷ್ಕಾರಣವಾಗಿ ನಮ್ಮ

ಪಟ್ಟಣದಮೇಲೆ ದಂಡೆತ್ತಿ ಬಂದು ಯುದ್ಧಮಾಡಿ, ನಿರಪರಾಧಿಯಾದ ನನ್ನ ದೊರೆಯನ್ನು ಸೆರೆಯಲ್ಲಿ ಬಂಧಿಸಿರುವೆಯಲ್ಲವೆ? ಆ ದುಷ್ಕಾರ್ಯಕ್ಕೆ ತಕ್ಕ ಫಲ ವಿದು ಅನುಭವಿಸು'' ಎಂದು ನುಡಿದನು.

ಇಂತಪ್ಪ ವೇಷವನ್ನು ಧರಿಸಿದವನೂ, ಹೀಗೆ ಆಗ್ರಹದಿಂದ ಮಾತನಾಡಿದ ವನೂ, ಚಕ್ರವರ್ತಿಯನ್ನು ಶೃಂಖಲಬದ್ಧನನ್ನಾಗಿ ಮಾಡಿದವನು ಯಾರು? ಶಿಷ್ಯ ರತ್ನವೇ! ಅವನೇ ವಿಜಯಪುರದ ಸೇನಾಪತಿಯಾದ ಶೂರಸೇನನು. ಚಕ್ರವ ರ್ತಿಗೆ ನಡುಕವುಂಟಾಯಿತು. ಮೋಸದಿಂದ ಶತ್ರುಗಳ ಕೈಗೆ ಸಿಲುಕಿದೆನೆಂದು ತಿಳಿದುಕೊಂಡನು. ನಡೆದ ಎಲ್ಲಕಾರ್ಯಗಳೂ ವಾಮದೇವನ ತಂತ್ರಗಳೇ ಹೊರತು ಬೇರೆಯಲ್ಲವೆಂದು ಭಾವಿಸಿದನು. ದುಃಖಾಕ್ರಾಂತನಾಗಿ ಮುಂದಿನ ಕರ್ತವ್ಯವನ್ನರಿಯದೆ ತಪಿಸುತ್ತಿದ್ದನು. ಧರ್ಮವರ್ಮನ ಬೋಯಿಗಳನ್ನೂ ರಾಜಸೇವಕರನ್ನೂ ಕೊಂದ ಯೋಧರೇ ಆತನ ಪಲ್ಲಕ್ಕಿಯನ್ನು ಹೊತ್ತುಕೊಂಡು, ಚಕ್ರವರ್ತಿಯ ಪಲ್ಲಕ್ಕಿಯ ಹಿಂದೆಯೇ ಸದ್ದಿಲ್ಲದೆ ಬರುತ್ತಿದ್ದರು. ಅವರು ಆ ಪ್ರಕಾರವಾಗಿ ಎಲ್ಲಿಯೂ ನಿಲ್ಲದೆ ಆರಾತ್ರಿಯೂ ಮಾರನೆಯ ದಿನದ ಹಗಲೂ ಪ್ರಯಾಣಮಾಡಿ ಧರ್ಮವರ್ಮನ ರಾಜಧಾನಿಯನ್ನು ಸೇರಿದರು ಮೊದಲೆ ತಕ್ಕ ಪ್ರಯತ್ನಗಳು ನಡೆದಿದ್ದುದರಿಂದ ತತ್ಪುರಜನರ ಸಹಾಯದಿಂದ ಶೂರಸೇ ನನು ಕೆಲ ಯೋಧರೊಡನೆ ಪಟ್ಟಣವನ್ನು ಹೊಕ್ಕು, ಅಜಾಗರೂಕತೆಯಿಂದಿದ್ದ ವೀರವರ್ಮನನ್ನು ಸಂಹರಿಸಿ, ನಗರವನ್ನು ವಶಪಡಿಸಿಕೊಂಡನು. ಬಳಿಕ ಧರ್ಮ ವರ್ಮನನ್ನು ಸಿಂಹಾಸನಾಧಿಷ್ಠಿತನನ್ನಾಗಿ ಮಾಡಿ ವಿಕ್ರಮವರ್ಮನನ್ನು ಕಾರಾ ಗೃಹದಲ್ಲಿ ಬಂಧಿಸಿದರು.

ಛಾತ್ರಶ್ರೇಷ್ಠನೆ! ಈ ಚರಿತ್ರೆಯೆಲ್ಲವೂ ನಿನಗದ್ಭುತವಾಗಿ ತೋರಿರ ಬಹುದು. ಇದರ ರಹಸ್ಯವನ್ನು ನಿನಗೆ ತಿಳಿಯಿಸುವೆನು. ಆಲಿಸು, ವಾಮದೇ ವನು ಕಾರ್ಯಾರ್ಥಿಯಾಗಿ ದೇಶಾಂತರಕ್ಕೆ ಹೋದಬಳಿಕ, ಸಮಯವನ್ನರಿತು ವಿಕ್ರಮವರ್ಮನು ಸೇನಾಸಮೇತನಾಗಿ ಬಂದು ವಿಜಯನಗರವನ್ನು ಮುತ್ತಿದ ನೆಂದು ನಾನು ಹೇಳಿದೆನಲ್ಲವೆ? ಆಗ ಎರಡನೆಯ ಮಂತ್ರಿಯಾದ ಸತ್ಯಪ್ರಿಯನು, ಪದ್ಮಾವತೀದೇವಿಯನ್ನು ಎಲ್ಲಿಯಾದರೂ ಮರೆಯಾಗಿಟ್ಟಿರಬೇಕೆಂದು ರಾಜನೊ ಡನೆ ಆಲೋಚಿಸಿ ತಕ್ಕ ಸನ್ನಾಹವನ್ನು ಮಾಡಿ, ತಾನು ಶೂರಸೇನನ ವೇಷದಿಂದ ಬಂದು, ವಿಕ್ರಮವರ್ಮ ಚಕ್ರವರ್ತಿಯನ್ನು ವಂಚಿಸಿ, ತನ್ನ ಏರ್ಪಾಡಿನಂತೆ ನಡೆಯಿಸುವುದಕ್ಕಾಗಿ ಉಪಾಯದಿಂದ ವಿಕ್ರಮವರ್ಮನ ಸರ್ವಸೇನಾಧಿಪತ್ಯ ವನ್ನು ವಹಿಸಿ, ಕೋಟೆಯನ್ನು ಬಿಟ್ಟು ಹೊರಕ್ಕೆ ಹೊರಟುಬಂದ ಪಲ್ಲಕ್ಕಿಯನ್ನು ತಡೆದ ಸೇನಾಪತಿಗಳಿಗೆ ರೋಗಿವೇಷದಿಂದ ಮಲಗಿದ್ದ ಗರ್ಭಿಣಿಯಾದ ಪದ್ಮಾ ವತಿಯನ್ನು ತೋರಿಸಿ, ಆಕೆಯ ಗರ್ಭದಲ್ಲಿ ಗುಲ್ಮವ್ಯಾಧಿಯಿರುವುದೆಂದು ತಕ್ಕು

ಮಾಡಿ, ಅವರ ನಿರ್ಬಂಧದಿಂದ ತಪ್ಪಿಸಿ ಕಳುಹಿಸಿ, ಬಳಿಕ ಸೇನಾಪತಿಗಳನ್ನು ಮೋಸಗೊಳಿಸಿ ತಾನು ಹಿಂದೆಯೇ ಬಂದು ಪಲ್ಲಕ್ಕಿಯನ್ನು ಸಂಧಿಸಿ ಪದ್ಮಾವತೀ ದೇವಿಯನ್ನು ತಮ್ಮ ಮಿತ್ರನಾದ ಭಿಲ್ಲನಾಯಕನ ನಿವಾಸಕ್ಕೆ ತೆಗೆದುಕೊಂಡು ಹೋಗುವಂತೆಯೂ, ಅಲ್ಲಿ ಗೋಪ್ಯವಾಗಿ ಆಕೆಯನ್ನು ರಕ್ಷಿಸುತ್ತಿರುವಂತೆಯೂ ಹೇಳಿ, ಆಕೆಯನ್ನಾಭಿಲ್ಲನ ವಶಕ್ಕೆ ಒಪ್ಪಿಸುವಂತೆ ಕಟ್ಟುಮಾಡಿ ಅಲ್ಲಿಗೆ ಸ್ವಲ್ಪ ದೂರದಲ್ಲಿರುವ ಭಿಲ್ಲರ ಪಾಳೆಯಕ್ಕೆ ಕಳುಹಿಸಿ, ತಾನು ಎಡೆಬಿಡದೆ ಪಯಣದಿಂದ ವಾಮದೇವನಬಳಿಗೆ ಹೋಗುತ್ತಿರಲು ಆತನು ಹಿಂದಿರುಗಿ ಬರುತ್ತಿದ್ದ ಸತ್ಯಪ್ರಿಯಂಗಿದಿರಾದನು. ಬಳಿಕ ಆ ಇಬ್ಬರೂ ಸ್ವಲ್ಪ ಹೊತ್ತು ಸಂಭಾಷಣೆ ಮಾಡುತ್ತಿದ್ದು, ರಾಜನಿಗಾವ ಉಪದ್ರವವು ಸಂಭವಿಸುವುದೋ, ಎಂಬ ಭಯದಿಂದ ಬರುತ್ತಿರುವಷ್ಟರಲ್ಲಿ ಚಕ್ರವರ್ತಿಯು ವಿಜಯಪುರವನ್ನು ವಶಪಡಿಸಿಕೊಂಡು, ರಾಜನನ್ನು ಬಂದಿ ಹಿಡಿದನೆಂಬ ವರ್ತಮಾನವು ತಿಳಿಯಿತು. ಅವರು, ಅವನನ್ನು ಬಿಡಿಸಿಕೊಳ್ಳುವುದಕ್ಕಾಗಿ ಸನ್ನಾಹ ಮಾಡುತ್ತಿರಲು, ಹೆಣಗಳ ರಾಶಿಯಲ್ಲಿ ಅಡಗಿಕೊಂಡಿದ್ದು ತಪ್ಪಿಸಿಕೊಂಡು ಬದುಕಿದ ಶೂರಸೇನನು ಬಂದು ಅವರೊಡನೆ ಕಲೆತುಕೊಂಡನು. ಅಲ್ಲಿಂಮೇಲೆ ನಡೆಯಿಸಬೇಕಾದ ಕಾರ್ಯಗಳನ್ನು ನಿರ್ಣಯಿಸಿಕೊಂಡ ಬಳಿಕ ಅವರಲ್ಲಿ ಸತ್ಯಪ್ರಿಯನು ವಸುಪ್ರಿಯನೆಂಬ ಹೆಸರಿನಿಂದ ಚಕ್ರವರ್ತಿಯಬಳಿಯಲ್ಲಿ ಸೇರಿ ತನ್ನ ಹೇಳಿಕೆಯ ಮೇರೆ ನಡೆವಂತೆ ಅವನನ್ನು ಅಧೀನಪಡಿಸಿಕೊಂಡು, ತದ್ವಿಷಯವನ್ನು ರಹಸ್ಯವಾಗಿ ವಾಮದೇವನಿಗೆ ತಿಳಿಯಿಸಿದನು, ವಾಮದೇವನು ಯೋಗಿಯ ವೇಷದಿಂದ ಬಂದು ದೇವಾಲಯದಲ್ಲಿ ಸೇರಿ ಚಕ್ರವರ್ತಿಗೆ ಭವಿಷ್ಯದ್ವಿಚಾರವನ್ನು ತಿಳುಹಿಸಿ, ತನ್ನಲ್ಲಿ ನಂಬುಗೆಯನ್ನು ಹುಟ್ಟಿಸಿಕೊಂಡನು, ತಾನವನೊಡನೆ ಹೇಳಿದ ಸಮಯಕ್ಕೆ ಸರಿಯಾಗಿ ಶೂರಸೇನನು ಕೆಲವೀರಭಟರೊಡನೆ ಒಂದು ಪಲ್ಲಕ್ಕಿಯನ್ನೆತ್ತಿಸಿಕೊಂಡು ಬಂದು, ವಿಕ್ರಮಚಕ್ರವರ್ತಿಯ ನಗರದ ಸಮೀಪದಲ್ಲಿ ನಿಲ್ಲಿಸಿ, ತಾನು ಸ್ತ್ರೀವೇಷವನ್ನು ತಾಳಿ ಅದರಲ್ಲಿ ಕುಳಿತುಕೊಂಡಿದ್ದನು. ವಸುಪ್ರಿಯನು ತಂತ್ರವನ್ನು ಮಾಡಿ ಧರ್ಮವರ್ಮನನ್ನು ಕರೆದುಕೊಂಡು ಬಂದುಬಿಟ್ಟನು ಹೆಚ್ಚು ಮಂದಿ ಸೇವಕರಿದ್ದರೆ ತಮ್ಮ ಯತ್ನವು ನಿಷ್ಫಲವಾಗುವುದೆಂದು ಬಗೆದು, ವಾಮದೇವನು ಅಲ್ಪಜನರೊಡನೆ ಬರುವಂತೆ ಚಕ್ರವರ್ತಿಗೆ ಹೇಳಿಕಳುಹಿಸಿದ್ದು ಅವನು ಬರುವಷ್ಟರಲ್ಲಿ ಸಿದ್ಧವೇಷವನ್ನು ತೆಗೆದುಬಿಟ್ಟು ನಿಜಾಕೃತಿಯಿಂದಿದ್ದು ರಾಜನೊಡನೆ ನಂಬಿಕೆಯಾಗಿ ಮಾತನಾಡಿ ಪಲ್ಲಕ್ಕಿಯನ್ನು ಹತ್ತಿಸಿದನು, ಪಲ್ಲಕ್ಕಿ ಮತ್ತು ಯೋಧರು ತತ್ಪುರಕ್ಕೆ ಹೋಗುವುದಕ್ಕೆ ಬದಲಾಗಿ ತಮ್ಮ ನಗರಮಾರ್ಗವನ್ನು ಹಿಡಿದು ನಡೆದರು. ಅಷ್ಟರಲ್ಲಿ ಅಲ್ಲಲ್ಲಿ ಅಡಗಿಕೊಂಡಿದ್ದ ವಾಮದೇವನಕಡೆಯ ಯೋಧರು ಚಕ್ರವರ್ತಿಯ ಸೇವಕರನ್ನೂ ಪಲ್ಲಕ್ಕಿಯ ಬೋಯಿಗಳನ್ನೂ ಕೊಂದು,

ಆ ಸಮಯದಲ್ಲಿ ನಡೆದ ವಿಷಯಗಳು ಪಟ್ಟಣದಲ್ಲಿ ಯಾರಿಗೂ ತಿಳಿಯದಂತೆ ಏರ್ಪಡಿಸಿ, ಧರ್ಮವರ್ಮನ ಪಲ್ಲಕ್ಕಿಯನ್ನು ಹೊತ್ತುಕೊಂಡು ಬರಲಾರಂಭಿಸಿದರು, ಮಿಕ್ಕ ವೃತ್ತಾಂತವನ್ನೆಲ್ಲ ನೀನು ಕೇಳಿರುವೆಯಷ್ಟೆ? ಇನ್ನು ಮುಂದಣ ವೃತ್ತಾಂತವನ್ನು ಕೇಳು.

ಸತ್ಯಶೀಲನೇ! ಶ್ರೀನಗರದಲ್ಲಿ ಚಕ್ರವರ್ತಿಯು ಶತ್ರುಗಳ ಕೈಗೆ ಸಿಕ್ಕಿದ ಮಾರನೆಯ ದಿನ ಸೂರ್ಯೋದಯಾನಂತರದಲ್ಲಿ, ವೈರಿಗಳು ಮಾಯಾವೇಷಧಾರಿಗಳಾಗಿ ಬಂದು ಸಾರ್ವಭೌಮನನ್ನು ಹಿಡಿದುಕೊಂಡು ಹೋದುದೂ, ಅತನೊಡನಿದ್ದ ಸೇವಕರನ್ನು ಸಂಹರಿಸಿದುದೂ, ವಸುಪ್ರಿಯನೆಂಬವನು ಶತ್ರುಪಕ್ಷದವನೇ ಎಂಬುದೂ ಮೊದಲಾದ ಎಲ್ಲವಿಷಯಗಳೂ ಪಟ್ಟಣದ ಪ್ರಜೆಗಳೆಲ್ಲರಿಗೂ ವ್ಯಕ್ತವಾಗಿ ತಿಳಿಯಿತು, ಪಟ್ಟಣದಲ್ಲೆಲ್ಲಿಯೂ ಇದೇ ವಿಚಾರವನ್ನು ಕುರಿತು ಎಲ್ಲರೂ ಒಳಗೊಳಗೆ ಗುಸುಗುಟ್ಟುತ್ತಿದ್ದರು.

ಆಗ ಚಕ್ರವರ್ತಿಯ ಪ್ರಧಾನಮಂತ್ರಿಯಾದ ದೇವಶರ್ಮನೆಂಬಾತನು ತಮ್ಮ ಸಾರ್ವಭೌಮನಿಗಾದ ವಿಪತ್ತನ್ನು ಕುರಿತು ದುಃಖಾಕ್ರಾಂತನಾಗಿ ತನ್ನ ಮನಸ್ಸಿನಲ್ಲಿ "ಅಕಟಾ! ಮಹಾಸಮರ್ಥನೂ ಚಕ್ರವರ್ತಿಯೂ ಆದ ನಮ್ಮೊಡೆಯನಿಗೆ ಅಕಸ್ಮಾತ್ತಾಗಿ ವಿಪತ್ತು ಪ್ರಾಪ್ತವಾಯಿತಲ್ಲ! ಕಾಮಾತುರನಾದವನು ಎಂಥವನಾದರೇನು? ಇಂದ್ರನು ಅಹಲ್ಯೆಯನ್ನು ಮೋಹಿಸಿ ಗೌತಮನ ಶಾಪಕ್ಕೆ ಗುರಿಯಾದನಲ್ಲವೆ? ಶಂಕರನು ದಾರುಕಾವನದ ಮುನಿಪತ್ನಿಯರನ್ನು ಮೋಹಿಸಿ ಲಿಂಗಹೀನನಾಗಲಿಲ್ಲವೆ? ಇನ್ನು ಮನುಷ್ಯರಪಾಡೇನು? ಪರಕಾಮಿನಿಯರಮೇಲೆ ಆಸೆಪಟ್ಟವರ ಗತಿಯೆಲ್ಲವೂ ಹೀಗೆಯೇ ಅಲ್ಲವೆ? ಇನ್ನಾಲೋಚಿಸಿ ಫಲವೇನು? ಏನಾದರೂ ಉಪಾಯವನ್ನು ಮಾಡದಿದ್ದರೆ ರಾಜನಿಗೆ ಬಿಡುಗಡೆಯಾಗುವುದು ಹೇಗೆ? ದೊಡ್ಡ ಸೈನ್ಯವನ್ನು ಸೇರಿಸಿ ಧರ್ಮವರ್ಮನಮೇಲೆ ದಾಳಿಯಿಡಲೆ? ಅವನ ಮಂತ್ರಿಯಾದ ವಾಮದೇವನು ಮಹಾಚತುರನು, ನಮ್ಮೆಲ್ಲರ ಉಪಾಯಗಳೂ ತಂತ್ರಗಳೂ ಅವನೆದುರಿಗೆ ಸಾಗಲಾರವು, ಯುದ್ಧವನ್ನುಮಾಡಿ ಅವನನ್ನು ಗೆದ್ದು ಚಕ್ರವರ್ತಿಯನ್ನು ತರುವುದು ಅಸಾಧ್ಯ, ಆಗಲಿ ಯುದ್ಧದಗೋಜೇ ಬೇಡ, ಮಿತಪರಿವಾರದೊಡನೆ ವಿಜಯನಗರಕ್ಕೆ ಹೋಗಿ ಅವನೊಡನೆ ಈಗ ಸಂಧಿಮಾಡಿಕೊಳ್ಳುವುದೊಳ್ಳಿತೆಂದು ತೋರುವುದು" ಎಂದು ದೀರ್ಘಾಲೋಚನೆಯನ್ನು ಮಾಡಿ ಮಿತ್ರಪರಿವಾರದೊಡನೆ ಹೊರಟು ಧರ್ಮವರ್ಮನ ರಾಜಧಾನಿಗೆ ಬಂದು, ತನ್ನ ಆಗಮನವನ್ನು ಧರ್ಮವರ್ಮನಿಗೂ ಆತನ ಮಂತ್ರಿವರ್ಗಕ್ಕೂ ತಿಳಿಯಪಡಿಸಿದನು.

ಅಲ್ಪಪರಿವಾರದೊಡನೆ ಚಕ್ರವರ್ತಿಯ ಸಚಿವಶ್ರೇಷ್ಠನು ಬಂದಿರುವುದು ರಾಜನಿಗೂ ಸಚಿವರಿಗೂ ತಿಳಿಯಿತು, ಆತನು ಉಭಯರಿಗೂ ಸಮಾಧಾನವನ್ನು ಮಾಡಿ ಶಾಂತಿಯನ್ನು ನೆಲಿಗೊಳಿಸಲಿಚ್ಛಿಸಿ ಬಂದಿರಬಹುದೆಂದು ಭಾವಿಸಿ, ಆತನನ್ನು ಗೌರವವಾಗಿ ಕರೆದುಕೊಂಡು ಬರುವುದಕ್ಕೆ ತಕ್ಕ ಅಧಿಕಾರಿಗಳನ್ನು ಕಳುಹಿಸಿ ಬರಮಾಡಿಕೊಂಡು ಉಚಿತೋಪಚಾರಗಳಿಂದ ಸತ್ಕರಿಸಿದರು. ದೇವಶರ್ಮನು ತಾನುಬಂದ ಕಾರ್ಯವನ್ನು ವಿಶದವಾಗಿ ಹೇಳಿ ಚಕ್ರವರ್ತಿಯ ಅಕ್ರಮವನ್ನು ಕುರಿತು ವಿಷಾದಗೊಂಡು, ಆತನು ತನ್ನ ಹಿತೋಪದೇಶವನ್ನು ಕೇಳದೆ ಈ ದುರವಸ್ಥೆಗೊಳಗಾದನೆಂದು ನುಡಿದು ಹೀಗೆಂದನು.

“ ರಾಜಾಗ್ರಣೀ ! ಮಂತ್ರಿಪುಂಗ ! ಕಳೆದುದನ್ನು ಚಿಂತಿಸಿ ಫಲವಿಲ್ಲ ನನ್ನ ಪ್ರಾರ್ಥನೆಯನ್ನು ಲಾಲಿಸಿ ನಮ್ಮ ಚಕ್ರವರ್ತಿಯ ಅಪರಾಧವನ್ನು ಮನ್ನಿಸಿ. ಇನ್ನುಮೇಲೆ ನೀವು ಪರಸ್ಪರ ವಿರೋಧವನ್ನುಳಿದು ಕ್ಷೀರೋದಕಂಗಳಂತೆ ವರ್ತಿಸುತ್ತಿರಬೇಕೆಂದು ನನ್ನ ಕೋರಿಕೆ, ಈಗ ನಂಬಿಕೆಯಾಗಿಯೂ, ಪ್ರಮಾಣಪುರಸ್ಸರವಾಗಿಯೂ, ಸಂಧಿಪತ್ರದಮೂಲಕವಾಗಿ ಪರಸ್ಪರ ಸ್ನೇಹವಾಕ್ಯಗಳನ್ನು ಸ್ಥಿರಪಡಿಸಿ, ನಮ್ಮ ದೊರೆಯನ್ನು ಬಿಟ್ಟುಕೊಡಬೇಕು ಇದೇ ನನ್ನ ವಿಜ್ಞಾಪನೆ. ”

ಹೀಗೆ ಬೇಡಿಕೊಂಡಬಳಿಕ ನೀತಿಶಾಸ್ತ್ರಪಾರಂಗತನಾದ ವಾಸುದೇವನು, ಗುಣಶಾಲಿಯೂ ಸಾಧುವರ್ತನವುಳ್ಳವನಾಗಿಯೂ ಇರುವ ದೇವಶರ್ಮನ ಮಾತುಗಳಲ್ಲಿ ಗೌರವವನ್ನಿಟ್ಟು, ತಮ್ಮ ರಾಜನಾದ ಧರ್ಮವರ್ಮನ ಅನುಜ್ಞೆಯನ್ನು ಪಡೆದು, ಚಕ್ರವರ್ತಿಯನ್ನು ಸೆರೆಯಿಂದ ಬಿಡಿಸಿತಂದು ಮಂತ್ರಿಪುಂಗವನಿಗೊಪ್ಪಿಸಿದನು. ಈಪ್ರಕಾರವಾಗಿ ಚಕ್ರವರ್ತಿಯು ಅವಮಾನವನ್ನು ಪಡೆದು, ತಾನು ಮಾಡಿದ ದುಷ್ಕಾರ್ಯಕ್ಕಾಗಿಯೂ ತನ್ನಲ್ಲಿ ಧರ್ಮವರ್ಮನು ತೋರಿಸಿದ ಮರ್ಯಾದೆಗಾಗಿಯೂ ಪಶ್ಚಾತ್ತಾಪವನ್ನು ತಾಳಿ, ಮಾತನಾಡುವುದಕ್ಕೆ ಬಾಯಿಬಾರದೆ ನಾಚಿಕೆಯಿಂದ ತಲೆಯನ್ನು ಬಾಗಿಸಿಕೊಂಡು ತನ್ನ ಪಟ್ಟಣಕ್ಕೆ ತೆರಳಿದನು. ಬಳಿಕ ಧರ್ಮವರ್ಮನು ತನ್ನ ಹೆಂಡತಿಯನ್ನು ಕರೆಯಿಸಿ, ಅವಳ ಇಷ್ಟಪ್ರಕಾರವಾಗಿ ವಿಕ್ರಮವರ್ಮನಂತೆ ಲೋಹಪ್ರತಿಮೆಯನ್ನು ಮಾಡಿಸಿ, ಪುರಮಧ್ಯದಲ್ಲಿ ಶಿಲಾಸ್ತಂಭಗಳ ನಡುವೆ ತಲೆಕೆಳಗಾಗಿ ನೇತಾಡುವಂತೆ ಕಟ್ಟಿಸಿ “ ಪರಕಾಮಿನಿಯರನ್ನಪೇಕ್ಷಿಸುವ ಪಾಪಿಗಳು, ಈ ವಿಕ್ರಮವರ್ಮನುಪಟ್ಟ ಕಷ್ಟಗಳಿಗೊಳಗಾಗಿ ಅಧೋಗತಿಯನ್ನು ಪಡೆವರು ” ಎಂದು ಜನರಿಗೆ ತಿಳಿಸುವುದಕ್ಕಾಗಿ ಸ್ಥಿರವಾಗಿರುವಂತೆ ಮಾಡಿರುವರು, ಬಳಿಕ ಅನೇಕ ಶತಾಬ್ದಗಳು ಕಳೆದುಹೋದುದರಿಂದ ಆಗಿನ ಪಟ್ಟಣಗಳೆಲ್ಲ ನಾಶಹೊಂದಿದುವು, ವಿಜಯನಗರವೂ ಕ್ರಮಕ್ರಮವಾಗಿ ಹಾಳಾಗಿ ಈಗ ಈ ಹಳ್ಳಿಯು ಏರ್ಪಟ್ಟಿರುವುದು, ಪಟ್ಟಣವು ನಾಶ

ವಾದರೂ ಧರ್ಮವರ್ಮಕಲ್ಪಿತಗಳಾದ ಈ ಕುರುಹು ಮಾತ್ರ ಕೆಡದೆ ಸ್ಥಿರವಾಗಿ ನಿಂತಿರುವುದು.

ಪ್ರಿಯಶಿಷ್ಯನೆ! ಕೇಳಿದೆಯಾ? "ಅವಶ್ಯಮನುಭೋಕ್ತವ್ಯಂ ಕೃತಂಕರ್ಮ ಶುಭಾಶುಭಂ | ನಾಭುಕ್ತಂಕ್ಷೀಯತೇಕರ್ಮ ಕಲ್ಪಕೋಟಿಶತೈರಪಿ ||" ಎಂಬಂತೆ ನಾವು ಮಾಡಿದ ಶುಭಾಶುಭ ಕರ್ಮಗಳ ಫಲವನ್ನು ನಾವೆ ಅವಶ್ಯವಾಗಿ ಅನುಭವಿಸಬೇಕು, ಅನುಭವಿಸದೆ ಸಾವಿರಾರು ಕಲ್ಪಗಳಾದರೂ ಆ ಕರ್ಮವು ಕ್ಷಯಿಸುವುದಿಲ್ಲ, ನಿನ್ನ ಪ್ರಶ್ನೆಗೆ ಉತ್ತರವು ತಿಳಿಯಿತಲ್ಲವೆ? ಎಂದನು.

ಶಿಷ್ಯನಾಶ್ಚರ್ಯಪಟ್ಟು ಅಂದಿನ ಉಚಿತಕೃತ್ಯಗಳನ್ನು ತೀರಿಸಿಕೊಂಡು ಮಲಗಿ ನಿದ್ರಿಸಿದನು.

ಇಂತು ಮೊದಲನೆಯ ದಿನದ ಕಥೆಯು ಸಂಪೂರ್ಣಂ.



ನಮಃಕಲ್ಯಾಣರೂಪಾಯ ಕಲ್ಯಾಣಗುಣಶಾಲಿನೇ |
ಕಲ್ಯಾಣಾದ್ರಿನಿವಾಸಾಯ ಕಲ್ಯಾಣಾಂಬರಧಾರಿಣೇ ||

## —: ಎರಡನೆಯ ದಿನದ ಕಥೆ. :—



ಗುರುಶಿಷ್ಯರು ಮೊದಲನೆಯ ದಿನವನ್ನು ಆ ಹಳ್ಳಿಯಲ್ಲಿ ಕಳೆದರಷ್ಟೆ? ಮಾರನೆಯ ದಿನ ಚಿದಾನಂದಯೋಗಿಯು ಉಷಃಕಾಲಕ್ಕೆದ್ದು ಕಾಲೋಚಿತಕೃತ್ಯಗಳಂ ನಿರ್ವರ್ತಿಸಿ, ತನ್ನ ಕರ್ತ್ಯಗಳನ್ನು ಮುಗಿಸಿ ಸಿದ್ಧನಾಗಿದ್ದ ಶಿಷ್ಯನೊಡನೆ ಪ್ರಯಾಣವಾಗಿ ಮಧ್ಯಾಹ್ನಕಾಲದವರೆಗೆ ೮ ಗಂಟೆಗಳಕಾಲ ನಡೆದು ಒಂದು ತರಂಗಿಣಿಯ ದಡವಲ್ಲಿ ಹಾಳುಬಿದ್ದಿದ್ದ ಒಂದು ಶಿವಾಲಯದ ಬಳಿಗೆ ಬಂದು ಸೇರಿದನು, ಶಿಷ್ಯನಾದ ಸತ್ಯಶೀಲನು ತನ್ನ ಗುರುವಿನ ಅಪ್ಪಣೆಯನ್ನು ಪಡೆದು, ಸಮೀಪದಲ್ಲಿದ್ದ ವೇರೂಳವೆಂಬ ಗ್ರಾಮಕ್ಕೆ ಹೋಗಿ, ಅಡಿಗೆಗೆ ಬೇಕಾಗುವ ಎಲ್ಲಸಾಮಗ್ರಿಯನ್ನೂ ಪಾತ್ರೆಗಳನ್ನೂ ತಂದು, ಆ ಹೊಳೆಯಲ್ಲಿ ಸ್ನಾನ ಮಾಡಿ ಅಡಿಗೆಯನ್ನು ಸಿದ್ಧಪಡಿಸಿದನು, ಯೋಗಿಪುಂಗವನು ಮಾಧ್ಯಾಹ್ನಿಕವಿಧಿಗಳನ್ನು ಮುಗಿಸಿ, ಬಂದು ಕುಳಿತು ಭೋಜನವನ್ನು ಮಾಡಿ ಸ್ವಲ್ಪಕಾಲ ವಿಶ್ರಮಿಸಿಕೊಂಡನು, ಶಿಷ್ಯನಾದರೋ ತನ್ನ ಊಟವನ್ನು ತೀರಿಸಿಕೊಂಡು ಪಾತ್ರೆಗಳನ್ನು ಶುದ್ಧಿಮಾಡಿಟ್ಟು, ಅಲ್ಲಿಗೆಬಂದ ಒಬ್ಬ ಆಳಿನಮೂಲಕವಾಗಿ ಆ ಪಾತ್ರೆಗಳನ್ನು ತನಗೆ ಕೊಟ್ಟಿದ್ದವರಿಗೆ ಕೊಟ್ಟುಕಳುಹಿಸಿ, ಗುರುವಿನ ಬಳಿಗೆ ಬಂದು ಪಾದಗಳನ್ನೊತ್ತುತ್ತ ಕೆಲಹೊತ್ತು ಸೇವೆಯನ್ನು ಮಾಡಿ, "ಆಚಾರ್ಯವರ್ಯ! ಈ ದೇವಾಲಯವನ್ನು ಯಾವನೋ ಸುಪ್ರಸಿದ್ಧನಾದ ಶಿಲ್ಪಶಾಸ್ತ್ರ ನಿಪುಣನಾದವನು

ಕಟ್ಟಿರುವಂತೆ ತೋರುವುದು, ಪ್ರದಕ್ಷಿಣಪೂರ್ವಕವಾಗಿ ಸುತ್ತಲೂ ಪರಿಕಿಸಿದರೆ ಅವನು ಸಾಕ್ಷಾದ್ದೇವಶಿಲ್ಪಿಯೋ ಎಂಬಂತೆ ತೋರುತ್ತಿರುವುದು, ಭಾರತ ಭಾಗವತ ರಾಮಾಯಣದ ಕಥೆಗಳನ್ನೆಲ್ಲಾ ಕಣ್ಣಿನಮುಂದೆ ನಡೆದಂತೆ ವಿಗ್ರಹರೂಪವಾಗಿ ಕೆತ್ತಿರುವನು, ಸ್ವಾಮಿಾ ! ನನ್ನಿಂದ ಆ ಶಿಲ್ಪನೈಪುಣ್ಯವನ್ನು ಬಣ್ಣಿಸಲು ಆಗಲಾರದು, ತಾವು ಒಂದುಸಾರಿ ನೋಡಿಬಂದರೆ ಚೆನ್ನಾಗಿ ವರ್ಣಿಸಬಲ್ಲಿರಿ, ದೇವಾಲಯದ ಕೆಲಸವು ಮಹಾಕವಿ ಸ್ತುತ್ಯವಾದುದಾಗಿದ್ದರೂ, ಪೂಜಾಸ್ಥಾನದಲ್ಲಿ ಯಾವುದೊಂದು ಕುರುಹೂ ಇರುವುದಿಲ್ಲ, “ ಇದು ಶಿವದೇವಸ್ಥಾನವೋ ! ವಿಷ್ಣುದೇವಾಲಯವೋ ! ” ಎಂಬುದನ್ನು ಹೇಳುವುದಕ್ಕೇ ಸಾಧ್ಯವಿಲ್ಲ, ಹೀಗೆ ಈ ಅಂದವಾದ ದೇವಮಂದಿರವು ಸರ್ವಶೂನ್ಯವಾಗಿರುವುದಕ್ಕೇನು ಕಾರಣವು? ದಯವಿಟ್ಟು ಹೇಳಬೇಕೆಂದು ಪ್ರಾರ್ಥಿಸುವೆನು, ಹೇಗಿದ್ದರೂ ಕಾಲುನಡಿಗೆಯಿಂದ ಪ್ರಯಾಣಮಾಡುತ್ತ ಒಂದೊಂದುಕಡೆ ಒಂದೊಂದು ದಿನ ತಂಗಬೇಕಾಗಿರುವುದಷ್ಟೆ ? ತಂಗಿದಕಡೆಯಲ್ಲಿ ದಯವಿಟ್ಟು ಒಂದೊಂದು ಕಥೆಯನ್ನು ಹೇಳಬೇಕೆಂದು ನನ್ನ ಕೋರಿಕೆ, ಗುರುದೇವ ! ನಿನ್ನೆಯ ಕಥೆಯು ಶುಶ್ರೂಷುಗಳಿಗೆ ಅತ್ಯಾಶ್ಚರ್ಯವನ್ನುಂಟುಮಾಡುವ ಮತ್ತು “ ಪರಕಾಂತಾರತಿಯು ಪ್ರಾಣಹಾನಿಕರ, ಮತ್ತು ಪಾಪಪ್ರದ” ಎಂಬುದನ್ನು ಬೋಧಿಸುವ ನೀತಿಯುಕ್ತವಾದ ಕಥೆಯಾಗಿದ್ದಿತು ” ಎಂದು ಮೃದುಮಧುರ ವಾಕ್ಕುಗಳಿಂದ ಕೇಳಿದನು, ಚಿದಂಬರಯೋಗಿಯು ತಾನಾಚರಿತ್ರವನ್ನು ಸಾಕ್ಷಾತ್ತಾಗಿ ಕಂಡರಿಯದವನಾದರೂ, ಜ್ಞಾನಚಕ್ಷುಸ್ಸಿನಿಂದ ಆ ವೃತ್ತಾಂತವನ್ನೆಲ್ಲ ಪ್ರತ್ಯಕ್ಷವಾಗಿ ತಿಳಿದು ಹೇಳಲಾರಂಭಿಸಿದನು.

## ಚಂದ್ರಗುಪ್ತನೆಂಬ ವೈಶ್ಯನ ಆಶೆಯನ್ನು ಕುರಿತ ಕಥೆ.

ವತ್ಸ ! ಸತ್ಯಶೀಲ ! ಲಾಲಿಸು, ಈ ದೇವಾಲಯದ ಸುತ್ತಲೂ ಪೂರ್ವದಲ್ಲಿ ಒಂದು ಪಟ್ಟಣವಿದ್ದಿತು. ಅದರ ಹೆಸರು ಕುಸುಮನಗರ ಪಟ್ಟಣವು ವರ್ತುಲಾಕಾರವಾಗಿದ್ದು ನಡುವೆ ಉನ್ನತವಾದ ಈ ದೇವಾಲಯವು ಕಿಂಜಲ್ಕದಂತೆ ಕಾಣುತ್ತಿದ್ದುದರಿಂದ ಇದಕ್ಕೆ ಕುಸುಮಪುರವೆಂದು ಹೆಸರನ್ನು ಕೊಟ್ಟಿದ್ದರು, ಇದರ ಸುತ್ತಲೂ ಎಸಳುಗಳಂತೆ ಬೀದಿಗಳು ದೀರ್ಘಗಳಾಗಿದ್ದುವು, ಪ್ರತಿಬೀದಿಯವರು ಪ್ರಾತಃಕಾಲದಲ್ಲೆದ್ದು ಬಾಗಿಲಲ್ಲಿ ನಿಂತರೆ ಅಲ್ಲಿಗೆ ಕಾಣುವ ದೇವಾಲಯದ ಕನಕ ಕಲಶಯುಕ್ತವಾದ ವಿಮಾನವನ್ನು ಕಂಡು ನಮಸ್ಕರಿಸಿ ಅವರವರ ನಿತ್ಯಕೃತ್ಯಗಳಿಗೆ ಹೋಗುತ್ತಿದ್ದರು. ಬ್ರಾಹ್ಮಣಾದಿ ನಾನಾವರ್ಣದವರಿಗೆ ಆ ಪಟ್ಟಣವು ಆಶ್ರಯವಾಗಿ ಸುಖದಾಯಕವಾಗಿದ್ದಿತು, ಎಲ್ಲರೂ ಕೂಡಿದಮಟ್ಟಿಗೆ ಅನ್ನವಸ್ತ್ರಗಳಿಗೆ ತಕ್ಕ ಉಪಪತ್ತಿಯುಳ್ಳವರಾಗಿಯೇ ಇದ್ದರು. ಆದರೆ ಪುರಾಕೃತಕರ್ಮವಶದಿಂದ ನಿತ್ಯವೂ ಬಹಳ ಬಡತನದಿಂದ ಪೀಡಿತನಾದ

"ಶಿವಶರ್ಮ" ನೆಂಬ ಬ್ರಾಹ್ಮಣನೊಬ್ಬನು ಉಡಲುಣಲು ಲೇಶಮಾತ್ರವೂ ಇಲ್ಲದೆ ಒಂದುದಿನವನ್ನೊಂದು ಸಂವತ್ಸರದಸ್ನಾಗಿ ಕಳೆಯುತ್ತಿದ್ದನು. ಆತನಿಗೆ ಒಬ್ಬ ಹೆಂಡತಿಯೂ ಐದುಮಂದಿ ಮಕ್ಕಳೂ ಇರುತ್ತಿದ್ದರು, ಈ ಮಹಾ ಕುಟುಂಬ ವನ್ನು ಸಂರಕ್ಷಿಸುವುದಕ್ಕೆ ಯಾವ ಯಾವ ವೃತ್ತಿಯನ್ನೊ ಅವಲಂಬಿಸಿ ನೋಡಿ ದನು, ಆದರೂ ಸಾಕಾಗುವಷ್ಟು ದೊರೆಯುತ್ತಿರಲಿಲ್ಲ, ಆದುದರಿಂದ ಕೊನೆಗೆ ಯಾಯಾ ವರವೃತ್ತಿಯನ್ನವಲಂಬಿಸಿದನು, ಈತನು ತರ್ಕಮುಟ್ಟಿಗೆ ವಿದ್ಯಾವಂತ ನಾಗಿದ್ದನು, ಉಪನಿಷತ್ತುಗಳನ್ನೂ ಭಗವದ್ಗೀತೆಯನ್ನೂ ಭಾರತಾದಿ ಗ್ರಂಥಗ ಳನ್ನೂ ಚೆನ್ನಾಗಿ ಅಭ್ಯಸಿಸಿದ್ದನು, ಒಂದು ದಿನ ತನ್ನ ದಾರಿದ್ರ್ಯಕ್ಕೆ ಕಾರಣವೇ ನೆಂದು ಆಲೋಚಿಸಿ,

"ಅದಾನದೋಷೇಣ ಭವೇದ್ದರಿದ್ರೋ |
ದಾರಿದ್ರ್ಯದೋಷೇಣ ಕರೋತಿಪಾಪಂ |
ಪಾಪಾದವಶ್ಯಂ ನರಕಂಪ್ರಯಾತಿ |
ಪುನರ್ದರಿದ್ರಃ ಪುನರೇವಪಾಪೀ ||"

ಅರ್ಥ—"ಪೂರ್ವಜನ್ಮದಲ್ಲಿ ಯಾರಿಗೂ ಕೊಡದಿದ್ದ ಪಾಪದಿಂದ ಬಡವ ನಾಗಿ ಹುಟ್ಟುವನು, ಬಡತನದ ದೋಷದಿಂದ ಪಾಪವನ್ನು ಮಾಡುವನು ಪಾಪ ದಿಂದ ನರಕಪ್ರಾಪ್ತಿಯಾಗುವುದು, ಮರಳಿ ಹುಟ್ಟಿದರೆ ಬಡವನಾಗಿಯೇ ಹುಟ್ಟು ವನು."

ಈ ಅರ್ಥವನ್ನು ಮನಸ್ಸಿಗೆ ತಂದು, "ಓಹೋ ! ಹೀಗೆ ಈ ದಾರಿದ್ರ್ಯವು ನನ್ನನ್ನು ಪೀಡಿಸುತ್ತಿದ್ದರೂ ಪಾಪವನ್ನು ಮಾಡದೆ ಪರಮೇಶ್ವರನಮೇಲೆ ಭಾರ ವನ್ನು ಹಾಕಿ ತಿರಿಕೆಯಿಂದಲೇ ಕಾಲಯಾಪನವನ್ನು ಮಾಡುವೆನು, ತೃಪ್ತಿಯಿಲ್ಲ ದಿದ್ದರೆ ಲೋಕದಲ್ಲಿ ಸುಖವಿಲ್ಲ, ನಾನು ಯದೃಚ್ಛಾಲಾಭ ಸಂತುಷ್ಟನಾಗಿ ಜೀವನ ವನ್ನು ನಡೆಯಿಸಿಕೊಳ್ಳುವೆನು, ಬೇಡುವುದೆಂದರೆ ಅಷ್ಟಕಷ್ಟಗಳಲ್ಲೊಂದೆಂಬು ದನ್ನು ಚೆನ್ನಾಗಿ ಬಲ್ಲೆನು, ಏನುಮಾಡುವುದು ? ಅದನ್ನುಬಿಟ್ಟರೆ ಬೇರೆ ಗತಿಯೇ ಇಲ್ಲ.

"ಗತೇರ್ಭಂಗಃಸ್ವರೋಹೀನೋ ಗಾತ್ರೇಸ್ವೇದೋಮಹದ್ಭಯಂ |
ಮರಣೇಯಾನಿಚಿಹ್ನಾನಿ ತಾನಿಚಿಹ್ನಾನಿಯಾಚಕೇ ||"

[ಅರ್ಥ—ತೊಡಕು ನಡಿಗೆ, ಕಡಿಮೆಯಾದ ಧ್ವನಿ, ಮೈಯಲ್ಲಿ ಬೆವರು, ಹೆಚ್ಚಾದ ಹೆದರಿಕೆ ಹೀಗೆ ಯಾಚಕನಲ್ಲಿ ಮರಣಕಾಲದಲ್ಲಿ ಉಂಟಾಗುವ ಚಿಹ್ನೆ ಗಳೇ ಆಗುತ್ತವೆ.]

ಎಂಬಂತೆ ಮರಣದ ಗುರುತುಗಳೇ ಬೇಡುವ ಕಾಲದಲ್ಲಿ ಉಂಟಾಗುತ್ತವೆ, ಬಡತನವೆಂಬ ಚಿಂತೆಯ ತಾಪವನ್ನು ಸಂತೋಷವೆಂಬ ನೀರಿನಿಂದ ಆರಿಸಬ

ಹುದು, ಆದರೆ * " ಬೇಡಿದಾಗ ಗೃಹಸ್ಥನು ಇಲ್ಲವೆಂದು ಹೇಳಿದರೆ ಯಾಚಕನ ಹೃದಯದಲ್ಲಿ ಉಂಟಾಗುವ ಅಂತರ್ದಾಹವು ಯಾವುದರಿಂದಲೂ ಶಮನವಾಗ ಲಾರದು " ಎಂದು ಒಬ್ಬ ಕವಿಯು ಹೇಳಿರುವನು ಇದು ಸತ್ಯವೇಸರಿ ಎಂದು ಶಿವಶರ್ಮನು ಭಾವಿಸಿ, ಬಡತನವು ಕಷ್ಟವಾದರೂ ಅದರಕಡೆಗೆ ಲಕ್ಷ್ಯವನ್ನುಕೊಡದೆ, ಪ್ರತಿದಿನವೂ ಯಾಯಾ ವಾರವೃತ್ತಿಯಜತೆಗೆ ಮತ್ತೊಂದು ವ್ಯಾಪಾರವ ನಿಟ್ಟುಕೊಂಡಿದ್ದನು ಏನೆಂದರೆ:— ಪ್ರಾತಃಕಾಲದ ನಿತ್ಯಕೃತ್ಯಗಳನ್ನು ಮುಗಿಸಿ, ಮನೆಯಲ್ಲಿ ದೇವತಾರ್ಚನನವನ್ನು ಮಾಡಿ, ಭಿಕ್ಷಾಪಾತ್ರವನ್ನು ದೇವರಮುಂದೆ ಇಟ್ಟು ನಮಸ್ಕಾರಮಾಡಿ, ಮನೆಯನ್ನು ಬಿಟ್ಟು ಹೊರಟು ಈ ಶಿವಾಲಯಕ್ಕೆ ಬಂದು, ಒಂದುಸೂರ ಎಂಟುಸಾರಿ ಪ್ರದಕ್ಷಿಣಗಳನ್ನು ಮಾಡಿ

" ಚಂದ್ರಾನಸಾರ್ಧದೇಹಾಯ ಚಂದ್ರಾಂಶುಪಿತಮೂರ್ತಯೇ |
ಚಂದ್ರಾರ್ಕಾನಲನೇತ್ರಾಯ ಚಂದ್ರಾರ್ಧಶಿರಸೇನಮಃ || "

" ಅಹಿಭೂಷಣೋಪ್ಯಭಯದಃ ಸುಕಲಿತಹಾಲಾಹಲೋಪಿಯೋನಿತ್ಯಃ |
ದಿಗ್ವಸನೋಪ್ಯಖಿಲೇಶಸ್ತಂ ವಂದೇಹಂಶಶಾಂಕದಲಮಸ್ತಂ || "

ಎಂದು ಶಿವಸ್ತುತಿಯನ್ನು ಮಾಡಿ,

" ಹರಕಂಠಗ್ರಹಾನಂದ ಮೀಲಿತಾಕ್ಷೀಂನಮಾಮ್ಯುಮಾಂ |
ಕಾಲಕೂಟವಿಷಸ್ಪರ್ಶ ಜಾತಮೂರ್ಛಾಗಮಾಮಿವ || "

" ಸರಿಗಮಪಧನಿಸತಾಂ - ವೀಣಾಸಂಕ್ರಾಂತಕಾಂತಹಸ್ತಾಂತಾಂ |
ಶಾಂತಾಂಮೃದುಲಸ್ವಾಂತಾಂ - ಕುಚಭರತಾಂತಾಂನಮಾಮಿ ಶಿವಕಾಂತಾಂ || "

" ಆಲಂಬೇಜಗದಾಲಂಬೇ ಹೇರಂಬಚರಣಾಂಬುಜೇ |
ಶುಷ್ಯಂತಿಯದ್ರಜಸ್ಸ್ಪರ್ಶಾತ್ಸದ್ಯಃ ಪ್ರತ್ಯೂಹವಾರ್ಧಯಃ || "

" ಅಂತರಾಯ ತಿಮಿರೋಪಶಾಂತಯೇ |
ಶಾಂತಪಾವನ ಮಚಿಂತ್ಯವೈಭವಂ |
ತನ್ನರಂವಪುಷಿ ಕುಂಜರಂಮುಖೇ |
ಮನ್ಮಹೇಕಿಮಪಿ ತುಂದಿಲಂಮಹಃ || "

ಎಂದು ಗಣಪತಿಯನ್ನು ಹೊಗಳಿ,

" ಕಂಠಾಲಂಕಾರಘಂಟಾಘಣಘಣರಣಿತಾಧ್ಮಾತರೋದಃಕಟಾಹಃ |
ಕಂಠೇಕಾಲಾಧಿರೋಹೋಚಿತಘನಸುಭಗಂಭಾವುಕಸ್ನಿಗ್ಧಪೃಷ್ಠಃ |
ಸಾಕ್ಷಾದ್ಧರ್ಮೋವಪುಷ್ಮಾನ್ಧವಲಕಕುದನಿರ್ಧೂತಕೈಲಾಸಕೂಟಃ |
ಕೂಟಸ್ಥೋನಃಕಕುದ್ಮಾನ್ನಿಬಿಡತರತಮಸ್ತೋಮತೃಷ್ಣಾಂವಿತೃಷ್ಣಾತ್ || "

* " ದಾರಿದ್ರ್ಯಾನಿಲಸಂತಾಪ ಶ್ಯಾಂತಸ್ಸಂತೋಷವಾರಿಣಾ |
ಯಾಚಕಾಶಾವಿಘಾತಾಂತ ರ್ದಾಹಃಕೇನೋಪಶಾಮ್ಯತಿ || "

ಎಂದು ನಂದೀಶ್ವರನನ್ನು ಪ್ರಾರ್ಥಿಸಿ, ತರುವಾಯ ಪಟ್ಟಣದೊಳಕ್ಕೆ ಹೋಗಿ ಯಾಯಾವಾರ ಮಾಡುತ್ತಿದ್ದನು, ಇದು ಆ ವಿಪ್ರವರ್ಯನ ನಿತ್ಯಾಚಾರ.

ಹೀಗೆ ಕೆಲವುದಿನಗಳು ಕಳೆದಬಳಿಕ, ಒಂದು ದಿನ ಎಂದಿನಂತೆ ಉದಯ ಕಾಲದಲ್ಲಿ ತನ್ನ ಕಾಲ್ಯಕೃತ್ಯಗಳನ್ನು ಪೂರಯಿಸಿಕೊಂಡು ಶಿವಾಲಯಕ್ಕೆ ಬಂದು ಪದ್ಧತಿಯಪ್ರಕಾರ ಶಿವನಿಗೆ ಪ್ರದಕ್ಷಿಣಗಳನ್ನು ಮಾಡಿ ನಮಸ್ಕರಿಸಿ, ಊರಿನ ಒಳಕ್ಕೆ ಹೋದನು. ಆಗ ಚಂದ್ರಗುಪ್ತನೆಂಬ ಆ ಪತ್ತನದ ಧನಿಕನೊಬ್ಬನು ದೇವಾಲಯ ಪ್ರಾಕಾರದ ಹಿಂದುಗಡೆ ಪ್ರವಹಿಸುತ್ತಿದ್ದ ಹೊಳೆಗೆ ಬಂದು ದಡದಲ್ಲಿ ಕುಳಿತು ದಂತಧಾವನವನ್ನು ಮಾಡಿಕೊಳ್ಳುತ್ತಿದ್ದನು. ಆ ಶಿವಶರ್ಮನು ಹೊರಟುಹೋದಮೇಲೆ ಪ್ರಾಕಾರವನ್ನು ದಾಟಿ ದೇವಾಲಯದಕಡೆಗೆ ಬಂದು ಪ್ರದಕ್ಷಿಣವನ್ನು ಮಾಡಿ ದ್ವಾರದಬಳಿಗೆ ಬಂದನು. ಭಕ್ತಿಯಿಂದ ವಿಭೂತಿಧಾರಣೆಯನ್ನು ಮಾಡಿ ಶಿವನನ್ನು ಸ್ತುತಿಸುತ್ತಿರುವಷ್ಟರಲ್ಲಿ ಒಳಗೆ "ನಂದಿಕೇಶ್ವರ! ನಂದಿಕೇಶ್ವರಾ!" ಎಂದೊಂದು ಧ್ವನಿಯುಂಟಾಯಿತು ಚಂದ್ರಗುಪ್ತನೆಂಬ ವಣಿಕ್ಪುಂಗವನು ಆ ಧ್ವನಿಯನ್ನು ಕೇಳಿದನು, ಒಡನೆಯೇ! ಬೆಚ್ಚಿಬಿದ್ದು "ಏನಿದು? ಇಲ್ಲಿ ಯಾರೂ ಇಲ್ಲ! ಅರ್ಚಕರು ಇನ್ನೂ ಬಾಗಿಲನ್ನು ತೆಗೆದಿಲ್ಲ! ಒಳಗೆ ಈ ಶಬ್ದವಾಗುವುದಕ್ಕೆ ಕಾರಣವೇನು? ಯಾರಾದರೂ ಇರಬಹುದೆ? ಏನು ನಡೆವುದೋ ಇಲ್ಲಿಯೇ ಇದ್ದು ಆಲಿಸುವ!" ಎಂದಾಲೋಚಿಸಿ ಸಾವಧಾನನಾಗಿ ಬಾಗಿಲಬಳಿ ನಿಂತು ಕೇಳುತ್ತಿದ್ದನು. ಮತ್ತೆ "ಓ ನಂದೀ! ನಂದಿಕೇಶ್ವರ" ಎಂಬ ಶಬ್ದವು ಕೇಳಿಸಿತು, ಆಗ ನಂದಿಯು "ಮಹಾದೇವ! ಸೇವಕನಾದ ನಂದಿ ಇಲ್ಲಿರುತ್ತಾನೆ ಅಪ್ಪಣೆಯನ್ನು ನಿರೀಕ್ಷಿಸುತ್ತಿವಾನೆ ಏನಪ್ಪಣೆ ಎಂದನು. ಮಹಾದೇವನು ನಂದಿಕೇಶ್ವರಾ! ಮತ್ತೇನೂ ಇಲ್ಲ ಕೇಳು, ಶಿವಶರ್ಮನೆಂಬ ಬಡಪಾರ್ವನೊಬ್ಬನು ಪ್ರತಿದಿನವೂ ಪ್ರಾತಃಕಾಲ ಇಲ್ಲಿಗೆ ಬಂದು ನೂರೆಂಟುಸಾರಿ ಪ್ರದಕ್ಷಿಣ ಮಾಡಿ ಬಾಗಿಲಮುಂದೆ ನಿಂತು ನನಗೆ ನಮಸ್ಕಾರಮಾಡಿ ಹೊರಟುಹೋಗುತ್ತಾನೆ, ಪ್ರದಕ್ಷಿಣವನ್ನು ಮಾಡುವಾಗ ನನ್ನ ಸಹಸ್ರನಾಮಗಳನ್ನೂ ಜಪಿಸುತ್ತಾನೆ, ನಾಮಪಠನವನ್ನು ಭಕ್ತಿಪೂರ್ವಕವಾಗಿ ಮಾಡುತ್ತಿರುವುದರಿಂದ ಅವನಿಗೆ ಸಾಯುಜ್ಯವನ್ನು ಕೊಟ್ಟುಬಿಡುತ್ತೇನೆ, ಆದರೆ ಈ ಜನ್ಮದಲ್ಲಿ ಹೀಗೆ ಅವನು ಬಡವನಾಗಿರುವುದು ನನಗೆ ರುಚಿಸುತ್ತಿಲ್ಲ, ನನ್ನನ್ನು ಪೂಜಿಸುವವರಿಗೆ ವಿಪುಲವಾದ ಐಶ್ವರ್ಯವನ್ನು ಕೊಡುವುದೇ ನನ್ನ ಸಂಕಲ್ಪ, ನನ್ನ ಭಕ್ತರು ನಿರಂತಸುಖಭಾಜರಾಗಿರಬೇಕೆಂದೇ ನನ್ನ ಅಭಿಮತ, "ಶಂಭು, ಶಂಕರ, ಶಿವ ಮೊದಲಾದುವು ನನ್ನ ಅನ್ವರ್ಥನಾಮಗಳು, ನಂದಿಯೇ! ನಾನು ಈ ಬಡವನಾದ ಬ್ರಾಹ್ಮಣನಿಗೆ

ಯಾವುದಾದರೊಂದುಪಕಾರವನ್ನು ಮಾಡಬೇಕಾಗಿದೆ, ಆದುದರಿಂದ ನನ್ನ ಅಪ್ಪಣೆಯಂತೆ ಈ ದಿನ ಸಾಯಂಕಾಲದೊಳಗಾಗಿ ಅವನಿಗೆ ಹತ್ತುಸಾವಿರ ವರಾಹಗಳನ್ನು ಕೊಡಬೇಕು ತಪ್ಪಕೂಡದು, ಎಂದು ಹೇಳಿದನು.

“ ಈಶ್ವರ ! ಸರ್ವೇಶಾ ! ತಮ್ಮ ಆಜ್ಞೆಯಪ್ರಕಾರವೇ ತಪ್ಪದೆ ಕೊಡುತ್ತೇನೆ ” ಎಂದು ನಂದಿಯು ಉತ್ತರ ಕೊಟ್ಟನು, ಇದೆಲ್ಲವನ್ನೂ ಚಂದ್ರಗುಪ್ತನು ಚೆನ್ನಾಗಿ ಆಲಿಸಿದನು, ಜನರಹಿತವಾದ ದೇವಾಲಯದಲ್ಲಿ ನಡೆದ ಈ ಸಂಭಾಷಣೆಯನ್ನು ಕೇಳುತ್ತಲೇ ಅವನಿಗೆ ಒಂದುಬಗೆಯಾದ ದುರಾಲೋಚನೆಯುಂಟಾಯಿತು. “ ಎಲಯೆಲಾ ! ಇದೇನಾಶ್ಚರ್ಯ ! ನಿತ್ಯದರಿದ್ರನೂ ಭಿಕ್ಷಾಜೀವಿಯೂ ಆಗಿರುವ ಆ ಹಾರುವಯ್ಯನಿಗೆ ಮಹಾದೇವನು ಒಂದೇಸಾರಿ ಹತ್ತುಸಾವಿರ ವರಾಹಗಳನ್ನು ಕೊಡಲಿಚ್ಛಿಸಿರುವನಲ್ಲಾ ! ನಂದೀಶ್ವರನು ಸಾಯಂಕಾಲದೊಳಗಾಗಿ ಕೊಡುವೆನೆಂದು ಹೇಳಿದನಲ್ಲವೆ ? ಅದು ಈ ದಿನವೇ ನಡೆವುದು, ಈಶ್ವರನ ಸಂಕಲ್ಪವೆಂದಿಗಾದರೂ ವ್ಯರ್ಥವಾದೀತೇ ? ಹತ್ತುಸಾವಿರ ವರಾಹಗಳೂ ಆ ಹಾರುವನಿಗೆ ಬರುವುದು ತಪ್ಪದು ಇದು ಸತ್ಯ, ಆದುದರಿಂದ ಆವುದಾದರೊಂದುಪಾಯವನ್ನು ಹುಡುಕಿ, ಈ ಬ್ರಾಹ್ಮಣನಿಗೆ ಬರುವ ಧನವನ್ನು ನಾನಪಹರಿಸಲೇಬೇಕು ” ಎಂದು ನಿಶ್ಚಯಿಸಿ ದುರಾಶಾಪೀಡಿತಮಾನಸನಾಗಿ ತ್ವರೆಯಾಗಿ ಮನೆಗೆ ಬಂದು ಭಿಕ್ಷಾಟನಕ್ಕೆ ಹೋಗಿದ್ದ ಶಿವಶರ್ಮನ ಆಗಮನವನ್ನು ನಿರೀಕ್ಷಿಸುತ್ತ ಬೀದಿಯಲ್ಲಿ ಕಾದಿದ್ದನು, ಶಿವಶರ್ಮನಿಗೆ ಈ ಯಾವ ಸಂಗತಿಯೂ ತಿಳಿದಿರಲಿಲ್ಲ.

ಸತ್ಯಶೀಲನೆ ! ಆಶೆಯು ಎಷ್ಟು ಕೆಲಸವನ್ನು ಮಾಡಿಸುತ್ತದೆ ? ತಿಳಿದೆಯಾ ? ಆಶೆಯು ಬಹಳ ಕೆಟ್ಟುದು, ಇದಕ್ಕೆ ಯಾರು ದಾಸರಾಗಿರುವರೋ ಅವರು ಲೋಕಕ್ಕೆಲ್ಲ ದಾಸರಾಗುವರು, ಯಾರಿಗೆ ಆಸೆಯು ದಾಸಿಯಾಗುವಳೋ ಅವರಿಗೆ ಲೋಕವೇ ಆಳಾಗುವುದು, ಯೌವನಕ್ಕೆ ಮುದುಕತನದ ಉಪದ್ರವವಿರುವುದು, ಆರೋಗ್ಯಕ್ಕೆ ರೋಗದ ಭಯವಿರುವುದು, ಪ್ರಾಣಕ್ಕೆ ಮೃತ್ಯುವಿನ ಭೀತಿಯಿರುವುದು, ಆಶೆಗೆಮಾತ್ರ ಯಾವ ಉಪದ್ರವವೂ ಭಯವೂ ಇಲ್ಲ. ಹಲ್ಲುಗಳು ಬಿದ್ದುಹೋಗಿ ತಲೆನರೆತು ಕಣ್ಣುಗಳಿಗೆ ಅಂಧತ್ವವುಂಟಾದರೂ ಧನಾಂಗನೆಗೆ ಮಾತ್ರ ಚಿತ್ತವು ಅಧೀನವಾಗಿರುವುದು, ಆಸೆಗೆ ಮೇರೆಯೇ ಇಲ್ಲ, ಮೇರು ಪರ್ವತದಷ್ಟು ಧನವು ದೊರಕಿದರೂ ಆಸೆಯು ತೀರುವಂತಿಲ್ಲ, ಆಸೆತೀರುವಷ್ಟು ಧನವು ಲಭಿಸಿದರೂ ತಾನು ಹೋಗುವಾಗ ಒಂದುಕಾಸಾದರೂ ಹಿಂದೆ ಬರುವ ಹಾಗಿಲ್ಲ, ಆಸೆಯು ಮಾನವರಪಾಲಿಗೊಬ್ಬ ರಾಕ್ಷಸಿಯು, ವಿಷಮಂಜರಿಯು, ಹಳೆಯ ಹೆಂಡವು, ಸರ್ವದೋಷಗಳಿಗೂ ನೆಲೆಯಾದ ಆಸೆಯು ಬಹು ನಿಂದ್ಯವಾದುದು, ಆದುದರಿಂದ ಅದನ್ನು ಯಾವನು ಬಿಟ್ಟಿರುವನೋ ಅವನೇ ಧನ್ಯನು,

ಸತ್ಯಶೀಲನೆ ! ಆಮೇಲೆ ನಡೆದ ವೃತ್ತಾಂತವನ್ನು ಕೇಳು. ಆ ಬ್ರಾಹ್ಮಣನು ಪದ್ಧತಿಯುಮೇರೆ ಪಟ್ಟಣದಲ್ಲೆಲ್ಲಾ ಸುತ್ತಿ ತನಗೆ ದೊರೆತ ಸ್ವಲ್ಪ ಅಕ್ಕಿಯನ್ನು ತೆಗೆದುಕೊಂಡು ಮಕ್ಕಳು ಹಸಿವಿನಿಂದ ತಲ್ಲಣಿಸುತ್ತಿರುವರೆಂದು ಬೇಗಬೇಗನೆ ಹೋಗುತ್ತಿದ್ದನು, ಆತನು ತನ್ನ ಮನೆಗೆ ಚಂದ್ರಗುಪ್ತನ ಮನೆಯಮುಂದೆಯೇ ಹೋಗಬೇಕಾಗಿದ್ದಿತು, ಆತನ ಆಗಮನವನ್ನೇ ನಿರೀಕ್ಷಿಸುತ್ತಿದ್ದ ವರ್ತಕನು ಬ್ರಾಹ್ಮಣನು ತನ್ನ ಮನೆಯ ಮುಂದಕ್ಕೆ ಬಂದೊಡನೆ ಅಡ್ಡಕಟ್ಟಿ ಮಹಾ ವಿನಯದಿಂದ ನಮಸ್ಕರಿಸಿ, " ಸ್ವಾಮಿಾ ! ತಾವು ತುಂಬಾ ವಿದ್ಯಾವಂತರು, ಸತ್ಯಸ್ವಭಾವವುಳ್ಳವರು, ಯಥಾಲಾಭಸಂತುಷ್ಟರು, ಆಶಾರಹಿತರು, ಮಹಾ ಯೋಗ್ಯರು, ಕೆಲವು ದಿನಗಳಿಂದೀಚೆಗೆ ತಮ್ಮ ಪ್ರಭಾವವು ನನಗೆ ತಿಳಿಯಿತು, ವಿಪ್ರವರ್ಯ ನಾನೀದಿನ ನಿಮಗೊಂದು ಸ್ವರ್ಣರೂಪವಾದ ದಾನವನ್ನು ಮಾಡಬೇಕೆಂದುದ್ದೇಶಿಸಿರುವೆನು, ಬಡವರೂ ಪರಮಭಾಗವತರೂ ಆದ ನಿಮಗೆಯೇ ಈ ದಾನವನ್ನು ಮಾಡಬೇಕೆಂದು ಆಲೋಚಿಸಿ ನಿಮ್ಮ ಆಗಮನವನ್ನಿದಿರುನೋಡುತ್ತ ಇಲ್ಲಿ ಕಾದಿದ್ದೆನು, ನನ್ನ ದಾನವನ್ನು ಸ್ವೀಕರಿಸುವುದಕ್ಕೆ ನೀವೇ ಅರ್ಹರು, " ಸತ್ಪಾತ್ರದಲ್ಲ ದಾನವನ್ನು ಮಾಡಿದರೆ, ಸ್ವಾತಿಯ ಮಳೆಯಲ್ಲಿ ನೀರಿನಮೇಲೆ ತೇಲಾಡುತ್ತಿರುವ ಮುತ್ತಿನಚಿಪ್ಪಿನಲ್ಲಿ ಬಿದ್ದ ಹನಿಯು ಮುಕ್ತಾಫಲವಾಗುವುದು" ಎಂದು ತಮ್ಮಂತಹ ಪೂಜ್ಯರು ಹೇಳಿರುವುದನ್ನು ಕೇಳಿರುವೆನು, ಎಲ್ಲಬಗೆಗಳಿಂದ ಆಲೋಚಿಸಿದರೂ ತಾವು ದಾನಾರ್ಹರೆಂದು ನನ್ನ ಮನಸ್ಸು ಒಪ್ಪಿರುವುದು ಒಳಕ್ಕೆ ಬನ್ನಿ ನಾನು ಸಮರ್ಪಿಸುವ ಅಲ್ಪದಾನವನ್ನು ದಯಮಾಡಿ ಸ್ವೀಕರಿಸಿ " ಎಂದು ಬಹುವಾಗಿ ಬೇಡಿಕೊಂಡನು.

ಆ ಕೋಮಟಿಯ ವಿನಯವಚನವು ಬ್ರಾಹ್ಮಣನಿಗಾಶ್ಚರ್ಯವನ್ನುಂಟುಮಾಡಿತು, " ಆಹಾ ! ಇದೇನಚ್ಚರಿ ! ನಾನು ಇವನ ಮನೆಗೆ ಹೋಗಿ ಬೇಡಿದಾಗ ಭಿಕ್ಷವನ್ನೇ ಹಾಕದಿದ್ದವನು ಈ ದಿನ ಹೀಗೆ ವಿನಯದಿಂದ ಮಾತಾಡುವುದಕ್ಕೆ ಕಾರಣವೇನಿರಬಹುದು, ಯಾರು ಬಂದು ಭಿಕ್ಷವನ್ನು ಬೇಡಿದರೂ ಕೋಪಗೊಂಡು ಛೀ ! ಛೀ ! ಇದೇನು ತಿರಿಕೆ ! ಕೈಕಾಲ್ಗಳು ಗಟ್ಟಿಯಾಗಿರುವಾಗ ಕೆಲಸಮಾಡಿ ಜೀವಿಸಬೇಕಲ್ಲವೆ ಇದೇಕೆ ಈ ದುರ್ವೃತ್ತಿ ? ದಿನಾಲೂ ಹೀಗೆ ಭಿಕ್ಷವನ್ನು ಯಾರುತಾನೆ ಇಡಬಲ್ಲರು ? ಎಲ್ಲರೂ ಸಂಸಾರಿಗಳೇ ಅಲ್ಲವೆ ? ಅವರವರ ಕಷ್ಟಗಳೆಷ್ಟೋ ಇರುವುವು, ಮೊಂಡನಾಗಿ ಹೀಗೆ ಬಾಗಿಲಬಳಿ ನಿಂತಿರಬೇಡ, ಒಂದು ದಿನ ಹೇಳಿದರೆ ಬುದ್ಧಿ ಇರುವುದಿಲ್ಲವೆ ? ಇಲ್ಲ ಇಲ್ಲ ಬುದ್ಧಿಯಿಲ್ಲ ಹೊರಟುಹೋಗು, ಎಂದು ಬಗೆಬಗೆಯ ದುರ್ಭಾಷೆಗಳನ್ನಾಡಿ, ಆಗಲೂ ಒಂದುಹಿಡಿ ಅಕ್ಕಿಯನ್ನು ಹಾಕದೆ ಕಳುಹುತ್ತಿದ್ದ ಈ ಲುಬ್ಧನಿಗೆ ಈ ಸದ್ಬುದ್ಧಿಯು ಹುಟ್ಟುವುದುಂಟೆ ? ಏನೋ ಕಾರಣವಿರಬಹುದು ಇಲ್ಲವೆ " ವಿನಾಶ

ಕಾಲೇವಿಪರೀತಬುದ್ಧಿಃ, ಎಂಬಂತೆ ವಿನಾಶಕಾಲಕ್ಕೆ ಹೀಗೆ ಬುದ್ಧಿಯು ವ್ಯತ್ಯಸ್ತವಾಗಿದೆಯೋ ?" ಎಂದು ತನ್ನ ಮನಸ್ಸಿನಲ್ಲಿ ಆಲೋಚಿಸುತ್ತ ನಿಂತನು.

ವೈಶ್ಯನಾಗಳಾ ಬ್ರಾಹ್ಮಣನ ಮೋರೆಯನ್ನು ನೋಡಿ, "ಸ್ವಾಮಿಾ ! ಏತಕ್ಕೆ ಏನೋ ಆಲೋಚನೆ ಮಾಡುತ್ತ ನಿಂತಿರುವಿರಿ? ಸಂದೇಹಿಸಬೇಡಿ ನಿಜವಾಗಿಯೂ ಸರ್ವಸಾಮುಗ್ರಿಯನ್ನೂ ತೆಗೆದಿಟ್ಟಿರುವೆನು, ದಾನಮಾಡುವುದಕ್ಕೆ ಚಿನ್ನದ ನಾಣ್ಯಗಳನ್ನು ತಟ್ಟೆಯಲ್ಲಿ ಮಡಗಿರುವೆನು, ತಾವು ಮನೆಯೊಳಕ್ಕೆ ಬಂದಕೂಡಲೆ ಮನಃಪೂರ್ವಕವಾಗಿ ದಾನಮಾಡುವೆನು" ಎಂದನು.

ಬ್ರಾಹ್ಮಣನು ಅಜಾತಶತ್ರುವು, ಆ ವರ್ತಕನು ಎಷ್ಟುಬಯ್ದರೂ ಗಜರಿದರೂ ಸ್ವಲ್ಪವಾದರೂ ಅಸಮಾಧಾನಪಡದೆ, ಕೋಪಗೊಳ್ಳದೆ ಇದೆಲ್ಲವೂ ತನ್ನ ದಾರಿದ್ರ್ಯದೋಷವೆಂದು ಬಗೆದು, ಅವನು ಉಪಾದಾನವನ್ನು ಕೊಡಲಿ ಅಥವಾ ಕೊಡದಿರಲಿ ಅವನ ಮನೆಗೆ ನಿತ್ಯವೂ ಹೋಗುತ್ತಿದ್ದನು, ಅವನು ಒಂದು ದಿನವಾದರೂ ಭಿಕ್ಷವನ್ನು ಕೊಟ್ಟವನೇ ಅಲ್ಲ, ಆದರೂ ಬ್ರಾಹ್ಮಣನಿಗೆ ಬೇಸರವಿಲ್ಲ ಕೋಪತಾಪಗಳಿಲ್ಲ ದ್ವೇಷವಿಲ್ಲ, ಇದಲ್ಲವೆ ಬ್ರಾಹ್ಮಣನ ಲಕ್ಷಣ.

ಸತ್ಯಶೀಲನೆ, ಭಾರತದ ಅರಣ್ಯಪರ್ವದಲ್ಲಿ ಯುಧಿಷ್ಠಿರಾಜಗರ ಸಂವಾದದಲ್ಲಿರುವ ಈ ಶ್ಲೋಕಗಳನ್ನು ಸಾವಧಾನವಾಗಿ ನೋಡು.

"ಸತ್ಯಂದಾನಂಶಮುಶ್ಶೀಲಂ ಆನೃಶಂಸ್ಯಂತಪೋಘೃಣಾ |
ದೃಶ್ಯತೇಯತ್ರನಾಗೇಂದ್ರ ಸಬ್ರಾಹ್ಮಣಇತಿಸ್ಮೃತಃ ||"

ಅರ್ಥ—ಎಲೈ ನಾಗಶ್ರೇಷ್ಠನೆ ! ಸತ್ಯವೂ, ದಾನವೂ, ಶಾಂತಗುಣವೂ, ಸದ್ವೃತ್ತವೂ, ಕ್ರೂರರಹಿತತ್ವವೂ, ತಪಸ್ಸೂ ದಯೆಯೂ ಯಾವನಲ್ಲಿರುವುದೋ ಅವನೆ ಬ್ರಾಹ್ಮಣನು.

ಹೀಗೆ ಬ್ರಾಹ್ಮಣಲಕ್ಷಣವನ್ನು ನುಡಿದ ಚಿದಾನಂದಯೋಗಿಯನ್ನು ಕುರಿತು "ಸ್ವಾಮಿಾ ! ಜಾತಿಯಿಂದ ಬ್ರಾಹ್ಮಣನಾಗಿರುವವನಿಗೆ ಈ ಗುಣಗಳಿಲ್ಲದಿದ್ದರೆ ಬ್ರಾಹ್ಮಣನಾಗುವುದಿಲ್ಲವೆ? ಶೂದ್ರಾದಿಗಳಲ್ಲಿ ಈ ಗುಣಗಳಿದ್ದರೆ ಅವನನ್ನು ಬ್ರಾಹ್ಮಣನೆಂದು ಹೇಳಲಾಗುವುದೆ ?" ಎಂದು ಕೇಳಿದನು.

ಚಿದಾನಂದರು—ಅಯ್ಯಾ ! ನೀನು ಕೇಳಿದ ಪ್ರಶ್ನೆಯನ್ನೇ ಆ ಅಜಗರನೂ ಕೇಳಿರುವನು, ಅದಕ್ಕೆ ಯುಧಿಷ್ಠಿರನು ಕೊಟ್ಟ ಉತ್ತರವನ್ನು ಕೇಳು:—

"ಶೂದ್ರೇತುಯದ್ಭವೇಲ್ಲಕ್ಷ್ಮ ದ್ವಿಜಾತೇಶ್ಚನವಿದ್ಯತೇ |
ನವೈಶೂದ್ರೋಭವೇಚ್ಛೂದ್ರೋ ಬ್ರಾಹ್ಮಣೋನಚಬ್ರಾಹ್ಮಣಃ ||"

ಅರ್ಥ—ಶೂದ್ರನಲ್ಲಿ ಸತ್ಯಾದಿ ಚಿಹ್ನಗಳಿದ್ದರೆ ಅವನು ಶೂದ್ರನಲ್ಲ, ಬ್ರಾಹ್ಮಣನಲ್ಲಿ ಆ ಸತ್ಯಾದಿಗಳಿಲ್ಲದಿದ್ದರೆ ಅವನು ಬ್ರಾಹ್ಮಣನಲ್ಲ.

ವತ್ಸ ! ಸತ್ಯಶೀಲ ! ಭಾಗವತದಲ್ಲಿಯೂ ಇದೇ ಅರ್ಥವೇ ಉಕ್ತವಾಗಿ ರುವುದು.

" ಶ್ವಪಚೋಪಿಮಹೀಪಾಲ ವಿಷ್ಣುಭಕ್ತೋದ್ವಿಜಾಧಿಕಃ |
ವಿಷ್ಣುಭಕ್ತಿವಿಹೀನಸ್ತು ಯತಿಶ್ಚ ಶ್ವಪಚಾಧಮಃ || "

ಅರ್ಥ—ಎಲೈ ಜನಮೇಜಯನೆ, ವಿಷ್ಣುಭಕ್ತನಾದವನು ಚಂಡಾಲನೇ ಆಗಿದ್ದರೂ ಅವನು ಬ್ರಾಹ್ಮಣೋತ್ತಮನೆನ್ನಲ್ಪಡುವನು, ವಿಷ್ಣುಭಕ್ತಿಯಿಲ್ಲದ ವನು ಯತಿಯಾದರೂ ಅವನು ಚಂಡಾಲರಲ್ಲಿಯೂ ನೀಚನೆನಿಸುವನು.

ಅದಂತಿರಲಿ ಮುಂದಿನ ಕಥೆಯನ್ನು ಕೇಳು, ವರ್ತಕನಂತಹ ಪಾಪಾತ್ಮ ನಾದರೂ ಆ ದಿನದಲ್ಲಿ ತನ್ನಲ್ಲಿ ಉತ್ಕಟವಾದ ಭಕ್ತಿಯನ್ನು ತೋರ್ಪಡಿಸಿದುದೂ ಸುವರ್ಣರೂಪವಾದ ದಾನವನ್ನು ತನಗೆಯೇ ಕೊಡಬೇಕೆಂದು ನಿರ್ಧರಿಸಿರು ವುದೂ ಆತನಿಗೆ ಬಹಳ ಆಶ್ಚರ್ಯವನ್ನುಂಟುಮಾಡಿತು, " ಇದೆಲ್ಲವೂ ಭಗವ ತ್ಕೃಪಾಲಬ್ಧವಾದುದು, " ತೇನವಿನಾತೃಣಮಪಿನಚಲತಿ " ಅವನ ಸಂಕಲ್ಪ ಹೊರತು ಯಾವುದೂ ನಡೆವುದಿಲ್ಲ " ಎಂದು ನಿಶ್ಚಯಿಸಿ ಆ ಕೋಮಟಿಯನ್ನು ನೋಡಿ, " ಅಯ್ಯಾ ! ವಣಿಗ್ವರನೇ ! ನನ್ನಲ್ಲಿ ಇಂತಪ್ಪ ಕೃಪಾವಿಶೇಷವು ಮಹಾ ಭಾಗ್ಯಸಂಪನ್ನರಾದ ನಿಮಗೆ ಉಂಟಾದುದು ಮದೀಯ ಪುರಾಕೃತ ಪುಣ್ಯವಿಶೇ ಷವೆಂದೇ ಭಾವಿಸುವೆನು, ತಮ್ಮ ಚಿತ್ತದಂತೆ ಮಾಡಬಹುದು ನಾನು ಮನೆಗೆ ಹೋಗಿಬರುವುದಕ್ಕೆ ಒಂದಿಷ್ಟವಕಾಶವನ್ನು ಕೊಡಬೇಕು, ಯಾಯಾವರದಲ್ಲಿ ಬಂದ ಅಕ್ಕಿಯನ್ನು ತೆಗೆದುಕೊಂಡುಹೋಗಿ ಕ್ಷುದ್ಬಾಧೆಯಿಂದ ತಲ್ಲಣಿಸುತ್ತಿರುವ ಮಕ್ಕಳಿಗೆ ಅನ್ನವನ್ನು ಮಾಡಿಡೆಂದು ನನ್ನ ಹೆಂಡತಿಯೊಡನೆ ಹೇಳಿಕೊಟ್ಟು ಬೇಗನೆ ಬರುವೆನು " ಎಂದು ಹೇಳಿದನು. ವೈಶ್ಯನು ಬಹಳ ಕನಿಕರಪಟ್ಟವ ನಂತೆ ನಟಿಸಿ, " ಅಕಟಕಟಾ ! ಪಾಪ ! ಪಸುಳೆಗಳಲ್ಲವೆ ? ಹಸಿವಿನಿಂದ ಎಷ್ಟು ಬಳಲಿರುವರೋ ! ಸ್ವಾಮಿ ! ಬಡತನವೆಷ್ಟು ದುಃಖಕರವಾದುದೋ ! ಇಂ ನೀವಿಲ್ಲಿಯೇ ನಿಲ್ಲಿ ಒಳಕ್ಕೆ ಬಂದು ಕುಳಿತುಕೊಳ್ಳಿ ನಾನೆಲ್ಲವನ್ನೂ ಸರಿಪಡಿಸು ವೆನು, ನಿಮ್ಮ ಮನೆಗೆ ಬೇಕಾದಷ್ಟು ಸಾಮಗ್ರಿಯನ್ನು ನನ್ನ ಸೇವಕನೊಡನೆ ಕಳುಹಿಸಿಕೊಡುವೆನು " ಎಂದು ನುಡಿದು ಶಿವಶರ್ಮನ ಹಸ್ತಾವಲಂಬನವನ್ನು ಮಾಡಿ, ಮನೆಯೊಳಕ್ಕೆ ಕರೆದುಕೊಂಡುಹೋಗಿ ತೊಟ್ಟಿಯಲ್ಲಿ ಉನ್ನತಪೀಠವೊಂ ದರಮೇಲೆ ಕುಳ್ಳಿರಿಸಿ, ತನ್ನ ಒಬ್ಬ ಸೇವಕನನ್ನು ಕರೆದು, " ನಾಲ್ಕುಬಳ್ಳದ ಅಕ್ಕಿ ಯನ್ನೂ ಅದಕ್ಕೆ ತಕ್ಕಬೇಳೆ, ಉಪ್ಪು, ಹುಣಿಸೆಯಹಣ್ಣು, ತುಪ್ಪ, ಎಣ್ಣೆ, ಎಲೆ ಮೊದಲಾದುವನ್ನು ಕಡಿಮೆಯಾಗದಂತೆ ಈ ಕ್ಷಣದಲ್ಲಿಯೇ ತೆಗೆದುಕೊಂಡು ಹೋಗಿ ಈ ಸ್ವಾಮಿಗಳ ಮನೆಯಲ್ಲಿ ಕೊಟ್ಟು ಅಡಿಗೆಮಾಡುವಂತೆ ಇವರ ಪತ್ನಿ ಯವರಿಗೆ ಹೇಳಿಬಾ " ಎನಲು ಸೇವಕನು ಶೀಘ್ರವಾಗಿ ಎಲ್ಲವನ್ನೂ ಸಿದ್ಧಪಡಿಸಿ

ಬ್ರಾಹ್ಮಣೋತ್ತಮನ ಮನೆಗೆಬಂದು, " ತಾಯಿಾ ! ಶರ್ಮರವರು ಸ್ವಲ್ಪ ಆಲಸ್ಯವಾಗಿ ಮನೆಗೆ ಬರುವರು ಚಂದ್ರಗುಪ್ತಸೆಟ್ಟರ ಮನೆಯಲ್ಲಿರುವರು" ಎಂದು ಹೇಳಿ ಹಿಂದಿರುಗಿಬಂದು, ತಾನು ಮಾಡಿದ ಕಾರ್ಯಗಳನ್ನು ಆ ವರ್ತಕನಿಗೆ ಹೇಳಿದನು. ಶಿವಶರ್ಮನಿಗುಂಟಾದಾನಂದಕ್ಕೆ ಮೇರೆಯೇ ಇಲ್ಲ, ಗುಪ್ತನು ಆತನಿಗೆ ಮಾಡುತ್ತಿರುವ ಉಪಚಾರಗಳನ್ನೂ ಭಕ್ತಿಪ್ರದರ್ಶನವನ್ನೂ ಶರ್ಮನು ಮನಸ್ಸಿಗೆ ತಂದುಕೊಂಡು, " ಈ ಎಲ್ಲವೂ ದೀನದಯಾಪರನಾದ ಭಗವಂತನ ಸಂಕಲ್ಪದಿಂದ ನಡೆಯತಕ್ಕುವೇಸರಿ " ಎಂದು ಅರ್ಧನಿಮೀಲಿತನೇತ್ರನಾಗಿ ಭಗವಂತನ ಮಹಿಮೆಯು ಅವಾಙ್ಮನಸಗೋಚರವೆಂದು ಆನಂದಬಾಷ್ಪಗಳನ್ನು ಸುರಿಸುತ್ತಿದ್ದನು.

ಗುಪ್ತನಾದರೋ ಚಡುಪುಡನೆ ಮನೆಯೊಳಕ್ಕೆ ಹೋಗಿ ಒಂದು ತಟ್ಟೆಯಲ್ಲಿ ವೀಳೆಯದೆಲೆಯನ್ನೂ ಅಡಕೆಯನ್ನೂ, ಏಲಕ್ಕಿ, ಲವಂಗ, ಬಾದಾಮಿ, ಕಲ್ಲುಸಕ್ಕರೆ, ಕೇಸರ ಮೊದಲಾದುವನಿಟ್ಟು ಅದರನಡುವೆ ಎರಡುಸಾವಿರ ವರಾಹಗಳನ್ನು ಕುಪ್ಪೆಯಾಗಿಟ್ಟುಕೊಂಡು ಬ್ರಾಹ್ಮಣೋತ್ತಮನ ಸಮಿಾಪಕ್ಕೆ ಬಂದು, ಸಾಷ್ಟಾಂಗ ದಂಡಪ್ರಣಾಮಗಳನ್ನು ಮಾಡಿ ಎದ್ದು ಕೈಮುಗಿದು ನಿಂತು, " ಸ್ವಾಮಿಾ ! ಬಹುದಿನಗಳಿಂದಲೂ ನಾನು ನಿಮ್ಮನ್ನು ಲಾಘವವಾಗಿ ಕಾಣುತ್ತ, ತುಚ್ಛವಾಗಿ ಮಾತನಾಡುತ್ತ ನಿಮ್ಮ ಯೋಗ್ಯತೆಯನ್ನರಿಯದೆ ಪ್ರವರ್ತಿಸಿರುವೆನು, ಆ ದೋಷವು ಪರಿಹಾರವಾಗುವುದಕ್ಕಾಗಿ ಈ ದಿನ ಈ ಅಲ್ಪಧನವನ್ನು ಸಮರ್ಪಿಸಿರುವೆನು, ಇದನ್ನು ದಯಮಾಡಿ ನೀವು ಸ್ವೀಕರಿಸಿ ದಾಸನೇವಕನಾದ ನನ್ನನ್ನು ಆಶೀರ್ವದಿಸಬೇಕು " ಎಂದು ಪ್ರಾರ್ಥಿಸಿದನು.

ವಿಪ್ರೋತ್ತಮನು ಆಶ್ಚರ್ಯಾನಂದ ಸಮುದ್ರದಲ್ಲಿ ಮುಳುಗಿ ಹೋಗಿದನು, ಅಷ್ಟು ಹಣವನ್ನಾತನೆಂದೂ ನೋಡಿದವನಲ್ಲ, ಒಂದೆರಡು ನಿಮಿಷಗಳವರೆಗೆ ಆತನಿಗೇನೂ ತೋರಲಿಲ್ಲ, " ಎರಡುಸಾವಿರ ವರಾಹಗಳನ್ನು ಕೊಟ್ಟು, ಅಲ್ಪವಾಗಿ ಕೊಟ್ಟಿರುವೆನೆಂದು ವರ್ತಕನೀತನು ಹೇಳುತ್ತಿರುವನಲ್ಲ ! ನನಗಿಷ್ಟು ಹಣವೇ ನವನಿಧಿಗಳಾಗಿರುವುದಲ್ಲ ! ಆಹ ! ಭಗವತ್ಕೃಪೆ ಅನನುಮೇಯವಾದುದು " ಎಂದಡಿಗಡಿಗೆ ಭಗವಂತನ ನಿರ್ವ್ಯಾಜಕೃಪೆಯನ್ನು ಕೊಂಡಾಡುತ್ತ, ವರ್ತಕನ ದಾನವನ್ನು ಶ್ಲಾಘಿಸುತ್ತ, ಆ ಹಣವನ್ನೆಲ್ಲ ಒಂದು ಮೂಟೆಯಾಗಿಕಟ್ಟಿ, ಆ ವರ್ತಕನನ್ನಾಶೀರ್ವದಿಸಿ, ಆತನ ಅನುಮತಿಯನ್ನು ಪಡೆದು ಮೂಟೆಯನ್ನೆತ್ತಿಕೊಂಡು, ಮನೆಗೆ ಹೊರಡಲುದ್ಯಮಿಸಿ ಆತನ ಮನೆಯ ಬಾಗಿಲನ್ನು ದಾಟಿದನು. ಅಷ್ಟರಲ್ಲಿ ದುರಾಶಾಪರನೂ ವಂಚಕನೂ ಆದ ಆ ಕೋಮಟಿಯು ಏನೊ ಹೇಳಬೇಕಾಗಿದ್ದು ಮರೆತು ಮತ್ತೆ ಜ್ಞಾಪಿಸಿಕೊಂಡವನಂತೆ ಬೇಗಬೇಗನೆ ತಾನೂ ಬಾಗಿಲಹತ್ತಿರಕ್ಕೆ ಹೋಗಿ " ಸ್ವಾಮಿಾ ! ಸ್ವಾಮಿಾ ! ಇನ್ನೊಂದುಮಾತು ಸ್ವಲ್ಪ ದಯಮಾಡಿರಿ " ಎಂದು ಕರೆದನು. ಆ ಬ್ರಾಹ್ಮಣನು ಏನೋ ಕರೆಯುತ್ತಿರುವ

ನೆಂದು ಹಿಂದಿರುಗಿ ಮನೆಯೊಳಕ್ಕೆ ಹೋಗಲು ಆ ಬ್ರಾಹ್ಮಣನನ್ನಾ ವರ್ತಕನು ಮಣೆಯಮೇಲೆ ಕುಳ್ಳಿರಿಸಿ ಇಂತೆಂದನು. ಅಲ್ಪವಾದ ವಿಷಯವನ್ನೊಂದನ್ನು ಕೇಳಲು ಬಗೆದು ನಿಮ್ಮನ್ನು ಮತ್ತೆ ಕರೆದೆನು ಕ್ಷಮಿಸಬೇಕು ಆ ವಿಷಯವೇನೆಂದರೆ—ಈ ದಿನ ಸಂಜೆಯ ಒಳಗಾಗಿ ನಿಮಗಾವುದಾದರೂ ಧನಲಾಭವುಂಟಾದರೆ ಆ ಲಾಭವನ್ನು ಪಡೆಯುವ ಬಾಧ್ಯತೆಯನ್ನು ನನಗೆ ದಯಪಾಲಿಸಿ ಕೊಡಬೇಕು ಆಬಗ್ಗೆ ಒಂದು ಕಾಗದವನ್ನು ಬರೆದುಕೊಡಬೇಕು, ಈಗ ನಿಮಗೆ ನಾನು ಕೊಟ್ಟಿರುವ ಹಣವನ್ನು ದಾನಧಾರಾಪೂರ್ವಕವಾಗಿ ಕೊಟ್ಟಿರುವುದರಿಂದ ಇದನ್ನು ಮತ್ತೆ ನಾನು ಪಡೆಯಲಿಚ್ಛಿಸುವುದಿಲ್ಲ ಧೈರ್ಯವಾಗಿರಿ, ಬೇರೆ ಎಲ್ಲಿಯಾದರೂ ಯಾವ ಮಾರ್ಗದಿಂದಲಾದರೂ ಧನಲಾಭವು ನಿಮಗುಂಟಾದರೆ ಅದರ ಬಾಧ್ಯತೆಯನ್ನು ನಾನು ಕೇಳಿದುದು ಇಷ್ಟೇ ನನ್ನ ಪ್ರಾರ್ಥನೆ ಇದನ್ನು ಒಪ್ಪಿಸೆಂದು ಹೇಳಲುತ್ತರರೆಂದೇ ನನ್ನ ಅಭಿಪ್ರಾಯವು, ಇದರಿಂದ ತಮಗೇನು ನಷ್ಟ ? ನಾನೊಂದು ಕಾರಣವನ್ನು ಹಿಡಿದು ಹೀಗೆ ಕೇಳುತ್ತಿರುವುದರಿಂದ ಇದನ್ನು ಅನ್ಯಥಾ ಭಾವಿಸಬಾರದು ತಿಳಿಯಿತೇ ? ಆ ಕಾರಣವು ತಮಗೆ ನಾಳೆಯೇ ವ್ಯಕ್ತವಾಗುವುದು, ಒಂದು ಕಾಗದವನ್ನು ಬರೆದುಕೊಟ್ಟು ನೀವು ಬೇಗನೆ ಹೋಗಬಹುದು ” ಎಂದು ಯುಕ್ತಿಯುಕ್ತವಾಗಿಯೂ ನಿಷ್ಕಪಟ ಯಂತೆಯೂ ಹೇಳಿದನು.

ಆ ಬ್ರಾಹ್ಮಣನಿಗೆ ಇಂತಹ ಮೋಸದ ವಿದ್ಯೆಗಳೊಂದೂ ಬಾರದು, ತನ್ನ ಮನಸ್ಸಿನಲ್ಲಿ ಹೀಗೆ ಆಲೋಚಿಸಿದನು, “ ಈ ಕೋಮಟಿ ಹೇಳುತ್ತಿರುವುದು ನನಗೆ ಮಹದಾಶ್ಚರ್ಯಜನಕವಾಗಿರುವುದು, ಇವನು ಹುಚ್ಚನೇ ಏನು ? ಈ ನನಗೆ ನಿಶ್ಚಯಿಸಿಸ್ಸಿಗೆ ಹುಟ್ಟಿದುದು ಮೊದಲು ಧನಲಾಭವನ್ನೇ ಕಾಣದೆ ದೈನ್ಯವೃತ್ತಿಯಿಂದ ಜೀವಿಸುತ್ತಿರುವನಿಗೆ ಈ ಸಂಜೆಯೊಳಗಾಗಿ ಆವಲಾಭವುತಾನೆ ದೊರೆಯಬಹುದು ಮುಂದೆ ದೊರೆಯುವ ಲಾಭದ ಬಾಧ್ಯತೆಯನ್ನಿವನಿಗೆ ಕೊಡಬೇಕಂತೆ ಇವನು ಹೀಗೆ ಕೇಳುವುದಕ್ಕೆ ಕಾರಣವೇನಿರಬಹುದು ? ” ಎಂದನೇಕಪ್ರಕಾರವಾಗಿ ಆಲೋಚಿಸಿದನು, ತನಗೆ ಅಂತಹ ಲಾಭವು ಉಂಟಾಗುವುದು ಊಹೆಗೆ ಅಸಾಧ್ಯವಾಗಿದ್ದಿತು ಕಡೆಗೆ ಹೀಗೆ ನಿಶ್ಚಯಿಸಿಕೊಂಡನು. “ ಈತನು ನನಗೆ ಎರಡುಸಾವಿರ ವರಾಹಗಳನ್ನು ಕೊಟ್ಟಿರುವನಲ್ಲವೆ ? ಇಷ್ಟು ದೊಡ್ಡ ಹಣವನ್ನು ಕೊಟ್ಟವನು ಆಗದಹೋಗದ ಮತ್ತು ದುರೂಹ್ಯವಾದ ಭವಿಷ್ಯಲ್ಲಾಭವು ತನ್ನ ಬಾಧ್ಯತೆಗೆ (ಹಕ್ಕಿಗೆ) ಕೊಡಬೇಕೆಂದು ಕೇಳಿದರೆ ನಾನಿಲ್ಲವೆನ್ನುವುದು ಕೃತಜ್ಞನ ಧರ್ಮವಲ್ಲ, ಈ ಅಲ್ಪವಿಷಯಕ್ಕೆ ನಾನು ಹಿಂಜರಿಯಬಾರದು ” ಎಂದು ದಾಕ್ಷಿಣ್ಯದಿಂದ ಮನಸ್ಸಿನಲ್ಲಿ ಸಮಾಧಾನವನ್ನು ಮಾಡಿಕೊಂಡು, “ ವಣಿಗ್ವರನೇ ! ಹಾಗೆಯೇ ಆಗಲಿ ಮಷೀಧಾನಿಯನ್ನೂ ಲೇಖನವನ್ನೂ ಒಂದು ಕಾಗದವನ್ನು ತೆಗೆದುಕೊಂಡುಬಾ ” ಎಂದು ಹೇಳಿದನು.

ಬ್ರಾಹ್ಮಣನು ದೀರ್ಘಕಾಲವಾಲೋಚಿಸುತ್ತಿದ್ದುದರಿಂದ ಭಯಪಟ್ಟು, ತಾನು ಮುಳುಗಿಹೋದಂತೆ ಭಾವಿಸುತ್ತಿದ್ದ ಆ ವೈಶ್ಯನು, ಒಡನೆಯೇ ಒಳಕ್ಕೆ ಹೋಗಿ ಲೇಖನಸಾಮಗ್ರಿಯನ್ನು ತಂದು ವಸುಂಧರಾಮರನ ಮುಂದಿಟ್ಟನು. ಆ ಕಾಲದಲ್ಲಿ ಹೆಚ್ಚಾಗಿ ತಾಳೆಯ ಓಲೆಗಳಲ್ಲಿ ಘಂಟದಿಂದ ಬರೆವ ವಾಡಿಕೆಯಿದ್ದಿತು, ಕಾಗದಗಳಲ್ಲಿ ಲೇಖನಿಗಳಿಂದ ಮಸಿಯಲ್ಲಿ ಬರೆವುದು ಆಗತಾನೆ ಬಳಕೆಗೆ ಬಂದಿತ್ತು, ಆದರೂ ಆ ವೈಶ್ಯನು ಬರೆವಣಿಗೆಯ ಮಾರ್ಗಗವಕಾಶವಿಲ್ಲದಿರಬೇಕೆಂದು ತಾಳೆಯ ಓಲೆಯನ್ನೂ ಗಂಟವನ್ನೂ ಕೊಟ್ಟನು, ಆ ಬ್ರಾಹ್ಮಣನು ಅದರಲ್ಲಿ ಹೀಗೆ ಬರೆದನು.

“ಸ್ವಸ್ತಿಶ್ರೀ ವಿಜಯಾಭ್ಯುದಯ ಶಾಲಿವಾಹನ ಶಕಾಬ್ದಂಗಳು ೫೬೮ಕ್ಕೆ ಸಮವಾದ ಪರಾಭವ ಸಂವತ್ಸರ ಪುಷ್ಯ ಬಹುಳ ಪಂಚಮಿಯಲ್ಲಿ ಕುಸುಮಪುರದಲ್ಲಿರುವ ಶ್ರೀ ವೈಶ್ಯಕುಲತಿಲಕರಾದ ಶ್ರೀ ಚಂದ್ರಗುಪ್ತಸೆಟ್ಟರವರಿಗೆ—ಅದೇ ಕುಸುಮಪುರನಿವಾಸಿಯಾದ ಶಿವಶರ್ಮನೆಂಬ ನಾನು ಬರೆದುಕೊಟ್ಟ ಆದಾಯ ಬಾಧ್ಯತಾ ನಿವೃತ್ತಿಪತ್ರವು.

ಈ ದಿನ ಸಾಯಂಕಾಲದೊಳಗಾಗಿ ನನಗೆ ಲಭಿಸುವ ಲಾಭದ ಅಂದರೆ ಈಗ ನೀವು ನನಗೆ ಧಾರಾಪೂರ್ವಕವಾಗಿ ಕೊಟ್ಟಿರುವ ಎರಡುಸಾವಿರ ವರಾಹಗಳನ್ನು ಬಿಟ್ಟು, ಬೇರೆಬಗೆಯಿಂದ ನನಗೆ ಬರುವ ಲಾಭದ ಸಮಸ್ತ ಬಾಧ್ಯತೆಯನ್ನೂ ಮನಃಪೂರ್ವಕವಾಗಿ ನಿಮಗೆ ಬಿಟ್ಟುಕೊಟ್ಟಿರುತ್ತೇನೆ ಅದರಲ್ಲಿ ನನಗೆ ಯಾವ ಸಂಬಂಧವೂ ಇಲ್ಲ ಎಂದು ಸ್ವಹಸ್ತದಿಂದ ಬರೆದುಕೊಟ್ಟ ಬಾಧ್ಯತಾ ನಿವೃತ್ತಿಪತ್ರವು.”

ಶಿವಶರ್ಮನ ಕೈಬರಹ.

ಎಂದು ಬರೆದುಕೊಡುತ್ತಲೂ ಆ ಸೆಟ್ಟಿಯು ಆಗಳೇ ತನಗೆ ಹಿತರಾದ ಇಬ್ಬರ ಸಾಕ್ಷ್ಯವನ್ನಾಪತ್ರಕ್ಕೆ ಹಾಕಿಸಿ ಅದನ್ನು ತೆಗೆದು ಭದ್ರಪಡಿಸಿ, ಆ ಬ್ರಾಹ್ಮಣನನ್ನು ಮನೆಗೆ ಕಳುಹಿಸಿಕೊಟ್ಟನು. ಅವನು ಸಂಜೆಯೊಳಗಾಗಿ ತನಗೆ ಎಂಟುಸಾವಿರ ವರಹಗಳ ಲಾಭವು ಅನಾಯಾಸವಾಗಿ ಲಭಿಸುವುದೆಂದು ನಂಬಿ ಸಂತೋಷಪಡುತ್ತ ಸೂರ್ಯನ ಅಸ್ತಮಯ ಸಮಯವನ್ನು ನಿರೀಕ್ಷಿಸುತ್ತ ಗಂಟೆಗಳನ್ನು ಎಣಿಸುತ್ತಿದ್ದನು.

ಅತ್ತ ಶಿವಶರ್ಮನು ಬಹು ಸಂತೋಷದಿಂದ ಮನೆಗೆ ಬಂದು, ನಡೆದ ವಿದ್ಯಮಾನವನ್ನು ಪ್ರಿಯಪತ್ನಿಗೆ ಹೇಳಿ, ಕನಸುಮನಸ್ಸುಗಳಲ್ಲಿಲ್ಲದೆ ಹಠಾತ್ತಾಗಿ ತನಗೆ ಲಭಿಸಿದ ದ್ರವ್ಯವು ಭಗವದ್ದತ್ತವಾದುದಲ್ಲದೆ ಬೇರಲ್ಲವೆಂದು, ಆ ಸರ್ವಾಂತರ್ಯಾಮಿಯಾದ ಸರ್ವಶಕ್ತನಾದ ಸರ್ವಜ್ಞನಾದ ಭಗವಂತನನ್ನು

" ಓಂನಮಃ ಪರಮಾರ್ಥೈಕರೂಪಾಯ ಪರಮಾತ್ಮನೇ |
ಸ್ವೆಚ್ಛಾಯಭಾಸಿತಾಸತ್ಯ ಭೇದಭಿನ್ನಾಯಶಂಭವೇ ||
ನಮಶ್ಶಿವಾಯನಿಶ್ಶೇಷ ಕ್ಲೇಶಪ್ರಶಮಶಾಲಿನೇ |
ತ್ರಿಗುಣಗ್ರಂಥಿದುರ್ಭೇದ ಭವಬಂಧವಿಭೇದಿನೇ ||
ಸಮಸ್ತಲಕ್ಷಣಾಯೋಗ ಏವಯಸ್ಯೋಪಲಕ್ಷಣಂ |
ತಸ್ಮೈನಮೋಸ್ತುದೇವಾಯ ಕಸ್ಮೈಚಿದಪಿಶಂಭವೇ ||
ಸಂಸಾರೈಕನಿಮಿತ್ತಾಯ ಸಂಸಾರೈಕವಿರೋಧಿನೇ |
ನಮಸ್ಸಂಸಾರರೂಪಾಯ ನಿಸ್ಸಂಸಾರಾಯಶಂಭವೇ || "

ಎಂದು ಭಕ್ತಿಪೂರ್ವಕವಾಗಿ ವಂದಿಸಿ, ಷಡ್ರಸೋಪೇತವಾದ ಅಡುಗೆಯನ್ನು ಮಾಡಿಸಿ, ಭಗವನ್ನಿವೇದನವನ್ನು ಮಾಡಿ ಭಾರ್ಯಾಪುತ್ರರೊಡನೆ ಭೋಜನವನ್ನು ಮಾಡಿ ಸುಖದಿಂದಿದ್ದನು

ಚಂದ್ರಗುಪ್ತನಾದರೋ ಅತಿಕಷ್ಟದಿಂದ ಕಾಲಯಾಪನವನ್ನು ಮಾಡುತ್ತ, ಮಧ್ಯಾಹ್ನವಾಗುವವರೆಗೆ ಹೇಗೋ ಒಂದುಬಗೆಯಿಂದ ನಿಶ್ಚಲಮನಸ್ಸಿನಿಂದಿದ್ದನು. ಬಳಿಕ ಅವನ ಮನಸ್ಸುನಿಲ್ಲದೆ ತಲ್ಲಣಿಸತೊಡಗಿತು, ಪಲವುಬಗೆಯಿಂದ ಆಲೋಚಿಸಲಾರಂಭಿಸಿದನು " ಅರ್ಥಾಃಬಹಿಶ್ಚರಾಃಪ್ರಾಣಾಃ " ಎಂದಲ್ಲವೆ ಹಿರಿಯರು ಹೇಳುವರು ? ತಾನು ಅನಪೇಕ್ಷಿತನಾಗಿ ಎರಡುಸಾವಿರ ವರಹಗಳನ್ನಾ ಬಡಬ್ರಾಹ್ಮಣನಿಗೆ ಕೊಟ್ಟುದಕ್ಕೆ ಅವನ ಪ್ರಾಣಗಳೇ ಹೊರಟುಹೋದಂತೆ ಒಂದೆರಡು ಗಳಿಗೆಗಳತನಕ ಕಂದಿಕುಂದಿ ಕಳವಳಪಟ್ಟನು. " ಅಯ್ಯೋ ! ತಿಳಿಗೇಡಿಯೇ ! ಪಾಪಿಯೇ ಚಂದ್ರಗುಪ್ತನೇ ! ನಿನಗೇನು ದುರ್ಬುದ್ಧಿ ಹುಟ್ಟಿತು ? ನಿನ್ನ ಸೂಕ್ಷ್ಮಬುದ್ಧಿಯಿಷ್ಟುಮಟ್ಟಿಗೆ ಪರಿಣಾಮವನ್ನು ಪಡೆಯಿತೇ ? ಭೂತವೋ, ಪ್ರೇತವೋ, ಪಿಶಾಚವೋ ಆ ಹಾಳು ದೇಗುಲದಲ್ಲಿ ನುಡಿವ ನುಡಿಗಳನ್ನು ನಂಬಿ, ಲಾಭಾಪೇಕ್ಷೆಯಿಂದ ಹಿಂದುಮುಂದಾಲೋಚಿಸದೆ ಆ ಬಡಹಾರುವನಿಗೆ ಎರಡು ಸಾವಿರ ವರಹಗಳನ್ನು ಧಾರೆಯೆರೆದೆಯಲ್ಲಾ ! ಅಕಟಾ ! ಹುಚ್ಚನೇ ! ಮೋಸಹೋದೆಯಲ್ಲ ! ಕೈಯಾರೆಕೊಟ್ಟುದು ಬೇರೆ ಬರುವುದಿಲ್ಲವಲ್ಲ ! ದೇವಾಲಯದಲ್ಲಿ ಕೇಳಿದಂತೆ ಆ ಹಣವು ನಿನಗೆ ಬರುವುದೆಂಬ ನಂಬಿಕೆಯೇನು ? ತಿಂದಿರಲಾರದೆ ಕೈಯ್ಯಹಣವನ್ನು ಕೇಳದವೊದಲೇ ಕೊಟ್ಟುಬಿಡುವ ನಿನ್ನಂತಹ ಮೂಢನಿಗೆ ಇದು ಪ್ರಾಯಶ್ಚಿತ್ತವಲ್ಲವೆ ? " ಎಂದು ತನ್ನನ್ನು ತಾನು ನಿಂದಿಸಿಕೊಳ್ಳುತ್ತ ಮತ್ತೊಂದುಸಾರಿ, " ಛೀ ! ಛೀ !! ನನಗೇತಕ್ಕೀ ಮೋಹವು ? ಭಗವಂತನ ಸಾನ್ನಿಧ್ಯದಲ್ಲಿ ಆ ದೇವಾಲಯದಲ್ಲಿ ಪಿಶಾಚಗಳಿರುವುವೆಂದರೇನು ? ಸುಳ್ಳು ಸುಳ್ಳು ! ಪರಮೇಶ್ವರ ನಂದಿಕೇಶ್ವರರ ಸಂಭಾಷಣೆಯೇ ಅದು, ನಾನು ಕಿವಿಯಾರೆ ಕೇಳಿದುದಕ್ಕೆ ಸಂದೇಹವೇ ? ಹೇಗೆ ನಂಬದಿರುವುದು ? ಏಕೆ ನಂಬದಿರ

ಬೇಕು ? ಪರಮೇಶ್ವರನು ಸುಳ್ಳು ಹೇಳುವನೆಂದರೇನು ? ನಂದಿಕೇಶ್ವರನು ತಪ್ಪದೆ ಪರಮೇಶ್ವರನ ಆಜ್ಞೆಯಂತೆ ಮತ್ತು ತನ್ನ ವಾಗ್ದಾನವಂತೆ ಆ ಬ್ರಾಹ್ಮಣನಿಗೆ ಹಣವನ್ನು ಸತ್ಯವಾಗಿಯೂ ಕೊಡುವನು, ಅವನು ಬರೆದುಕೊಟ್ಟಿರುವ ಬಾಧ್ಯತಾನಿವೃತ್ತಿಪತ್ರದಂತೆ ನನಗೆ ಆ ಧನವು ಲಭಿಸಲೇ ಲಭಿಸುವುದು ” ಎಂದು ಸಮಾಧಾನಪಡುತ್ತ ತನ್ನಲ್ಲಿ ಬಗೆಬಗೆಯಾಗಿ ಚಿಂತಿಸುತ್ತ, ಸಿದ್ಧಾಂತಪೂರ್ವಪಕ್ಷಗಳನ್ನು ಮಾಡಿಕೊಳ್ಳುತ್ತಿದ್ದು ಕೊನೆಗೆ ಹೀಗೆ ನಿಶ್ಚಯಿಸಿಕೊಂಡನು.

“ ನಡೆಯಬೇಕಾದುದು ನಡೆದುಹೋಯಿತು ಇನ್ನಾಲೋಚಿಸಿ ಫಲವಿಲ್ಲ, ಈಗಲೂ ಕ್ರಮಿಂಚಿಹೋಗಿಲ್ಲ ತಕ್ಕಪ್ರಯತ್ನವನ್ನು ಮಾಡುವೆನು ನನ್ನ ಉದ್ದೇಶದಪ್ರಕಾರವು ಲಭಿಸಿದರೆ ಸಂತೋಷವೇಸರಿ ಹಾಗೆ ಒಂದುವೇಳೆ ಬಾರದಿದ್ದರೆ ಆಳುಗಳಿಬ್ಬರನ್ನು ಗುಟ್ಟಾಗಿ ಕಳುಹಿಸಿಕೊಟ್ಟು, ಶಿವಶರ್ಮನ ಮನೆಯನ್ನು ಪ್ರವೇಶಗೊಳಿಸಿ ನನ್ನ ಹಣವನ್ನು ಕದ್ದು ತರುವಂತೆ ಏರ್ಪಡಿಸುವೆನು, ನ್ಯಾಯಿಕವಾಗಿ ಅವನೀವರೆಗೆ ಒಂದು ಹಣವನ್ನಾದರೂ ವೆಚ್ಚಪಡಿಸಿರಲಾರನು ಇದೇ ಕೊನೆಯ ತೀರ್ಮಾನವು ” ಎಂದು ನಿಶ್ಚಯಿಸಿ ಕಾಲವನು ಕಳೆದು, ಸೂರ್ಯಾಸ್ತಮಯ ಸಮಯದಲ್ಲಿ ಹತ್ತುಸಾವಿರ ವರಹಗಳನ್ನು ತುಂಬುವುದಕ್ಕೆ ಬೇಕಾಗುವಷ್ಟು ಚೀಲಗಳನ್ನು ತೆಗೆದುಸುತ್ತಿ ಕೌಂಕುಳಿನಲ್ಲಿಟ್ಟುಕೊಂಡು, ಸ್ವಲ್ಪವಾಗಿ ಬೆಲ್ಲ, ಕಳ್ಳೆಯಪಪ್ಪು, ಕೊಬರಿ ಮೊದಲಾದ ತಿಂಡಿಯಪದಾರ್ಥಗಳನ್ನು ಗಂಟುಕಟ್ಟಿ, ಒಂದು ವಸ್ತ್ರವನ್ನು ಹೊದೆದುಕೊಂಡು ಮನೆಯಿಂದ ಹೊರಟು ಅತ್ತಿತ್ತ ತಿರುಗಿ ನೋಡುತ್ತ ಮತ್ತಾರಿಗೂ ತನ್ನ ಆಲೋಚನೆಯು ತಿಳಿಯದಂತೆ ಮೆಲ್ಲಮೆಲ್ಲನೆ ಶಿವಾಲಯಕ್ಕೆ ಹೋಗಿ, ಅಲ್ಲಿ ಆಡುತ್ತಿದ್ದ ಅರ್ಚಕರ ಹುಡುಗರನ್ನು, ಕರೆದು, ಒಳ್ಳೆಯ ಮಾತುಗಳಿಂದ ಅವರನ್ನು ಲಾಲಿಸಿ, ತಾನುತಂದ ತಿಂಡಿಯ ಪದಾರ್ಥಗಳನ್ನು ಕೊಟ್ಟು ರಹಸ್ಯವಾಗಿ ಅರ್ಚಕನ ಮನೆಯಿಂದ ಕುಂಚಿಕೆಯನ್ನು ತರಿಸಿ, ದೇವಾಲಯದ ಬಾಗಿಲುಗಳನ್ನು ತೆರೆದು ಒಳಕ್ಕೆ ಪ್ರವೇಶಮಾಡಿ ತಾನಲ್ಲಿರುವುದನ್ನು ಯಾರಿಗೂ ತಿಳಿಸದಂತೆ ಆ ಹುಡುಗರಿಗೆ ಹೇಳಿ ಬಾಗಿಲುಗಳನ್ನು ಭದ್ರಪಡಿಸಿದನು. ಹುಡುಗರು ಅವನು ಹೇಳಿದಂತೆಮಾಡಿ ಆಟವಾಡಿಕೊಳ್ಳುತ್ತಿದ್ದರು ಸೂರ್ಯನಸ್ತಮಿಸುತ್ತಿದ್ದನು, ದೇವಾಲಯದಲ್ಲಿ ಕತ್ತಲೆಯಾಗಿದ್ದರೂ ಮೆಲ್ಲನೆ ತಡವುತ್ತ ಮೇಲ್ಗಡೆಯಲ್ಲಿದ್ದ ಒಂದು ವಾತಾಯನದಿಂದ ಬರುತ್ತಿದ್ದ ಅತ್ಯಲ್ಪವಾದ ಬೆಳಕಿನ ಸಹಾಯದಿಂದ ಶಿವಲಿಂಗದ ಸಮೀಪಕ್ಕೆ ಬಂದು ನಮಸ್ಕರಿಸಿ, “ ಮಹಾದೇವ ! ಶಿವಶರ್ಮನಿಗೆ ಈ ದಿನ ಸೂರ್ಯನು ಮುಳುಗುವಹೊತ್ತಿನಲ್ಲಿ ಹತ್ತು ಸಾವಿರ ವರಹಗಳನ್ನು ಕೊಡಿಸುವಂತೆ ಅಪ್ಪಣೆ ಸಿದಿರಲ್ಲವೆ ? ಆಪ್ರಕಾರವಾಗಿ ಕೊಡುವಂತೆ ನಂದೀಶ್ವರನು ಒಪ್ಪಿಕೊಂಡಿರುವನಲ್ಲವೆ ? ಆ ಧನವು ನನಗೆ ಸೇರಬೇಕಾದುದು, ಆ ಶಿವಶರ್ಮನ ತದ್ಬಾಧ್ಯತೆಯನ್ನು ನಾನು ಕ್ರಯಕ್ಕೆ ಪಡೆದು

ಬಾಧ್ಯತಾನಿವೃತ್ತಿ ಪತ್ರವನ್ನು ಬರೆಯಿಸಿಕೊಂಡಿರುವೆನು, ಆದುದರಿಂದ ಆ ಮೊತ್ತವನ್ನು ದಯವಿಟ್ಟು ನನಗೆ ಕೊಡಿಸಬೇಕು ಇಗೋ! ಆತನು ಬರೆದು ಕೊಟ್ಟ ಪತ್ರವನ್ನು ಓದಿಹೇಳುತ್ತೇನೆ ಕೇಳಿ" ಎಂದು ತನ್ನ ಬಾಧ್ಯತೆಯನ್ನು ನುಡಿದು ತಾನು ತಂದಿದ್ದ ತಾಳಪತ್ರದ ಪತ್ರವನ್ನು ವಿವರವಾಗಿ ಓದಿದನು ಆದರೆ ಆ ವರ್ತಕನಿಗೆ ಯಾವ ಪ್ರತ್ಯುತ್ತರವೂ ದೊರೆಯಲಿಲ್ಲ, ಲಿಂಗವು ಮಾತ ನಾಡುವುದೆ? ಮತ್ತೊಮ್ಮೆ ಕೇಳಿದನು ಪ್ರತ್ಯುತ್ತರವಿಲ್ಲ ವೈಶ್ಯನಿಗೆ ಹೆದರಿಕೆಯುಂ ಟಾಯಿತು, "ಅಕಟಾ! ಶಂಕರನೇತಕ್ಕೆ ಉತ್ತರವನ್ನು ಕೊಡಲಿಲ್ಲ ನನ್ನಲ್ಲಿ ತಪ್ಪೇ ನುಂಟು? ಕ್ರಮವಾಗಿಯೇ ಪತ್ರವನ್ನು ಬರೆಯಿಸಿಕೊಂಡೆನಲ್ಲವೆ? ಹೊಟ್ಟೆಗೆ ಸರಿಯಾಗಿ ತಿನ್ನದೆ, ಒಳ್ಳೆಯ ಬಟ್ಟೆಯನ್ನು ಹೊದೆಯದೆ, ಭಿಕ್ಷಗಾರರಿಗೆಕೂಡ ಕೊಡದೆ ಕೂಡಿಸಿಟ್ಟ ಹಣದಲ್ಲ ನಾನಾಗಿ ಆ ಪಾಪಾತ್ಮನನ್ನು ಕರೆದುಕೊಟ್ಟೆನಲ್ಲ ನನಗೇತಕ್ಕೆ ಈ ದುರ್ಬುದ್ಧಿ ಹುಟ್ಟಿತು? ಏನು? ನಾನು ಮೋಸಹೋದ ಹಾಗೆಯೇ ಅಲ್ಲವೆ? ಎಂಟುಸಾವಿರ ವರಹಗಳು ಒಂದೇ ದಿನದಲ್ಲಿ ಆದಾಯವಾ ಗುವುದೆಂದು ನಂಬಿ ಮೊದಲೆ ಎರಡುಸಾವಿರ ವರಹಗಳನ್ನು ಬ್ರಾಹ್ಮಣನಿಗೆ ಕೊಟ್ಟೆನಲ್ಲ! "ಅತ್ಯಾಸೆ ಗತಿಕೆಡಿಸಿತು" ಎಂಬ ಲೋಕೋಕ್ತಿಯು ಸತ್ಯವೇ ಆಯಿತಲ್ಲ! ಮುಂದೇನು ಮಾಡುವುದಕ್ಕೂ ದಿಕ್ಕು ತೋರದಲ್ಲ! ಹಾ! ದೈವವೇ!" ಎಂದು ಬಿಕ್ಕಿಬಿಕ್ಕಿ ಅಳತೊಡಗಿದನು. ಮಾತಾಡುವರಾರು? ಅಷ್ಟ ರಲ್ಲಿ ಅವನ ಆಲೋಚನೆಯು ಬೇರೆಕಡೆಗೆ ಹೊರಟಿತು, "ಓಹೋ! ತಿಳಿಯಿತು ತಿಳಿಯಿತು! ನಾನು ಮಹಾಪರಾಧವನ್ನು ಮಾಡಿದೆನು ಸಾವಧಾನವಾಗಿ ಆಲೋ ಚಿಸದೆ ಆತುರಪಟ್ಟೆನು, ಈಶ್ವರನು ಹದಿನಾಲ್ಕು ಲೋಕಗಳಿಗೂ ಒಡೆಯನು, ಆತನು ತನ್ನ ಕಿಂಕರನಾದ ನಂದಿಗೆ ಈ ಬ್ರಾಹ್ಮಣನಿಗೆ ಹತ್ತುಸಾವಿರ ವರಹಗ ಳನ್ನು ಕೊಡೆಂದಾಜ್ಞಾಪಿಸಿದನು, ಆ ಆಜ್ಞೆಯಂತೆ ಕೆಲಸವನ್ನು ನಡೆಯಿಸಬೇ ಕಾದ ಬಾಧ್ಯತೆಯು ಆತನಲ್ಲಿರುತ್ತಿರಲು, ನಾನು ಲೋಕಾರಾಧ್ಯನಾದ ಸರ್ವೇ ಶ್ವರನಬಳಿಗೆ ಬಂದು ಕೇಳಿದುದು ನನ್ನ ಮಹಾಪರಾಧವಲ್ಲವೆ? ಅಲ್ಪವಿಷಯ ವೆಂದಾಲೋಚಿಸದೆ ತನ್ನಬಳಿಗೆ ಬಂದು ಸ್ವಲ್ಪವಾದರೂ ಗೌರವವಿಲ್ಲದೆ ನಾನು ಕೇಳಿದುದಕ್ಕೆ ಮಹಾದೇವನು ಕೋಪಿಸಿ ನನ್ನೊಡನೆ ಮಾತನಾಡದೆ ಇರುವನಲ್ಲವೆ ಬೇರೆಯಲ್ಲ, ಅಣಿಮಾದ್ಯಷ್ಟಸಿದ್ಧಿಗಳುಳ್ಳ ಮಹೇಶ್ವರನಿಗೇ ಹಣವನ್ನು ಕೊಡುವ ನುಮೊಪ್ಪುತ್ತೇ? ಓಹೋ! ಮಹಾಪಚಾರವನ್ನು ಮಾಡಿದೆನು, ನ್ಯಾಯವಾ ಗಿ ನಾನು ಕೇಳಬೇಕಾದುದು ನಂದಿಯನ್ನು ಶಿವನನ್ನಲ್ಲ ಮಿಂಚಿದುದೇನು? ಈಗ ಆತನಬಳಿಗೆ ಹೋಗಿ ಕೇಳುವೆನು" ಎಂದು "ಶಿವಶಿವ" ಎಂದು ಕೆನ್ನೆ ಬಡಿದುಕೊಂಡು, ಈಶ್ವರನಕಡೆಗೆ ತಿರುಗಿ ನಮಸ್ಕರಿಸಿ, "ದೇವಾ! ಮೂರ್ಖ ತ್ವದಿಂದ ತಾರತಮ್ಯವನ್ನರಿಯದೆ ಹಣವನ್ನು ಕೊಡೆಂದ ನಿನ್ನನ್ನು ಕೇಳಿದೆನು,

ನೀನು ಮಾತನಾಡದಿದ್ದುದಕ್ಕಾಗಿ ಬಹಳವಾಗಿ ಹಲುಬಿದೆನು, ಅರಿಯದೆ ಮಾಡಿದ ಅಪರಾಧವನ್ನು ಕ್ಷಮಿಸು, ನಾನು ನಂದೀಶ್ವರನಬಳಿಗೆ ಹೋಗಿ ಆತನನ್ನು ಕೇಳಿ ಹಣವನ್ನು ತೆಗೆದುಕೊಳ್ಳುವೆನು " ಎಂದು ಹೇಳಿ ಚೀಲಗಳನ್ನು ಮತ್ತು ಪತ್ರವನ್ನು ತೆಗೆದುಕೊಂಡು, ಗರ್ಭಗೃಹವನ್ನು ಬಿಟ್ಟು ಅದೇ ಆವರಣದಲ್ಲಿದ್ದ ನಂದಿಯಬಳಿಗೆ ಬಂದನು, ಆ ನಂದಿವಿಗ್ರಹವು ಕಲ್ಲಿನದಲ್ಲ, ತಾಮ್ರದ ತಗಡುಗಳಿಂದ ಮಾಡಲ್ಪಟ್ಟುದು, ನಿಪುಣನಾದ ಶಿಲ್ಪಿಯು ತನ್ನ ಜಾಣ್ಮೆಯನ್ನು ಆ ವಿಗ್ರಹದಲ್ಲಿ ಚೆನ್ನಾಗಿ ಪ್ರದರ್ಶಿಸಿದ್ದನು, ಪೃಷ್ಠಭಾಗದಲ್ಲಿ ೫ ಅಂಗುಲದ ವ್ಯಾಸವುಳ್ಳ ಒಂದು ರಂಧ್ರವನ್ನು ಮಾಡಿದ್ದನು, ಅದನ್ನು ಏತಕ್ಕೆ ಮಾಡಿದ್ದನೋ ಆ ವಿಚಾರವು ಯಾರಿಗೂ ತಿಳಿದಿರಲಿಲ್ಲ, ವೈಶ್ಯಕುಲಶಿಖಾಮಣಿ ಅದರಬಳಿಗೆ ಮೆಲ್ಲಗೆ ಬಂದನು, " ಎಲೈ ನಂದಿಕೇಶ್ವರನೇ ! ನೀನಾ ಬ್ರಾಹ್ಮಣನಿಗೆ ಕೊಡಬೇಕಾಗಿ ಸಂಕಲ್ಪಿಸಿರುವ ಹಣವನ್ನು ಅವನಿಗೆ ಕೊಡಬೇಕಾದುದಿಲ್ಲ, ಆ ಹಣದ ಬಾಧ್ಯತೆಯನ್ನು ಲಿಖಿತಮೂಲಕವಾಗಿ ನಾನು ವಹಿಸಿರುವೆನು ಇಗೋ ಆ ಪತ್ರವು " ಎಂದು ತೋರಿಸಿ ತಾನೇ ಓದಿ ಹಣವನ್ನು ಕೊಡೆಂದನು ಕೊಡುವರಾರು ? ನಂದಿಯು ಪ್ರತ್ಯುತ್ತರವನ್ನು ಕೊಡಲಿಲ್ಲ, ಮೃದುವಚನಗಳಿಗೆ ಹಣವನ್ನಿವನು ಕೊಡುವುದಿಲ್ಲವೆಂದು ಹೇಳಿ ಗಟ್ಟಿಯಾದ ಧ್ವನಿಯಿಂದಲೂ ದೌರ್ಜನ್ಯಯುಕ್ತಗಳಾದ ನುಡಿಗಳಿಂದಲೂ ತರ್ಜಿಸಿ ಕೇಳಿದನು ಉತ್ತರವೇ ಇಲ್ಲ, ಆ ವರ್ತಕನಿಗೆ ಭಯವು ಮಿಂಚಿತು ಪ್ರಪಂಚವೇ ಮುಳುಗಿಹೋದಂತಾಯ್ತು, " ಮೋಸವಾಯಿತು ಗಾಳಿಮಾತುಗಳನ್ನು ನಂಬಿ ಹಣವನ್ನು ಕಳೆದುಕೊಂಡೆನಲ್ಲ ! ಎಂದುಕೊಂಡನು ದುಃಖವು ಮಿಂಚಿಹೋಗಿ ಮೈನಡುಗತೊಡಗಿತು, ಬೆವರಿತು ಸಂತಾಪವು ತಲೆದೋರಿ ತತ್ತರಿಸತೊಡಗಿದನು ಕೋಪವು ಮೇರೆಮೀರಿತು ಆವೇಶ ಬಂದಂತಾಯಿತು ಆಗ ನಂದಿಯನ್ನು ನೋಡಿ, " ಇದೆಂತಹ ಧರ್ಮ ? ಇದೆಂತಹ ಹಿರಿಯತನವು ? ದೇವತೆಗಳೇ ಅಸತ್ಯವನ್ನು ಹೇಳಲಾರಂಭಿಸಿದರೆ ಪರರ ಮಾತುಗಳೇನು ಲೆಕ್ಕಕ್ಕೆ ಬರುವುದೇ ? ಸಾಕುಸಾಕು ಚೆನ್ನಾಗಿದೆ ನಂದೀಶ್ವರನೆ ! ನನ್ನ ಮಾತುಗಳಿಗುತ್ತರವನ್ನು ಕೊಡುವುದಿಲ್ಲವೆ ಏನು ? ಉತ್ತರವನ್ನು ಹೇಳದಿದ್ದಮಾತ್ರಕ್ಕೆ ನಿನ್ನನ್ನು ಬಿಟ್ಟುಹೋಗುವನೆಂದರಿತೆಯಾ ? ನಾನು ಕೋನುಟಿ ಎಲ್ಲರೂ ಉಪಾಯಗಳನ್ನು ನಮ್ಮಲ್ಲಿ ಕಲಿಯಬೇಕು, ನನಗೇನೂ ಹುಚ್ಚಿಲ್ಲ ನಿನ್ನ ಬಿಟ್ಟುಹೋಗುವುದಕ್ಕೆ, ನನ್ನ ಹಣವನ್ನು ನನಗೆ ಕೊಟ್ಟುಬಿಡು ನಿನ್ನ ಗೌರವವನ್ನು ಕಾಪಾಡಿಕೊ " ಎಂದು ತನ್ನ ಮನಸ್ಸಿಗೆ ಬಂದಹಾಗೆಲ್ಲ ಕೂಗಿಕೊಂಡನು, ತನ್ನ ಶಕ್ತಿಯನ್ನೆಲ್ಲ ವೆಚ್ಚಮಾಡಿದನು ಅಡಿಗಡಿಗೆ ಕೋಪವು ಹೆಚ್ಚಿತು ಮತ್ತೊಮ್ಮೆ ಆವೇಶವು ಬಂದಿತು, ಆಗ " ಛೀ ! ಛೀ !! ನಂದಿಯೇ ! ಅನೃತವಾದಿಯೇ ! ವಂಚಕನೇ ! ದುರಾತ್ಮನೇ ! ನನ್ನ ಹಣವನ್ನು ಕೊಟ್ಟುಬಿಡು ಕೊಡದಿದ್ದರೆ ನಿನ್ನ

ತಲೆಯನ್ನು ಕಡಿದಿಡುವೆನು ನಿನ್ನ ನಾಲಗೆಯನ್ನು ಸೀಳಿಬಿಡುವೆನು, ಇನ್ನು ನಿನ್ನ ದಾಕ್ಷಿಣ್ಯವು ಎಳ್ಳನಿತೂ ನನಗೆ ಬೇಡ ನಿನ್ನ ದಾಕ್ಷಿಣ್ಯವನ್ನು ಗಣಿಸುವುದಿಲ್ಲ" ಎಂದು ಉಗ್ರಸ್ವರೂಪವನ್ನುತಾಳಿ ಕಾಲಿಗೆ ತಡವಿದ ಒಂದು ಕಲ್ಲನ್ನು ತೆಗೆದು ಕೊಂಡು ನಂದಿಯನ್ನು ಹೊಡೆದನು. ಆ ವಿಗ್ರಹವು ದೇವಾಲಯದ ಒಳಗಡೆ ಇರುವುದರಿಂದಲೂ ಅದು ತಾಮ್ರದ ತಗಡುಗಳಿಂದ ಮಾಡಲ್ಪಟ್ಟಿರುವುದರಿಂ ದಲೂ ಟೊಳ್ಳಾಗಿದ್ದುದರಿಂದಲೂ ಪೃಷ್ಠಭಾಗದಲ್ಲಿ ಒಂದು ರಂಧ್ರವಿದ್ದುದರಿಂ ದಲೂ ಕಲ್ಲಿನಪೆಟ್ಟು ಆ ವಿಗ್ರಹಕ್ಕೆ ತಗಲುತ್ತಲೇ "ಘಣಘಣ" ಎಂದು ಒಂದುಬಗೆಯಾದ ಧ್ವನಿಯುಂಟಾಯಿತು, ಆ ಧ್ವನಿಯನ್ನು ಆ ಸೆಟ್ಟಿಯು ಕೇಳಿ ತನ್ನಲ್ಲಿ "ಅಚ್ಚರಿ! ಅಚ್ಚರಿ!! ದುಷ್ಟನಾದ ಈ ನಂದಿಯು ಚಂದ್ರಶೇಖರನ ಅಪ್ಪಣೆಯಂತೆ ಹಣವನ್ನು ತಂದು, ಅದನ್ನು ನನಗೆ ಕೊಡಲಿಷ್ಟವಿಲ್ಲದೆ ಹೊಟ್ಟೆಯ ಕೆಳಭಾಗದಲ್ಲಿ ಬಚ್ಚಿಟ್ಟು ಏನೂ ತಿಳಿಯದವನಂತೆ ನಡಿಯದಿರುವನು ನನ್ನ ಹೊಡೆತದಿಂದ ಇವನು ಚಲಿಸುತ್ತಲೂ ಇವನ ಕಳ್ಳತನವು ವ್ಯಕ್ತವಾಯಿತು, ಕೀಳ್ಹೊಟ್ಟೆಯೊಳಿಟ್ಟುಕೊಂಡಿರುವ ಧನದ ಶಬ್ದವೇ ಈ ಧಣಂ ಧಣನಿನಾದವು, ಎಲೆ ಚೋರಾಗ್ರಣೀ! ಎಂತಪ್ಪ ವಂಚಕನೋ ನೀನು! ಬಿಟ್ಟುಹೋಗುವನೆಂದು ತಿಳಿದೆಯಾ? ಆವನಪ್ಪನ ಮನೆಯ ಒಡವೆಯೆಂದಿದನ್ನು ಹೊಟ್ಟೆಕೆಳಗೆ ಅಡಗಿಸಿ ಕೊಂಡಿರುವೆ?" ಎಂದು ಬುದ್ಧಿಹೀನನಾದ ಆ ವೈಶ್ಯನು ನಿಜವಾಗಿಯೂ ನಂದಿಯ ಕಿಬ್ಬೊಟ್ಟೆಯಲ್ಲಿ ಧನವಿರುವುದೆಂದು ನಿಶ್ಚಯಿಸಿ ನಂದಿಯ ವಿಗ್ರಹದಬ ಳಿಗೆ ಹೋಗಿ ಅದನ್ನೊಂದುಪಕ್ಕಕ್ಕೆ ತಳ್ಳಿ ಆ ಹಣವನ್ನು ತೆಗೆದುಕೊಳ್ಳಬೇಕೆಂದು ವಿಶ್ವಪ್ರಯತ್ನವನ್ನು ಮಾಡಿದನು, ಚಲಿಸದಿರುವಂತೆ ದೃಢವಾಗಿ ಸ್ಥಾಪಿಸಲ್ಪಟ್ಟಿ ರುವ ಅದು ಕದಲುವುದೆ? ತಳ್ಳಿಬಿಡುವುದಕ್ಕೆ ಆ ವಿಗ್ರಹದಲ್ಲಿ ಯಾವಕಡೆಯಲ್ಲಿ ಯಾದರೂ ಪಟ್ಟುಸಿಕ್ಕುವುದೇನೋ ಎಂದು ಸುತ್ತಲೂ ತಡವಿನೋಡಿದನು, ಪೃಷ್ಠಭಾಗದಲ್ಲಿರುವ ಆ ದೊಡ್ಡ ರಂಧ್ರವು ಕೈಗೆ ದೊರೆಯಿತು, "ಓಹೋ! ದೊರೆಯಿತು! ದೊರೆಯಿತು! ಈ ರಂಧ್ರದಲ್ಲಿ ಕೈಯನಿಟ್ಟು ಇವನ ಹೊಟ್ಟೆಯ ಕೆಳಗೆ ಹಣವಿರುವುದೋ ಇಲ್ಲವೋ ತಿಳಿದುಕೊಳ್ಳುವೆನು" ಎಂದುಬಗೆದು ಮೆಲ್ಲ ಮೆಲ್ಲಗೆ ಕೈಯನ್ನುಚಾಚಿ ಆ ವಿಗ್ರಹದ ಹೊಟ್ಟೆಯಡೊಳ್ಳಿನಲ್ಲಿ ಸುತ್ತಲೂ ತಡವಿ ನೋಡಿದನು ಏನೂ ದೊರಕಲಿಲ್ಲ ಅವನು ಬೆಪ್ಪಾದನು ಕೈಯನ್ನು ಆ ಟೊಳ್ಳೆ ಯಿಂದೀಚೆಗೆ ತೆಗೆದುಕೊಳ್ಳುವುದಕ್ಕೆ ಪ್ರಯತ್ನಿಸಿದನು ಕೈಹೊರಕ್ಕೆ ಬಾರದೆ ಅಲ್ಲಿಯೇ ಸಿಕ್ಕಿಕೊಂಡಿತು, ಸ್ವಲ್ಪಕಾಲ ಕಿತ್ತಾಡಿದನು ಮೊಣಕ್ಕೆ ಬಾತುಕೊಂ ಡಿತೇ ಹೊರತು ಕೈಹೊರಕ್ಕೆ ಬರಲಿಲ್ಲ, "ಅಯ್ಯೋ! ನಂದಿ! ದುಷ್ಟಾ! ಹಣದಮಾತಂತಿರಲಿ! ನನ್ನ ಕೈಯನ್ನು ಹಿಡಿದುಕೊಂಡಿರುವೆಯಾ? ನೀಚಾ! ಬಿಡೋ ನನ್ನ ಕೈಯನ್ನು ಮೊದಲುಬಿಡು ಇದು ನಿನಗೆ ಒಳ್ಳೆಯದಲ್ಲ! ಇದು

ಉತ್ತಮರ ಕಾರ್ಯವಲ್ಲ ಬಿಡು ! ಬಿಡು !! " ಎಂದು ನಿಜವಾಗಿಯೂ ನಂದಿ ತನ್ನ ಕೈಯನ್ನು ಹಿಡಿದುಕೊಂಡಿರುವನೆಂದು ಬಗೆದು ಒಂದುಸಲ ಪ್ರಾರ್ಥಿಸಿ ಒಂದುಸಾರಿ ಹೊಡೆದೊಂದುಬಾರಿ ಬಗಬಗೆಯಾಗಿ ಹಲುಬುತೊಂದಾವೃತ್ತಿ ತನ್ನ ಶ್ರೈಲಾದಮಟ್ಟಿಗೆ ಎಲ್ಲಾ ಪ್ರಯತ್ನಗಳನ್ನೂ ಮಾಡಿದನು, ಏನುಮಾಡಿದರೂ ಅಪನಕೈ ಹೊರಕ್ಕೆ ಬರಲಿಲ್ಲ, ಬಹಳವಾಗಿ ಭಯಪಟ್ಟು ಕಳವಳಗೊಂಡನು, ಹೀಗಿರುತ್ತಿರಲು ಮತ್ತೆ ಶಿವಲಿಂಗದಿಂದ ಹಿಂದಿನಂತೆ " ಓನಂದಿ ! ಓನಂದೀ " ಎಂಬ ಶಬ್ದವು ಕೇಳಬಂದಿತು. ಆಗ ಆ ಸೆಟ್ಟಿಯು ಆ ಧ್ವನಿಯನ್ನು ಕೇಳಿ ಹಣ ವನ್ನು ಕೊಟ್ಟುಬಿಡುವಂತೆ ನಂದಿಗೆ ಶಿವನು ಹೇಳುವನೆಂದಾಲೋಚಿಸಿ ಸ್ವಲ್ಪವು ಟ್ಟಿಗೆ ಸಂತೋಷಿಸಿದನು, ಆದರೆ ಆ ಸಂತೋಷವು ಬಹಳಹೊತ್ತಿರಲಿಲ್ಲ, ಆ ವಿಗ್ರ ಹವು ಸರ್ತಕನಿಗೆ ಯಾವ ಉತ್ತರವನ್ನೂ ಕೊಡಲಿಲ್ಲವಷ್ಟೆ ಈಗ ಆ ವಿಗ್ರಹದಿಂ ದಲೇ " ಮಹಾದೇವ ! ಸೇವಕನಿದೆ ಆಜ್ಞಾಬದ್ಧನಾಗಿ ಸಿದ್ಧನಾಗಿರುವನು ಏನ ಪ್ಪಣೆ ? "! ಎಂದು ಶಬ್ದವೊಂದು ಹೊರಟಿತು. ಆ ಸೆಟ್ಟಿಯ ಮಾತುಗಳನ್ನು ... ಆಶ್ಚರ್ಯವಿಭ್ರಮಗಳನ್ನು ತಾಳ್ತಿರಲು ಶಿವನು, " ನಂದೀಶ್ವರಾ ! ಈ ದಿನ ಸಾಯಂಕಾಲದೊಳಗಾಗಿ ಶಿವಶರ್ಮನಿಗೆ ಹತ್ತುಸಾವಿರ ವರಹಗಳನ್ನು ಕೊಡತ ಕ್ಕದೆಂದು ಹೇಳಿದೆನಲ್ಲ ! ಕೊಟ್ಟುದಾಯ್ತು ? ಎಂದು ಕೇಳಿದನು, ಆ ಮಾತಿಗು ತ್ತರವಾಗಿ ನಂದೀಶ್ವರನ ಆ ತಾಮ್ರವಿಗ್ರಹದಿಂದ " ಸ್ವಾಮೀ ! ಶಂಕರಾ ! ಭಕ್ತಜನವಶಂಕರಾ ! ಶತ್ರುನಾಶಂಕರಾ ! ನಿನ್ನ ಆಜ್ಞೆಯಂತೆ ಈ ದಿನ ಮೊದಲ ನೆಯ ಯಾಮದಲ್ಲಿಯೇ ಎರಡುಸಾವಿರ ವರಹಗಳನ್ನು ಒಬ್ಬ ಧನಿಕನಿಂದ ಕೊಡಿ ಸಿರುವೆನು, ಮುಂದೆ ಆತನಿಗೆ ಎಂಟುಸಾವಿರ ವರಹಗಳು ಸಲ್ಲಬೇಕಾಗಿರುವುದು, ಅದನ್ನೀಗಲೆ ಕೊಟ್ಟುಬಿಡಬೇಕೆಂದು ವರ್ತಕನ ಕೈಯನ್ನು ಹಿಡಿದುಕೊಂಡಿರು ವೆನು, ಕೊಡುವುದಿಲ್ಲವೆಂದು ಕಿತ್ತಾಡುತ್ತಿರುವನು, ಕೊಡುವವರೆಗೂ ನಾನು ಬೇರೆ ಬಿಡುವುದಿಲ್ಲ ಅವನೆಷ್ಟು ಕಿತ್ತಾಡಿದರೇನು ? ಕೊಡದಿದ್ದರೆ ತಪ್ಪುವುದಿಲ್ಲ, ಇನ್ನೊಂದು ಗಳಿಗೆಯೊಳಗಾಗಿ ಒಂದುಕಾಸಾದರೂ ಕಡಿಮೆಯಾಗದಂತೆ ಕೊಡಿ ಸಿಬಿಡುವೆನು " ಎಂಬ ಮಾತುಗಳು ಹೊರಹೊಮ್ಮಿತು, ಇಂದುಶೇಖರ ನಂದೀ ಶ್ವರ ಸಂವಾದವನ್ನು ಕೇಳುತ್ತಲೇ ವರ್ತಕನು ನಿರ್ವಿಣ್ಣನಾದನು, ಕೋಪವೂ ದುಃಖವೂ ಪ್ರಬಲಿಸಿತು. "ಛೀ! ಛೀ! ಕೈಬಿಡು. ತುಂಟತನವನ್ನು ಮಾಡಬೇಡ. ಎರಡು ಸಾವಿರ ವರಹಗಳನ್ನು ಕೊಡಿಸಿದೆಯೋ? ಇನ್ನೆಂಟು ಸಾವಿರವನ್ನು ಕೊಡಿ ಸುವೆಯೋ ? ವಂಚಕನೇ, ಹೋದುದುಹೋಯಿತು. ಎಂಟುಸಾವಿರವನ್ನು ಕೊಡಿಸುವವರಾರು? ಅವಿವೇಕಿಯೇ ! ಇದೇನೇ ನಿನ್ನ ಪ್ರಜ್ಞೆ? ಇಂತಹ ಕೆಲ ಸಗಳು ನಿನಗುಚಿತವೆ? ಎಷ್ಟುಮೋಸ ಎಷ್ಟುಮೋಸ. ಬಡುಗಣ್ಣರ ನುಡಿ ಗಳು ಸುಳ್ಳಲ್ಲವೆಂದು ನಂಬಿದುದಕ್ಕೆ ನೀನು ಹೀಗೆ ವಿಶ್ವಾಸದ್ರೋಹವನ್ನು ಮಾಡು·

ವುದೆ? ಸಾಕು, ಇಷ್ಟಕ್ಕೇ ಬಿಟ್ಟುಬಿಡು.'' ಎಂದು ಗಟ್ಟಿಯಾಗಿ ಕೂಗಿಕೊಳ್ಳುತ್ತ ಕೈಯ್ಯನ್ನು ಕೀಳುತ್ತಿದ್ದನು. ಆ ಸಮಯದಲ್ಲಿ ಸಂಧ್ಯಾಪೂಜೆಗಾಗಿ ಅರ್ಚಕನು ಬಂದು ಬಾಗಿಲುಗಳನ್ನು ತೆರೆಯಬೇಕೆಂದಿರುವಾಗ ಈ ವರ್ತಕನು ಅರುಚುವುದು ಕಿವಿಗೆಬಿದ್ದಿತು ಆತನಿಗೆ ಹೆದರಿಕೆಯುಂಟಾಯಿತು. "ಅಯ್ಯೋ! ಸತ್ತೆನು! ಸತ್ತೆನು! ಅಪ್ಪೋ! ಈ ಗುಡಿಯಲ್ಲಿ ಭೂತವೊಂದು ಸೇರಿರುವುದು, ಅರಚುತ್ತಿರುವುದು. ಬಾಗಿಲನ್ನು ತೆರೆದರೆ ನನ್ನ ಕೆಲಸವು ಮುಗಿಯಿತು. ಅರ್ಚಕತ್ವವು ಹೋದರೂ ಚಿಂತೆಯಿಲ್ಲ. ನಾನೀಗುಡಿಯ ಕದಗಳನ್ನು ತೆರೆಯುವುದಿಲ್ಲ. "ಜೀವಂಭದ್ರಾಣಿ ಪಶ್ಯತಿ'' ಎಂಬಂತೆ ಬದುಕಿದ್ದರೆ ಶುಭಗಳನ್ನು ಪಡೆಯಬಹುದು.'' ಎಂದು ಗದ್ಗದ ಸ್ವರದಿಂದ ಹೇಳಿಕೊಳ್ಳುತ್ತ ಧರ್ಮಕರ್ತನ ಮನೆಗೆ ಓಡಿಬಂದು ನಡುಗುತ್ತ "ಅಯ್ಯಾ! ಶಿವಾಲಯದಲ್ಲಿ ಭೂತವೊಂದು ಪಿಶಾಚಿಯು ಸೇರಿಕೊಂಡಿರುವುದು. ಕುಣಿಯುತ್ತಿರುವುದು, ಕೂಗಿಕೊಳ್ಳುತ್ತಿರುವುದು. ಗುಡಿಯಲ್ಲಿ ದೀಪಗಳನ್ನಿಟ್ಟು, ಆರಾಧನೆಯನ್ನು ಮಾಡಿ ಬರಬೇಕೆಂದು ಹೋದೆನು. ಹೇಗೋ ಅದೃಷ್ಟವಶದಿಂದ ತಪ್ಪಿಸಿಕೊಂಡು ಬದುಕಿಬಂದೆನು, ನಾನಿನ್ನು ಗುಡಿಯೊಳಕ್ಕೆ ಹೋಗುವುದಿಲ್ಲ. ಭೂತಸ್ಪರ್ಶವಾದವರಿಂದಲೂ, ದೀಪಾರಾಧನೆ ತಪ್ಪಿಹೋಗುವುದರಿಂದಲೂ ಮತ್ತೆ ಪೂಜಾದಿಗಳನ್ನು ಮಾಡಬೇಕಾದರೆ ಸಂಪ್ರೋಕ್ಷಣೆಯನ್ನು ಮಾಡಬೇಕಾಗುವುದು. ಇದ್ದ ಸಂಗತಿಯನ್ನರಿಕೆಮಾಡಿರುತ್ತೇನೆ. ಇನ್ನು ನನಗೀ ಉದ್ಯೋಗವೇಬೇಡ, ಇದೊ ಕುಂಚಿಕೆಯನ್ನು ಕೊಳ್ಳಿ'' ಎಂದು ಹೇಳಿ ಕುಂಚಿಕೆಯನ್ನಾತನ ಮುಂದಿಟ್ಟನು.

ದೇವಾಲಯದ ಧರ್ಮಕರ್ತನಾ ಅದ್ಭುತೋಕ್ತಿಗಳನ್ನು ಕೇಳಿ, ಬೆಚ್ಚಿಬಿದ್ದು "ಏನು? ಭೂತವೆ? ಪಿಶಾಚಿಯೆ? ದೇವಸ್ಥಾನದಲ್ಲಿದೆಯೆ? ಹುಚ್ಚನೆ, ಲೋಕಶಂಕರನ ಆಲಯದಲ್ಲಿ ಪಿಶಾಚಿಯೆಂದರೇನು? ಭೂತವೆಂದರೇನು? ಆತನ ನಾಮೋಚ್ಚಾರಣೆಯನ್ನು ಮಾಡಿದಮಾತ್ರಕ್ಕೆ ಸಮಸ್ತ ಭೂತಪ್ರೇತಾದಿಗಳ ಭಯವು ನಿವಾರಣೆಯಾಗುವುದಲ್ಲ! ಹೀಗಿರುವಾಗ ಗುಡಿಯಲ್ಲಿ ಪಿಶಾಚಿಯಿರುವುದೆ? ಸುಳ್ಳು! ಸುಳ್ಳು! ಯಾವ ಶಬ್ದವು ನಿನ್ನ ಕಿವಿಯಲ್ಲಿ ಬಿದ್ದಿತ್ತೋ! ಹೆದರಿಕೊಂಡು ಓಡಿಬಂದು ಹೀಗೆ ಹೇಳುತ್ತಿರುವೆ' ಈ ನಿನ್ನ ಮಾತುಗಳನ್ನಾರಾದರೂ ಕೇಳಿದರೆ ನಕ್ಕಾರು? ಭೂತಗಳೂ ಇಲ್ಲ, ಪಿಶಾಚಿಗಳೂ ಇಲ್ಲ, ಹೋಗು, ದೀಪಗಳನ್ನಿಟ್ಟು ಆರಾಧಿಸು, ನಿನ್ನ ಧರ್ಮ! ಸಂಪ್ರೋಕ್ಷಣೆ ಆಗುವಂತೆ ಮಾತ್ರ ಮಾಡಬೇಡ. ಎಷ್ಟುಹೇಳಿದರೂ ಭೀತಿಗ್ರಸ್ತನಾದ ಆ ದೇವಾಜೀವಿಯು ಕುಳಿತವನು ಏಳಲೇ ಇಲ್ಲ, ಹೋಗುವುದೇ ಇಲ್ಲವೆಂದು ಹಠಹಿಡಿದನು. ಧರ್ಮಕರ್ತನು ತದ್ರಹಸ್ಯವನ್ನು ತಿಳಿಯಲಿಚ್ಛಿಸಿ ನಾಲ್ಕೈದುಮಂದಿ ಗಟ್ಟಿಗರಾದ ಆಳುಗಳನ್ನು ಕರೆದುಕೊಂಡು, ದೀವಟಿಗೆಯನ್ನು ಹಿಡಿಸಿಕೊಂಡು ದೇವಲಕ ಸಹಿತನಾಗಿ ಗುಡಿ

ಗೆಬಂದನು. ಮುಂದಾಗಿಹೋಗಿ ದೇವಾಲಯದ ಬಾಗಿಲನ್ನು ತೆಗೆಯಲಂಜಿ ಅರ್ಚಕನು ಹಿಂದೆಯೇ ನಿಂತನು. ಮತ್ತೊಬ್ಬನು ಹೋಗಿ ಬಾಗಿಲನ್ನು ತೆಗೆಯುತ್ತಲೂ ಎಲ್ಲರೂ ಒಳಕ್ಕೆ ನುಗ್ಗಿದರು. ಆದರೆ ಅರ್ಚಕನು ಮಾತ್ರ ನಡುಗುತ್ತ ನಿಂತಿದ್ದನು. ಧರ್ಮಾಧಿಕಾರಿಯು ದೇವಾಲಯವನ್ನು ಪ್ರವೇಶಿಸುವಾಗಲೂ, ಆ ವೈಶ್ಯನ ವಾಕ್ಯಗಳು ಕೇಳಬಂದಿತು. ಎಲ್ಲರೂ ಆ ರಭಸಯುಕ್ತವಾದ ವಾಕ್ಯಬೃಂದವನ್ನು ಕೇಳಿ ಭಯಪಟ್ಟಿದ್ದರು. ಆದರೂ ದೀವಟಿಯ ಬೆಳಕಿನಲ್ಲಿ ಅವರು ಒಬ್ಬೊಬ್ಬರಾಗಿ ನುಗ್ಗಿನೋಡಲು ಚಂದ್ರಗುಪ್ತನು ನಂದಿಯ ಪೃಷ್ಠಭಾಗದಲ್ಲಿದ್ದ ದೊಡ್ಡ ರಂಧ್ರದಲ್ಲಿ ಕೈಯನಿರುಂಕಿಸಿಕೊಂಡು ಎಳೆದಾಡುತ್ತಿದ್ದನು ಕೆಳಗೊಂದು ತಾಳೆಯಪತ್ರವೂ ಚೀಲಗಳೂ ಬಿದ್ದಿರುವುದು ಮಾತ್ರ ಗೋಚರಿಸಿತು. ಧರ್ಮಾಧಿಕಾರಿಗೆ ಆಶ್ಚರ್ಯವಾಯಿತು. ಅವನಲ್ಲಿಗೆ ಹೇಗ ಬಂದನೆಂಬುದೂ, ಅವನ ಕೈಯು ಆ ರಂಧ್ರದಲ್ಲಿ ಹೇಗೆ ಸಿಕ್ಕಿಕೊಂಡಿತೆಂಬುದೂ, ಸಿಕ್ಕಿಕೊಂಡುದಕ್ಕೆ ಕಾರಣವೇನೆಂಬುದೂ ತಿಳಿಯದೆ ಅವನು ಆಲೋಚಿಸುತ್ತಿದ್ದು ಕೆಳಗೆ ಬಿದ್ದಿದ್ದ ತಾಳೆಯೋಲೆಯನ್ನು ಕಂಡು, ಅದನ್ನು ಹಿಡಿದೆತ್ತಿ ಆ ಸ್ವಲ್ಪವಾದ ಬೆಳಕಿನಲ್ಲಿ ಓದಿಕೊಂಡನು. ಅದೆಲ್ಲವೂ ವಿಚಿತ್ರವಾಗಿ ಕಂಡುಬಂದುದರಿಂದ ಆ ವರ್ತಕನನ್ನು ನೋಡಿ ಅದರ ಕಾರಣವನ್ನು ಪ್ರಶ್ನೆಮಾಡಿದನು. ಅವನು ನಾಚಿ ಮೊದಲು ಹೇಳಲಿಲ್ಲ, ನಿರ್ಬಂಧಿಸಿದುದರಮೇಲೆ ವಿಷ್ಯಾಂತರವಿಲ್ಲದೆ ನಡೆದುದನ್ನೆಲ್ಲ ಹೇಳಿ, "ಈದಿನ ಪ್ರಾತಃಕಾಲದಲ್ಲಿ ಆ ಹಾರುವನಿಗೆ ಎರಡು ಸಾವಿರ ವರಹಗಳನ್ನು ಕೊಟ್ಟಿರುವೆನು. ನಾನು ಸತ್ತರೂ ಸರಿ, ಅವನಿಗಿನ್ನೊಂದು ಕವಡೆಯನ್ನಾದರೂ ಕೊಡುವುದಿಲ್ಲ" ಎಂದು ಶಪಥಪೂರ್ವಕವಾಗಿ ಹೇಳಿದನು. ಆ ಚರಿತ್ರವನ್ನು ಎಲ್ಲರೂ ಕೇಳಿ ಆಶ್ಚರ್ಯಪಟ್ಟು ಅವನ ಅವಿವೇಕವನ್ನು ಕುರಿತು ಪರಿಹಾಸಮಾಡಿ ನಕ್ಕು, ಅವನ ಕೈಯನ್ನು ಈಚೆಗೆ ತೆಗೆಯಲಿಕ್ಕೆ ಉಪಾಯವನ್ನಾಲೋಚಿಸಿದರು. ಅಷ್ಟರಲ್ಲಿ ಈ ವರ್ತಮಾನವು ಊರಲ್ಲೆಲ್ಲ ಹರಡಿ ಅನೇಕರು ಓಡಿಯೋಡಿ ಬಂದರು. ಎಲ್ಲರೂ ಬಗೆಬಗೆಯಾಗಿ ಉಪಾಯಗಳನ್ನು ಹೇಳಲಾರಂಭಿಸಿದರು. ಕೆಲವರು ಅವನ ಕೈಯ್ಯನ್ನೆಳೆದು ನೋಡಿದರು, ತಿರುಗಿಸಿದರು, ಬರಲಿಲ್ಲ. ಒಳಗೆ ಆಕೈ ಹೇಗೆ ತಗುಲಿಕೊಂಡಿದೆಯೋ ಪರೀಕ್ಷಿಸಬೇಕೆಂದು ಕೆಲವರಾಲೋಚಿಸಿದರು. ಆದರೆ ತಮ್ಮ ಕೈಗಳನ್ನಿಡಲು ಯಾರಿಗೂ ಧೈರ್ಯವಾಗಲಿಲ್ಲ.

ಅವರಲ್ಲಿ ಯುಕ್ತಾಯುಕ್ತ ವಿಚಾರಶೀಲನೂ, ಭಗವದ್ಭಕ್ತನೂ ಆದ ಒಬ್ಬನಿಂತೆಂದನು—"ಧರ್ಮಾಧಿಕಾರಿಗಳೇ! ನನ್ನದೊಂದರಿಕೆ. ಈ ದೇವಾಲಯವನ್ನು ಕಟ್ಟಿ ಅನೇಕ ವರ್ಷಗಳಾಗಿರುವುದಷ್ಟೆ? ಈವರೆಗೆ ಇಂತಹ ವಿಚಿತ್ರವು ನಡೆದಿರುವಂತೆ ಯಾರೂ ಕಂಡು ಕೇಳಿ ಅರಿಯರು. ನಮ್ಮಲ್ಲಿ ನೂರಾರು ವತ್ಸರಗಳ ವೃದ್ಧ

ರಿರುವರಷ್ಟೆ? ಕೇಳಿ, ಎಲ್ಲರನ್ನೂ, ನಂದಿವಿಗ್ರಹದ ಬೆನ್ನಿನಲ್ಲಿ ಆರಂಭದಿಂದಲೂ ಇರುವ ರಂಧ್ರವೇ ಇದು. ಎಂದಾದರೂ ಯಾರ ಕೈಯಾದರೂ ಇದರಲ್ಲಿ ಸಿಲು ಕಿದ್ದಿತೇ? ಇಲ್ಲವಲ್ಲ! ಈ ವಿಚಿತ್ರವ್ಯಾಪಾರವು ದೈವಮಾಯೆಯಿಂದಾಗಿರುವುದ ಲ್ಲದೆ ಬೇರೆಯಲ್ಲ. ಶಿವಶರ್ಮನಿಗೆ ಈತನೇ ಪೂರ್ವಜನ್ಮದಲ್ಲಿ ಋಣಸ್ಥನಾಗಿರು ವಂತೆ ತೋರುವುದು. ಆ ಋಣವನ್ನೀತನೀಗಳೆ ತೀರಿಸಲೇಬೇಕಾಗಿರುವುದು. ಇದು ತಪ್ಪದು. ವ್ಯರ್ಥೋಕ್ತಿಗಳನ್ನುಳಿದು ಋಣಶೇಷವಾದ ಎಂಟುಸಾವಿರ ವರಹಗಳನ್ನು ಈತನ ಮನೆಯಿಂದ ತರಿಸಿ ಆ ಬ್ರಾಹ್ಮಣನನ್ನು ಕರೆಯಿಸಿ ಆ ಹಣವನ್ನು ಕೊಟ್ಟುಬಿಟ್ಟರೆ ಬಳಿಕ ಕೈ ತನಗೆ ತಾನೆ ಸುಲಭವಾಗಿ ಬಂದು ಬಿಡುವುದು. ಇಂತಹ ನಿದರ್ಶನಗಳನೇಕ ಸ್ಥಳಗಳಲ್ಲಿ ಉಂಟಾಗಿರುವಂತೆ ನಮ್ಮ ಹಿರಿಯರು ಹೇಳುತ್ತಿದ್ದರು. ಈ ವರ್ತಕನು ಈಗ ತನ್ನ ಮನೆಯಿಂದ ಹಣ ವನ್ನು ತರಿಸಲಿ, ಒಂದುವೇಳೆ ಕೈ ಸುಲಭವಾಗಿ ಈಚೆಗೆ ಬಾರದಿದ್ದರೆ ಹಣವನ್ನೀ ತನು ಮನೆಗೆ ಕಳುಹಿಸಲಿ'' ಎಂದು ಹೇಳಿದನು.

ಲುಬ್ಧಶಿಖಾಮಣಿಯದನ್ನೊಪ್ಪಲಿಲ್ಲ, ಆದರೆ ಎಲ್ಲರೂ ಇದೇ ಯುಕ್ತವಾದ ಕಾರ್ಯವೆಂದರು ಚಂದ್ರಗುಪ್ತನ ಕುಮಾರನು ತನ್ನ ತಂದೆಗ ಪ್ರಾಪ್ತವಾಗಿ ರುವ ಅವಸ್ಥೆಯನ್ನು ನೋಡಿ ಹೋಗಿ ಎಂಟುಸಾವಿರ ವರಹಗಳನ್ನು ತಂದು ಶಿವಶರ್ಮನನ್ನು ಕರೆಯಿಸಿ, ಸಮರ್ಪಿಸಿದನು. ಆ ಧನವು ಆ ಪಾರ್ವನ ಕೈಗ ಸೇರುತ್ತಲೇ ವರ್ತಕನಕೈ ಸುಲಭವಾಗಿ ಹೊರಕ್ಕೆ ಬಂದುಬಿಟ್ಟಿತು. ಈ ವಿಚಿ ತ್ರವನ್ನು ನೋಡಿ ಎಲ್ಲರೂ ಆಶ್ಚರ್ಯಪಟ್ಟು, ದೈವಮಹಿಮೆಯನ್ನು ಬಗೆಬಗೆ ಯಿಂದ ಕೊಂಡಾಡಿದರು. ಅತ್ಯಾಶೆಯಿಂದ ಧನವನ್ನು ಕಳೆದುಕೊಂಡ ಚಂದ್ರ ಗುಪ್ತನನ್ನು ನಿಂದಿಸುತ್ತ ಎಲ್ಲರೂ ಅವರವರ ಮನೆಗಳಿಗೆ ಹೋದರು ಆಗುಪ್ತ ನಾದರೋ ಇತರರಿಗೆ ಮುಖವನ್ನು ತೋರಿಸಲಾರದೆ ಮುಸುಕುಹಾಕಿಕೊಂಡು ಸಂದಿಗೊಂದುಗಳಲ್ಲಿ ತೂರಿ ಮನೆಯನ್ನು ಸೇರಿ ತನ್ನ ಅವಿವೇಕವನ್ನೂ ಲೋಭ ವನ್ನೂ ಕುರಿತು ಪಶ್ಚಾತ್ತಾಪಪಟ್ಟು ಯಾವ ಪ್ರತಿಕ್ರಿಯೆಯನ್ನೂ ಮಾಡಲಾರದೆ ಸುಮ್ಮನಿದ್ದನು. ಆದರೂ ತನಗುಂಟಾದ ಪರಿಭವವನ್ನೂ ನಷ್ಟವನ್ನೂ ನೆನೆ ನೆನೆದು ಒಳಗೊಳಗೆ ಕುದಿಯುತ್ತಿದ್ದನು. ಈಶ್ವರನೇ ತನ್ನ ಪರಾಭವಕ್ಕೂ ನಷ್ಟಕ್ಕೂ ಕಾರಣಭೂತನೆಂದು ದ್ವೇಷವನ್ನು ತಾಳಿ, ಹೇಗಾದರೂ ತನ್ನ ಹಗೆ ಯನ್ನು ತೀರಿಸಿಕೊಳ್ಳಬೇಕೆಂದು ನಿಶ್ಚಯಿಸಿ, ಕೆಲವು ದುಷ್ಟರನ್ನು ಸೇರಿಸಿಕೊಂಡು ಒಂದು ದಿನ ನಿಶೀಥಸಮಯದಲ್ಲಿ ದೇವಾಲಯದ ಬೀಗಗಳನ್ನು ಮುರಿದು ಒಳಕ್ಕೆ ಪ್ರವೇಶಮಾಡಿ ರಹಸ್ಯವಾಗಿ ಲಿಂಗವನ್ನೂ ನಂದಿಕೇಶ್ವರನನ್ನೂ ಸಮೂಲ ವಾಗಿ ಕೀಳಿಸಿ ಎತ್ತಿಕೊಂಡು ಹೋಗಿ ಆ ಗ್ರಾಮಕ್ಕೆ ದೂರದಲ್ಲಿರುವ ಒಂದಗಾ ಧವಾದ ಮಡುವಿನಲ್ಲಿ ಹಾಕಿಸಿದನು. ಧ್ವಜಸ್ತಂಭವನ್ನು ತಳ್ಳಿಸಿ ತಲೆಕೆಳಗಾಗಿ

ಮಾಡಿದನು. ಬೆಳಗಾದಮೇಲೆ ಗ್ರಾಮದ ಜನರು ದೇವರ ದರ್ಶನಕ್ಕೆಂದು ವಾಡಿಕೆಯ ಪ್ರಕಾರ ಬಂದು, ನೋಡಿ ಚಂದ್ರಗುಪ್ತನೇ ಈ ಕೆಲಸವನ್ನು ಮಾಡಿ ಸಿರುವನೆಂದು ನಿಶ್ಚಯಿಸಿ, ಅವನನ್ನು ಹಿಡಿತರಿಸಿ ಶಿಕ್ಷೆಗೆ ಗುರಿಪಡಿಸಬೇಕೆಂದು ಭಾವಿಸಿ ಮನೆಗೆ ಹೋದರು. ಆದರೇನು? ಎಲ್ಲರೂ ಮನೆಯ ಬಳಿಗೆ ಹೋಗು ವುದಕ್ಕೆ ಮೊದಲೇ ಆ ವರ್ತಕನು ನೇಣುಹಾಕಿಕೊಂಡು ಪ್ರಾಣಗಳನ್ನು ಬಿಟ್ಟಿ ದ್ದನು. ಬಳಿಕ ಆ ಗ್ರಾಮಸ್ಥರು ಮತ್ತೆ ಆ ಲಿಂಗವನ್ನೂ ನಂದಿಕೇಶ್ವರನನ್ನೂ ಪ್ರತಿಷ್ಠಿಸಬೇಕೆಂದು ಪ್ರಯತ್ನಿಸಿದರು, ಆದರೂ ಅನೇಕ ವಿಘ್ನಗಳು ಪ್ರಾಪ್ತವಾ ದುದರಿಂದ ಆ ಪ್ರತಿಷ್ಠೆಯು ನೆರವೇರಲಿಲ್ಲ. ಬಳಿಕ ಆ ಗ್ರಾಮವು ಕ್ರಮಕ್ರಮ ವಾಗಿ ಕ್ಷೀಣಿಸುತ್ತ ಬಂದು ಅಲ್ಪಕಾಲದಲ್ಲಿಯೇ ನಾಮಾವಶಿಷ್ಟವಾಯಿತು. ಕೆಲವರುಮಾತ್ರ ಆ ಸ್ಥಳವನ್ನು ಬಿಟ್ಟು ದೂರವಾಗಿ ಹೋಗಿ ಅಲ್ಲಿ ಮನೆಗಳನ್ನು ಮಾಡಿಕೊಂಡರು. ಅದೇ ಹಳ್ಳಿಯಲ್ಲಿಯೇ ನೀನೀದಿನದಲ್ಲಿ ಭೋಜನಸಾಮಗ್ರಿ ಯನ್ನು ತಂದುದು. ಸತ್ಯಶೀಲನೇ? ಹೀಗೆ ಅತ್ಯಂತ ಶಿಲ್ಪಕಲ್ಪನಾಚಾತುರ್ಯ ದಿಂದ ಶೋಭಿಸುತ್ತಿದ್ದರೂ ಲಿಂಗರೂಪ್ಯವೂ ಉತ್ಸವಪೂಜಾದಿರಾಹಿತ್ಯವೂ ಆಗಿ ರುವುದಕ್ಕಿದೇ ಕಾರಣವು" ಎಂದು ಚಿದಾನಂದ ಯೋಗೀಶ್ವರನು ಹೇಳಿ ಮತ್ತಿಂ ತೆಂದನು. "ಪ್ರಿಯಶಿಷ್ಯನೇ! ನಿನಗೆ ಈ ಕಥೆಯಿಂದ ಯಾವಯಾವ ನೀತಿಯು ತಿಳಿಯಿತು ಹೇಳಬಲ್ಲೆಯಾ? ನಾನು ಹೇಳುವೆನು ಕೇಳು.

ಕಂ || ಪರರಂವಂಚಿಪ ಪರರಾ |
ಪ್ರರುಳ್ಗೆಮೇಣಾಸೆಪಡುವ ಮನುಜಂಕಿಡುಪಂ ||
ಇರದೆತನತ್ತರ್ಥಮುಮಂ |
ಪರಣಮುಮಂನೀಗಿಕೊಳುತೆ ಧರಣೀತಲದೊಳ್ ||

ಕಂ || ಭರಮಂ ಭಗವಂತನೊಳೇ |
ಇರಿಸುತೆತಾಂಗೆಯ್ವ ಕರ್ಮಮುಂಭಕ್ತಿಪುರ ||
ಸ್ಸರಮಾಗಲವಂಗೆಯೆಂ ಒ |
ಲ್ದಿರದರ್ಪಿಸುವಾತನೊಂದುವಂ ಚಿರಪದಮಂ ||

ವತ್ಸ! "ಅತಿಯಾಸೆ ಗತಿಗೆಡಿಸಿತು" ಎಂಬಂತೆ ಅತ್ಯಾಸೆಯು ಎಷ್ಟನ ರ್ಥವನ್ನುಂಟು ಮಾಡುವುದೋ ತಿಳಿದುಕೊಂಡೆಯಲ್ಲವೆ? ಸತ್ಯಶೀಲನೆ! ಲೋಕ ದಲ್ಲಿ

"ವ್ಯಾಘ್ರೀವತಿಷ್ಠತಿಜರಾಪರಿತರ್ಜಯಂತಿ ರೋಗಾಶ್ಚಶತ್ರವಇವಪ್ರಹ ರಂತಿದೇಹಂ | ಆಯುಃಪರಿಸ್ರವತಿಭಿನ್ನಘಟಾದಿವಾಂಭೋ ಲೋಕಸ್ತಥಾಪ್ಯಹಿ ತಮಾಚರತೀತಿಚಿತ್ರಂ ||"

ವಾರ್ಧಕ್ಯವು ಹುಲಿಯಂತೆ ಹೊಂಚುತ್ತಿರುವುದು ರೋಗಗಳು ಶತ್ರುಗಳ ಹಾಗೆ ಶರೀರವನ್ನು ಇರಿಯುತ್ತಿರುವುವು ಆಯುಷ್ಯವು ಒಡೆದ ಗಡಿಗೆಯಲ್ಲಿರುವ ನೀರಿನಂತೆ ಕ್ಷಣಕ್ಷಣಕ್ಕೂ ಸೋರಿಹೋಗುತ್ತಿರುವುದು, ಹಾಗಿದ್ದರೂ ಜನರು ಪರರಿಗೆ ಅಹಿತವನ್ನೆ ಆಚರಿಸುತ್ತಿರುವರಲ್ಲ ! ಇದು ಬಹಳ ಆಶ್ಚರ್ಯವಲ್ಲವೆ ? ” ಎಂದು ಹೇಳಲು, ಶಿಷ್ಯವರ್ಯನು ತಚ್ಚರಿತ್ರವನ್ನು ಕೇಳಿ ಆಶ್ಚರ್ಯಾನಂದಗಳಲ್ಲಿ ಮುಳುಗಿದನು, ಪ್ರಜ್ಞಾನಿಧಿಯೂ ಅಷ್ಟಾಂಗಯೋಗ ನಿಷ್ಣಾತರಿಷ್ಠನೂ ಆದ ಚಿದಾನಂದಯೋಗಿಯನ್ನು ಅಡಿಗಡಿಗೆ ನಮಿಸುತ್ತ ಕೊಂಡಾಡಿದನು, ಗುರುಶಿಷ್ಯರಿರ್ವರೂ ಆ ದಿನ ಅಲ್ಲಿಯೇ ಇದ್ದು ಬೆಳಗಿನಜಾವಕ್ಕೆ ಎದ್ದು ಸ್ನಾನಸಂಧ್ಯಾದಿಗಳನ್ನು ಮುಗಿಸಿಕೊಂಡು ಅಲ್ಲಿಂದಹೊರಟು ನಡುಹಗಲಿನವರೆಗೂ ನಡೆದು ಒಂದು ಪಟ್ಟಣದ ಮುಂದಣ ಉದ್ಯಾನಕ್ಕೆ ಬಂದಿಳಿದರು.

ಇಂತು ಎರಡನೆಯ ದಿನದ ಕಥೆ ಮುಗಿದುದು.



## —: ಮೂರನೆಯ ದಿನದ ಕಥೆ. :—

ನಮಃ ಶ್ರೀರಾಮಚಂದ್ರಾಯ ಶುದ್ಧಸತ್ವಾವಭಾಸಿನೇ ।
ಸಚ್ಚಿದಾನಂದರೂಪಾಯ ಸರ್ವಭೂತಾತ್ಮನೇನಮಃ ॥

## ಅತಿಪವಿತ್ರವಾದ ಒಂದು ಮಂಚ.

ಸತ್ಯಶೀಲನು ಚಿದಾನಂದಯೋಗಿಯ ಮಹಿಮೆಯನ್ನು ಅಡಿಗಡಿಗೆ ಸ್ಮರಿಸಿ ಹಿಗ್ಗುತ್ತಿದ್ದನು, ಆತನ ವೈರಾಗ್ಯವನ್ನು ಕಂಡು ಶ್ಲಾಘಿಸುತ್ತಿದ್ದನು, ಮಾತುಮಾತಿಗೂ “ ಗುರುರ್ಬ್ರಹ್ಮಾ ಗುರುರ್ವಿಷ್ಣುರ್ಗುರುರ್ದೇವೋಮಹೇಶ್ವರಃ । ಗುರುಸ್ಸಾಕ್ಷಾತ್ಪರಬ್ರಹ್ಮ ತಸ್ಮೈ ಶ್ರೀಗುರವೇನಮಃ ” ಎಂದು ವಂದಿಸುತ್ತಿದ್ದನು. “ ಗುರುಂಪ್ರಕಾಶಯೇದ್ಧೀಮಾನ್ ಮಂತ್ರಂಯತ್ನೇನಗೋಪಯೇತ್ । ಅಪ್ರಕಾಶಪ್ರಕಾಶಾಭ್ಯಾಂ ಕ್ಷೀಯೇತೇಸಂಪದಾಯುಷೀ ॥ ” ಎಂಬುದನ್ನು ಸ್ಮರಿಸಿ ಈ ತನ್ನ ಗುರುವನ್ನು ಪ್ರಕಾಶಗೊಳಿಸುತ್ತಿದ್ದನು. ಇಂತಹ ಶಿಷ್ಯನು ದೊರೆವುದೂ ಗುರುವಿನ ಭಾಗ್ಯವೇ, ಅಂತಹ ಗುರುವು ದೊರೆವುದು ಶಿಷ್ಯನ ಭಾಗ್ಯವೇ.

ಶಿಷ್ಯನು ಗುರುವಿನ ಅಪ್ಪಣೆಯನ್ನು ಪಡೆದು ಅಡಿಗೆಯ ಸಾಮಗ್ರಿಗಳನ್ನು ತರುವುದಕ್ಕೆ ಪಟ್ಟಣದೊಳಕ್ಕೆ ಹೋಗಿ ಬೇಕಾದ ಪದಾರ್ಥಗಳನ್ನು ತಂದು ಅಡಿಗೆಯನ್ನು ಮಾಡಿದನು. ಚಿದಾನಂದಯೋಗಿಯು ಮಾಧ್ಯಾಹ್ನಿಕಕ್ರಿಯೆಗಳನ್ನು ನೆರವೇರಿಸಿ ಭೋಜನವನು ಮಾಡಿ ಒಂದು ಮರದ ನೆರಳಿನಲ್ಲಿ ಪವಡಿಸಿದಂ ಡನು, ಒಂದೆರಡು ಗಂಟೆಗಳಕಾಲ ವಿಶ್ರಾಂತಿಯನ್ನು ಪಡೆದಬಳಿಕ ಶಿಷ್ಯನು ಗುರು

ವಿನಸನ್ನಿಧಿಗೆ ಬಂದು ನಮುಸ್ಕರಿಸಿ ಕುಳಿತು ಕಾಲುಗಳನ್ನು ಒತ್ತುತ್ತ ಇಂತೆಂದನು.

ಗುರುವರ್ಯ ! ಅಡಿಗೆಯ ಸಾಮಗ್ರಿಗಳನ್ನು ತರುವುದಕ್ಕೆ ನಾನು ಪಟ್ಟಣಕ್ಕೆ ಹೋಗಿದ್ದೆನಷ್ಟೆ ? ಆಗ ನಾನೊಂದು ವಿಚಿತ್ರವನ್ನು ಕಂಡೆನು, ಪುರಮಧ್ಯದಲ್ಲಿ ಒಂದು ಚತುಷ್ಪಥವಿರುವುದು ಅದು ಅರಮನೆಗಿದಿರಾಗಿ ಬೀದಿಯು ಮಧ್ಯದಲ್ಲಿರುವುದು ಅಲ್ಲಿ ಶಿಲಾಸ್ತಂಭವೊಂದು ಸ್ಥಾಪಿತವಾಗಿರುವುದು, ಅದರ ಮೇಲೆ ಥಳಥಳಿಸುವ ದೀರ್ಘವಾದ ಒಂದು ಖಡ್ಗವಿರುವುದು, ಅದನ್ನಲ್ಲಿಟ್ಟು ಅನೇಕ ವರ್ಷಗಳಾಗಿರಬಹುದು ಆದರೂ ಅದು ಸ್ವಲ್ಪವಾದರೂ ಕಿಲುಬುಹಿಡಿಯದೆ ಹೊಸದಾಗಿ ಸಾಣೆಯಿಟ್ಟಂತೆ ತೋರುತ್ತಿರುವುದು ನನಗೆ ಬಹಳವಾಗಿ ಆಶ್ಚರ್ಯವನ್ನುಂಟುಮಾಡಿತು, ಬಿಸಿಲು ಅದರ ಮೇಲೆ ಬೀಳುತ್ತಲೆ ಅದರ ಕಾಂತಿಯು ಸುತ್ತಲೂ ಹರಡುತ್ತಿದ್ದಿತು, ಆ ಕತ್ತಿಯು ಆ ಸ್ತಂಭದಮೇಲೆ ಅತಿ ದೃಢವಾಗಿ ಸಿಕ್ಕಿಸಲ್ಪಟ್ಟಿರುವುದಕ್ಕೆ ಕಾರಣವೇನೆಂದು ಕೆಲವರನ್ನು ಕೇಳಿದೆನು, ಅವರು "ನಮಗಾಯಿದರ ವಿಷಯ ತಿಳಿಯದು ನಮ್ಮ ಹಿರಿಯರಕಾಲದಿಂದಲೂ ಇರುವುದಂತೆ ಈಗ ಆ ಪಟ್ಟಣವನ್ನು ಪಾಲಿಸುತ್ತಿರುವ ರಾಜನುಕೂಡ ಈ ವಿಚಾರವನ್ನು ತಿಳಿಯಲು ಪ್ರಯತ್ನಿಸಿದುದಿಲ್ಲ" ಎಂದು ಹೇಳಿದರು, ತಾವು ಸರ್ವಜ್ಞರು ಆ ತತ್ವವನ್ನು ತಿಳಿಸಬೇಕೆಂದು ಆ ಸತ್ಯಶೀಲನು ಪ್ರಾರ್ಥಿಸಿದನು.

ಚಿದಾನಂದ ಯೋಗೀಶ್ವರನು ಸ್ವಲ್ಪಹೊತ್ತು ಆಲೋಚಿಸಿ, ಜ್ಞಾನದೃಷ್ಟಿಯಿಂದ ಸಮಸ್ತವನ್ನೂ ತಿಳಿದು ಶಿಷ್ಯನಿಗೆ ಹೇಳಲುಪಕ್ರಮಿಸಿದನು. ಪ್ರಿಯಶಿಷ್ಯನೇ ! ಲಾಲಿಸು, ಈಗ ಈ ನಗರವನ್ನು ಪಾಲಿಸುತ್ತಿರುವ ರಾಜನ ಮೂರನೆಯ ತಲೆಯವನಾದ ಪರಪುರಂಜಯನೆಂಬ ಒಬ್ಬ ರಾಜನು ರಾಜರಿಗಿರಬೇಕಾದ ಎಲ್ಲ ಗುಣಗಳಿಂದಲೂ ಶೋಭಿಸುತ್ತ ಪ್ರಜೆಗಳನ್ನು ತನ್ನ ಮಕ್ಕಳಂತೆ ಕಾಪಾಡುತ್ತ ಪ್ರಭುಮಂತ್ರೋತ್ಸಾಹಸಂಪನ್ನನೂ, ರಾಜ್ಯಾಂಗತತ್ವವೇದಿಯೂ ಸಕಲ ಸದ್ಗುಣಶಾಲಿಯೂ ಕೃಪಾಸಮುದ್ರನೂ ಆಗಿದ್ದನು. ಈತನಬಳಿಯಣ ಮಂತ್ರಿವರ್ಗವು ರಾಜನನ್ನು ದೈವವನ್ನಾಗಿ ಭಾವಿಸುತ್ತ ನಿಷ್ಕಾಪಟ್ಯದಿಂದ ರಾಜ್ಯಾಂಗರಚನೆಯನ್ನು ರಾಜನ ಅನುಮತಿಯಿಂದೇರ್ಪಡಿಸುತ್ತ ಜಾಗ್ರತೆಯಿಂದ ರಾಜಕಾರ್ಯಗಳನ್ನು ನೆರವೇರಿಸುತಿದ್ದಿತು. ಪರಪುರಂಜಯನೆಂಬ ಆ ರಾಜನು ಒಂದು ದಿನ ಸಭಾಭವನದಲ್ಲಿ ಓಲಗದೋರುತ್ತಿರಲು ಒಬ್ಬ ಬಡಗಿಯು ಬಂದು ನಮಸ್ಕಾರವನ್ನು ಮಾಡಿ, "ಅಗ್ನಿಹೋತ್ರಂಗೃಹಂಕ್ಷೇತ್ರಂ ಮಿತ್ರಂಭಾರ್ಯಾಂಸುತಂಶಿಶುಂ । ರಿಕ್ತಪಾಣಿರ್ನಪಶ್ಯೇತರಾಜಾನಂದೇವತಾಂಗುರುಂ" ಎಂಬಂತೆ ರಾಜನನ್ನು ಬರಿಗೈಯಿಂದ ನೋಡಬಾರದೆಂದುತಾನು ತಂದಿದ್ದ ಪುಷ್ಪಫಲಗಳನ್ನು ಸಮರ್ಪಿಸಿ, ಬೊಂಬಿನ ಹೊಂದು ತಂದಿದ್ದ ಒಂದುಮಂಚವನ್ನು

ಸಭೆಯ ಮಧ್ಯದಲ್ಲಿಟ್ಟು, ಅಂಜಲಿಬದ್ಧನಾಗಿ ನಿಂತನು ಎನೀಹೊರೆಯೆಂದರಸನು ಕೇಳಿದನು ಆ ತಕ್ಷಪ್ರವರನಿಂತೆಂದನು.

“ ರಾಜಾಗ್ರಣೀ ! ಇದೊಂದು ಮಂಚವು ಬೇಕಾದಾಗ ಇದನ್ನು ಜೋಡಿಸಿ ಮಂಚವನ್ನಾಗಿ ಮಾಡಿಸುವುದಕ್ಕೂ, ಬೇಡವಾಗ ಬಿಚ್ಚಿ ಬೇರ್ಪಡಿಸುವುದಕ್ಕೂ ಅನುಕೂಲವಾಗುವಹಾಗೆ ಇದನ್ನು ನಿರ್ಮಿಸಿರುತ್ತೇನೆ, ಈಗ ಇದು ಬೇರ್ಪಡಿಸಿ ಹೊರೆಯಾಗಿ ಕಟ್ಟಲ್ಪಟ್ಟಿರುವುದು ಇಗೋ ! ಇವೆರಡೂ ದೊಡ್ಡ ಪಟ್ಟಿಗಳು, ಇಗೋ ! ಇವೆರಡೂ ಕಿರುಪಟ್ಟಿಗಳು ನಡುವೆ ಹಾಕುವ ಚಿಕ್ಕಪಟ್ಟಿಗಳಿವು ಇವು ನಾಲ್ಕು ಕಾಲುಗಳು ಎಂದನು. ರಾಜನಾಹೊರೆಯನ್ನೂ ಆ ಬಡಗಿಯನ್ನೂ ನೋಡಿ ಮಂದಹಾಸದಿಂದ, “ ಎಲೈ ! ನೀನಾರು ? ಶಿಲ್ಪ ಚಾತುರ್ಯವೊಂದಿನಿಸಾದರೂ ಇಲ್ಲದ ಈ ಬರಿಯ ಹೊರೆಯನ್ನು ತಂದೀ ಓಲಗಸಾಲೆಯಲ್ಲಿಟ್ಟುದೇಕೆ ? ಇದು ರಾಜಸಭೆಯಲ್ಲಿಡಲು ಅರ್ಹವಾದುದೆ ? ನಿನಗೆ ಬುದ್ಧಿಯಿಲ್ಲವೆ ? ಎಂದನು. ಆ ಬಡಗಿಯು ರಾಜನ ಮುಖವನ್ನವಲೋಕಿಸಿ ವಿನಯದಿಂದ ಬದ್ಧಾಂಜಲಿಯಾಗಿ “ ರಾಜಪುಂಗವ ! ನಾನೊಬ್ಬ ಬಡಗಿ ಇನ್ನು ಜೋಡಿಸಿದರೆ ಮಲಗುವುದಕ್ಕ ಅನುವಾದ ಒಂದು ಪರ್ಯಂಕವಾಗುವುದು ನೋಡುವುದಕ್ಕಿದು ಅಂದವಾಗಿರದೆ ಒರಟಾಗಿದ್ದರೂ ಇದರ ಪ್ರಭಾವವು ಅತ್ಯದ್ಭುತವಾದುದು ಇದರಬೆಲೆ ಹತ್ತು ಸಾವಿರ ವರಹಗಳು ಇದನ್ನು ನಿಮ್ಮಂಥವರು ಕೊಳ್ಳಬೇಕು ಇತರರಿಗೆ ಇದು ಸಾಧ್ಯವಲ್ಲ, ಆದುದರಿಂದ ನಿಮ್ಮ ಸನ್ನಿಧಿಗಿದನ್ನು ತಂದೆನು, ರಾಜಾಗ್ರಣೀ ! ನೋಡುವುದಕ್ಕೆ ಅಂದವಾಗಿಲ್ಲದೆ ಹೋದಮಾತ್ರಕ್ಕೆ ಅದು ದೂಷ್ಯವಾಗುವುದೆ ? ವೀಣೆಯು ನೋಡುವುದಕ್ಕೆ ವಕ್ರವಾಗಿಯೇ ಇರುತ್ತದೆ ಅದರ ಗಾನವು ಹೇಗಿರುವುದು ? ಕೋಗಿಲೆಯು ಕಪ್ಪಗಿರುವುದು ಅದರ ಸ್ವರವು ಮಧುರವಾಗಿರುವುದು, ಕಸ್ತೂರಿಯು ನೋಡುವುದಕ್ಕಂದವಾಗಿರುವುದೆ ? ಅದರ ಗುಣವನ್ನು ನೋಡಿ, ಆದುದರಿಂದಲೇ ನಮ್ಮ ಆರ್ಯರು “ ಕೋಕಿಲಾನಾಂಸ್ವರೋರೂಪಂ ನಾರೀರೂಪಂಪತಿವ್ರತಂ | ವಿದ್ಯಾರೂಪಂವಿರೂಪಾಣಾಂ ಕ್ಷಮಾರೂಪಂತಪಸ್ವಿನಾಂ ‖ ” ಎಂದು ಹೇಳಿರುವರು. ಕೋಗಿಲೆಗಳಿಗೆ ಸ್ವರವೂ, ಸ್ತ್ರೀಯರಿಗೆ ಪಾತಿವ್ರತ್ಯವೂ, ಸೌಂದರ್ಯಹೀನರಿಗೆ ವಿದ್ಯೆಯೂ, ತಪಸ್ವಿಗಳಿಗೆ ತಪಸ್ಸೂ ರೂಪವೆಂದು ಹೇಳಲ್ಪಟ್ಟಿರುವುದು ” ಎಂದರಿಕೆ ಮಾಡಿದನು, ಸಭಾಸದರೂ ಮಂತ್ರಿಮಂಡಲವೂ ಅವನ ನುಡಿಗಳನ್ನು ಕೇಳಿ ಆತ್ಯಾಶ್ಚರ್ಯವನ್ನು ಹೊಂದಿದರು. ರಾಜನು “ ಎಲಯ್ಯಾ ! ಗಂಟುಗಂಟಾಗಿ ಇರುವ ಈ ಒರಟು ಮಂಚವು ಹತ್ತುಸಾವಿರ ವರಹಗಳ ಬೆಲೆಯುಳ್ಳುದೇ ? ಹುಚ್ಚನಂತೆ ಗಳಹುತ್ತಿರುವೆಯಲ್ಲಾ ! ನಿನ್ನ ಮಾತುಗಳು ಹಾಸ್ಯಾಸ್ಪದಗಳಾಗಿವೆ ಯಾರಾದರೂ ಕೇಳಿದರೆ ನಕ್ಕಾರು ಸುಮ್ಮನಿರು ಎರಡು ರೂಪ್ಯ

ಗಳ ಬೆಲೆಯೂ ಬಾಳದ ಇದಕ್ಕೆ ಹತ್ತುಸಾವಿರ ವರಹಗಳನ್ನಾವ ಹುಚ್ಚನುತಾನೆ ಕೊಡಬಲ್ಲನೋ ತಿಳಿಯದು ಹೋಗುಹೋಗು ಮತ್ತೆಲ್ಲಿಗಾದರೂ ಎಂದು ನುಡಿದು ಗಹಗಹಿಸಿ ನಕ್ಕನು. ಬಡಗಿಯುವನ್ನು ಕೇಳಿ, "ಅಯ್ಯೋ! ಪಾಪ! ರಾಜನಿಗೆ ಇದರ ಮಹಿಮೆಯು ಗೊತ್ತಿಲ್ಲ, ಪರಿಹಾಸ ಮಾಡುತ್ತಾನೆ" ಎಂದು ಬಗೆದು ಸ್ವಾಮಿಾ! ನಿಮ್ಮಲ್ಲಿ ಹೆಚ್ಚಾದ ದ್ರವ್ಯವನ್ನು ಕಸಿದುಕೊಳ್ಳಬೇಕೆಂದು ಬಗೆದು ಜಳ್ಳುಮಾತುಗಳನ್ನು ನಾನಾಡಲಿಲ್ಲ, ಸತ್ಯವನ್ನೇ ಹೇಳಿರುವೆನು. ನಾನು ಹೇಳಿದ ಬೆಲೆಗೆ ಒಂದು ಕವಡೆ ಕಡಿಮೆಯಾದರೂ ಕೊಡಲಾರೆನು. ಕೊಳ್ಳುವುದಕ್ಕೆ ತಮಗಿಷ್ಟವಾದರೆ ಸರಿ, ಇಲ್ಲವಾದರೆ ಮತ್ತೆಲ್ಲಿಗಾದರೂ ಹೋಗುವೆನು" ಎಂದು ಗಟ್ಟಿಯಾಗಿ ನುಡಿದನು. ರಾಜನಿಗೆ ಆ ಬಡಗಿಯ ಮಾತಿನಲ್ಲಿ ನಂಬಿಕೆ ಹುಟ್ಟಲಿಲ್ಲ. ನಗುತ್ತ ಮಂತ್ರಿಯ ಮುಖವನ್ನವಲೋಕಿಸಿದನು. ಬುದ್ಧಿಶಾಲಿಯಾದ ಮಂತ್ರಿಯು ರಾಜನ ಮನೋಭಿಪ್ರಾಯವನ್ನರಿತು, "ಪ್ರಭುವೆ! ಅಲ್ಪಮೂಲ್ಯದ ಈ ದಾರುಮಯವಾದ ಪರ್ಯಂಕಕ್ಕೆ ಇಷ್ಟು ಬೆಲೆಯನ್ನೀತನು ಹೇಳಿರುವನೆಂದು ನಾವು ನಿರಾಕರಿಸಬಾರದು. ಇದು ತುಂಬಾ ಮಹಿಮೆಯುಳ್ಳುದೆಂದೀತನು ಹೇಳುತ್ತಿರುವನಲ್ಲವೆ? ಪರೀಕ್ಷಿಸಿ ನೋಡುವ ಯಾವ ಮಹಿಮೆಯುಂಟೋ ಇದರಲ್ಲಿ. ಅಂತಹ ಮಹಾಮಹಿಮೆ ಇಲ್ಲದಿದ್ದರೆ ರಾಜಾಸ್ಥಾನಕ್ಕೆ ಬಂದು ರಾಜಸನ್ನಿಧಿಯಲ್ಲಿ ಸುಳ್ಳುಹೇಳಿ ಮಹಾಧನವನ್ನು ತೆಗೆದುಕೊಂಡು ಹೋಗುವುದಕ್ಕೆ ಸಾಹಸಗೊಳ್ಳುವನೆ? ಅಷ್ಟು ಧೈರ್ಯವೀತನಿಗೆ ಬಂದೀತೆ? ಆಲೋಚಿಸಿ ನೋಡಿ, ಒಂದುವೇಳೆ ಸುಳ್ಳುಹೇಳಿ ನಿಮ್ಮಲ್ಲಿ ಹಣವನ್ನು ತೆಗೆದುಕೊಂಡು ಹೋದರೆ ಈತನ ಪ್ರಾಣವು ಉಳಿವುದೆ? ಸಂದೇಹವನ್ನು ಬಿಡು ತೆಗೆದುಕೊಳ್ಳಿ. ಆತನು ಬೇಡುವ ಧನವನ್ನು ಕೊಟ್ಟುಬಿಟ್ಟು, ಅದರ ಮಹತ್ವವನ್ನು ಪರೀಕ್ಷಿಸೋಣ ಆತನು ಈ ಲೋಕವನ್ನು ಬಿಟ್ಟು ಎಲ್ಲಿಗೆ ಹೋಗುವನು? ಈ ಮಂಚದಲ್ಲಿ ಯಾವುದೋ ಒಂದು ಮಹಾಮಹಿಮೆ ಇರುವುದೆಂದೇ ನನ್ನ ಬುದ್ಧಿಗೆ ತೋರುವುದು. ಕೆಲಸಗಾರಿಕೆ ಇಲ್ಲದಿರುವುದರಿಂದ ನೋಡುವುದಕ್ಕೆ ಅಂದವಾಗಿಲ್ಲದ ಮಾತ್ರದಿಂದಲೇ ನಿರಾಕರಿಸಬಾರದು, ಆತನು ಹಿಂದೆ ಹೇಳಿದಂತೆ ಸುಗುಣಗಳುಳ್ಳ ವಸ್ತುವು ನೋಡುವುದಕ್ಕೆ ವಿಕಾರವಾಗಿಯೇ ಇರಬಹುದು. ಪರೀಕ್ಷಿಸುವುದಕ್ಕೆ ಇಷ್ಟವಿದ್ದರೆ ತೆಗೆದುಕೊಳ್ಳಿ" ಎಂದು ನುಡಿದನು.

ಸಚಿವನಾರೀತಿ ನುಡಿದ ಬಳಿಕ ರಾಜನಿಗೆ ಧೈರ್ಯವುಂಟಾಯಿತು. ಅದನ್ನು ಪರೀಕ್ಷಿಸಬೇಕೆಂಬ ಬುದ್ಧಿಯೂ ಉಂಟಾಯಿತು. ಬಳಿಕ ಆ ಬಡಗಿಯನ್ನು ಸಮಿಾಪಕ್ಕೆ ಕರೆದು ಅದನ್ನುಪಯೋಗಿಸುವ ಮತ್ತು ಜೋಡಿಸುವ ವಿಧಾನವನ್ನಾತನಿಂದ ಚೆನ್ನಾಗಿ ತಿಳಿದುಕೊಂಡು, ಆತನ ಹೆಸರು, ವಾಸಸ್ಥಲ ಮುಂತಾದುವನ್ನು ಒಂದು ಪುಸ್ತಕದಲ್ಲಿ ಬರೆದು ಹತ್ತುಸಾವಿರ ವರಹಗಳನ್ನು ಕೊಟ್ಟು

ಕಳುಹಿಸಿದನು. ಆ ಮಂಚದ ಮೌಲ್ಯಕ್ಕೆ ತಕ್ಕ ಗುಣವಾವುದಿರುವುದೋ ಈ ದಿನವೇ ಪರೀಕ್ಷಿಸಬೇಕೆಂದು ಬಗೆದು, ಆ ತಕ್ಷಾಪ್ರವರನು ಹೇಳಿದಂತೆ ಮಂಚವನ್ನು ನೇರ್ಪಡಿಸಿ ಆ ದಿನದ ರಾತ್ರಿ ಏಕಾಂತ ಸ್ಥಳದಲ್ಲಿ ಅದರ ಮೇಲೆ ಒಂದು ತಲ್ಪವನ್ನು ಹವಣಿಸುವಂತೆ ಸೇವಕರಿಗಾಜ್ಞಾಪಿಸಿದನು. ಅವರು ಹಾಗೆಯೇ ಸಿದ್ಧಪಡಿಸಿದರು.

ರಾತ್ರಿಯಾಯಿತು, ರಾಜಾಗ್ರಣಿಯಾದ ಪರಪುರಂಜಯನು ಮಜ್ಜನಭೋಜನಾದಿಗಳನ್ನು ನಿವರ್ತಿಸಿ, ಔತ್ಸುಕ್ಯದಿಂದ ಶಯನಕಾಲವನ್ನು ನಿರೀಕ್ಷಿಸುತ್ತ, "ಭುಕ್ತ್ವಾ ಶತಪದಂ ಗಚ್ಛೇತ್" ಎಂಬಂತೆ ಶತಪದಗಳನ್ನಿಡುತ್ತಿದ್ದು, ಮಲಗುವ ಕಾಲಕ್ಕೆ ಸರಿಯಾಗಿ ಮಂಚದಬಳಿಗೆ ಬಂದು, ಅದರಮೇಲೆ ಹಾಸಿರುವ ಹಾಸಿಗೆಯಮೇಲೆ ಮಲಗಿ ಅತ್ತಿತ್ತ ಅಲುಗದೆ ನಿದ್ರೆಹೋಗುತ್ತಿರುವನಂತೆ ನಟಿಸುತ್ತಿದ್ದನು. ಒಂದು ತಾಸು ಕಳೆಯಿತು, ಅದು ಪ್ರಥಮಯಾಮವು. ಬಳಿಕ ಆ ಮಂಚದ ಕಾಲುಗಳು ಮನುಷ್ಯಭಾಷಣದಿಂದ ಮಾತನಾಡಲಾರಂಭಿಸಿದುವು. ರಾಜನಿಗಾಶ್ಚರ್ಯವಾಯಿತು, ಅವು ಏನು ಮಾತಾಡುವುವೋ ನೋಡುವೆನೆಂದು ಸಾವಧಾನಮನಸ್ಕನಾಗಿ ಕಿವಿಗೊಟ್ಟನು.

ನಾಲ್ಕು ಕಾಲುಗಳಲ್ಲಿ ಒಂದು, ಉಳಿದ ಮೂರು ಕಾಲ್ಗಳನ್ನು ಸಂಬೋಧಿಸಿ ಇಂತೆಂದಿತು, ಗೆಳೆಯರಿರಾ ! ಇದು ಪ್ರಥಮಯಾಮವಾಗಿರುವುದು. ನಾನು ನನ್ನ ವಾಡಿಕೆಯಂತೆ ಪಟ್ಟಣದೊಳಕ್ಕೆ ಹೋಗಿ, ಏನಾದರೂ ವಿಶೇಷ ವಿಷಯಗಳಿದ್ದರೆ ತಿಳಿದು ಬರುವೆನು. ಅರಸಿನವರು ನಿದ್ರಿಸುತ್ತಿರುವರು ಒಂದು ವೇಳೆ ಪಕ್ಕಕ್ಕೆ ತಿರುಗಿದರೆ ಆಗ ನನ್ನ ಕಡೆ [illegible] ಹಿಡಿದಿರಿ [illegible]" ಎಂದು ಹೇಳಿತು. ಉಳಿದ ಮೂರು ಕಂಬಗಳೂ, "ಒಳ್ಳೆಯದು ಹೋಗಿ ಬಾ! ನಾವು ಜಾಗರೂಕತೆಯಿಂದ ನಿನ್ನ ಕಡೆಯ ಭಾರವನ್ನು ಹೊತ್ತಿರುವೆವು" ಎಂದು ಹೇಳಲು ಆ ಕಂಬವು ಆ ಪಟ್ಟಿಯಿಂದ ಬಿಡಿಸಿಕೊಂಡು ಹಾರಿಹೋಗಿ ಎರಡನೆಯ ಯಾಮಕ್ಕೆ ಸ್ವಲ್ಪ ಮುಂಚಿತವಾಗಿ ಬಂದು ತನ್ನ ಸ್ಥಾನದಲ್ಲಿ ನಿಂತಿತು. ಉಳಿದುವು ಅದನ್ನು ಕುರಿತು "ಸಖೀ ! ಇಂದು ನೀನಾವ ವಿಶೇಷವನ್ನು ಕಂಡು ಬಂದೆ? ದಯವಿಟ್ಟು ಹೇಳು?" ಎಂದು ಕೇಳಿದುವು. ಮೊದಲನೆಯ ಕಾಲು ಹೇಳಲಾರಂಭಿಸಿತು.

"ಅಕಟಾ ! ಏನು ಹೇಳಲಿ ? ಕೆಳೆಯರಿರಾ ! ಲಾಲಿಸಿರಿ, ನಾನಿಲ್ಲಿಂದ ಹೊರಟು ಪಟ್ಟಣದಲ್ಲೆಲ್ಲ ಸಂಚರಿಸಿ ಬಳಿಕ ಪೂರ್ವದಿಕ್ಕಿನ ಬೀದಿಗಹೋದೆನು. ಉಳಿದ ಬೀದಿಗಳ ಜನರಲ್ಲಿ ಕೆಲವರು ಊಟಮಾಡುತ್ತಿದ್ದರು, ಕೆಲವರು ಊಟಕ್ಕೆ ಸಿದ್ಧರಾಗುತ್ತಿದ್ದರು ಮತ್ತೆ ಕೆಲವರು ನಿದ್ರಿಸುತ್ತಿದ್ದರು ಇನ್ನೂ ಕೆಲವರು ನಿದ್ರೆ ಬಾರದಿದ್ದುದರಿಂದ ಮನಸ್ಸು ಬಂದಹಾಗ ಯಾವಯಾವ ಮಾತು

ಗಳನ್ನೋ ಆಡುತ್ತ ಇದ್ದರೇ ಹೊರತು ವಿಶೇಷವಿಷಯಗಳಾವುವೂ ಕಾಣಿಸಲಿಲ್ಲ. ಮೂಡಲಕೇರಿಯಲ್ಲಿ ಹಾಗಲ್ಲ. ಆ ಕೇರಿಯಲ್ಲಿ ಒಂದು ಚಿಕ್ಕ ದೇವಾಲಯವಿದ್ದಿತು. ಒಂದಿನಿಸುಂಪ್ರೊಳ್ತಲ್ಲಿ ನಿಂತೆನು. ಆಗ ಅಲ್ಲಿಗೆ ಎಲ್ಲಿಂದಲೋ ಕೆಲವು ಜನ ಪುರುಷರು ಬರುತ್ತಿರುವ ಶಬ್ದವು ಕೇಳಿಸಿತು. ನಾನು ಅವರಿಗೆ ತಿಳಿಯದಹಾಗೆ ಒಂದು ಸ್ತಂಭದಮರೆಯಲ್ಲಿ ಅವಿತುಕೊಂಡೆನು. ಬಳಿಕ ದೃಢಕಾಯರೂ ದೀರ್ಘದೇಹಿಗಳೂ ಆದ ಆವರು ಕರಾಳಕರವಾಳ ಹಸ್ತರಾಗಿ ಆ ಗುಡಿಯೊಳಕ್ಕೆ ಬಂದರು. ಅಲ್ಲಿ ಕುಳಿತು ರಹಸ್ಯವಾಗಿ ಸಂಭಾಷಣವನ್ನು ಮಾಡಲಾರಂಭಿಸಿದರು. ಅವರಲ್ಲಿ ಒಬ್ಬನು ಉಳಿದವರೊಡನೆ “ಎಲೈ ಮಿತ್ರರೇ! ಸರ್ವೋತ್ತಮನಾದ ಜಯಪಾಲನು, ಈ ಪರಪುರಂಜಯನನ್ನು ಕೊಂದುಬನ್ನಿರೆಂದು ನಮ್ಮನ್ನು ಕಳುಹಿಸಿ ಎಷ್ಟೋ ? ಒಂದು ವಾರವು ಕಳೆಯಿತು. ಈವರೆಗೆ ನಮಗೆ ಸಮಯವೇ ದೊರಯಲಿಲ್ಲ, ನಮ್ಮ ದೊರೆಗೂ ಈ ಪಟ್ಟಣದ ದೊರೆಗೂ ಬದ್ಧವೈರವಲ್ಲವೆ? ಹೇಗಾದರೂ ಇವನನ್ನು ಕೊಲ್ಲಿಸಬೇಕೆಂದು ಅನೇಕೋಪಾಯಗಳನ್ನು ಮಾಡಿದನು, ಎಲ್ಲವೂ ನಿಷ್ಫಲಗಳಾದುವು. ಬಳಿಕ ನಮ್ಮನ್ನು ನೋಡಿ ವಧಿಸುವದೆಂದು ನಮಗಾಜ್ಞೆಯಿತ್ತನು. ಈವರೆಗೆ ನಮಗೂ ಸಾಧ್ಯವಾಗಲಿಲ್ಲ. ನಮ್ಮಿಂದ ಈ ಅರಸನು ವಧಿಸಲ್ಪಟ್ಟರೆ ನಮಗೆ ಅಸದೃಶವಾದ ಪಾರಿತೋಷಕವು ಲಭಿಸುವುದರಲ್ಲಿ ಸಂದೇಹವಿಲ್ಲ. ಆದರೆ ಈಕಾರ್ಯವು ನಮಗೆ ಲಭಿಸುವಂತೆ ಕಾಣಲಿಲ್ಲ” ಎಂದು ವಿಷಾದಿಸಿದನು. ಆ ಮಾತನ್ನು ಕೇಳಿ ಮತ್ತೊರ್ವನು ಉಳಿದವರನ್ನು ನೋಡಿ, ಎಲೈ ಸಖರೇ! ಈಬಗೆಯಿಂದ ನಾವೆಷ್ಟು ದಿನಗಳವರೆಗೆ ನಿರೀಕ್ಷಿಸಿದರೂ ನಮ್ಮ ಕಾರ್ಯವು ನೆರವೇರುವಂತಿಲ್ಲ. ನನಗೊಂದುಪಾಯವು ತೋರುತ್ತಿದೆ ಏನೆಂದರೆ ಈ ರಾಜನಿಗೆ ಬೇಟೆಯೆಂದರೆ ಬಹು ಸಂತೋಷವಂತೆ. ಆದುದರಿಂದ ನಾವು ಬೇಟೆಗಾರರ ಹಾಗೆ ವೇಷಗಳನ್ನು ಧರಿಸಿ ಕೊಂಡು ಅಪರಪುರಂಜಯನನ್ನು ಕಾಣುವ “ನಾವು ಮೃಗರೂಪವ್ಯಾಪಾರದಲ್ಲಿ ಅತಿ ಚತುರರಾಗಿರುವೆವು. ಈವರೆಗೆ ನಮ್ಮನ್ನು ಮೀರಿದ ಬೇಟೆಗಾರನಾವನೂ ಇಲ್ಲ. ತಮ್ಮ ಸೇವೆಯನ್ನು ಮಾಡಿಕೊಂಡು ಸನ್ನಿಧಿಯಲ್ಲಿಯೇ ಇರುವೆವು. ಅನ್ನವಸ್ತ್ರಗಳನ್ನು ಕೊಟ್ಟು ಕಾಪಾಡಿದರೆ ನಿಮಗೆ ಕೀರ್ತಿಯುಂಟು, ನಮ್ಮೊಡನೆ ಸ್ವಾಮಿಯವರು ಕಾಡಿಗೆ ವಿಜಯಂಗೈದು ನಮ್ಮ ನಾಮರ್ಥ್ಯವನ್ನು ನೋಡಬೇಕೆಂದು ಪ್ರಾರ್ಥಿಸುವೆವು. ನಿಮ್ಮ ಬೇಟೆಗಾರರಾರೂ ನಮ್ಮೊಡನೆ ಬರಬೇಕಾದುದಿಲ್ಲ. ಅವರೊಂದುವೇಳೆ ಬಂದರೆ ನಮ್ಮ ಸಾಮರ್ಥ್ಯವು ನಿಮಗೆ ಗೋಚರವಾಗುವುದೆ ಕಷ್ಟವಾಗುವುದು” ಎಂದು ಹೇಳುವ, ನಂಬಿಕೆಯನ್ನು ಹುಟ್ಟಿಸುವ, ಬಳಿಕ ಆತನು ಮಿತಪರಿವಾರದೊಂದಿಗೆ ಬೇಟೆಗೆ ಬರುವನು. ಕಾಡಿನ ಮಧ್ಯಕ್ಕೆ ಆತನು ಬಂದೊಡನೆಯೇ ನಾವು ಗೋಪ್ಯವಾಗಿ

ಟ್ಟುಕೊಂಡಿದ್ದ ಕತ್ತಿಗಳನ್ನು ತೆಗೆದು ಅಲ್ಪಸಂಖ್ಯೆಯ ಜನರೊಡನಿದ್ದ ಆ ರಾಜನನ್ನು ಪರಿಜನಸಮೇತವಾಗಿ ಕೊಲ್ಲುವ, ಆಮೇಲೆ ನಮ್ಮ ದೊರೆಗೆ ಈ ಶುಭವಾರ್ತೆಯನ್ನರಿಪುವ, ಆತನು ನಮಗೆ ಆಗ ದೊಡ್ಡ ಬಹುಮಾನವನ್ನು ಮಾಡುವನು'' ಎಂದು ನುಡಿದನು. ಅವರೆಲ್ಲರೂ "ಸರಿ! ಇದು ಬಹಳ ಒಳ್ಳೆಯದಾರಿ'' ಎಂದರು. ಹೀಗೆ ಆ ಕೊಲೆಗಾರರು ಗುಸಗುಸನೆ ಮಾತಾಡಿಕೊಳ್ಳುತ್ತಿದ್ದುದು, ಸಮೀಪದ ಸ್ತಂಭದ ಮರೆಯಲ್ಲಿದ್ದ ನನಗೆ ಬಹಳ ಚೆನ್ನಾಗಿ ಕೇಳಿಸಿತು. ಅವನು ಹಾಗೆ ಹೇಳಿದುದು ಎಲ್ಲರಿಗೂ ಸಮ್ಮತವಾಗಿ ತೋರಿದುದರಿಂದ ಆವಿಧವಾಗಿ ಮಾಡಲು ನಿರ್ಧರಿಸಿಕೊಂಡು ಹೊರಟುಹೋದರು. ಅಲ್ಲಿಗೆ ಪ್ರಥಮ ಯಾಮಾಂತವು ಸಮಾಪಿಸಿದುದರಿಂದ ನಾನು ಬಂದುಬಿಟ್ಟೆನು.

ಗೆಳತಿಯರೇ! ಕೇಳಿದಿರಲ್ಲವೆ ವಿಚಾರವನ್ನು? ಪಾಪ! ಆ ದುರಾತ್ಮರು ನಿಷ್ಕಪಟಿಯೂ ಸತ್ಯಶೀಲನೂ ಧರ್ಮಮಾರ್ಗಪ್ರವರ್ತಕನೂ ಪ್ರಜೆಯನ್ನು ತನ್ನ ಪ್ರಜೆಯಂತೆ ರಕ್ಷಿಸುವವನೂ ಆದ ಪರಪ್ರತಾಪರಾಜನಿಗೆ ಆ ವಂಚಕರಲ್ಲಿ ವಿಶ್ವಾಸವುಂಟಾಗುವುದೋ ಹೇಗೋ? ಅವರೊಡನೆ ಬೇಟೆಗಾಗಿ ಹೋಗುವನೋ ಹೇಗೋ?'' ಎಂದು ನನಗೆ ಬಹು ಚಿಂತೆಯಾಗಿದೆ ಎಂದು ಹೇಳಿತು. ಉಳಿದ ಮೂರು ಕಾಲುಗಳೂ ದೈವಸಹಾಯವುಂಟಾದರೆ ಒಂದುವೇಳೆ ರಾಜನಿಗೆ ಆ ವಿಪತ್ತು ತಪ್ಪಿಹೋಗದೇನು? ಎಂದು ಹೇಳಿದುವು.

ಹೀಗೆ ಮಾತನಾಡುತ್ತಿರಲು ಎರಡನೆಯ ಕಾಲು ಇಂತೆಂದಿತು. "ಕೆಳದಿಯರೇ! ಎರಡನೆಯ ಯಾಮವು ಪ್ರಾಪ್ತವಾಯಿತು ಪದ್ಧತಿಯಂತೆ ನಾನು ಹೋಗಿ ಊರಲ್ಲೆಲ್ಲಾ ಸುತ್ತಿಬರುವೆನು'' ಎಂದು ಹೇಳಿ ಹೊರಟುಹೋಗಿ ಆ ಜಾವದ ಕೊನೆಯಾಗುವಷ್ಟರಲ್ಲಿ ಬಂದು ತನ್ನೆಡೆಯಲ್ಲಿ ತಾನು ಸೇರಿಕೊಂಡಿತು. ಉಳಿದ ಕಾಲುಗಳು ಯಥಾಪ್ರಕಾರವಾಗಿ ಕೇಳಲು. ಆಗ ಎರಡನೆಯ ಕಾಲು ಹೇಳಲಾರಂಭಿಸಿತು.

"ಲಾಲಿಸಿ ಸಖಿಯರೇ! ನಾನು ನಗರವನ್ನೆಲ್ಲ ತೊಳಲಿಬಳಲಿ ಬಳಿಕ ದಕ್ಷಿಣಕಡೆಯ ಬೀದಿಗೆ ಹೋದೆನು ಎಲ್ಲಬೀದಿಗಳಲ್ಲಿಯೂ ಜನರು ಗಾಢನಿದ್ರಾಪರವಶರಾಗಿದ್ದುದರಿಂದ ನಿರ್ಮಾನುಷ್ಯವಾಗಿದ್ದಿತು ಅಂತಹ ನಿಶೀಥಸಮಯದಲ್ಲಿ ಒಬ್ಬ ಯುವತಿಯು ತಲೆಯನ್ನು ಬಿರಿಹೊಯ್ದುಕೊಂಡು ಗೋಳಿಡುತ್ತ ಚಡಪಡನೆ ನಡೆಯುತ್ತಿದ್ದಳು, ನಾನು ನನ್ನ ಮನಸ್ಸಿನಲ್ಲಿ "ಅಯ್ಯೋ! ಇವಳಾರಿರಬಹುದು ಹೀಗೆ ಅಳುತ್ತಾ ಹೋಗುವುದಕ್ಕೆ ಕಾರಣವೇನಿರಬಹುದು ಆಗಲಿ! ನಾನು ಆಕೆಯನ್ನು ಹಿಂಬಾಲಿಸಿಹೋಗಿ ಕೇಳುವೆನು'' ಎಂದುಕೊಂಡು ಬೇಗಬೇಗನೆ ಆಕೆಯಬಳಿಗೆ ಹೋಗಿ, "ಅಮ್ಮಾ! ನೀನು ಯಾರು? ಹೀಗೆ ತಲೆಗೂದಲನ್ನು ಕೆದರಿಕೊಂಡು ಅಳುತ್ತ ಹೋಗುತ್ತಿರಲು ಕಾರಣವೇನು?

ಎಲ್ಲಿಗೆ ಹೋಗುವೆ ?" ಎಂದು ಬಹು ಧೈರ್ಯವಾಗಿ ಕೇಳಿದೆನು, ಆಕೆಯು ನನ್ನನ್ನು ನಿಟ್ಟಿಸಿ ನೋಡಿದಳು, ನಾನು ಮಾನುಷವ್ಯಕ್ತಿಯಲ್ಲವೆಂದು ತಿಳಿದು ನನಗಭಿಮುಖಿಯಾಗಿ ನಿಂತು ತನ್ನ ವೃತ್ತಾಂತವನ್ನು ಹೇಳತೊಡಗಿದಳು.

"ಸಖೀ ! ನೀನು ದೇವವ್ಯಕ್ತಿಯೆಂಬುದನ್ನು ನಾನುಬಲ್ಲೆ ಆದುದರಿಂದಲೇ ನನ್ನ ವೃತ್ತಾಂತವನ್ನು ನಿನ್ನೊಡನೆ ಹೇಳುವೆನು, ನಾನೀಪಟ್ಟಣವನ್ನು ಪಾಲಿಸುವ ಗ್ರಾಮದೇವತೆ ಕಾಳಿಕಾದೇವಿ ಚಿರಕಾಲದಿಂದಲೂ ನನ್ನಲ್ಲಿ ಅನನ್ಯಸಾಮಾನ್ಯವಾದ ಭಕ್ತಿಯನ್ನಿಟ್ಟು ನನ್ನನ್ನು ಎಡೆಬಿಡದೆ ಆರಾಧಿಸುತ್ತಲೂ ಉತ್ಸವಾದಿಗಳನ್ನಾಚರಿಸುತ್ತಲೂ ಇರುವ ಈ ನಗರಾಧಿಪತಿಯಾದ ಪರಪುರಂಜಯನಿಗೆ ಇಂದಿಗೈದನೆಯ ದಿನದಲ್ಲಿ ಹಠಾತ್ತಾಗಿ ಸರ್ಪವೊಂದು ಕಚ್ಚುವುದು ಅದರಿಂದ ಪ್ರಾಣಹಾನಿಯು ಸಂಭವಿಸುವುದು, ಉತ್ತಮಭೂಪತಿಯಾದ ಈತನಿಗೆ ಉಂಟಾಗುವ ಪ್ರಾಣಹಾನಿಯನ್ನು ಕುರಿತು ನಾನು ಹೀಗೆ ರೋದಿಸುತ್ತಿರುವೆನು, ಅಕಟಾ ! ಇನ್ನುಮೇಲೆ ನನ್ನಲ್ಲಿ ಅವಿತಥ ಭಕ್ತಿಯನ್ನಿಡುವರಾರು ? ಆರಾಧಿಸುವರಾರು ? ಉತ್ಸವಗಳನ್ನು ಮಾಡಿಸಿ ನನ್ನನ್ನು ತೃಪ್ತಿಗೊಳಿಸುವರಾರು ? ಅಯ್ಯೋ ! ರಾಜಾಗ್ರಣಿಯೆ ! ನಿನಗೀ ದುರ್ಮರಣವು ಪ್ರಾಪ್ತವಾಗಬಹುದೆ ?" ಎಂದು ಮತ್ತಷ್ಟು ರೋದಿಸಿದಳು ನನಗೂ ಮರುಕವುಂಟಾಯಿತು "ಜಗದೊಳುತ್ತಮರ ಹಾನಿಯುಂ ಕಂಡು ಸೈರಿಸುವವರುಂಟೆ ?" ಬಳಿಕ ನಾನಿಂತು ಕೇಳಿದೆನು, "ತಾಯೀ ! ಕಾಳಿಕಾದೇವಿಯೇ ! ಸರ್ಪದಷ್ಟನಾದ ಅರಸನನ್ನು ಬದುಕಿಸುವುದಕ್ಕೆ ಯಾವ ಉಪಾಯವೂ ಇಲ್ಲವೇ ?" ಇದನ್ನು ಕೇಳಿ ಆ ಜಗದಂಬೆಯು "ವತ್ಸೆ ! ಉಂಟು ಉಪಾಯವುಂಟು, ಅದನ್ನರಿತು ತ್ವರೆಯಾಗಿ 'ಚಿಕಿತ್ಸೆಯನ್ನು ಮಾಡುವ ಆಪದ್ಬಾಂಧವನಾವನುಂಟೋ ! ಅಂಥವನು ಸಮಯಕ್ಕೆ ಹೇಗೆ ಒದಗುವನೋ ! ತಿಳಿವುದಸಾಧ್ಯವು ಕೇಳು, ಅರಸಿನ ಉದ್ಯಾನವನದಲ್ಲಿ ಪಶ್ಚಿಮದಿಕ್ಕಿನಲ್ಲಿ ಒಂದು ಚಿಕ್ಕ ಹುತ್ತವಿರುವುದು, ಅದರಮೇಲೆ ಒಂದುಬಗೆಯಾದ ಬಳ್ಳಿಯಿರುವುದು ಆ ಬಳ್ಳಿಯನ್ನು ಸಮೂಲವಾಗಿ ತಂದು ಅರೆದು ನೀರಿನಲ್ಲಿ ಕಲಿಸಿ ನಿರ್ಜೀವನಾಗಿರುವ ಆತನ ಬಾಯಿಯಲ್ಲಿ ಹಾಕಬೇಕು, ಈ ತಂತ್ರವನ್ನರಿತು ಯಾರಾದರೂ ಮಾಡಿದರೆ ಆ ನಿಮಿಷದಲ್ಲಿಯೇ ನಿದ್ದೆಯಿಂದೆಚ್ಚತ್ತವನಂತೆ ಎದ್ದು ಕುಳಿತುಕೊಳ್ಳುವನು ಇದು ಪರಮ ರಹಸ್ಯವು, ಇದನ್ನು ಮಾನವಮಾತ್ರದವನಿಗೆ ಹೇಳುವುದು ಹೇಗೆ ! ಈ ಸಂದರ್ಭಗಳೆಲ್ಲವನ್ನೂ ಸ್ಮರಿಸಿ ಹೇಗಾದರೂ ಈತನಿಗೆ ಮರಣವು ತಪ್ಪುವದಾಗಿಲ್ಲವೆಂದು ನಿಶ್ಚಯಿಸಿ ಈತನ ಸದ್ಗುಣಸಮುದಾಯವನ್ನು ನೆನೆದು ರೋದಿಸುತ್ತಿದೇನೆ" ಎಂದು ಹೇಳಿ ಅಂತರ್ಹಿತಳಾದಳು. ಬಳಿಕ ನಾನು ನಮ್ಮೊಡೆಯನಿಗೆ ಪ್ರಾಪ್ತವಾಗುವ ಪ್ರಾಣಹಾನಿಯನ್ನು ಕುರಿತು ಕಾಳಿಕಾದೇವಿ ಹೇಳಿದ ಮಾತುಗಳನ್ನು ಸ್ಮರಿಸುತ್ತ, "ಈ

ಮಹಾರಾಯನನ್ನು ಉಪಾಯದಿಂದ ಬದುಕಿಸುವ ಪುಣ್ಯಾತ್ಮರು ದೊರೆವುದಿಲ್ಲ ವೇನೋ, ಎಂದಾಲೋಚಿಸುತ್ತ ಇಲ್ಲಿಗೆ ಬಂದೆನು" ಎಂದು ಹೇಳಿ ಸುಮ್ಮನಾಯಿತು ಉಳಿದ ಕಾಲುಗಳು "ರಾಜನಿಗೀಬಗೆಯಾದ ಕೇಡು ಸಂಭವಿಸುವುದಲ್ಲ!" ಎಂದು ಖೇದವನ್ನು ಹೊಂದಿದುವು. ಬಳಿಕ ಮೂರನೆಯ ಯಾಮವು ಪ್ರಾಪ್ತವಾಯಿತು ಆಗ ಮೂರನೆಯ ಕಾಲು, ಉಳಿದವುಗಳೊಡನೆ ಯಥಾಸ್ಥಿತಿಯೂ ಹೇಳಿ ಹೊರಟು ನಿಯಮಿತ ಕಾಲದಲ್ಲಿ ಹಿಂದಕ್ಕೆ ಬಂದು ತನ್ನ ಸ್ಥಳದಲ್ಲಿ ನಿಂತಿತು ಉಳಿದವುಗಳ ಪ್ರಾರ್ಥನೆಯಂತೆ ಅದು ತಾನು ಪೋಗಿಬಂದ ಸಮಾಚಾರವನ್ನು ಹೇಳಲಾರಂಭಿಸಿತು.

"ಸಖಿಯರಿರಾ! ನಾನು ಹೋಗಿಬಂದ ವರ್ತಮಾನವನ್ನು ಹೇಳುತ್ತೇನೆ ಸಾವಧಾನದಿಂದ ಲಾಲಿಸಿ, ನಾನು ಈ ನಗರದ ಎಲ್ಲಬೀದಿಗಳಲ್ಲಿಯೂ ಮೆಲ್ಲಮೆಲ್ಲನೆ ಸುಳಿಸುಳಿದು, ಪಶ್ಚಿಮದ ದಿಕ್ಕಿನಲ್ಲಿರುವ ರಾಜವೀಥಿಯನ್ನು ಪ್ರವೇಶಿಸಿದನು ಆಗ ಪಟ್ಟಣವೆಲ್ಲ ನಿಶ್ಶಬ್ದವಾಗಿದ್ದಿತು, ಆ ಬೀದಿಯಲ್ಲಿ ನಾಲ್ಕೈದುನೂರುದೂರ ಪೋಗುವಷ್ಟರಲ್ಲಿ ಭಯಂಕರವಾಗಿರುವ ಉನ್ನತಾಕಾರವೊಂದು ನನ್ನ ದೃಷ್ಟಿಗೆ ಬಿದ್ದಿತು, ಆ ಅದ್ಭುತ ವ್ಯಕ್ತಿಯು ತನ್ನ ದೊಡ್ಡ ಕಣ್ಣುಗುಡ್ಡೆಗಳನ್ನು ಗಿರಗಿರನೆ ತಿರುವುತ್ತ, ತನ್ನ ತಲೆಯಮೇಲೆ ಧಗಧಗನೆ ಉರಿಯುತ್ತಿರುವ ಕುಂಪಟಿಯೊಂದನ್ನು ತೊನೆಯಿಸುತ್ತ, ಕೈಯ ಕರವಾಲವನ್ನು ಝಳಿಪಿಸುತ್ತ ನನ್ನೆದೆಯನ್ನು ನಡುಗಿಸುವ ಗರ್ಜನೆಯೊಂದನ್ನು ಮಾಡಿತು, ನಾನು ನಿಶ್ಚೇಷ್ಟತೆಯಿಂದ ಸ್ವಲ್ಪಹೊತ್ತಿನವರೆಗಿದ್ದು ಕೊನೆಗೆ ಹೇಗೋ ಧೈರ್ಯವನ್ನು ತಾಳಿ, "ಎಲೌ! ನೀನು ಯಾರು? ಎಲ್ಲಿಗೆ ಹೋಗುತ್ತಿರುವೆ? ಸತ್ಯವಾಗಿ ಹೇಳು" ಎಂದು ಗಜರಿ ಕೇಳಿದೆನು ಆ ಭೂತಕ್ಕೆ ಬಹು ಕೋಪವುಂಟಾಯಿತು, ದುರದುರನೆ ನೆಟ್ಟದಿಟ್ಟಿಯಿಂದ ನನ್ನನ್ನು ನೋಡಿ, "ಏನು? ನೀನಾರೆಂದು ನನ್ನನ್ನು ಪೃಚ್ಛಿಸುವ ಅಧಿಕಾರವು ನಿನಗೆಲ್ಲಿಯದು? ಪೋಡಿಯೆ! ನೀನೇ ನನ್ನನ್ನು ಕೇಳುವುದು? ಬಿಡು ಬಿಡು! ತೊಲತೊಲಗು ನನ್ನ ಪ್ರಯತ್ನಕ್ಕಂತರಾಯವನ್ನುಂಟು ಮಾಡಿದರೆ ನಿನ್ನನ್ನೊಂದೇಸಾರಿ ಗುಟಕ್ಕನೆ ನುಂಗಿಬಿಡುವೆನು ನಾನಾರೆಂದು ತಿಳಿದಿರುವೆ? ಢಾಕಿನಿಯೆಂಬ ದೊಡ್ಡ ಭೂತವೆಂದರೆ ಬಹುಕಾಲದಿಂದಲೂ ಈ ಮಹಾನಗರದಲ್ಲಿ ರಾತ್ರಿಯಹೊತ್ತು ತಿರುಗುತ್ತ ಯಾರಾದರೂ ನನಗೆ ಇದಿರಾದರೆ ಅವರನ್ನು ಕೊಂದು ತಿನ್ನುತ್ತಿರುವೆನು, ಒಂದು ವಾರದಿಂದಲೂ ನನಗಾಹಾರವು ದೊರೆಯದಿದ್ದುದರಿಂದ ಹಸಿವು ನೀರಡಿಕೆಗಳಿಂದ ಬಳಲಿರುತ್ತೇನೆ ಬೇಗನೆಹೋಗಿ ಯಾರಾದರೂ ಸಿಕ್ಕಿದರೆ ಅವರನ್ನು ಸಂಹರಿಸಿ ತಿಂದಲ್ಲದೆ ನನ್ನ ಹಸಿವು ಅಡಗುವುದಿಲ್ಲ ದಾರಿಗಡ್ಡಬಾರದೆ ದೂರಕ್ಕೆ ತೊಲಗು ಎಂದಿತು, ಆ ಮಾತುಗಳನ್ನು ಕೇಳಿ ನನಗೆ ಅತಿಕೋಪವುಂಟಾಯಿತು, "ಛೀ! ಛೀ! ದುಷ್ಟಪಿಶಾಚವೇ ಈ ನೀಚವೃ

ತ್ರಿಯನ್ನವಲಂಬಿಸಿಯೋ ನೀನು ವರ್ತಿಸುವುದು ? ಈಗಲೇ ನಿನ್ನನ್ನು ಕೊಂದು ಈ ನಗರವಾಸಿಗಳಿಗೆಲ್ಲ ಕ್ಷೇಮವನ್ನುಂಟು ಮಾಡುವೆನು ಎಂದು ನಾನು ನುಡಿದೆನು, ಆ ಭೂತವು ಹಲ್ಲುಗಳನ್ನು ಕಡಿಯುತ್ತ "ಎಲ ಬುದ್ಧಿಹೀನವಾದ ಕೊರಡೆ ! ನೀನೇ ನನ್ನನ್ನು ಕೊಲ್ಲುವುದು ? ಛೀ ! ನಿಲ್ಲುನಿಲ್ಲು ! ನಿನ್ನನ್ನು ತುಂಡುತುಂಡಾಗಿ ಕತ್ತರಿಸಿ ಒಲೆಗೆ ಬಿಸುಡುವಂತೆ ಮಾಡುವೆನು ನೋಡು" ಎಂದು ತನ್ನ ಹಸ್ತದಲ್ಲಿದ್ದ ಕತ್ತಿಯನ್ನು ಓರಿದು ಮೇಲೆ ಬೀಳುವುದಕ್ಕೆ ಬಂದಳು ನಾನು ಸುಮ್ಮನಿರಲಾಗುವುದೆ ? ನನಗೂ ಬಹಳ ಕೋಪಬಂದಿತು ಒಡನೆಯೇ ಮೇಲಕ್ಕೆಹಾರಿ ಎರಡು ಮೂರುಸಾರಿ ಆ ಭೂತದ ತಲೆಯಮೇಲೆ ಧೊಪ್ಪನೆ ಬಿದ್ದೆನು, ತಲೆಯಮೇಲಿದ್ದ ಅಂಗಾರಶಕಟಿಯು ಕೆಳಕ್ಕೆ ಬಿದ್ದಿತು ಆ ಭೂತವಾಬಳಿಕ ರೋಷಾವೇಶದಿಂದ ನನ್ನನ್ನು ಹೊಡೆಯಲಾರಂಭಿಸುವಷ್ಟರಲ್ಲಿ ಮತ್ತೆ ನಾನು ತಲೆಯಮೇಲೆ ಹಾರಿ ಬಿದ್ದು ಬಹಳವಾಗಿ ನೋಯಿಸಿದೆನು ಆಮೇಲೆ ಆ ಪಾಳುಭೂತಕ್ಕೆ ಅಹಂಕಾರ ವುಡುಗಿತು, ಮೂಗುಬಾಯಿಗಳಿಂದ ರಕ್ತವು ಸ್ರವಿಸಿತು ಬಳಿಕ ನನಗದು ಸಾಷ್ಟಾಂಗ ನಮಸ್ಕಾರವನ್ನು ಮಾಡಿ, "ಆಹಾ ! ನನ್ನನ್ನಿಷ್ಟು ಬಳಲಿಸಿದವರನ್ನೀವರೆಗೆ ಕಾಣಲಿಲ್ಲ, ನೀನಾರೋ ಅದ್ಭುತವಾದ ದೈವಶಕ್ತಿಯುಳ್ಳ ವ್ಯಕ್ತಿಯಾಗಿದ್ದೀಯೆ ನನ್ನನ್ನು ಕರುಣಿಸು, ನಾನು ಅಹಂಕಾರದಿಂದ ನಿನ್ನೊಡನೆ ಮಾತನಾಡಿದ ಮಾತುಗಳಬಗ್ಗೆ ಕ್ಷಮಾಪಣೆಯನ್ನು ಬೇಡುವೆನು ಕ್ಷಮಿಸು ಇನ್ನು ನಿನ್ನ ಆಜ್ಞೆಯಂತೆ ನಡೆವೆನು ಮತ್ತು ನಿನಗೊಂದುಪಕಾರವನ್ನೂ ಮಾಡುವೆನು" ಎಂದು ಬಹುದೈನ್ಯವಾಗಿ ಬೇಡಿಕೊಂಡಿತು ನಾನು ಕರುಣಿಸಿ, "ಎಲೆ ಭೂತವೆ ! ನಿನ್ನನ್ನು ಕೊಲ್ಲದೆ ಬಿಟ್ಟಿರುವೆನು ನೀನು ನನಗೆ ಮಾಡಬೇಕೆಂದಿರುವ ಉಪಕಾರ ವಾವುದೋ ತಿಳಿಸು" ಎಂದು ಕೇಳಿದೆನು, ಅದು ದೈನ್ಯವನ್ನುತಾಳಿ ನನ್ನ ಅಪ್ಪಣೆಯುಪ್ರಕಾರವಾಗಿ ವರ್ತಿಸುವಂತೆ ಪ್ರಮಾಣವನ್ನು ಮಾಡಿ, "ಇಗೋ ! ಈ ಖಡ್ಗವನ್ನು ನಿನಗೆ ಕೊಡುತ್ತೇನೆ ಇದನ್ನು ತೆಗೆದುಕೊಂಡು ಹೋಗಿ, ನಗರದನಡುವೆ ಒಂದು ಕಲ್ಲಿನ ಸ್ತಂಭವನ್ನು ಸ್ಥಾಪಿಸಿ ಅದರಮೇಲೆ ನಿಲ್ಲಿಸಬೇಕು ಹಾಗೆ ಮಾಡಿದರೆ ಮುಂದೆ ಎಂದಿಗೂ ಈ ಪಟ್ಟಣವನ್ನು ಯಾವ ಭೂತಪ್ರೇತ ಪಿಶಾಚಗಳೂ ಪ್ರವೇಶಿಸಲಾರವು ಪ್ರಜೆಗಳು ನಿರ್ಭಯರಾಗಿ ಬಾಳುವರು" ಎಂದು ನುಡಿಯಿತು. ಬಳಿಕ ನಾನಾಭೂತವನ್ನು ಕಂಡು "ಭಾಪು ! ಭೂತವೇ, ಹಾಗೆಯೇ ಮಾಡುವೆನು ಪರೋಪಕಾರವನ್ನು ಮಾಡುವುದೇ ಜನ್ಮವನ್ನು ಪಡೆದ್ದುದಕ್ಕೆ ಸಾರ್ಥಕವು ಬಾ ! ಖಡ್ಗವನ್ನು ತೆಗೆದುಕೊಂಡು ನನ್ನೊಡನೆ ಬಂದು ನಾನು ತೋರಿಸುವಕಡೆಯಲ್ಲಿ ಅದನ್ನಿಟ್ಟುಹೋಗು" ಎಂದು ಹೇಳಿದೆನ ಹಾಗೆಯೇ ಆಗಲೆಂದಾ ಭೂತಾಗ್ರಣಿಯು ಕತ್ತಿಯನ್ನು ಹಿಡಿದು ನನ್ನೊಡನೆ ಬಂದುದು, ಅದನ್ನು ಕರೆದುಕೊಂಡು ಬಂದು ಆ ಭಯಂಕರ ಕರವಾಲವನ್ನು ಪಟ್ಟಣದ

ಹೊರಗಿರುವ ಕಾಳಿಕಾದೇವಾಲಯದಲ್ಲಿ ಇಡಿಸಿದೆನು, ಬಳಿಕ ಆ ಭೂತವು ನನ್ನ ಅನುಮತಿಯನ್ನು ಪಡೆದು ಸ್ವೇಚ್ಛೆಯಾಗಿ ಹೊರಟುಹೋಯಿತು, ಇಷ್ಟು ಕೆಲಸವು ನನ್ನ ಸಂಚಾರದಲ್ಲಿ ನಡೆದುದರಿಂದ ನಾನು ಹೊರಟುಬರಲು ಸ್ವಲ್ಪ ತಡೆಯಾಯಿತು, ನೀವು ನನ್ನಮೇಲೆ ಕೋಪಗೊಳ್ಳುವಿರೆಂದು ಭಾವಿಸಿ ಓಡಿಬಂದೆನು, ಎಂದಾ ಮೂರನೆಯ ಮಂಚದಕಾಲು ತನ್ನ ಸಂಚಾರಕಥೆಯನ್ನು ಮುಗಿಸಿತು. ಉಳಿದ ಕಾಲುಗಳು " ಭಲೇ ! ಭಲೇ ! ನೀನೀಪಟ್ಟಣಕ್ಕೆ ಬಹೂಪಕೃತಿಯನ್ನು ಮಾಡಿದೆ " ಎಂದು ಅದನ್ನು ಬಹು ಶ್ಲಾಘನೆಯನ್ನು ಮಾಡಿದುವು. ಆಗ ನಾಲ್ಕನೆಯ ಯಾಮದಲ್ಲಿ ಅರೆಗಳಿಗೆಯು ಕಳೆದಿದ್ದಿತು, ನಾಲ್ಕನೆಯ ಪಾದವು ಉಳಿದವುಗಳಂತೆಯೇ ತನ್ನ ಗಮನವನ್ನು ಕುರಿತು ವಿಜ್ಞಾಪಿಸಿ ಹೋಗಿಬಂದು ತನ್ನ ಸ್ಥಾನವನ್ನು ಸೇರಿ ತನ್ನ ವೃತ್ತಾಂತವನ್ನು ಉಳಿದ ಕಾಲುಗಳಿಗೆ ಹೀಗೆಂದು ಹೇಳಿತು.

ಸಖಿಯರೆ ಕೇಳಿ, ನಾನು ಪಟ್ಟಣವೆಲ್ಲಾ ಸಂಚರಿಸಿ ಕೊನೆಗೆ ಉತ್ತರವೀಧಿಯಲ್ಲಿರುವ ಅರಸನ ಕುದುರೆಯ ಲಾಯದಬಳಿಗೆ ಬಂದೆನು ಅಲ್ಲಿದ್ದ ಒಂದು ಕೊಟ್ಟಡಿಯಲ್ಲಿ ಯಾರೋ ಗುಸಗುಸನೆ ಮಾತನಾಡುತ್ತಿದ್ದ ಧ್ವನಿಯು ಕಿವಿಗೆಬಿದ್ದಿತು ನಾನೆ ಅಲ್ಲಿಗೆ ಹೋಗಿ ಬಾಗಿನೋಡಿದೆನು ಅಲ್ಲಿ ಒಂದು ಪುರುಷವ್ಯಕ್ತಿಯೂ ಒಂದು ಸ್ತ್ರೀವ್ಯಕ್ತಿಯೂ ಇದ್ದಿತು ಅವರು ಏನು ಮಾತಾಡುವರೋ ನೋಡಬೇಕೆಂದು ಮರೆಯಾಗಿದ್ದು ಆಲಿಸಿದೆನು ಅವರಿಬ್ಬರಲ್ಲಿ ಆ ಸ್ತ್ರೀಯು ಪುರುಷನನ್ನು ಕಂಡು ಹೀಗೆಂದು ಹೇಳಿದಳು.

" ಪ್ರಿಯ ! ನಮ್ಮಿಬ್ಬರ ಸೇರುವೆಯು ಬಹುಕಷ್ಟವಾಗಿ ಪರಿಣಮಿಸಿರುವುದು ಏನುಮಾಡಲಿ ? ಪಾಪಾತ್ಮನಾದ ನನ್ನ ಗಂಡನು ತನ್ನ ರಾಜಕಾರ್ಯಗಳನ್ನು ಬಿಟ್ಟು ಒಂದು ತಿಂಗಳಿಂದಲೂ ಎಡೆಬಿಡದೆ ನನ್ನಲ್ಲಿರುವುದರಿಂದ ನಾನು ನಿನ್ನಬಳಿಗೆ ಬರುವುದಕ್ಕೆ ಅವಕಾಶವಿಲ್ಲದಿರುವುದು, ಆದುದರಿಂದಲೇ ಪ್ರತಿದಿನವೂ ನಾನು ನನ್ನ ದುಃಖವನ್ನು ನಿನಗೆ ತಿಳಿಯಿಸುತ್ತ, ವಿರಹವೇದನಾದೋಧೂಯಮಾನ ಮಾನಸಳಾಗಿ, ಗಂಡನೂ ಪಿಶಾಚಸ್ವರೂಪನೂ ಆದ ಆ ರಾಜನೊಡನೆ ಸರಸಸಲ್ಲಾಪಗಳನ್ನಾಡುವ ವೇಳೆಯಲ್ಲಿ ಅವನಲ್ಲಿಷ್ಟವಿಲ್ಲದವಳಾದರೂ ವಿಧಿಯಿಲ್ಲದೆ ಪ್ರೀತಿಯುಳ್ಳವಳಂತೆ ನಟಿಸುತ್ತಿದ್ದೆನು. ಆ ಸಮಯದಲ್ಲಿ ನಿನ್ನ ರೂಪಗುಣಾದಿಗಳು ನನ್ನ ಸ್ಮೃತಿಪಥದಲ್ಲಿ ಸುಳಿಯುತ್ತಿದ್ದುವು. " ಅಕಟಾ ! ನಿನ್ನೊಡನೆಂದು ಹೀಗೆ ಸರಸಸಲ್ಲಾಪಗಳನ್ನಾಡುವೆನೋ ? ಎಂದು ನಿನ್ನಲ್ಲಿ ಗಾಢಾಲಿಂಗನ ಚುಂಬನಾದಿಗಳನ್ನೆಸಗುವೆನೋ ! " ಎಂದು ತ್ವರೆಪಡುತ್ತಿದ್ದೆನು, ಆ ಹಾಳು ದಿನಗಳು ಕಳೆದು ಈ ದಿನ ನಮಗೆ ಸಂಪೂರ್ಣ ಸಂಯೋಗ ಸಂಪದವು ದೊರಕಿರುವುದು, ಪ್ರಿಯ ! ಏಳು ಬೇಗನೆ ನನ್ನನ್ನು ಬಿಗಿದಪ್ಪಿ ಸುಖಸಾಗರದಲ್ಲಿ ಮುಳುಗಿಸು " ಎಂದು ನುಡಿದಳು.

ಆ ಪುರುಷನು “ ಭಾಮಾಮಣೀ ! ಒಂದು ತಿಂಗಳಿಂದಲೂ ಎಡೆಬಿಡದೆ ನಿನ್ನಲ್ಲಿ ಬೆರೆದಿರುತ್ತ ಈ ದಿನ ಬಿಟ್ಟಿರುವುದಕ್ಕೆ ಕಾರಣವೇನು ? ” ಎಂದನು. ಆ ರಾಜಪತ್ನಿಯು “ ಸುಂದರಾಂಗ ! ಈ ದಿನ ಬಡಗಿಯೊಬ್ಬನು ಬಂದು ಒಂದು ಮಂಚವನ್ನು ತೋರಿಸಿ ಅದರ ಪ್ರಭಾವವನ್ನು ಬಣ್ಣಿಸಿಕೊಟ್ಟು ಹೋದನು. ಅದರ ಬೆಲೆ ಹತ್ತುಸಾವಿರ ವರಹಗಳಂತೆ ಅದರಮೇಲೆ ಮಲಗುವುದು ಕ್ಷೇಮಕರವಂತೆ ಅದರ ಅದ್ಭುತವಾದ ಮಹಿಮೆಯನ್ನರಿಯಲು ಈ ದಿನ ಪ್ರತ್ಯೇಕಸ್ಥಲದಲ್ಲಿ ಮಂಚವನ್ನು ಹಾಕಿಸಿಕೊಂಡು ಅದರಮೇಲೆ ಮಲಗಿ ಕರಡಿಯಂತೆ ಗುರುಗುಟ್ಟುತ್ತ ಮಲಗಿರುವನು. ಪರಿಚಾರಿಕೆಯಿಂದ ಈ ವರ್ತಮಾನವನ್ನು ತಿಳಿದು ಸಂತೋಷಿಸಿ, ನಿರ್ಭಯವಾಗಿ ಈ ದಿನ ನಿನ್ನನ್ನು ಸೇರಿ ಇಷ್ಟಾರ್ಥವನ್ನು ಪಡೆಯಬೇಕೆಂದು ಭಾವಿಸಿ ಬೇಗನೆ ಹೊರಟುಬಂದೆನು, ಈವರೆಗೆ ಪರಮಾನಂದವನ್ನು ಅನುಭವಿಸುತ್ತಿದ್ದ ನನ್ನ ಮನೋರಥಕ್ಕೆ ವಿಘ್ನವಾಗಿ ಬೆಳಗಿನ ಜಾವವು ಪ್ರಾಪ್ತವಾಯಿತು, ಇನ್ನು ನಿನ್ನನ್ನು ಬಿಟ್ಟುಹೋಗದಿದ್ದರೆ ತಪ್ಪದಲ್ಲವೆ ? ” ಎಂದು ಬಹು ದೈನ್ಯದಿಂದ ನುಡಿಯುತ್ತ ರೋದಿಸಿದಳು. ಆ ಪುರುಷನು ಅವಳ ನುಡಿಗಳನ್ನು ಕೇಳಿ “ ಪ್ರಿಯೆ ! ನಿನಗೆ ನನ್ನಮೇಲೆ ಸಂಪೂರ್ಣಾನುರಾಗವುಂಟೆಂಬುದನ್ನೂ ನನ್ನ ಸಂಯೋಗವುಂಟಾಗದಿದ್ದರೆ ನಿನಗತಿ ಖೇದವುಂಟಾಗುವುದೆಂಬುದನ್ನೂ ನಾನು ಬಲ್ಲೆ, ಆದರೆ ಸಂದರ್ಭವನ್ನರಿಯದೆ ನೀನು ನಿನ್ನ ಪತಿಯನ್ನು ನಿಂದಿಸುವುದು ಮಾತ್ರ ನನಗಿಷ್ಟವಿಲ್ಲ ಆತನು ಮಹಾರಾಜನು ನಾನಾದರೋ ಆ ರಾಜಪುಂಗವನ ಕಾವಾಡಿನು - ಹೀನನು, ದೈವವಶದಿಂದ ಹೇಗೋ ನಿನಗೂ ನನಗೂ ಸಂಯೋಗವುಂಟಾಯಿತಲ್ಲವೆ ನಿನ್ನ ಪಾದಸೇವೆಗಾದರೂ ನಾನರ್ಹನಾಗಬಲ್ಲೆನೆ ? ಅಂತಪ್ಪ ಮಹಾರಾಜನ ಪತ್ನಿಯಾದ ನೀನು ಭೃತ್ಯನಾದ ನನ್ನನ್ನು ಕೂಡಿದುದು ಮಹಾಪರಾಧವಾಗಿರುವುದು ಸಾಲದೆ ಪರಮೋತ್ತಮನಾದ ನಿನ್ನ ಪತಿಯನ್ನು ನನ್ನ ಮುಂದೆ ದೂರುತ್ತಿರುವೆ ಇದು ತಕ್ಕುದಲ್ಲ ” ಎಂದನು. ಆ ಹೀನಮಾನಿನಿಗೆ ಅವನನುಡಿ ರುಚಿಸಲಿಲ್ಲ, “ ಏನು ? ನೀನು ಹೀನನೆ ? ನನ್ನ ಪಾದಸೇವೆಗೂ ತಗದವನೆ ? ಇನ್ನುಮೇಲೆ ಇಂತಪ್ಪ ಮಾತುಗಳನ್ನಾಡಬೇಡ ನೀನೇ ನನ್ನ ಪ್ರಾಣಪ್ರಾಯನು ನನ್ನಪಾಲಿಗೆ ಮನ್ಮಥನು ಎಂದು ನುಡಿದು ಅವನ ಗಲ್ಲಗಳನ್ನು ಚುಂಬಿಸಿ, “ ಪ್ರಾಣನಾಥ ! ಹೀನಮಾನವನೂ, ನನಗಿಷ್ಟವಿಲ್ಲದವನೂ ಆಗಿರುವ ಎನ್ನೆಯಂತಪ್ಪ ಆ ಗಂಡನನ್ನು ನಿಂದಿಸಿದುದು ನಿನಗೆ ಸಮಾಧಾನವಿಲ್ಲವೇನೋ ! ಅದಂತಿರಲಿ, ನಾಳೆ ಒಂದುಪಾಯದಿಂದ ಅವನ ಪ್ರಾಣಗಳನ್ನೆ ಕಳೆದು ಸ್ವೇಚ್ಛೆಯಾಗಿ ಎಡೆಬಿಡದೆ ನಿನ್ನಲ್ಲಿ ಸುಖಾನುಭವವನ್ನು ಮಾಡಬೇಕೆಂದು ಬಗೆದಿರುವೆನು ಇದಕ್ಕೆ ನಿನ್ನ ಅಭಿಪ್ರಾಯವೇನು ? ಆ ಉಪಾಯವೇನೆಂದರೆ ನನ್ನ ರಹಸ್ಯವನ್ನು ತಿಳಿಯಿಸಲು ಅರ್ಹಳಾದ ಪರಿಚಾರಿಕೆಯೊಬ್ಬಳಿರುವಳು ಅವನಿಗೆ ನಾಳೆ ಬಡಿಸುವ

ಪ್ರಥಮ ಭೋಜನದಲ್ಲಿ ವಿಷವನ್ನು ಸೇರಿಸುವುದಕ್ಕೆ ಅವಳನ್ನು ನಿಯಮಿಸಿರುವೆನು, ಮುಂದೆ ನಡೆವುದನ್ನು ನೀನೆ ಕಣ್ಣಾರೆ ಕಾಣಬಹುದು ಬೆಳಗಾಗುವ ಹೊತ್ತಾಯಿತು ಇನ್ನು ನಾನಿಲ್ಲಿ ತಡೆವುದು ತಕ್ಕುದಲ್ಲ ನನ್ನನ್ನಿನ್ನೊಂದುಬಾರಿ ಚುಂಬಿಸಿ ಅಪ್ಪಣೆಯನ್ನುಕೊಡು '' ಎಂದಳು.

ಆ ಭುಜಂಗಪುಂಗವನ ಗುಂಡಿಗೆ ಝಲ್ಲೆಂದಿತು. "ಎಲೌ ನಾರೀಮಣಿ! ನಿನ್ನ ಪ್ರಯತ್ನವು ಒಳ್ಳೆತಲ್ಲ, ಆ ಪತಿಯನ್ನು ಬಿಟ್ಟು ನನ್ನನ್ನು ಮುಟ್ಟಿದ ಪಾಪವೊಂದು ಸಾಲದೆ ಮತ್ತೆ ಪಾಪಕ್ಕೆ ಕೈಹಾಕುವೆಯಾ! ಛೀ! ಛೀ!! ದಯಪಟ್ಟು ಈ ಆಲೋಚನೆಯನ್ನು ಬಿಡು'' ಎಂದು ಹೇಳಿ ತನ್ನ ಬೆರಲ್ಗಳಿಂದ ಮುಂಗುರುಳ್ಗಳನ್ನು ತಿದ್ದುತ್ತ ಮುದ್ದಿಸಿ ಬೀಳ್ಕೊಟ್ಟನು.

ವತ್ಸ! ಸತ್ಯಶೀಲ! ಕೇಳಿದೆಯಾ ಸ್ತ್ರೀ ಸಾಹಸವನ್ನು? ಅವಳೇನಾದರೂ ತನ್ನು ಪಾಲಿಸಿದಳೇ? ಇಲ್ಲ! ಇಲ್ಲ! ನಾನು ಪ್ರಯತ್ನಿಸಿರುವ ಕೆಲಸವನ್ನು ಮುಗಿಸದೆ ಬಿಡುವೆನೆ? ಅವನು ಸತ್ತರಲ್ಲವೆ ನಾನು ಸ್ವೇಚ್ಛೆಯಾಗಿರಬಹುದು'' ಎಂದೇ ಹೊರಟು ಮನೆಯನ್ನು ಸೇರಿದಳು.

ನಾಲ್ಕನೆಯ ಮಂಚದಕಾಲು ತಾನು ಕಂಡ ಸಂಗತಿಯನ್ನು ತನ್ನ ಸಖಿಯರೊಡನೆ ಹೇಳಿ "ಸಖಿಯರಿ! ಆಸ್ತ್ರೀಯ ಚಾತುರ್ಯವು ನನಗೆ ಆಶ್ಚರ್ಯಾತಿಶಯವನ್ನುಂಟುಮಾಡಿತು. ಅದನ್ನೆಲ್ಲ ನಿಮಗೆ ಹೇಳಬೇಕೆಂದೇ ಬಗೆದು, ಅಷ್ಟರಲ್ಲಿ ಅರುಣೋದಯವಾದುದರಿಂದ ರಾಜನು ಏಳುತ್ತಾನೆಂದು ಹೆದರಿ ಓಡಿಬಂದೆನು'' ಎಂದು ಹೇಳಿ ಸುಮ್ಮನಾಯಿತು "ಅಯ್ಯೋ! ರಾಜನಿಗೆಲ್ಲವೂ ಮೃತ್ಯುಕರಗಳಾಗಿಯೇ ಇರುವುವಲ್ಲ! ಸರ್ವಶಕ್ತನಾದ ಭಗವಂತನ ಸಂಕಲ್ಪವೇಂತಿರುವುದೋ ನೋಡಬೇಕು'' ಎಂದು ಪರಸ್ಪರ ಮಾತನಾಡಿಕೊಂಡು ಮೌನಮುದ್ರೆಯನ್ನು ವಹಿಸಿದುವು, ಅಷ್ಟರಲ್ಲಿ ಅರುಣೋದಯವಾಯಿತು. ಮಂಚದಮೇಲೆ ಮಲಗಿ ನಿದ್ರಿಸುವಂತಿದ್ದ ರಾಜಶ್ರೇಷ್ಠನು ಆಗತಾನೆ ಎಚ್ಚತ್ತವನಂತೆ ಎದ್ದು ನಾಲ್ಕುಯಾಮಗಳ ಗೂಢಸಮಾಚಾರಗಳಿಂದ ಬೆಗಡುಗೊಂಡ ಚಿತ್ತದಿಂದ ಅಲ್ಲಿಂತೆರಳಿ ಆಶ್ಚರ್ಯ ಖೇದ ಭಯ ರೋಷಗಳೊ ದನೊಂದು ಮುಂಚುತ್ತಿರೆ ನಡೆದು ಮಜ್ಜನ ಭೋಜನಾದಿಗಳನ್ನು ಹೇಗೋ ತೀರಿಸಿಕೊಂಡು ಸಭಾಭವನಕ್ಕೆ ಬಂದನು. "ಇಳಿಯುಂಬೊಳ್ತಿನೊಳ್ ಸಭಾಗಾರವನ್ನಲಂಕರಿಸುತ್ತಿರ್ದ ರಾಜನಿಂದಿದೇಂ ಸವಳ್ತಡಮೆಯ್ತಂದ'' ಎಂದಾ ಸಭಾಸ್ತಾರರಾಲೋಚಿಸಿದರು.

ಪರಷ್ಚರಂಜಯನಾಗ ಯಾರೊಡನೆಯೂ ಮಾತನಾಡದೆ, ಮಂತ್ರಿಮುಖ್ಯರನ್ನು ಮಾತ್ರ ತನ್ನೊಡನೆ ಬರುವಂತೆ ಹೇಳಿ ಹೊರಟನು. ಮಂತ್ರಿಮುಖ್ಯರಾತನನ್ನು ಹಿಂಬಾಲಿಸಿದರು. ಪರಿವಾರವು ಹಿಂದೆಯೇ ಉಳಿಯಿತು. ಅರಸನು ಹೊರಟು ನಗರವನ್ನು ದಾಟಿ ಕಾಳಿಕಾದೇವಾಲಯಕ್ಕೆ ಹೋಗಿ ದೇವಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ,

" ಅಂಬ ಶಶಿಬಿಂಬವದನೇ - ಕಂಬುಗ್ರೀವೇ ಕಠೋರಕುಚಯುಗ್ಮೇ |
ಅಂಬರ ಸಮಾನಮಧ್ಯೇ - ಶಂಬರರಿಪುವೈರಿದೇವಿ ಮಾಂಪಾಹಿ || "

ಎಂದು ಸ್ತುತಿಸಿ, ದೇವಾಲಯದ ಒಳಗಡೆಯಲ್ಲೆಲ್ಲ ಸುತ್ತಿ ಒಂದು ಮೂಲೆಯಲ್ಲಿದ್ದ ಭಯಂಕರ ಕೃಪಾಣವನ್ನು ಕಂಡು, ಅದನ್ನು ತೆಗೆದುಕೊಂಡು ಹಿಂದಿರುಗಿ ಓಲಗಶಾಲೆಗೆ ಬಂದನು. ಅದನ್ನು ನೋಡಿದ ಪರಿಜನರು ಪೂರ್ವ ಸಂದರ್ಭಗಳನ್ನರಿಯದೆ ಪರಮಾಶ್ಚರ್ಯ ಮಗ್ನರಾಗಿ ಬಿಟ್ಟದಿಟ್ಟಿಗಳಿಂದ ಮುಂದಿನ ಕಾರ್ಯವನ್ನು ನಿರೀಕ್ಷಿಸುತ್ತಿದ್ದರು.

ಅರಸನು ಸಭಾಮಂದಿರವನ್ನು ಸೇರಿ ಗದ್ದುಗೆಯೊಳ್ಕುಳ್ಳಿರ್ದು ಚಿಂತಾಪ ರವಶನಾಗಿ ತಾನು ಕಳೆದ ರಾತ್ರಿ, ಕೇಳಿದುದೆಲ್ಲವೂ ಸತ್ಯವೆಂದೇ ನಂಬಿ ಇತಿ ಕರ್ತವ್ಯತಾ ಮೂಢನಾಗಿದ್ದನು. ಅಷ್ಟರಲ್ಲಿ ಇಡುವಲೆ, ಬಿಡುವಲೆ, ಕಂಡಪಲೆ, ಕಣ್ಣಿವಲೆ, ಗುಂಡುವಲೆ, ದಂಡಿವಲೆ, ದುಂಡುವಲೆ, ಪಾಸುವಲೆ, ಬೀಸುವಲೆ, ಬೆಳ್ಳಾರವಲೆ, ಬಳ್ಳಿವಲೆ, ಸಿಡಿವಲೆ, ತಡಿಕೆವಲೆ ಮೊದಲಾದ ಬಗೆಬಗೆಯ ಬಲೆಗ ಳನ್ನೂ, ಪದವಿಲ್, ಕಟ್ಟದಗಣೆ, ಪೊಸಸೂಡೆ, ಕೊಂಬು, ಬಡಿಕೋಲ್, ನೇಣ್, ಗೇಣ್ ಮೊದಲಾದುವನ್ನೂ ಧರಿಸಿ ಬಲಶಾಲಿಗಳಾಗಿ ಕಂಗೊಳಿಸುವ ಆರ್ವರು ಬೇಟೆಗಾರರು ಸಭಾಮಂದಿರವನ್ನು ಪ್ರವೇಶಿಸಿ, ರಾಜನಿಗೆ ನಮಸ್ಕಾರವನ್ನು ಮಾಡಿ, " ರಾಜಾಧಿರಾಜ ! ನಾವು ಮೃಗಯಾವಿದ್ಯೆಯಲ್ಲಿ ದಕ್ಷರು. ನಮ್ಮ ಚಾತುರ್ಯವನ್ನೂ ಸಾಮರ್ಥ್ಯವನ್ನೂ ಪರೀಕ್ಷಿಸಿ, ನಮ್ಮನ್ನು ನಿಮ್ಮಲ್ಲಿಟ್ಟು ಕೊಂಡು ಕಾಪಾಡಬೇಕು. ನೀವು ಗುಣಾಢ್ಯರೆಂಬುದನ್ನು ಕೇಳಿ ನಿಮ್ಮ ಸೇವೆ ಯನ್ನು ಮಾಡಿಕೊಂಡಿರಬೇಕೆಂದು ಬಂದಿರುವೆವು " ಎಂದತಿ ವಿನಯದಿಂದ ಬಿನ್ನೈಸಿದರು. ರಾಜನವರನ್ನು ನೋಡುತ್ತಲೇ ತಲೆದೂಗಿ, "ಭಾಪು ! ನಾನು ಮಂಚಕ್ಕೆ ಕೊಟ್ಟ ಬೆಲೆಯು ಈ ಎರಡು ದೃಷ್ಟಾಂತಗಳಿಂದಲೇ ಬಂದಂತಾ ಯಿತು. ಮುಂದೆ ಬರುವುದೆಲ್ಲವೂ ಲಾಭವೇ ಆಗುವುದು" ಎಂದು ಮನಸ್ಸಿ ನಲ್ಲಿ ನೆನೆದು, ತಡೆಮಾಡದೆ ತನ್ನ ಮುಖ್ಯಸೇವಕರೆಂಟುಮಂದಿಯನ್ನು ಬರಿಸಿ, "ಈಗಲೆ ಇವರನ್ನು ಹಿಡಿದು ಬಂಧಿಸಿ, ಇವರಲ್ಲಿ ಏನೇನಿರುವುದೋ ಪರೀಕ್ಷಿಸಿ" ಎಂದವರಿಗೆ ಆಜ್ಞೆಮಾಡಿದನು. ಒಡನೆಯೇ ಸೇವಕರವರನ್ನು ಶೋಧಿಸಿದರು. ಅವರು ಗೂಢವಾಗಿ ಇಟ್ಟಿದ್ದ ಭಯಂಕರಾಹಿಗಳಂತೆ ತೋರುವ ಕತ್ತಿಗಳು ಹೊರಬಿದ್ದುವು ಬಳಿಕ ರಾಜನವರನ್ನು ಕುರಿತು "ಎಲೈ ವೀರರೆ ! ಸತ್ಯವನ್ನು ಹೇಳಿದರೆ ನಿಮ್ಮನ್ನು ಪ್ರಾಣದಿಂದುಳುಹುವೆನು. ಇಲ್ಲವಾದರೆ ಮರಣದಂಡನೆ ಯನ್ನು ವಿಧಿಸುವೆನು. ನಿಮ್ಮ ವಿಚಾರವು ಪೂರ್ವಭಾವಿಯಾಗಿಯೇ ನನಗೆ ತಿಳಿ ದಿರುವುದು" ಎಂದು ನುಡಿದನು. ಬಂದಿದ್ದ ವೀರಷಟ್ಕವು ಭಯಭ್ರಾಂತವಾಗಿ "ರಾಜನಿಗೆ ನಮ್ಮ ಗೋಪ್ಯವರ್ತನವು ಹೇಗೆ ತಿಳಿದಿರಬಹುದು, ಆಹ ! ಇವನು

ದೇವತಾಂಶಪುರುಷನೇ ಆಗಿರಬಹುದು. ಈ ಸಮಯದಲ್ಲಿ ನಾವು ಸತ್ಯವನ್ನು ನುಡಿಯದಿದ್ದರೆ ಉಳಿಯಲಾರೆವು'' ಎಂದು ಭಾವಿಸಿ ಇದ್ದುದನ್ನಿದ್ದಹಾಗೆಯೇ ಹೇಳಿಬಿಟ್ಟರು. ಪರಪುರಂಜಯನು ತಾನು ಕೊಟ್ಟಭಾಷೆಯಂತೆ ಪ್ರಾಣಹಾನಿಯನ್ನು ಮಾಡದೆ ಬಿಟ್ಟು ಅವರನ್ನು ಸೆರೆಯಲ್ಲಿಟ್ಟು ಬಳಿಕ ತನ್ನಲ್ಲಿ "ಇನ್ನು ತ್ವರೆಪಡದೆ ಗೃಹಿಣೀವಿಚಾರವನ್ನು ತಿಳಿಯುವೆನು'' ಎಂದು ಸಭಾಜನವನ್ನು ಸಭಾಜನದಿಂದ ಸ್ವಗೃಹಂಗಳಿಗೆ ಕಳುಹಿಸಿಕೊಟ್ಟು ರಾಣಿವಾಸಕ್ಕೆ ಬಂದನು. "ನೆರೆಪಾರೆಗಾರಯ ನಿಷ್ಠೆಮಿಗಿಲು'' ಎಂಬಂತೆ ರಾಣಿಯು ತನ್ನ ಕಾಪಟ್ಯವನ್ನು ಪತಿಯರಿಯನೆಂದೇ ಬಗೆದು, ಅತಿವಿನಯವನ್ನೂ ಭಕ್ತಿಯನ್ನೂ ಭಯವನ್ನೂ ತೋರ್ಪಡಿಸುತ್ತ ಗಂಡನಿಗೆ ಮಹೋಪಚಾರಗಳನ್ನು ಮಾಡಿ, ಕಳೆದಿರುಳೊಳಾ ಭುಜಂಗಪುಂಗವನೊಡನೆ ಹೇಳಿದಂತೆಯೇ ತಾನಾವೇಳೆಗೆ ಸಿದ್ಧಗೊಳಿಸಿದ್ದ ಅನ್ನವನ್ನು ತರಿಸಿ ಚಿನ್ನದ ತಟ್ಟೆಯಲ್ಲಿ ಬಡಿಸಿದಳು. ರಹಸ್ಯಜ್ಞನಾದ ಜನಪತಿಯದನ್ನು ತಿನ್ನದೆ ಅದರಲ್ಲಿ ಸ್ವಲ್ಪಭಾಗವನ್ನು ಅಂಗಳದಲ್ಲಿ ನೆರೆದಿದ್ದ ಕಾಗೆಗಳಿಗೆ ಹಾಕಿಸಿದನು. ಆ ಅನ್ನವನ್ನು ತಿಂದು ಆ ಕಾಗೆಗಳೆಲ್ಲವೂ ಪಂಚತ್ವವನ್ನು ಪಡೆದುವು.

ಅರಸಿತಿಯಾರೀತಿಯಾಗಿ ತನ್ನ ಗಂಡನು ಮಾಡಿದ ಪರೀಕ್ಷೆಯನ್ನು ಕಂಡು, ಆತನಿಗೆ ತನ್ನ ವಿಷಯದಲ್ಲಿ ಹೇಗೆ ಸಂಶಯವುತ್ಪನ್ನವಾಯಿತೆಂಬುದನ್ನರಿಯಲಾರದೆ ತನ್ನ ಕಾಪಟ್ಯವನ್ನಡಗಿಸಿಕೊಂಡು, ಆಶ್ಚರ್ಯವನ್ನೂ ಭಯವನ್ನೂ ಅಭಿನಯಿಸುತ್ತ, "ಹಾ! ಹಾ!! ನಾಥನೇ! ಏನಾಶ್ಚರ್ಯ! ಏನಾಶ್ಚರ್ಯ!! ಎಷ್ಟು ಮೋಸವಾಯಿತು? ಯಾವ ಪಾಪಾತ್ಮರೀಪರಿಯ ಮೋಸವನ್ನು ಮಾಡಿದರೋ ತಿಳಿಯಲಿಲ್ಲವಲ್ಲ! ಹೇಗೋ ಸಂದೇಹಪಟ್ಟು ನೀವು ಪರೀಕ್ಷಿಸಿದುದೇ ಒಳ್ಳೆಯದಾಯಿತು, ಇಲ್ಲದಿದ್ದರೆ ಪ್ರಾಣಹಾನಿಯುಂಟಾಗುತ್ತಿದ್ದಿತಲ್ಲ! ಅಯ್ಯೋ! ಪ್ರಾಣಪ್ರಿಯ! ನಿಮಗೆ ಪ್ರಾಣಹಾನಿಯು ಸಂಭವಿಸಿದ್ದರೆ ನಾನು ಜೀವಿಸುತ್ತಿದ್ದೆನೆ? ನನ್ನ ಪಾತಿವ್ರತ್ಯವೇ ನನ್ನ ಸೌಮಂಗಲ್ಯವನ್ನುಳಿಸಿತು. ನಿಮ್ಮ ಪ್ರಾಣವನ್ನು ಕಾಪಾಡಿತು. ನಮ್ಮ ಹಗೆಗಳಾರೋ ಪರಸ್ಪರ ಹಬ್ಬಿರುವ ನಮ್ಮ ಪ್ರೀತಿಲತೆಯನ್ನು ಕತ್ತರಿಸಲೆಳಸಿ ಹೀಗೆ ಮಾಡಿರುವರಲ್ಲದೆ ಬೇರೆಯಲ್ಲ. ನಮ್ಮ ದಾಂಪತ್ಯಸಾತತ್ಯವನ್ನು ನೋಡಿ ಸೈರಿಸಲಾರದೆ ಹೀಗೆ ಅನರ್ಥವನ್ನುಂಟುಮಾಡಲು ಉದ್ದೇಶಿಸಿದ ಪಾಪಿಗಳೀಗಲೆ ಸಾಯಲಿ! ಅವರ ವಂಶವು ನಿರ್ವಂಶವಾಗಲಿ! ಅಯ್ಯೋ! ನನಗೆ ವೈಧವ್ಯವನ್ನುಂಟುಮಾಡಿ ದುಃಖಸಮುದ್ರದಲ್ಲಿ ಮುಳುಗಿಸಲು ಬಗೆದು ಕ್ರೂರಹೃದಯರಾಗಿ ಹೇಗೋ ನಿಮ್ಮ ಅನ್ನದಲ್ಲಿ ವಿಷವನ್ನು ಬೆರಸಿರುವರೆಂದು ತೋರುವುದು. ತೋರುವುದೆಂದೇಕೆ ನುಡಿಯಬೇಕು, ಸತ್ಯವಾಗಿಯೂ ಹಾಗೆಯೇ ನಡೆದಿರುವುದು'' ಎಂದು ಏನೂ ಅರಿಯದವಳಂತೆಯೂ, ಭಯಭಕ್ತಿಗಳುಳ್ಳವಳಂತೆಯೂ ನಟಿಸಿದಳು-

ಆ ಚಂಚಲಾಕ್ಷಿಯ ವಂಚನಾಪ್ರಪಂಚದ ಸಂಚನ್ನು ಮುಂಚೆಯೇ ಅರಿತಿದ್ದ ಆ ರಾಜನು, ಸಾಧ್ವಿರತ್ನದಂತಿಂತು ನುಡಿದ ಮಡದಿಯ ನುಡಿಗಳನ್ನು ಕೇಳಿ, ಕಡುಮುಳಿಸನ್ನು ತಾಳಿ, ಅವಳನ್ನು ಕ್ರೋಧಾರುಣಿತಾಕ್ಷಿಗಳಿಂದ ದುರದುರನೆ ದಿಟ್ಟಿಸಿ, ಸೇವಕರನ್ನು ಬಳಿಗೆ ಕರೆದು "ಎಲೈ ಭೃತ್ಯರೇ! ಈ ನೀಚಳು ನನ್ನನ್ನು ಕೊಲ್ಲುವುದಕ್ಕಾಗಿ ಈ ಅನ್ನದಲ್ಲಿ ವಿಷವನ್ನು ಸೇರಿಸಿ, ಮಾಡಬೇಕಾದುದೆಲ್ಲವನ್ನೂ ಮಾಡಿ, ಏನೂ ಅರಿಯದ ನಿರಪರಾಧಿನಿಯಂತೆ ನನ್ನ ಮುಂದೆ ಪ್ರೀತಿಯುಳ್ಳ ವಲ್ಲಭೆಯಹಾಗೆ ನಟಿಸುತ್ತಿರುವಳು. ಯಾವ ಶಂಕೆಯೂ ಇಲ್ಲದೆ ಈ ಮಹಾಪಾಪಿಯನ್ನು ಹಿಂಗಟ್ಟುಮುರಿ ಕಟ್ಟಿ ಸಭಾಮಂದಿರಕ್ಕೆ ತ್ವರೆಯಾಗಿ ಕರೆದು ತನ್ನಿ" ಎಂದಾಜ್ಞೆಮಾಡಿ ತಾನೂ ಸಭಾಗೃಹಕ್ಕೆ ನಡೆತಂದನು.

ರಾಣಿಯು ತನ್ನ ಮನಸ್ಸಿನಲ್ಲಿ "ಅಯ್ಯೋ! ಮಹಾರಾಜನಿಗೆ ಹೇಗೋ ನನ್ನ ಕಪಟಕೃತ್ಯವು ಗೊತ್ತಾಯಿತು. ಆತನಿನ್ನು ನನಗೆ ಮರಣದಂಡನೆಯನ್ನು ವಿಧಿಸದೆ ಬಿಡನು" ಎಂದು ಬಗೆದು ತಲ್ಲಣಂಗೊಂಡಳು. ಅಷ್ಟರಲ್ಲಿ ಭಟರವಳನ್ನು ನೂಲುಮಿಣಿಗಳಿಂದ ಕಟ್ಟಿ ಅರಮನೆಯ ಊಳಿಗದವರೂ ಪ್ರಜೆಗಳೂ ಆಶ್ಚರ್ಯಪಟ್ಟು ನೋಡುತ್ತಿರಲು, ಸಭೆಗೆ ಎಳೆದುಕೊಂಡು ಹೋದರು. ಒಬ್ಬ ಸೇವಕನು ವಿಷಾನ್ನವನ್ನು ತಂದು ಸಭೆಯಲ್ಲಿಟ್ಟನು. ಈ ವರ್ತಮಾನವು ಊರಲ್ಲೆಲ್ಲ ಹರಡಿದ್ದುದರಿಂದ ಸಭ್ಯರೆಲ್ಲರೂ ಮಂದಿರದಲ್ಲಿ ನೆರೆದಿದ್ದರು. ಆಗ ರೆಲ್ಲರೂ ತಮ್ಮ ಅರಸನು ತನ್ನ ಹೆಂಡತಿಯನ್ನೇ ಆರೀತಿಯಾದ ಶಿಕ್ಷೆಗೆ ಗುರಿಪಡಿಸಿದುದಕ್ಕೆ ಕಾರಣವನ್ನರಿಯದೆ ಭಯಭ್ರಾಂತರಾಗಿ ತತ್ಕಾರಣವನ್ನು ಕೇಳುವುದಕ್ಕೆಕೂಡ ಹೆದರಿ ಮುಂದಿನ ಕಾರ್ಯಗಳನ್ನು ನಿರೀಕ್ಷಿಸುತ್ತಿದ್ದರು.

ಪರಪುರಂಜಯನಾಗ ವಿಷಾನ್ನದ ಮಹಿಮೆಯನ್ನು ಎಲ್ಲರಿಗೂ ತಿಳಿಯಪಡಿಸುವುದಕ್ಕಾಗಿ ಅವರ ಮುಂದೆಯೇ ಆ ಅನ್ನವನ್ನು ಒಂದು ನಾಯಿಗೆ ಹಾಕಿಸಿದನು. ಆ ಅನ್ನವನ್ನು ತಿಂದು ಅದು ಸತ್ತಿತು, ಇದು ವಿಚಿತ್ರವಾಗಿರುವುದೆಂದು ಸಭಾಸದರು ತಿಳಿದು ಕಾರಣವನ್ನೂಹಿಸುತ್ತ ಕುಳಿತರು.

ಬಳಿಕ ಅರಸನು ಕಾಸ್ತಾರನನ್ನು ಬರಮಾಡಿ "ಎಲಾ! ಸಾದಿಯೇ! ನಿನ್ನ ವಿಚಾರವೇನು? ನಿನ್ನೆಯರಾತ್ರಿ ನೀನು ಯಾರೊಡನೆ ಸಂಭಾಷಣ ಮಾಡುತ್ತಿದ್ದೆ? ನಡೆದುದನ್ನು ನಡೆದಂತೆ ಹೇಳಿದರೆ ಪ್ರಾಣದೊಡನೆ ಬಿಟ್ಟುಬಿಡುವೆನು, ಸುಳ್ಳು ಹೇಳಿದೆಯಾದರೆ ನಿನ್ನನ್ನು ವಧಿಸಿ ನಿನ್ನ ಮಾಂಸದಿಂದ ನಾಯಿನರಿಗಳಿಗೌತಣವನ್ನು ಮಾಡಿಸುವೆನು" ಎಂದು ಹೇಳಿದನು. ಅವನು ಭಯಪಟ್ಟು ತನಗೂ ರಾಣಿಗೂ ಸಂಬಂಧವುಂಟಾದುದು ಮೊದಲಾಗಿ ಕಳೆದ ರಾತ್ರಿಯವರೆಗೂ ನಡೆದ ವಿಚಾರವೆಲ್ಲವನ್ನೂ ಬಿನ್ನವಿಸಿದನು ಮತ್ತು "ಸ್ವಾಮಿ! ಏನು ಹೇಳಲಿ? ನೀನು

ರಾಜಪತ್ನಿಯಾದುದರಿಂದ ನನಗೆ ತಾಯಿಗೆ ಸಮಾನ ರಾಜನೆಲ್ಲಿ? ಬಡವನಾದ ಈ ಅಶ್ವಶಿಕ್ಷಕನೆಲ್ಲಿ ? ಇವನಲ್ಲಿ ನೀನನುರಾಗವನ್ನಿಡುವುದು ಉಚಿತವಲ್ಲ ತಾಯಿಯು ಕುಮಾರನನ್ನಪೇಕ್ಷಿಸಬಹುದೆ ? ” ಎಂದು ಎಷ್ಟೋವಿಧವಾಗಿ ಬೇಡಿಕೊಂಡೆನು ಆಕೆಯು “ ನೀನು ನನ್ನೊಡನೆ ಬೆರೆಯದಿದ್ದರೆ ನಿಜವಾಗಿಯೂ ನಿನ್ನನ್ನು ಕೊಲ್ಲಿಸುವೆನು ಎಂದು ನನಗೆ ಭಯವನ್ನುಂಟುಮಾಡಿ ನನ್ನನ್ನು ಮೋಸಗೊಳಿಸಿದಳು ” ಎಂದು ಇದ್ದುದನ್ನಿದ್ದಂತೆಯೇ ಹೇಳಿಬಿಟ್ಟನು ಸಭೆಯಲ್ಲಿದ್ದವರು ಬೆಚ್ಚಿಬಿದ್ದರು, ಅವನು ಸತ್ಯವನ್ನು ನುಡಿದನೆಂದು ಬಗೆದು ಅವನಿಗೆ ಪ್ರಾಣಾಂತ ಶಿಕ್ಷೆಯನ್ನು ಕೊಡುವುದಕ್ಕೆ ಒಪ್ಪದೆ ರಾಜನು ಕಾಸ್ತಾರನನ್ನು ಗಡಿಪಾರುಗಾಣಿಸಿ, ತನ್ನ ನೀಚಕೃತ್ಯವನ್ನು ನೆನೆದು ಅನುತಾಪವನ್ನುತಾಳಿ ಪ್ರಾಣಭೀತಿಯಿಂದ ನಡನಡಗುತ್ತ ನಾಚಿ ತಲೆಯನ್ನು ಬಾಗಿಸಿ ನಿಂತಿದ್ದ ತನ್ನ ಹೆಂಡತಿಯನ್ನು ನೋಡಿ, “ ಎಲೌ ಪಾಪಿಷ್ಠೆ ! ದುಷ್ಟೆ ! ಚಂಚಲೆ ! ವಂಚಕಳೆ ! ನಿನ್ನ ಮಾಯಾತಂತ್ರಗಳನ್ನು ನಾನರಿಯಲಾರೆನೆಂದು ಬಗೆದು ನೀಚಮತಿಯಾಗಿ ಕುದುರೆಯವನಲ್ಲಿ ಅನುರಾಗವನ್ನಿಟ್ಟುದಲ್ಲದೆ ಕೊನೆಗೆ ನನ್ನನ್ನು ಕೊಲ್ಲುವುದಕ್ಕೂ ಪ್ರಯತ್ನಮಾಡಿದೆಯಾ ? ಇದಕ್ಕೆ ತಕ್ಕಫಲವನ್ನನುಭವಿಸು ಎಂದತ್ಯುಗ್ರವಾಗಿ ನುಡಿದು, ಕೊಲೆಗಾರರನ್ನು ಕರೆಯಿಸಿ “ ಎಲಾ ! ಈ ದುಷ್ಟೆಯನ್ನು ರಾಣಿಯೆಂಬ ಗೌರವವನ್ನಿಡದೆ ಈಗಳೆ ಕೊಂಡೊಯ್ದು ಸುಣ್ಣಕಲ್ಲನಡುವೆ ಹೂಳಿ ಬಿರಿಯಹಾಕಿ ಇವಳು ಜೀವದಿಂದಿದ್ದರೆ ಅನೇಕರಿಗೆ ಮೃತ್ಯುವಾಗುವಳು ” ಎಂದಾಜ್ಞಾಪಿಸಿದನು, ಆಗ “ ಈ ರಾಜಾಜ್ಞೆಯು ಇವಳಿಗುಚಿತವಾದುದು ” ಎಂದೆಲ್ಲರೂ ನುಡಿದರು ಒಬ್ಬರಾದರೂ ಅಸಮಾಧಾನಪಡಲಿಲ್ಲ, ಸೇವಕರು ರಾಜಾಜ್ಞೆಯಂತೆ ನೆರೆವೇರಿಸಿದರು.

ಬಳಿಕ ರಾಜಾಗ್ರಣಿಯಾದ ಪರಪುರಂಜಯನು ೪ ದಿನಗಳನ್ನು ಕಳೆದು, ಐದನೆಯ ದಿನದ ಪ್ರಾತಃಕಾಲದಲ್ಲಿ ತನ್ನ ಮಂತ್ರಿಯನ್ನು ಕರೆದುಕೊಂಡು ತನ್ನ ಉದ್ಯಾನವನಕ್ಕೆ ಹೊರಟು, ಅಲ್ಲಿದ್ದ ಹುತ್ತವನ್ನೂ ಅದರಮೇಲೆ ಹಬ್ಬಿದ್ದ ಬಳ್ಳಿಯನ್ನೂ ಆತನಿಗೆ ತೋರಿಸಿ, “ ಅಯ್ಯಾ ! ಸಚಿವಾಗ್ರಣಿಯೇ ! ನೀನು ನನಗೆ ಸಾಮಾನ್ಯವಾಗಿ ಮಂತ್ರಿಮಾತ್ರದವನೇ ಅಲ್ಲ ಪ್ರಾಣಕ್ಕೆ ಸಮನಾದ ಗೆಳೆಯನು, “ ಕರಾವಿವಶರೀರಸ್ಯ ನೇತ್ರಯೋರಿವಪಕ್ಷ್ಮಣೀ | ಅವಿಚಾರ್ಯಪ್ರಿಯಾಂಕುರ್ಯಾತ್ತನ್ಮಿತ್ರಂಮಿತ್ರಮುಚ್ಯತೇ || ” ಎಂಬಂತೆ ಶರೀರಕ್ಕೆ ಕೈಗಳು ಹೇಗೋ, ಕಣ್ಣುಗಳಿಗೆ ಎವೆಗಳು ಹೇಗೋ ಹಾಗೆ ವಿಚಾರವಿಲ್ಲದೆಯೇ ಪ್ರಿಯವನ್ನು ಮಾಡುವ ಮಿತ್ರನೇ ಮಿತ್ರನು ಮತ್ತು “ ನಮಾತರಿನದಾರೇಷು ನಸೋದರ್ಯೇನಚಾತ್ಮನಿ | ವಿಶ್ವಾಸಸ್ತಾದೃಶಃಪುಂಸಾಂ ಯಾವನ್ಮಿತ್ರೇಸ್ವಭಾವಜೇ || ” ಮನುಷ್ಯನಿಗೆ ಸ್ವಭಾವಸಿದ್ಧನಾದ ಮಿತ್ರನಲ್ಲಿ ಯಾವಬಗೆ ನಂಬುಗೆ ಇರುವುದೋ ಆ ನಂಬು

ಗೆಯು ತಾಯಿಯಲ್ಲಿಯೂ ಹೆಂಡತಿಯಲ್ಲಿಯೂ ಸಹೋದರರಲ್ಲಿಯೂ ಕಡೆಗೆ ತನ್ನಲ್ಲಯೂ ಕೂಡ ಇರುವುದಿಲ್ಲ. ಸಚಿವಶ್ರೇಷ್ಠನೇ ! ದುಃಖಪರಂಪರೆಯನ್ನು ದೂರಮಾಡುವ, ಭಯವನ್ನು ಪರಿಹರಿಸಿ ಕಾಪಾಡುವ, ಪ್ರೀತಿಗೂ ನಂಬುಗೆಗೂ ಅರ್ಹವಾಗಿರುವ "ಮಿತ್ರ" ವೆಂಬ ಅಕ್ಷರ ರತ್ನವನ್ನು ಯಾವ ಮಹಾತ್ಮನು ಸೃಷ್ಟಿಸಿದನೋ ? (ಶೋಕಾರಾತಿ ಭಯತ್ರಾಣಂ ಪ್ರೀತಿವಿಶ್ರಂಭಭಾಜನಂ | ಕೇನರತ್ನಮಿದಂ ಸೃಷ್ಟಂ ಮಿತ್ರಮಿತ್ಯಕ್ಷರದ್ವಯಂ) ಪ್ರಿಯಮಿತ್ರನೇ ! ರೂಪವಿದ್ದ ಮಾತ್ರದಿಂದಲೇ ವಸ್ತುವಿನಲ್ಲಿ ಗುಣವಿರುವುದೆಂದು ಭಾವಿಸಲಾಗದೆಂದೂ, ರೂಪವಿಲ್ಲದ ಮಾತ್ರದಿಂದಲೇ ಗುಣವಿಲ್ಲವೆಂದು ಹೇಳಲಾಗದೆಂದೂ ನಾನು ಮಂಚವನ್ನು ಕೊಳ್ಳುವ ಸಂದರ್ಭದಲ್ಲಿ ಹೇಳಿದೆಯಲ್ಲವೆ ? ಅದರ ಮಹಿಮೆಯು ಅಮೂಲ್ಯವಾದುದು. ಅದರಿಂದ ನಾನು ಅನೇಕ ಭವಿಷ್ಯದ್ವಿಚಾರಗಳನ್ನರಿತೆನು. ಕೇಳು, ನನಗೆ ಈದಿನ ಒಂದು ಮಹಾಸರ್ಪದಿಂದ ಹಾನಿಯುಂಟಾಗುವುದಂತೆ, ಆದು ಸಿದ್ಧವಾದ ಮಾತೆಂದು ಈವರೆಗೆ ನಡೆದ, ವಿಚಾರಗಳಿಂದ ವಿಶ್ವಸನೀಯವಾಗಿರುವುದು. ನಾನು ಸರ್ಪದಷ್ಟನಾಗಿ ಮೃತಿಯನ್ನು ಪಡೆದೊಡನೆಯೇ ದಯವಿಟ್ಟು ನೀನು ಈ ಬಳ್ಳಿಯ ಬೇರನ್ನು ಅಗೆದು ಅರೆದು ನೀರಿನಲ್ಲಿ ಕಲಿಸಿ ನನ್ನ ಬಾಯಿಯಲ್ಲಿ ಸುರಿದರೆ ಬಳಿಕ ನಾನು ಜೀವಿಸುವೆನು. ಇದೀಗ ರಹಸ್ಯ. ನೀನಲ್ಲದೆ ಮತ್ತಾರು ಈ ಕ್ರಿಯೆಯನ್ನು ಮಾಡಲರ್ಹರು" ಎಂದು ಮಾತನಾಡಿಕೊಳ್ಳುತ್ತ ಬರುತ್ತಿರಲು, ಎಲೆಗಳ ರಾಶಿಯಲ್ಲಿದ್ದ ಒಂದು ಕಾಲಸರ್ಪವು ಬುಸ್ಸೆಂದು ಶಬ್ದಮಾಡುತ್ತ ಹೆಡೆಯನ್ನು ಬಿಚ್ಚಿ ಅರಸನ ಕಾಲ್ತುಳಿತದಿಂದ ಆಗ್ರಹೋದಗ್ರವಾಗಿ ಆತನ ಪಾದವನ್ನು ಕಚ್ಚಿ ಓಡಿಹೋಯಿತು. ಭಯಂಕರವಾದ ಆ ಹಾವಿನ ನಂಜು ರಕ್ತದಲ್ಲಿ ವ್ಯಾಪಿಸಿ ತಲೆಗೇರಿ ಅರಸನು ಕೆಳಕ್ಕೆಬಿದ್ದು ಒಂದೆರಡು ನಿಮಿಷಗಳಲ್ಲಿಯೇ ಪ್ರಾಣಗಳನ್ನು ತೊರೆದನು. ಬಳಿಕ ಸ್ವಾಮಿಭಕ್ತನಾದ ಸಚಿವನಾಗಳೆ ಹಿಂದಿರುಗಿ ಹುತ್ತದಬಳಿಗೆ ಹೋಗಿ ಬಳ್ಳಿಯನ್ನಗೆದು ಬೇರನ್ನೆತ್ತಿ ತಂದು ಅರೆದು ನೀರಿನಲ್ಲಿ ಬೆರಸಿ ರಾಜನ ಗಂಟಲೊಳಕ್ಕೆ ಹಾಕಿದನು. ಒಂದೆರಡು ಗಳಿಗೆಗಳಾಗುತ್ತಲೇ ಆ ವಿಷವು ಪರಿಹಾರವಾಗಿ ಅತ್ತಿತ್ತ ಅಲುಗಿ ಆಕಳಿಸುತ್ತೆದ್ದು ಕಣ್ಣುಗಳನ್ನು ತೆರೆದು ಸ್ವಲ್ಪಕಾಲದವರೆಗೆ ದಣಿವನ್ನು ತೀರಿಸಿಕೊಂಡು ಮಂತ್ರಿಪುಂಗವನನ್ನಪ್ಪಿ "ಪ್ರಾಣದಾನವ ಮಾಡಿದ್ಯೆ ಪರಮಮಿತ್ರ | ಏನುನಿನಗರ್ಪಿಸಲಿನುಡಿ ಮಾನನೀಯ || ನಿನಗೆ ಚಿರಋಣಿಯಾಗಿರ್ಪೆ ನಿರ್ಮಲಾತ್ಮ | ಇದೆ ನಮಸ್ಕಾರವಯ್ಯ ಭೂವಿದಿತಚರ್ಯ ||" ಎಂದು ನುಡಿದು, ತನ್ನ ಈಗಂಡವೂ ತಪ್ಪಿದುದರಿಂದಲೂ ಮಂತ್ರಿಮಾಡಿದ ಮಹೋಪಕಾರದಿಂದಲೂ ಬಹಳ ಸಂತಸವನ್ನು ತಾಳಿ, ಸಭಾಮಂದಿರಕ್ಕೆ ಬಂದು, ಬಡಗಿ

ಯಿಂದ ವಿಕ್ರಯವಾಗಿ ಪಡೆದ ಮಂಚದಮೇಲೆ ತಾನು ಮಲಗಿದುದು ಮೊದಲು ಯಾಮ ಚತುಷ್ಟಯದಲ್ಲಿ ನಡೆದ ವೃತ್ತಾಂತವನ್ನು ಸವಿಸ್ತರವಾಗಿ ಹೇಳಿದನು. ಸಭಾಸದರು ಆಶ್ಚರ್ಯಾನಂದಗಳಲ್ಲಿ ಮುಳುಗಿದರು. ಮಂಚದ ಮಹಿಮೆಯನ್ನು ಎಲ್ಲರು ಪ್ರಶಂಸಿಸಿದರು. " ಇಂತಪ್ಪ ಮಹಾಮಹಿಮೆಯುಳ್ಳುದರಿಂದಲೇ ಆಮಂಚಕ್ಕೆ ಹತ್ತುಸಾಸಿರ ವರಗಳ ಬೆಲೆಯ.ನ್ನಾಬಡಗಿಯು ಕೇಳಿದುದು" ಎಂದು ಸಮಸ್ತರೂ ಪರಸ್ಪರವಾಗಿ ಮಾತನಾಡಿಕೊಂಡರು.

ಬಳಿಕ ಪರಪುರಂಜಯನು, ತಾನು ಕೇಳಿದ್ದ ಪ್ರಕಾರವಾಗಿ ನೆರವೇರಿಸಬೇಕೆಂದು ಬಗೆದು, ಪುರಮಧ್ಯದಲ್ಲಿ ಒಂದು ಶಿಲಾಸ್ಥಂಭವನ್ನು ಸ್ಥಾಪಿಸಿ, ಕಾಳಿಕಾಲಯದಿಂದ ತಾನು ತಂದಿದ್ದ ಖಡ್ಗವನ್ನು ಅದರಮೇಲೆ ಪ್ರತಿಷ್ಠಿಸಿದನು. ಅದು ಮೊದಲು ಪ್ರತಿದಿನವೂ ನಡೆವ ಹಾನಿವೃದ್ಧಿಗಳನ್ನು ಮಂಚದ ಕಾಲ್ಗಳಿಂದ ತಿಳಿದುಕೊಳ್ಳುತ್ತ ಅನೇಕ ಸಂವತ್ಸರಗಳವರೆಗೆ ರಾಜ್ಯಸುಖವನ್ನನುಭವಿಸುತ್ತಿದ್ದು ದಿವಂಗತನಾದನು. ಆತನು ಮೃತನಾಗುತ್ತಲೂ ಆಮಂಚವು ಅಂತರ್ಧಾನವನ್ನು ಪಡೆಯಿತು. ಆತನ ಸಂತತಿಯವರು ಪರಂಪರೆಯಾಗಿ ರಾಜ್ಯವನ್ನಾಳುತ್ತ ಬಂದಿರುವರು. ಆದರೆ ಪೂರ್ವಿಕರಿಂದ ಸ್ಥಾಪಿಸಲ್ಪಟ್ಟಿರುವ ಶಿಲಾಸ್ಥಂಭವನ್ನೂ ಅದರಮೇಲೆ ಪ್ರತಿಷ್ಠಿತವಾದ ಕರವಾಲವನ್ನು ಮುಟ್ಟಬಾರದೆಂದೂ, ಅದು ಯಾವುದೋ ಒಂದು ಕಾರಣದಿಂದ ಸ್ಥಾಪಿತವಾಗಿರುವುದರಿಂದ ಅದನ್ನು ಕೀಳಲೂ ಬಾರದೆಂದೂ ಬಗೆದು ಹಾಗೆಯೇ ಬಿಟ್ಟಿರುವರು.

ಸತ್ಯಶೀಲನೇ! ನೀನು ಕಂಡ ಶಿಲಾಸ್ತಂಭದಮೇಲೆ ಕತ್ತಿಯನ್ನು ಪ್ರತಿಷ್ಠಿಸಿರುವುದಕ್ಕೆ ಕಾರಣವಿದೇ. ಒಂದಾನೊಂದು ದಿನ ನಾರದಮುನಿಯು ವೀಣಾಗಾನವನ್ನು ಮಾಡುತ್ತ ಆಕಾಶದಲ್ಲಿ ಹೋಗುತ್ತಿರಲು ಇದಿರಾಗಿ ವಿಹಾರಕ್ಕೋಸ್ಕರ ಬಂದ ನಾಲ್ವರು ಗಂಧರ್ವಾಂಗನೆಯರು ಆ ಮುನಿಯನ್ನು ಅಹಂಕಾರದಿಂದ ಪರಿಹಾಸಮಾಡಲು ಆತನು ಅವರಿಗೆ ಮಂಚದಕಾಲುಗಳಾಗುವಂತೆ ಶಾಪವನ್ನಿತ್ತು ಅವರ ಪ್ರಾರ್ಥನೆಗೆ ಮರುಗಿ ಆರಾಜನ ಮರಣಾನಂತರ ಅವರಿಗೆ ನಿಜಸ್ವರೂಪಗಳು ಪ್ರಾಪ್ತವಾಗುವಂತೆ ವಿಶಾಪವನ್ನು ಕೊಟ್ಟನು. ಹಾಗಿಲ್ಲದಿದ್ದರೆ ಮರದ ಕೊರಡುಗಳಿಗೆ ಈ ಮಹಿಮೆ ಎತ್ತಣದು ? ವಿಕ್ರಮಾರ್ಕನ ಸಿಂಹಾಸನದ ಮೂವತ್ತೆರಡು ಬೊಂಬೆಗಳೂ ಇಂಥವೇ ಅಲ್ಲವೆ ?

ಎಂದು ಚಿದಾನಂದಯೋಗಿಯು ಹೇಳಲು, ಶಿಷ್ಯನು ಪರಮಾನಂದಭರಿತನಾದನು. ಗುರುಶಿಷ್ಯರು ಆರಾತ್ರಿಯನ್ನಲ್ಲಿಯೇ ಕಳೆದರು. ಶಿಷ್ಯನು ಶಿಷ್ಟಕಾರ್ಯಗಳನ್ನು ತೀರಿಸಿ ಮಲಗಿದನು. ಮಾರನೆಯದಿನ ಅರುಣೋದಯಕ್ಕೆ ಮೊದಲೆ ಎಚ್ಚತ್ತು ಈರ್ವರೂ ಸ್ನಾನಾದಿ ವಿಧಿಗಳನ್ನಾಚರಿಸಿ ಪ್ರಯಾಣವನ್ನು ಮುಂದರಿಯಿಸಿ ಭಯಂಕರವಾದ ಕಾಡಿನಮಾರ್ಗದಲ್ಲಿ ಹೊರಟರು. ಒಂದೆ

ಡೆಯಲ್ಲಿ ನಿರ್ಮಲಜಲಪೂರಿತಮಾದ ಒಂದು ಸರೋವರವನ್ನು ಕಂಡರು. ಅದರ ಸುತ್ತಲೂ ಮನೋಹರವಾದ ನೆರಳಿನಿಂದೊಪ್ಪುವ ವೃಕ್ಷಗಳು ಶೋಭಿಸುತ್ತಿದ್ದುವು. ಅದರ ನಾಲ್ಕು ಕಡೆಯಲ್ಲಿಯೂ ಸುಂದರವಾದ ಸೋಪಾನ ಮಾರ್ಗವು ಕಂಗೊಳಿಸುತ್ತಿದ್ದಿತು. ಅಲ್ಲಿಗೆ ಬರುವವೇಳೆಗೆ ಶಿಷ್ಯನು ಬಳಲಿದನು ಚಿದಾನಂದಯೋಗಿಯು ಆತನನ್ನು ಕಂಡು ಮರುಕಗೊಂಡು ಆದಿನ ಅಲ್ಲಿಯೇ ತಂಗಿದನು.

ಇಂತು ಮೂರನೆಯದಿನದ ಕಥೆಯು ಮುಗಿದುದು.



## —:ನಾಲ್ಕನೆಯ ಉಪ್ಪಯಣದ ಕಥೆ.:—

ಶ್ರೀರಾಮಚಂದ್ರಾಯುಸಲಕ್ಷ್ಮಣಾಯ ಸೀತಾಮುಖಾಂಭೋರುಹಭಾಸ್ಕರಾಯ |
ಸಮಸ್ತಮೌನೀಶ್ವರವಂದಿತಾಯ ನಮೋನಮಸ್ತೆ ಭರತಾಗ್ರಜಾಯ ||

ಆ ಗುರುಶಿಷ್ಯರು ಅಘೋರಾರಣ್ಯಮಧ್ಯದಲ್ಲಿ ತಂಗಿದರಷ್ಟೆ? ಸುತ್ತುಮುತ್ತಲೂ ಹಳ್ಳಿಪಳ್ಳಿಗಳಿರಲಿಲ್ಲ ಆದುದರಿಂದ ಭೋಜನಸಾಮಗ್ರಿಯನ್ನು ತರುವುದಕ್ಕನುವಾಗಲಿಲ್ಲ, ಆದರೆ ಆ ಕಾಡಿನಲ್ಲಿ ಬಗೆಬಗೆಯಾದ ಹಣ್ಣುಹಂಪಲುಗಳು ಹೇರಳವಾಗಿದ್ದುದರಿಂದ ಆ ಸತ್ಯಶೀಲನು ಹೋಗಿ ಕಳಿತಫಲಗಳನ್ನು ತಂದು ಗುರುಗಳ ಮುಂದಿರಿಸಿದನು, ಅವುಗಳನ್ನು ಕಂಡು ಸಂತೋಷಿಸಿ ಅನುಷ್ಠಾನವನ್ನು ಮುಗಿಸಿ ತಮ್ಮಂತೆ ನಿತ್ಯಕರ್ಮಗಳನ್ನು ಮುಗಿಸಿದ ಶಿಷ್ಯನೊಡನೆ ಕುಳಿತು ತೃಪ್ತಿಯಾಗಿ ಭಕ್ಷಿಸಿದರು ಆಗ ಚಿದಾನಂದಯೋಗಿಗೆ ಈ ಶ್ಲೋಕಾರ್ಥವು ನೆನಪಿಗೆ ಬಂದಿತು.

“ ಶಯ್ಯಾಶಾದ್ವಲಮಾಸನಂ ಶುಚಿಶಿಲಾಸದ್ಮದ್ರುಮಾಣಾಮಧಃ |
ಶೀತಂನಿರ್ಝರವಾರಿಪಾನಮಶನಂ ಕಂದಾಸ್ಸಹಾಯಾಮೃಗಾಃ |
ಇತ್ಯಪ್ರಾರ್ಥಿತಲಭ್ಯಸರ್ವವಿಭವೇ ದೋಷೋಯಮೇಕೋವನೇ |
ದುಷ್ಪ್ರಾಪಾರ್ಥಿನಿಯತ್ಪರಾರ್ಥ ಘಟನಾವಂಧ್ಯೈರ್ವೃಥಾಸ್ಥೀಯತೇ ||”

ಅರ್ಥ—“ ಹಸುರು ಹುಲ್ಲಿನ ಪ್ರದೇಶವೇ ಹಾಸಿಗೆಶುಭ್ರವಾದ ಬಂಡೆಯೇ ಪೀಠವು ಛಾಯಾದ್ರುಮಗಳ ನೆಳಲೇ ಮನೆಯುತಣ್ಣಗಿರುವ ನದಿಯನೀರೇ ಪಾನೀಯವು ಕಂದಮೂಲಫಲಗಳೇ ಅಶನವು, ಮೃಗಗಳೇ ಸಹಾಯಕರು ಅರಣ್ಯವು ಹೀಗೆ ಅಪ್ರಾರ್ಥಿತವಾಗಿ ಸಮಸ್ತ ವೈಭವವನ್ನೂ ಉಂಟುಮಾಡುತ್ತಿರುವುದು ಆದರೆ ಇತರರಿಗೆ ಸಹಾಯವನ್ನು ಮಾಡದೆ ಸ್ವೋದರಪೂರಣವನ್ನು ಮಾಡಿಕೊಳ್ಳಬೇಕಾದ ದೋಷವೊಂದುಮಾತ್ರ ಇಲ್ಲಿರುವುದು.”

ಬಳಿಕ ಆ ಸರೋವರದ ತಿಳಿಯಾದ ಸಿಹಿನೀರನ್ನು ಕುಡಿದು ಒಂದು ಮರದ ನೆರಳಲ್ಲಿ ಗುರುಶಿಷ್ಯರಿರ್ವರೂ ಕುಳಿತುಕೊಂಡರು. ಆ ಕೊಳದಲ್ಲಿ ಮೀನುಗಳು ಕೆಲವು ಬಿಳುಪಾಗಿಯೂ ಮತ್ತೆ ಕೆಲವು ಕೆಂಪಾಗಿಯೂ ಬೇರೆ ಹಲವು ಕಪ್ಪಾಗಿಯೂ ಇನ್ನೂ ಹಲವು ಹಳದಿಯಾಗಿಯೂ ಇದ್ದು ಅವುಗಳಲ್ಲಿ ಪ್ರತಿಯೊಂದು ಬಣ್ಣದವೂ ಬೇರೆಬೇರೆ ಗುಂಪಾಗಿ ತಿರುಗುತ್ತಿದ್ದುವಲ್ಲದೆ ಒಂದು ಗುಂಪಿನೊಡನೆ ಮತ್ತೊಂದು ಗುಂಪು ಸೇರುತ್ತಿರಲಿಲ್ಲ ಸತ್ಯಶೀಲನು ತಾನು ಸ್ನಾನಕ್ಕೆಹೋದಾಗ ಆ ವಿಧವನ್ನು ಕಂಡು ಅತ್ಯಾಶ್ಚರ್ಯವನ್ನು ಪಡೆದು, ಈ ವಿಚಿತ್ರ ವಿಚಾರವನ್ನು ಕುರಿತು ನಮ್ಮ ಗುರುಗಳನ್ನು ಕೇಳಿ ತಿಳಿದುಕೊಳ್ಳಬೇಕೆಂದಿದ್ದನು, ಮರದಡಿಯಲ್ಲಿ ಕುಳಿತುಕೊಂಡಾಗ ಸತ್ಯಶೀಲನು ಚಿದಾನಂದಯೋಗಿಯೊಡನಿಂತೆಂದನು ಸದ್ಗುರುವೆ !

ನಿನ್ನವೊಲು ಭೂತಭಾವಿಗಳನ್ನುನುಡಿವ |
ಗುರುವದಾವನು ಲೋಕದೊಳಿರುವ ನನುಮ ! |
ನೀನೆಹರಿನೀನೆಹರನು ಮೇಣ್ಣೀನೆ ವಿಧಿಯು |
ಕುಂದನೊಂದದ ಸಚ್ಚಿದಾನಂದಯೋಗಿ ‖ ೧ ‖
ದೇವಪೂಜೆಗಳೇತಕೆ ತೀರ್ಥವೇಕೆ |
ನಾಡೆಸಾಷ್ಟಂಗಯೋಗಮುಂ ಮಾಡಲೇಕೆ |
ನಿನ್ನಪದಸೇವೆಸಾಕಘವನ್ನು ಕಳೆಯೆ |
ಕಂದನಿವನೆಂದುಪೊರೆ ಚಿದಾನಂದಯೋಗಿ ‖ ೨ ‖
ಒಲಿದುಶಾಸ್ತ್ರಂಗಳೆಲ್ಲಮ ನೋದಿದವರು |
ಓದದಿರುವರುಮೊಂದೆಯೀ ಮೇದಿನಿಯೊಳು |
ಗುರುಸಪರ್ಯೆಯೊಳಜ್ಞಾನ ಮುಳಿಯದಿರಲು |
ನವ್ಯಚಿವ್ಯಾಗಿಶ್ರೀ ಚಿದಾನಂದಯೋಗಿ ‖ ೩ ‖

ಎಂದು ನುಡಿದಭಿವಾದನವನ್ನು ಮಾಡಿ ಆಚಾರ್ಯವರ್ಯ ! ಈ ಸರಸ್ಸಿನಲ್ಲಿ ಓಡಿಯಾಡುವ ಮೀನ್ಗಳು ನಾಲ್ಕು ಬಣ್ಣದವುಗಳಾಗಿವೆ ಅವುಗಗಳಲ್ಲಿ ಪ್ರತಿಯೊಂದುಬಗೆಯ ಮೀನ್ಗಳೂ ಬೇರೆಬೇರೆ ಗುಂಪಾಗಿ ಸಂಚರಿಸುವುವೇಹೊರತು ಸೇರಿ ತಿರುಗುವುದಿಲ್ಲ, ಯಾವ ಬಣ್ಣವಿದ್ದರೂ ಜಾತಿಯೊಂದಲ್ಲವೆ ? ಏಕೆ ಹೀಗೆ ಪ್ರತ್ಯೇಕವಾಗಿ ಸಂಚರಿಸುವುದು ? ಇದಕ್ಕೆ ಏನೋ ವಿಶೇಷವಿರಬಹುದೆಂದು ಸನ್ನಿಧಿಯಲ್ಲಿ ಅರಿಕೆಮಾಡಿದೆನು ನನ್ನ ಸಂಶಯವನ್ನು ಹೋಗಲಾಡಿಸಬೇಕೆಂದು ಬೇಡಿಕೊಂಡನು ಆಗ ಚಿದಾನಂದಯೋಗಿಯು ಹೀಗೆ ಹೇಳಲಾರಂಭಿಸಿದನು.

## ಯಕ್ಷರಾಜಕನ್ಯೆಯ ಕಥೆ.

ವತ್ಸ! ಸತ್ಯಶೀಲ! ಲಾಲಿಸು! ಪೂರ್ವದಲ್ಲಿ ಕಾಂಚನನಗರವೆಂಬ ಒಂದು ಪಟ್ಟಣವಿದ್ದಿತು. ಅದನ್ನು ಶೌರ್ಯಸಾಗರನೆಂಬ ದೊರೆಯು ಆಳುತ್ತಿದ್ದನು. ಆತನ ಹೆಂಡತಿ ವಿಮಲಾದೇವಿ ಶೌರ್ಯಸಾಗರನಿಗೆ ಬೇಟೆಯೆಂದರೆ ಬಹುಪ್ರೀತಿ, “ಮಿಥ್ಯೈವವ್ಯಸನಂವದತಿ ಮೃಗಯಾಮಿಾದೃಗ್ವಿನೋದಃ” “ಆಹ! ಎಂತಹ ವಿನೋದಕರವಾದುದೀ ಬೇಟೆ! ಇದು ವ್ಯಸನಸಪ್ತಕದಲ್ಲೊಂದೆಂದು ಸುಳ್ಳು ಹೇಳುವರು” ಎಂದಾಗಾಗ್ಗೆ ಶೌರ್ಯಸಾಗರನು ಭಾವಿಸುತ್ತಿದ್ದನು, ಆಗಾಗ ಬೇಟೆಗೆ ಹೋಗಿ ಅನೇಕ ಜಂತುಗಳನ್ನು ಸಂಹರಿಸಿ ತರುತ್ತಿದ್ದನು. ಆ ರಾಜನೊಂದುದಿನ ಅಡವಿಗೆ ಹೋಗಿ ಪರಿವಾರದೊಡನೆ ಬೇಟೆಯಾಡುತ್ತಿರಲು ಪೆಟ್ಟು ತಿಂದ ಒಂದು ಕಾಡುಹಂದಿ ಪೊದೆಗಳನಡುವೆ ತೂರಿ ಓಡಿಹೋಯಿತು ಹಂದಿಯನ್ನು ಬೇಟೆಯಾಡುವುದು ಬಹುಕಷ್ಟವೆಂದು ಬೇಟೆಗಾರರ ಅಭಿಪ್ರಾಯವು ಅದು ಪೆಟ್ಟುತಗಲುತ್ತಲೇ ಬೇಟೆಗಾರನಕಡೆಗೆ ಓಡಿಬಂದು ಅವನ ಕಾಲ್ಗಳ ಸಂದಿಯಲ್ಲಿತೂರಿ ತನ್ನ ಕೋರೆದಾಡೆಗಳಿಂದ ಅವನ ಕಾಲ್ಗಳನ್ನು ಸೀಳಿಹಾಕುವುದಂತೆ ರಾಜನು ತನ್ನಿಂದ ಪೆಟ್ಟುತಿಂದು ಓಡಿದ ಹಂದಿಯನ್ನಟ್ಟಿಕೊಂಡು ಆ ಘೋರಾರಣ್ಯದಲ್ಲಿ ನುಗ್ಗಿದನು. “ಹಂದಿಯನ್ನು ಹೊಡೆದವನು ಬಂಟ ಕಂದವನ್ನು ಹೇಳಿದವನು ಕವಿ” ಎಂಬ ಗಾದೆಯಂತೆ ತಾನು ಸಮರ್ಥನೆಂದೆನ್ನಿಸಿಕೊಳ್ಳಬೇಕೆಂಬ ಆಸೆಯೂ ರಾಜನಿಗೆ ಬಹಳವಾಗಿದ್ದಿತು ಬಹು ದೂರದವರೆಗೆ ಅದನ್ನು ಬೆನ್ನಟ್ಟಿದನು ಕೊನೆಗದನ್ನು ಕೊಂದನು ಆತನಿಗೆ ತುಂಬ ಶ್ರಮವಾಯಿತು ಪರಿವಾರವೆಲ್ಲಿಯೋ ನಿಂತುಹೋಯಿತು ತನಗೂ ಅದಕ್ಕೂ ಹೆಚ್ಚು ಕಡಿಮೆ ೪-೫ ಗಾವುದವೇ ಆಯಿತು ಕಾಡಿನಲ್ಲಿ ತೊಳಲಿತೊಳಲಿ ಬೆಂಡಾದ ಆ ರಾಯನಿಗೆ ತಾನು ಬಂದ ದಾರಿಯೇ ತಿಳಿಯದೆ ಸ್ವಲ್ಪಹೊತ್ತು ಹುಡುಕಿ ಬೇಸತ್ತನು ಪರಿವಾರದವರು ಸಹಿತವಾಗಿ ರಾಜನುಹೋದ ದಾರಿಯನ್ನು ಕಾಣದೆ ಅರಸಿ ಅರಸಿ ಬಳಲಿದರು.

ಆ ಬಳಿಕ ರಾಯನು ಹೆಚ್ಚಿದ ಬಾಯಾರಿಕೆಯಿಂದ ನೀರನ್ನು ಹುಡುಕಿಕೊಂಡು ನಡೆದನು ಜಲಾಶಯಗಳಾವುವೂ ದೊರೆಯಲಿಲ್ಲ ಬೆಟ್ಟದ ಸಮಿಾಪಕ್ಕೆ ಬಂದುನೋಡಲು ಬೆಟ್ಟದಿಂದ ಒಂದು ಪ್ರವಾಹವು ಹರಿದುಬರುತ್ತಿದ್ದಿತು, ಅದನ್ನುಕಂಡು ಸಂತೋಷಗೊಂಡು ಕುದುರೆಯಿಂದಿಳಿದು ಅದಕ್ಕೆ ನೀರನ್ನು ಕುಡಿಯಿಸಿ, ತಾನೂ ಪಾದಪ್ರಕ್ಷಾಳನಾದಿಗಳನ್ನು ಮಾಡಿಕೊಂಡು ಜಲಪಾನವನ್ನು ಮಾಡಿ ವಿಶ್ರಮಿಸಿಕೊಳ್ಳಲೆಂದು ಪ್ರವಾಹದ ಕರೆಯಲ್ಲಿದ್ದ ಒಂದು ಆಲದಮರದ ಕೆಳಕ್ಕೆಬಂದು ಮಲಗಿದನು ಆಗ ಆ ವಟವೃಕ್ಷದ ಅಡಿಯಲ್ಲಿ ಒಂದು ಪಕ್ಕದಲ್ಲಿ ಸರ್ವಾಂಗಸುಂದರಿಯೂ ಯೌವನವತಿಯೂ ಆದ ಒಬ್ಬ ಸುದತಿಯು ಒಂದು

ಹಾಸುಗಲ್ಲಿನಮೇಲೆ ಕುಳಿತಿದ್ದುದನ್ನು ಕಂಡನು. “ಇವಳಾರಾಗಿರಬಹುದು ! ಅಚ್ಚರಸೆಯೋ, ಗಂಧರ್ವಕನ್ಯೆಯೋ, ಸುರಕಾಮಿನಿಯೋ, ವಿದ್ಯಾಧರಾಂಗನೆಯೋ ಆಗಿರಬೇಕಲ್ಲದೆ ಮಾನವಮಾನಿನಿಗೆ ಈ ಸೌಂದರ್ಯವೆತ್ತಣದು ? ಒಂಟಿಯಾಗಿರಲು ಕಾರಣವೇನು ? ಆಗಲಿ ! ವಿಚಾರಿಸುವೆನು ” ಎಂದೆದ್ದು ಮೆಲ್ಲಗೆ ಅವಳಹತ್ತಿರಕ್ಕೆ ಬಂದು ನಿಂತನು ಅವಳೆದ್ದು ನಿಂತಳು, ಅವಳನ್ನು ನೋಡಿ ಆ ಶೌರ್ಯಸಾಗರನು ದೈನ್ಯಸಾಗರನಾಗಿ “ ಎಲೌ ಕಾಮಿನೀ !

ವೃ॥ ಆವಳ್ ನೀ ನೆಲೆ ಸಾರಸಾಕ್ಷಿ ನುಡಿಯೌ ಯೆಲ್ಲಿಂದ ಮೈತಂದೆ ನೀಂ |
ದೇವಸ್ತ್ರೀಮಣಿಯೋ! ಭುಜಂಗವಧುವೋ! ಗಂಧರ್ವರಾಕನ್ಯೆಯೋ |
ಆ ವಿದ್ಯಾಧರ ಯಕ್ಷ ಗುಹ್ಯಕ ಸತೀ ರತ್ನಂಗಳಲ್ಲೊರ್ವಳೋ |
ಏವೇಳ್ವೆಂ ಭವದಂಗಸೌಷ್ಠವವನೀ ಭೂಲೋಕದೊಳ್ಕಾಣೆನಾಂ ॥

ಒಂಟಿಯಾಗಿ ಈ ಘೋರಾರಣ್ಯದಲ್ಲಿರಲು ಕಾರಣವೇನು ? ” ಎಂದು ತಾನಾಗಿ ಮೊದಲು ಪ್ರಶ್ನೆಮಾಡಿದನು. ಅವಳು ತನ್ನ ಅಪಾಂಗದೃಷ್ಟಿಗಳನ್ನಾ ಅರಸನಮೇಲೆ ಪ್ರಸರಿಸುತ್ತ ನಾಚಿಕೆಯಿಂದ ತಲೆಬಾಗಿ, ಇಂತೆಂದಳು.

“ಪೂಜ್ಯನೆ ! ನಾನೊಬ್ಬ ಯಕ್ಷರಾಜನ ಪುತ್ರಿಯು, ನನ್ನ ಹೆಸರು ಚಂದ್ರಕಲೆ, ನಾನೀಪರ್ವತದ ವಿಶಾಲವಾದೊಂದು ಗುಹೆಯಲ್ಲಿರುವ ಭವನದಲ್ಲಿ ವಾಸಮಾಡುತ್ತಿರುವೆನು. ನನ್ನ ಆ ಸುಂದರ ಮಂದಿರದ ಹೆಸರು ಚಂದ್ರಿಕಾ ಪ್ರಾಸಾದವೆಂದು, ರಾಜಾಗ್ರಣೀ ! ನಾನು ಅವಿವಾಹಿತಳು. ನನ್ನ ತಂದೆಯ ಅರಮನೆಯು ಅಗೋ ! ಅಲ್ಲಿ ಕಾಣುತ್ತಿರುವ ಸಹ್ಯಪರ್ವತದಲ್ಲಿದೆ. ಆಗಾಗ ನನ್ನ ತಂದೆ ಮೊದಲಾದವರು ಬಂದು ನನ್ನ ಯೋಗಕ್ಷೇಮಗಳನ್ನು ವಿಚಾರಿಸಿಕೊಂಡು ಹೋಗುತ್ತಿರುವರು. ವಿದ್ಯಾಧರರೂ, ಅಪ್ಸರಸ್ಸುಗಳೂ, ಯಕ್ಷರೂ, ರಕ್ಷಸ್ಸುಗಳೂ, ಗಂಧರ್ವರೂ, ಕಿನ್ನರರೂ, ಪಿಶಾಚರೂ, ಗುಹ್ಯಕರೂ, ಸಿದ್ಧರೂ, ಭೂತರೂ ದೇವಯೋನಿಗಳೆಂದು ನೀನು ಬಲ್ಲೆಯಷ್ಟೆ ? ಈ ವಂಶದವರಿಗೆ ಭಯವೆತ್ತಣದು. ಬೇಕಾದಕಡೆಗಳಲ್ಲಿ ಇವರು ಏಕಾಕಿಗಳಾಗಿ ವಾಸಮಾಡುವರು. ನಾನಿಲ್ಲಿ ಏಕಾಕಿಯಾಗಿಯೇ ಇರುವೆನು ಆದರೆ ಪರಿಚಾರಿಕೆಯರು ನನ್ನ ಪ್ರಾಸಾದದಲ್ಲಿ ಊಳಿಗವನ್ನು ಮಾಡಿಕೊಂಡಿರುವರು. ನಾನು ನಿರಂತರವೂ ಈ ವಟವೃಕ್ಷದ ಬಳಿಗೆ ಬಂದು ಹೋಗುವ ವಾಡಿಕೆ. ಅಕಸ್ಮಾತ್ತಾಗಿ ಈ ದೇವಸಂಚಾರಮಾತ್ರದ ಭೂಮಿಗೆ ನೀನು ಬಂದುದು ಆಶ್ಚರ್ಯವು. ನೀನು ಮಾನವನಾದರೂ ದೇವಾಂಶಪುರುಷನಾಗಿ ತೋರುತ್ತಿರುವೆ. ಇಲ್ಲದಿದ್ದರೆ ಇಲ್ಲಿಗೆ ಪ್ರವೇಶಿಸಲು ಸಾಧ್ಯವಿಲ್ಲ. ನನ್ನ ಮನಸ್ಸು ನಿನ್ನಲ್ಲಿ ಮಹಾನುರಾಗವುಳ್ಳದಾಗಿದೆ. ಮೋಹಪರವಶಳಾಗಿರುವ ನನ್ನನ್ನು ಕೈಹಿಡಿದು ಕಾಪಾಡುವುದು ನಿನ್ನ ಕರ್ತವ್ಯವಾಗಿದೆ. ನಿನ್ನಲ್ಲಿ ದೇವತಾಂಶವಿಲ್ಲದಿದ್ದರೆ ನನ್ನ ಮನಸ್ಸಿನಲ್ಲಿ

ಈ ವಿಕಾರವು ಹುಟ್ಟುತ್ತಲೂ ಇರಲಿಲ್ಲ, ದಯವಿಟ್ಟು ನಮ್ಮಗಳಿಗೆ ಯೋಗ್ಯ ವಾದ ಗಾಂಧರ್ವವಿವಾಹವಿಧಿಯಿಂದ ನನ್ನನ್ನು ಸ್ವೀಕರಿಸಬೇಕು. ಇದೇ ನನ್ನ ವೃತ್ತಾಂತ. ನನ್ನ ಸಹಾಯದಿಂದ ನಿನ್ನ ಅನೇಕ ಕಾರ್ಯಗಳು ಸಿದ್ಧಿಸುವುವು ಎಂದು ನುಡಿದು ಸುಮ್ಮನಾದಳು.

"ರೋಗಿಯು ಬಯಸಿದುದೂ ಹಾಲೋಗರವೇ, ವೈದ್ಯನು ಹೇಳಿದ ಪಥ್ಯವೂ ಹಾಲೋಗರವೇ" ಎಂಬಂತೆ ಅರಸನಪೇಕ್ಷೆಯೂ ಯಕ್ಷಕನ್ಯೆಯ ಮನೋರಥವೂ ಒಂದೇ ಆಯಿತು. ವಿಲಾಸವತಿಯಾದ ಆ ಯುವತಿಯನ್ನು ನೋಡುತ್ತಲೇ ಆ ರಾಜನಿಗೆ ಮನಶ್ಚಾಂಚಲ್ಯವುಂಟಾಗಿತ್ತು. ಇವಳು ನನಗೆ ಅಧೀನೆಯಾಗುವಳೋ ಇಲ್ಲವೋ ಎಂಬ ಸಂಶಯವೂ ಇದ್ದಿತು. ಈಗ ಸಂಶ ಯವು ಪರಿಹಾರವಾಯಿತು, ಆದರೆ "ವಿವಾಹಶ್ಚ ವಿವಾದಶ್ಚ ಸಮಯೋರೇವ ಶೋಭತೇ" ಎಂಬಂತೆ ನಾನು ಮಾನವನು. ಇವಳು ಯಕ್ಷಿಣಿ. ನಮ್ಮಿಬ್ಬರಿಗೂ ಹೇಗೆ ವಿವಾಹಸಂಬಂಧವುಂಟಾದೀತು? ಎಂದು ಸ್ವಲ್ಪಹೊತ್ತು ಸ್ತಬ್ಧನಾಗಿ ದ್ದನು. ಆದರೇನು? ಕಾಮವು ಉದ್ರೇಕಿಸುತ್ತ ಬಂದಿತು. "ಕಾಮನೇ ನಮ್ಮಿ ಬ್ಬರ ಸಂಬಂಧವನ್ನುಂಟುಮಾಡಿರುವಾಗ ನಾನೇಕೆ ಸಂಶಯ ಪಡಬೇಕು?" ಎಂದು ತನ್ನಲ್ಲಿತಾನೇ ಹೇಳಿಕೊಂಡನು. ವಿದೇಶವಲ್ಲಿ ಹೀಗೆ ಬಂಧು ಲಾಭವಾದ ಬಗ್ಗೆ, "ವಿದೇಶೇ ಬಂಧುಲಾಭೋಽಯಂ ಮರಾವಮೃತನಿರ್ಝರಃ" ಎಂಬಂತೆ ಮರುಪ್ರದೇಶದಲ್ಲಿ ಅಮೃತಪ್ರವಾಹವು ಲಭಿಸಿದಂತೆ ಸಂತೋಷಪಟ್ಟನು, "ಸ್ತ್ರೀಯು ತಾನಾಗಿ ವರಿಸಿರುವಾಗ ಪುರುಷನಿಗೆ ಭಯವೇನು?" ಎಂದು ಧೈರ್ಯಗೊಂಡನು. ಅವಳೊಡನೆ ಅವಳಿಗೆ ಹಿತವಾಗಿರುವಂತೆ ಮಾತಾಡುವು ದಕ್ಕೆ ಸಾಹಸಮಾಡಿದನು.

ಅಷ್ಟರಲ್ಲಿ ಆ ಯಕ್ಷಕನ್ಯೆಯು, "ಸ್ವಾಮಿ! ಏನೋ ಬಹುವಾಗಿ ಆಲೋ ಚಿಸುತ್ತಿರುವಂತೆ ಕಾಣುತ್ತಿರುವುದು. ನಮ್ಮ ತಂದೆಯು ಮಹಾ ಬಲಿಷ್ಠನು. ನನ್ನಲ್ಲಿ ಬಹುಪ್ರೀತಿಯುಳ್ಳವನು. ನಾನು ಮಾಡಿದ ಕಾರ್ಯವನ್ನು ಅವಶ್ಯವಾಗಿ ಒಪ್ಪಲೇ ಒಪ್ಪುವನು ನೀನು ಸಂದೇಹಪಡಬಾರದು, ಕೈಹಿಡಿದು ಕಾಪಾಡು. ನಿನಗಾವಭಯವೂ ಉಂಟಾಗದಂತೆ ನಾನು ನೋಡಿಕೊಳ್ಳುವೆನು" ಎಂದಳು. ಆಗ ಸಂಪೂರ್ಣಧೈರ್ಯವನ್ನು ತಳೆದು, ಇಳಾನಾಥನಿಂತೆಂದನು.

"ರಮಣೀರತ್ನವೇ! ತನಿಸೊದೆಯ ಪನಿಗಳಂಪೋಲ್ವ ನಿನ್ನ ನುಡಿಗಡಣವು ನನ್ನ ಮನವನಾನಂದಗೊಳಿಸಿತು, ನಿಷ್ಕಾರಣವಾಗಿ ನನ್ನಲ್ಲಿ ನಿನಗೀಯನುರಾಗ ವುಂಟಾದುದು ನನ್ನ ಪೂರ್ವಜನ್ಮ ಸುಕೃತದಿಂದಲ್ಲದೆ ಬೇರೆಯಲ್ಲ ಎಂದಾ ಅರ ಸನು ನುಡಿದನು. ಅವಳಾ ಅರಸನನ್ನು ಕರೆದುಕೊಂಡು, ಗುಹಾಮಂದಿರ ವನ್ನು ಪ್ರವೇಶಮಾಡಿ ಅಲ್ಲಿ ಗಾಂಧರ್ವವಿಧಿಯಿಂದ ಅವನನ್ನು ಮದುವೆಯಾದಳು.

ಸ್ವರ್ಗಕ್ಕೆ ಸಮವಾಗಿ ಸಕಲ ವೈಭವೋಪೇತವಾಗಿ, ಅತಿ ಸುಂದರವಾಗಿರುವ ಆ ಮಂದಿರವನ್ನು ನೋಡಿ ಅತ್ಯಾಶ್ಚರ್ಯಮಗ್ನನಾದನು. ಯಕ್ಷಕನ್ಯೆಯು ಅವನಿಗೆ ಬೇಕಾಗುವ ನಸುಸ್ವಪದಾರ್ಥಗಳನ್ನು ಉಂಟುಮಾಡಿ ತೃಪ್ತಿಯಾಗಿ ಭೋಜನವನ್ನಿಟ್ಟು, ತಾನೂ ಬಂದು [illegible] ಆ ಅರಸನ ಹತ್ತಿರಕ್ಕೆ ಬಂದಳು. ಅಂದು ಮೊದಲಾಗಿ ಆ ರಾಜೇಂದ್ರನು ಆ ಯಕ್ಷಕನ್ಯೆಯಲ್ಲಿ ಮೋಹಪರವಶನಾಗಿದ್ದು ಇತರ ಚಿಂತೆಗಳನ್ನುಳಿದು ತನ್ನ ದೇಶಕೋಶಾದಿಗಳ ಹಂಬಲನ್ನು ಮರೆತು ಯಥೇಚ್ಛೆಯಿಂದ ವಿಹರಿಸುತ್ತಿದ್ದನು. ಕನಸಿನಲ್ಲಿಯೂ ತನ್ನ ಹೆಂಡತಿಯಾದ ವಿಮಲಾದೇವಿಯನ್ನು ಸ್ಮರಿಸುತ್ತಿರಲಿಲ್ಲ.

ಬೇಟೆಗಾಗಿ ಆತನಹಿಂದೆ ಹೋಗಿದ್ದ ಪರಿವಾರದವರು ೪-೫ ದಿನಗಳವರೆಗೆ ಆ ಕಾಡಿನಲ್ಲಿ ಅರಸನ ಆಗಮನವನ್ನು ನಿರೀಕ್ಷಿಸಿ ಹುಡುಕಿದರೂ ದೊರೆಯದಿದ್ದುದರಿಂದ ದುಃಖಿಸಿದರು ಕಡೆಗೆ ಆತನು ಬೇರೊಂದು ದಾರಿಯಿಂದ ಪಟ್ಟಣವನ್ನು ಸೇರಿರಬಹುದೆಂದೂಹಿಸಿ ಅವರೆಲ್ಲರೂ ರಾಜಧಾನಿಗೆ ಬಂದು ವಿಚಾರಿಸಿ ಅರಸನಲ್ಲಿಗೆ ಬರಲೇ ಇಲ್ಲವೆಂದು ತಿಳಿದು ಹುಡುಕಿಕೊಂಡು ಬರುವುದಕ್ಕೆ ತಕ್ಕವರನ್ನು ದಿಕ್ಕುದಿಕ್ಕಿಗೂ ಕಳುಹಿಸಿ, ಅವರೆಲ್ಲರೂ ನಿರಾಶರಾಗಿ ಹಿಂದಿರುಗಿಬಂದರು ವಿಮಲಾದೇವಿಯು ಸಾಧ್ವೀಮಣಿ. "ಆರ್ತಾರ್ತೇ ಮುದಿತಾಹೃಷ್ಟೇ ಜೀವಿತಾಜೀವಿತೇಘನೇ | ಮೃತಾಮ್ರಿಯೇತಯಾನಾರೀ ಸಾಸ್ತ್ರೀಜ್ಞೇಯಾಪತಿವ್ರತಾ ||" ಅಂದರೆ "ತನ್ನ ಪತಿಯು ಸಂತೋಷಿಯಾಗಿದ್ದರೆ ತಾನು ಸಂತೋಷದಿಂದಿರುವವಳೂ, ದುಃಖಿತನಾಗಿದ್ದರೆ ತಾನೂ ದುಃಖದಿಂದಿರುವವಳೂ, ಬದುಕಿದ್ದರೆ ಬದುಕಿರುವವಳೂ ಸತ್ತರೆ ಸಾಯುವವಳೂ ಪತಿವ್ರತೆಯೆನಿಸಿಕೊಳ್ಳುವಳು" ಎಂಬ ಆರ್ಯರ ನುಡಿಗಳನ್ನು ಸ್ಮರಿಸಿ ಅಗ್ನಿಪ್ರವೇಶವನ್ನು ಮಾಡಬೇಕೆಂದು ನಿಶ್ಚಯಿಸಿದಳು [illegible] ಕೆಲವರು "ಅಮ್ಮಾ! ಜೀವವನ್ನು ಕಳೆದುಕೊಳ್ಳುವುದು ಉಚಿತವಲ್ಲ, ನಿನ್ನ ಗಂಡನು ಮೃತನಾದನೆಂದಾರು ಹೇಳಿದರು? ಇಲ್ಲವಲ್ಲ ತಾಯಿ! ಬದುಕಿರಬಹುದು ಮುಂದೆ ಬರಬಹುದು ಇದನ್ನರಿಯದೆ ನೀನು ದೇಹತ್ಯಾಗವನ್ನು ಮಾಡುವುದು ಯಾವನ್ಯಾಯ. "ಜೀವನ್ಭದ್ರಾಣಿಪಶ್ಯತಿ" ಎಂಬ ನಾಣ್ಣುಡಿಯನ್ನು ನೀನು ಕೇಳಿಲ್ಲವೆ? ಎಂದು ನುಡಿದು ಆಕೆಯ ಸಾಹಸವನ್ನು ತಡೆದರು. [illegible] ಕಳೆಯುತ್ತ ಅವರಿಗೆ ಮಂತ್ರಿಯೇ ರಾಜಕಾರ್ಯಗಳನ್ನು ನಿರ್ವಹಿಸುತ್ತಿದ್ದನು. "ಅರಸನು ಮೃತನಾಗಿರುವನು ಇವನಿಗೆ ಮತ್ತೆ [illegible] ಮಾಡುತ್ತಿದ್ದನೆ? ಇನ್ನೇಕೆ ಅವನ ನೆನಪು [illegible] ಸ್ವಾತಂತ್ರ್ಯದಿಂದ ರಾಜ್ಯಭಾರವನ್ನು [illegible] ಪ್ರಜೆಗಳು [illegible] ನನ್ನ ಪಾಲನೆಗೆ ವಶರಾಗಿರುವರು ಅವರ ಪ್ರೇಮವು ನನ್ನಲ್ಲಿ ಚೆನ್ನಾಗಿ ನೆಲೆಗೊಂಡಿರು

ವುದು ” ಎಂದಾ ಮಂತ್ರಿ ಆಲೋಚಿಸಿ ಸ್ವತಂತ್ರನಾಗಿ ಎಲ್ಲ ಆಜ್ಞಾಪತ್ರಗಳಲ್ಲಿಯೂ “ ಅರಸನಿಗಾಗಿ ” ಎಂದು ಸಹಿಯನ್ನು ಮಾಡದೆ ತನ್ನ ಸಹಿಯನ್ನು ಮಾತ್ರ ಮಾಡುತ್ತ ಕಾರ್ಯಭಾಗಗಳನ್ನು ನಡೆಯಿಸಿದನು. ಪ್ರಜೆಗಳೂ ಸೇನೆಯವರೂ ಅರಸನನ್ನು ಮರೆತು ಮಂತ್ರಿಯನ್ನೆ ದೊರೆಯೆಂದು ಭಾವಿಸಿದರು ಒಂದು ಸಂವತ್ಸರವೂ ಆಯಿತು. ಆಗ ಮಂತ್ರಿಯು ತನ್ನಲ್ಲಿ “ ಇನ್ನೇನು ? ರಾಜ್ಯವು ನನ್ನದಾಯಿತು ಕೋಶಾದಿಗಳು ನನ್ನವಾದುವು ಅಂದಮೇಲೆ ರಾಜನ ಹೆಂಡತಿಯು ನನ್ನವಳೇಕೆ ಆಗಬಾರದು ಅವಳನ್ನೂ ನಾನು ವಶಪಡಿಸಿಕೊಳ್ಳುವೆನು ಎಂದಾಲೋಚಿಸಿ, ರಾಣಿವಾಸಕ್ಕೆ ಒಂದುದಿನ ಹೋದನು ರಾಣಿಯು “ ರಾಜಕಾರ್ಯಗಳಲ್ಲಿ ಯಾವುದೋ ಒಂದಾಲೋಚನೆಯನ್ನು ಕೇಳುವುದಕ್ಕೆ ಎಂದಿನಂತೆ ಬಂದಿರುವನು ” ಎಂದಾಲೋಚಿಸಿದಳು, ಮಂತ್ರಿಯು ಬಂದು ಆಕೆಯನ್ನು ನೋಡಿ ಗೌರವವನ್ನು ತೋರ್ಪಡಿಸಲಿಲ್ಲ ರಾಣಿಗೆ ಸಂದೇಹವುಂಟಾಯಿತು ಆಬಳಿಕ ಅವನು ಆಕೆಯೊಡನೆ ಮಾತನಾಡಲುಪಕ್ರಮಿಸಿದನು. “ ವಿಮಲಾದೇವಿ ! ಇನ್ನೇನು ? ನಿನ್ನ ಗಂಡನುಹೋಗಿ ಒಂದು ವರ್ಷವಾಯಿತು ಬದುಕಿದ್ದರೆ ಈವರೆಗೆ ಬಾರದೆ ಇರುತ್ತಿದ್ದನೇ ? ಇಲ್ಲ ! ಇಲ್ಲ ! ಆತನು ಜೀವಿಸಿರುವುದಿಲ್ಲ ಸತ್ಯವಾಗಿಯೂ ಜೀವಿಸಿರುವುದಿಲ್ಲ ನೀನು ವಿಧವೆಯಾಗದಿರುವಂತೆ ಒಂದು ಮಾತನ್ನು ಹೇಳುವೆನು ನಾನು ನಿನಗೆಧವನಾಗುವೆನು ನೀನು ಎಂದಿನಂತೆ ಎಲ್ಲಾ ಮಂಗಳದ್ರವ್ಯಗಳನ್ನೂ ಸ್ವೀಕರಿಸಬಹುದು ನಿನಗೆ ಬೇಕಾದ ಇಷ್ಟಾರ್ಥಗಳನ್ನು ಸಲ್ಲಿಸುವೆನು ಬೇರೆ ಎಣಿಸದೆ ನೀನು ನನಗೆ ಹೆಂಡತಿಯಾಗು ” ಎಂದು ಬಗೆಬಗೆಯಿಂದ ನಿರ್ಬಂಧಿಸಲಾರಂಭಿಸಿದನು ಪತಿವ್ರತೆಯಾದ ಆಕೆಗೆ ಕೋಪವು ಹೆಚ್ಚಿತು ಕಣ್ಣು ಕೆಂಪಾಯಿತು ತುಟಿಗಳಲುಗಿದುವು ಮೊಗವು ಬೆವರಿತು ಎದ್ದುನಿಂತು “ಎಲಾ ಕಪಟ ! ಖೂಳ ! ರಾಜಪತ್ನಿಯಾದ ನಾನು ನಿನಗೆ ತಾಯಿಯಲ್ಲವೆ ? ಮೂಢ ! “ ರಾಜಪತ್ನೀಗುರೋಃಪತ್ನೀ ಭ್ರಾತೃಪತ್ನೀತಥೈವಚ | ಪತ್ನೀಮಾತಾಸ್ವಮಾತಾಚ ಪಂಚೈತಾಮಾತರಃಸ್ಮೃತಾಃ ‖ ” ಎಂಬ ನೀತಿಯನ್ನು ಕೇಳಿಲ್ಲವೆ ? ನೀಚ ! ನನಗೆ ಶುಭಶಕುನಗಳೇ ಆಗುತ್ತಿರುವುವು, ನನ್ನ ಗಂಡನು ಮೃತನಾಗಿಲ್ಲ ಒಂದುವೇಳೆ ಮೃತನಾಗಿರುವುದಾದರೆ ನಾನು ಅಗ್ನಿ ಜಲ ವಿಷಪಾನಾದಿಗಳಲ್ಲಿ ಯಾವದರಿಂದಾದರೂ ಪ್ರಾಣತ್ಯಾಗವನ್ನು ಮಾಡಿ ಸ್ವರ್ಗದಲ್ಲಿರುವ ನನ್ನ ಪತಿಯನ್ನು ಸೇರುವೆನು ದುಷ್ಟಾ ! ಭ್ರಷ್ಟಾ ! ಲುಬ್ಧನ ಹಣವೂ ವೀರನ ಶಸ್ತ್ರವೂ ಸಿಂಹದ ಕೇಸರವೂ ಹುಲಿಯ ಉಗುರುಗಳೂ ಪತಿವ್ರತೆಯ ಅಂಗವೂ ಬದುಕಿರುವಾಗ ಪರರಿಗೆ ವಶವಾಗುವುದೇ ಬಿಡು ನಿನ್ನ ದುರಾಲೋಚನೆಯನ್ನು ಳಿದು ಹಿಂದಿರುಗು ವೃಥಾ ಯಮದಂಡನೆಗೆ ಗುರಿಯಾಗಬೇಡ ” ಎಂದು ಗದರಿಸಿದಳು, ಆ ನಿಂದಾವಾಕ್ಯಗಳನ್ನು ಕೇಳಿ ಮಂತ್ರಿಗೆ ಕೋಪವು ಉದ್ರೇಕಿಸಿತು

" ಎಲೆ ದುಷ್ಟೆ ! ಈ ನೀತಿಯ ಮಾತುಗಳು ಹಾಗಿರಲಿ ಈ ದಿನ ರಾತ್ರಿಯಲ್ಲಿ ನಿನ್ನ ಮಂದಿರಕ್ಕೆ ಬರುವೆನು ಆಗ ನನ್ನಲ್ಲಿ ಸುರತಸುಖವನ್ನನುಭವಿಸುವುದಕ್ಕೆ ಸಿದ್ಧಳಾಗಿದ್ದರೆಸರಿ ಇಲ್ಲದಿದ್ದರೆ ನಿನ್ನನ್ನು ಬಲಾತ್ಕಾರವಾಗಿ ಭೋಗಿಸುವೆನು ಆಗ ನೀನೇನುಮಾಡುವೆಯೋ ನೋಡುವೆನು " ಎಂದು ನುಡಿದು ಹೊರಟುಹೋದನು. ಮಂತ್ರಿಯಿಂದ ಬಗೆಬಗೆಯ ಬಹುಮತಿಗಳನ್ನು ಪಡೆದು ಲಂಚಗಳನ್ನು ತಿಂದು ರುಚಿಗಂಡಿರುವ ಮಿಕ್ಕ ಅಧಿಕಾರಿಗಳೂ ಪ್ರಜೆಗಳೂ ಅವನ ದುರ್ವ್ಯಾಪಾರವನ್ನು ಕಂಡರೂ ಪ್ರತಿಯಾಗಿ ಯಾವ ಕೃತ್ಯವನ್ನೂ ಮಾಡದೆ ಆಕ್ಷೇಪಿಸದೆ ಸುಮ್ಮನಿರುತ್ತಿದ್ದರು.

ಅನಾಥೆಯಾದ ಆ ರಾಣಿಯು ಏನುತಾನೆ ಮಾಡಿಯಾಳು ? ಆಗಿನ ಸಂದರ್ಭಗಳನ್ನೂ ಸ್ಥಿತಿಗತಿಗಳನ್ನೂ ಆಲೋಚಿಸಿ ತನ್ನ ಪಾತಿವ್ರತ್ಯವನ್ನು ಕಾಪಾಡಿಕೊಳ್ಳುವುದಕ್ಕೆ ಪ್ರಯತ್ನಪಟ್ಟಳು. " ಪ್ರಾಣಂವಾಪಿಪರಿತ್ಯಜ್ಯ ಮಾನೋರಕ್ಷ್ಯೋಸ್ಸದಾನ್ಯಭಿಃ | ಅನಿತ್ಯೋಭವತಿಪ್ರಾಣೋ ಮಾನಆಚಂದ್ರತಾರಕಂ ||" "ಮಾನವು ಚಂದ್ರಸೂರ್ಯರಿರುವವರೆಗೂ ಯಶಃಕಾರಿಯಾಗಿರುವುದು ಪ್ರಾಣವು ಎಂದಿದ್ದರೂ ಅಳಿವುದೇ ಆದುದರಿಂದ ಪ್ರಾಣವನ್ನು ಬಿಟ್ಟು ಮಾನವನ್ನು ಕಾಪಾಡಿಕೊಳ್ಳತಕ್ಕದೆ ಯುಕ್ತವು " ಎಂದು ಭಾವಿಸಿ ಮಂತ್ರಿಯು ತನ್ನ ಮಂದಿರಕ್ಕೆ ಬರುವವಷ್ಟರಲ್ಲಿಯೇ ವಿಷವನ್ನು ಕುಡಿದು ಪ್ರಾಣವನ್ನು ತೊರೆದಳು.

ಮಂತ್ರಿಯು ತಾನು ಹೇಳಿದಹೊತ್ತಿಗೆ ಸರಿಯಾಗಿ ಅಂತಃಪುರವನ್ನು ಹೊಕ್ಕು ವಿಚಾರಿಸಲು ವಿಮಲಾದೇವಿಯು ಪಂಚತ್ವವನ್ನು ಪಡೆದಳೆಂದು ಪರಿಚಾರಿಕೆಯರು ಹೇಳಿದರು ಆಗ ಅವನು ಕಳೆಗುಂದಿದ ಮುಖದಿಂದ ಮನೆಗೆಹೋದನು. ಹೀಗಾಗಿ ಒಂದುಪಕ್ಷವು ಕಳೆದಬಳಿಕ ಅತ್ತಲಾ ಯಕ್ಷಕನ್ಯಾಲೋಲುಪನಾದ ಶೌರ್ಯಸಾಗರನಿಗೆ ವಿಮಲಾದೇವಿಯು ಸತ್ತಂತೆ ಸ್ವಪ್ನವುಂಟಾಯಿತು ಎಚ್ಚತ್ತು ಕಳವಳವನ್ನು ಪಡೆದು ಯಕ್ಷಕುಮಾರಿಯನ್ನು ಕುರಿತು, " ಪ್ರಿಯೆ ! ಯಕ್ಷನಂದಿನಿ ! ನಾನಿತ್ತಲೆಯ್ತಂದು ಬಹುದಿನಗಳಾದುವು ನಿನ್ನೆಯರಾತ್ರಿ ನನಗೊಂದು ದುಸ್ಸ್ವಪ್ನವಾಯಿತು ಮನಸ್ಸು ಕಳವಳಿಸುತ್ತಿರುವುದು, ಈ ದಿನ ಪಟ್ಟಣಕ್ಕೆ ಹೋಗಿ ರಾಜ್ಯವನ್ನೂ ರಾಣಿಯನ್ನೂ ನೋಡಿಕೊಂಡು ನಿನ್ನನ್ನು ವರಿಸಿದ ವಿಚಾರವನ್ನು ಆಕೆಗೆ ಹೇಳಿ ಸಂತೈಸಿಬರುವೆನು ಅಥವಾ ಒಪ್ಪಿದರೆ ಆಕೆಯನ್ನು ಇಲ್ಲಿಗೆ ಕರೆದುಕೊಂಡು ಬರುವೆನು ಒಂದುವಾರದವುಟ್ಟಿಗೆ ನನಗೆ ಅವಧಿಯನ್ನು ಕೊಟ್ಟರೆ ಸಾಕು " ಎಂದು ಕೇಳಿದನು, ಯಕ್ಷತನಯೆಯು ಅರಸನಮೇಲಣ ಮೋಹಾತಿಶಯದಿಂದ ಬಿಡುವುದಕ್ಕೆ ಇಷ್ಟವಿಲ್ಲದಿದ್ದರೂ ಪ್ರತ್ಯುತ್ತರವನ್ನು ಹೇಳಲಾರದೆ " ಪ್ರಿಯನೇ ! ನೀನು ಹೇಳಿದಂತೆ ಒಂದು ವಾರದೊಳಗಾಗಿ ಬಂದುಬಿಡಬೇಕು ನಿನ್ನನ್ನು ಅಗಲಿ ನಾನು ಒಂದು ನಿಮಿಷವಾದರೂ ಇರಲಾ

ರೆನು" ಎಂದು ಹೇಳಿ ಅಪ್ಪಣೆಯನ್ನು ಕೊಟ್ಟಳು, ಆ ದೊರೆಯು ಕುದುರೆಯನ್ನೇರಿ ತ್ವರೆಯಾಗಿ ಒಂದು ನಗರವನ್ನು ಹೊಕ್ಕನು.

ಪ್ರಜೆಗಳೆಲ್ಲರೂ ರಾಜನನ್ನು ನೋಡುವರು ಒಂದು ವರ್ಷಕ್ಕೆಸಲುವಾಗಿ ಈ ದಿನ ಪ್ರಕಟವಾದ ರಾಜದರ್ಶನದಿಂದ ಎಲ್ಲರೂ ಆಶ್ಚರ್ಯಪರವಶರಾದರು ಮಂತ್ರಿಯಾದರೋ ಸಿ[illegible]ಣ್ಣನಾಗಿ, ತಾನು ಮಾಡಿದ ವಂಚನೆಯು ಆತನಿಗೆ ತಿಳಿಯದಂತೆ ಆಜ್ಞಾಪಿಸಿ ಆತನನ್ನು ಬಹು ಗೌರವದಿಂದ ಬರಮಾಡಿಕೊಂಡು ರಾಣಿಯು ಯಾವುದೋ ಒಂದು ವ್ಯಾಧಿಯಿಂದ ಮೃತಳಾದಳೆಂದು ನಂಬಿಕೆ ಹುಟ್ಟುವಂತೆ ಹೇಳಿ ಭಾರ್ಯಾವಿಯೋಗದಿಂದ ದುಃಖಿಸುತ್ತಿದ್ದ ಆತನನ್ನು ಸಂತೈಸಿ, ಆ ದಿನದ ರಾತ್ರಿ ಮನೆಗೆ ಬಹಳ ಹೊತ್ತಿನಮೇಲೆ ನಿದ್ರೆಗೊಂಡ ರಾಜನನ್ನು ತನ್ನ ಆಪ್ತಸೇವಕರಿಂದ ಕೊಲ್ಲಿಸಿದನು.

ಅತ್ತ ಯಕ್ಷಿಣಿಯು ಒಂದು ವಾರದವರೆಗೆ ಪತಿವಿಯೋಗದಿಂದ ಹೇಗೋ ಕಾಲವನ್ನು ತಳ್ಳಿದಳು ಬಳಿಕ ಆತನ ಆಗಮನವನ್ನು ನಿರೀಕ್ಷಿಸಿದಳು ಬಾರದಿರಲು ಕಾರಣವೇನೆಂದು ದಿವ್ಯಚಕ್ಷುಸ್ಸಿನಿಂದ ನೋಡಿದಳು ಅಲ್ಲಿನ ವೃತ್ತಾಂತವನ್ನೆಲ್ಲ ಕಣ್ಣಿಂದ ಕಂಡಂತೆ ತಿಳಿದ ಕೂಡಲೆ ಅಪಾರ ದುಃಖಸಮುದ್ರದಲ್ಲಿ ಬಿದ್ದು ಒದೆದಾಡಿದಳು ಕೊನೆಗೆ ರೋಷಪ್ರೇರಣೆಯಿಂದ "ಎಲೆ ದುಷ್ಟರಿರಾ? ರಾಜ್ಯಕ್ಕೆ ತಂದೆಯಾದ ರಾಜನನ್ನು ವಂಚಿಸಿ ಬಗೆಬಗೆಯಾದ ಅಪರಾಧಗಳನ್ನು ಮಾಡಿದುದಲ್ಲದೆ ಆತನನ್ನು ಕೊಂದಿರಾ? ಇಷ್ಟು ಪಾಪವರ್ತನೆಗೆ ಮನಗೊಟ್ಟ ನಿಮ್ಮೆಲ್ಲರಿಗೂ ತಕ್ಷಣವೇ ತಕ್ಕಶಿಕ್ಷೆಯನ್ನು ಮಾಡುವೆನು" ಎಂದು ನುಡಿದು ತಂದೆಯನ್ನು ಸ್ಮರಿಸಿದಳು. ಆಗಲೆ ಯಕ್ಷರಾಜನು ಪ್ರತ್ಯಕ್ಷನಾಗಿ "ವತ್ಸೆ! ನನ್ನನ್ನು ಏಕೆ ಸ್ಮರಿಸಿದೆ?" ಎಂದು ಕೇಳಿದಮಾತ್ರಕ್ಕೆ ಕಣ್ಣೀರು ಮುನ್ನೀರಾಗುವಂತೆ ಹರಿಯಿಸಿ ಗೋಳಿಟ್ಟಳು. "ಅಮ್ಮಾ! ಏನಿದು? ನಿನಗುಪದ್ರವವನ್ನು ರಚಿಸಿದವರಾರು? ಹೇಳು ಅವರನ್ನೀಗಲೆ ಭಸ್ಮೀಕರಿಸುತ್ತೇನೆ" ಎನ್ನಲು ಆಕೆಯು ನಡೆದುದನ್ನೆಲ್ಲ ವಿಸ್ತಾರವಾಗಿ ಹೇಳಿದಳು. ಒಡನೆಯೇ ಯಕ್ಷನು ಕ್ರೋಧಾರುಣಿತಾಕ್ಷನಾಗಿ ಕಾಂಚನ ನಗರಕ್ಕೆ ಬಂದು ಪಟ್ಟಣವನ್ನು ಮೂರು ದಿನಗಳವರೆಗೆ ಕಳವಳಗೊಳ್ಳುವಂತೆ ದಹಿಸಿ ನಾಲ್ಕನೆಯ ದಿನದಲ್ಲಿ "ಈ ಪಟ್ಟಣವು ದೊಡ್ಡ ಸರೋವರವಾಗಲಿ ರಾಜದ್ರೋಹಿಯಾದ ಮಂತ್ರಿಯು ನೀರಾಗಲಿ ಇವನು ದುಷ್ಟಕಾರ್ಯದಲ್ಲಿ ವರ್ತಿಸಿದುದನ್ನು ಕಂಡು ಆಕ್ಷೇಪಿಸದೆ ಶಿಕ್ಷಿಸದೆ ಇದ್ದ ಚಾತುರ್ವರ್ಣ್ಯದ ಜನರು ಇವರೆಲ್ಲ ಚತುರ್ವರ್ಣದ ಮೀನುಗಳಾಗಲಿ" ಎಂದು ಶಪಿಸಿದನು. ಒಡನೆಯೇ ಶಾಪವು ಫಲಿತವಾಯಿತು ಬ್ರಾಹ್ಮಣರು ಬಿಳಿಯ ಮೀನುಗಳಾಗಿಯೂ, ಕ್ಷತ್ರಿಯರು ಕೆಂಪುಮೀನುಗಳಾಗಿಯೂ, ವೈಶ್ಯರು ಹಳದಿಯಮೀನುಗಳಾಗಿಯೂ, ಶೂದ್ರರು ಕರಿಯಮೀನುಗಳಾಗಿಯೂ ಆಗಿ ಆಯಾ ಜಾತಿಯು

ಬೇರ್ಪಟ್ಟು ಒಂದು ಗುಂಪಿನೊಡನೆ ಮತ್ತೊಂದು ಗುಂಪು ಸೇರದೆ ಸರಸ್ಸಿನಲ್ಲಿ ತಿರುಗುತ್ತಿರುವುವು.

ಎಲೈ ಸತ್ಯಶೀಲನೇ! ಕೇಳಿದೆಯಾ ಸರೋವರದ ವೃತ್ತಾಂತವನ್ನು? "ದೌರ್ಮಂತ್ರ್ಯಾನ್ನೃಪತಿರ್ವಿನಶ್ಯತಿ" ಎಂಬ ನೀತಿಯಂತೆ ದುರ್ಮಂತ್ರಿತ್ವದಿಂ ಶೌರ್ಯಸಾಗರನಿಗಾದ ನಾಶವು ಮನಸ್ಸಿಗೆ ಬಂತಲ್ಲವೆ? ಆದುದರಿಂದಲೇ ನೀತಿಜ್ಞರು, "ಮೂರ್ಖಂವ್ಯಸನಿನಂ ಲುಬ್ಧಮಪ್ರಗಲ್ಭಂಭಯಾಕುಲಂ | ಕ್ರೂರಮನ್ಯಾಯಕರ್ತಾರಂ ನಾಧಿಪತ್ಯೇನಿಯೋಜಯೇತ್ ||" "ಮೂರ್ಖನು, ವ್ಯಸನವುಳ್ಳವನು, ಆಶೆಯುಳ್ಳವನು, ಪ್ರೌಢತ್ವವಿಲ್ಲದವನು, ಭಯವುಳ್ಳವನು, ಕ್ರೂರನು, ಅನ್ಯಾಯವನ್ನು ಮಾಡುವನು ಇಂಥವರನ್ನು ಅಧಿಕಾರದಲ್ಲಿ ನಿಲ್ಲಿಸಬಾರದು" ಎಂದು ಹೇಳಿರುವರು.

ಎಂದು ಚಿದಾನಂದಯೋಗಿಯು ಹೇಳಿದ ಕಥೆಯನ್ನು ಸತ್ಯಶೀಲನು ಕೇಳಿ ಪರಮಾನಂದಭರಿತನಾದನು ಯೋಗೀಶ್ವರನ ಮಹಿಮಾತಿಶಯವನ್ನು ಕುರಿತು ಆಶ್ಚರ್ಯಪಟ್ಟನು. ಅವರಿಬ್ಬರೂ ಆ ರಾತ್ರಿ ಆ ಭಯಂಕರವಾದ ಕಾಡಿನಲ್ಲಿಯೇ ನಿರ್ಭೀತರಾಗಿ ನಿದ್ರಿಸಿ, ನಾಲ್ಕನೆಯ ಯಾಮದಲ್ಲಿ ಎಚ್ಚರವನ್ನು ಪಡೆದು ಸ್ನಾನಾದಿ ನಿತ್ಯಕೃತ್ಯಗಳನ್ನು ನೆರವೇರಿಸಿಕೊಂಡು ಪ್ರಯಾಣಮಾಡಿ ಮಧ್ಯಾಹ್ನಕ್ಕೆ ಸರಿಯಾಗಿ ಒಂದು ಪಟ್ಟಣವನ್ನು ಸೇರಿ ಊರಹೊರಗೆ ಒಂದು ಮಂಟಪದಲ್ಲಿಳಿದರು ಆ ಮಂಟಪವು ನೂರಾರು ಮಂದಿಯ ವಾಸಕ್ಕೆ ತಕ್ಕುದಾಗಿ ಜಲವಸತಿಯುಳ್ಳುದಾಗಿದ್ದಿತು.

ಇಂತು ನಾಲ್ಕನೆಯ ಕಥೆ ಮುಗಿದುದು.



## —: ಐದನೆಯ ಉಪ್ಪಿಯಣನ ಕಥೆ :—

ನಮೋನಮೋರಾಘವಾಯ ರಾಮಚಂದ್ರಾಯ ತೇನಮಃ |
ಜಾನಕೀಪ್ರಾಣನಾಥಾಯ ಜಗನ್ನಾಥಾಯ ಸಾಕ್ಷಿಣೇ ||

ತೀರ್ಥಯಾತ್ರಾಸಮುತ್ಸುಕರಾದ ಗುರುಶಿಷ್ಯರು ಪಟ್ಟಣದ ಬಹಿರ್ಭಾಗದ ಒಂದು ಮಂಟಪದಲ್ಲಿ ಬಿಡದಿಮಾಡಿದರಷ್ಟೆ? ಸತ್ಯಶೀಲನು ಚಿದಾನಂದಯೋಗಿಯಿತ್ತ ನಾಣೆಯವನ್ನು ತೆಗೆದುಕೊಂಡು ಪಟ್ಟಣದ ಅಂಗಡಿಬೀದಿಗೆ ಹೋಗಿ ಪಾಕಸಾಮಗ್ರಿಗಳನ್ನೂ ತರ್ಕಾರಿಗಳನ್ನೂ ತಂದು ಅಡಿಗೆಮಾಡಿದನು ಇಬ್ಬರಿಗೂ ಭೋಜನವಾಯಿತು ಚಿದಾನಂದಯೋಗಿಯು ಸ್ವಲ್ಪ ವಿಶ್ರಮಿಸಿಕೊಂಡನು ಸತ್ಯಶೀಲನು ಮೆಲ್ಲನೆಬಂದು ಆಚಾರ್ಯನಬಳಿಯಲ್ಲಿ ಕುಳಿತು ಆತನ ಪಾದಪದ್ಮಗಳನ್ನು ತನ್ನ ಮೆಲ್ಗೈಗಳಿಂದ ಒತ್ತುತ್ತ, "ಆಚಾರ್ಯವರ್ಯ! ಇಂದಾಂ

ಕಂಡೆಂ ನಗರದೊಳೊಂದು ವಿನೋದವನೆ ಗುರುವರಾ ! ವೋದದೊಳಾಚಂದ ವದೇಂ ಪೇಳ್ವುದು ಕೃಪೆಯಿಂದೆ ನಮಸ್ಕರಿಸಿ ಬೇಡುವೆಂ ಸನ್ನಿಧಿಯೊಳ್, ಎಂದು ನುಡಿದು ಮತ್ತಿಂತೆಂದನು.

" ಮಹಾತ್ಮಾ ! ಅಡುಗೆಯ ಸಾಮುಗ್ರಿಗಾಗಿ ಪಟ್ಟಣದೊಳಕ್ಕೆ ಹೋಗಿದ್ದೆನಷ್ಟೆ ? ಅಲ್ಲಿ ನಾನೊಂದು ವಿಶೇಷವನ್ನು ಕಂಡೆನು. ಸಾಮುಗ್ರಿಯೆಲ್ಲವನ್ನೂ ತೆಗೆದುಕೊಂಡು ಪಟ್ಟಣದಿಂದ ಹೊರಟು ಬರುತ್ತಿರುವಾಗ ನಗರದ ಹೆಬ್ಬಾಗಿಲಿನ ಬಳಿಯಲ್ಲಿ ಒಬ್ಬ ಕುರುಡನು ಕುಳಿತುಕೊಂಡಿದ್ದನು, ಅವನು ೮೦ ವರ್ಷದ ಮುದುಕನು ನಾನು ನಡೆದುಬರುತ್ತಿರುವ ಶಬ್ದವನ್ನು ಕೇಳಿ ನನ್ನನ್ನು ಕುರಿತು, " ಅಪ್ಪಾ ! ಪುಣ್ಯಾತ್ಮರು ಯಾರೋ ಹೋಗುತ್ತಿರುವರು ಈ ಮುದಿಕುರುಡನಿಗೆ ಧರ್ಮವನ್ನುನೀಡಿ " ಎಂದು ಕೂಗಿಕೊಂಡನು. ತಾವು ಕೊಟ್ಟಹಣದಲ್ಲಿ ಸಾಮುಗ್ರಿಯ ಬೆಲೆಯು ಹೋಗಲಾಗಿ ನನ್ನಲ್ಲಿ ಅರ್ಧಾಣೆಕವು ಮಾತ್ರ ಉಳಿದಿದ್ದಿತು ನನ್ನ ಮನಸ್ಸಿನಲ್ಲಿ " ಅಯ್ಯೋ ಪಾಪ ! ಇವನು ಕುರುಡನು ಅದರಮೇಲೆ ಎಂಬತ್ತುವರ್ಷದ ಮುದುಕನು ಎಲ್ಲಿಗಾಗಲಿ ಹೋಗಿ ಭಿಕ್ಷವನ್ನು ಬೇಡುವ ಶಕ್ತಿಯಿಲ್ಲದವನು ಇಂಥವರಿಗೆ ಕೊಟ್ಟರಲ್ಲವೆ ಪುಣ್ಯ, ಯಾವ ಅಂಗವೂ ಕಡಿಮೆಯಿಲ್ಲದೆ ಗಟ್ಟಿಮುಟ್ಟಿಯಾಗಿರುವವರಿಗೆ ಕೊಟ್ಟರೆ ಫಲವೇನು ? ನಮ್ಮ ದೇಶದಲ್ಲಿ ಕೆಲಸ ಮಾಡಲು ಶಕ್ತಿಯಿರುವ ಪ್ರಾಯದವರೂ ಭಿಕ್ಷವನ್ನು ಬೇಡುವುದನ್ನೇ ವೃತ್ತಿಯಾಗಿಟ್ಟುಕೊಳ್ಳುತ್ತಿದಾರೆ ಅಂಥವರಿಗೆ ದಾನಮಾಡಿದರೆ ಫಲವೆ ? " ದರಿದ್ರಾಯಕೃತಂದಾನಂ ಶೂನ್ಯಲಿಂಗಸ್ಯಪೂಜನಂ | ಅನಾಥಪ್ರೇತಸಂಸ್ಕಾರಂ ಅಶ್ವಮೇಧಸಮಂವಿದುಃ " ಎಂವಲ್ಲವೆ ಹಿರಿಯರು ಹೇಳುವರು. ಅಯ್ಯೋ ! ಪಾಪ ! ಇವನಿಗೆ ನಾನೇನು ಕೊಡಲಿ ? ಒಂದುಹೊತ್ತಿನ ಊಟವನ್ನಾದರೂ ಕೊಡುವುದಕ್ಕಿಲ್ಲವಲ್ಲ ! " ಎಂದು ಪರಿತಾಪಪಟ್ಟು ನನ್ನಲ್ಲಿದ್ದ ಅರ್ಧಆಣೆಯನ್ನು ಕೊಡಬೇಕೆಂದಿಚ್ಛಿಸಿ " ಅಯ್ಯಾ ! ನನ್ನಲ್ಲಿ ಆರುಕಾಸುಗಳು ಮಾತ್ರ ಇದೆ ಕೈಯೊಡ್ಡು ಕೊಡುತ್ತೇನೆ " ಎಂದೆನು ಆತನು ಕೈಯನ್ನು ನೀಡದೆಯೇ " ಸ್ವಾಮಿ ! ಪುಣ್ಯಪುರುಷನೇ ! ನೀನು ಕೊಡುವುದು ಎಷ್ಟು ಅಲ್ಪವಾದುದಾದರೂ ಚಿಂತೆಯಿಲ್ಲ ನನ್ನ ವ್ರತಕ್ಕೆ ಭಂಗವಾಗದಂತೆ ಕೊಡುವುದಾದರೆ ತೆಗೆದುಕೊಳ್ಳುತ್ತೇನೆ ಆ ನನ್ನ ವ್ರತವಾವುದೆಂದರೆ ದಾತೃವು ನನಗಾವುದನ್ನಾದರೂ ಕೊಡಲು ಇಚ್ಛಿಸುವನಾದರೆ ಆತನು ಮೊದಲು ನನ್ನ ಮುಖದಮೇಲೆ ತನ್ನ ಎಂಜಲನ್ನು ಉಗುಳಬೇಕು ಬಳಿಕ ಕೆನ್ನೆಗಳಮೇಲೆ ಹೊಡೆಯಬೇಕು ಈ ಎರಡು ಕಾರ್ಯಗಳಾದಮೇಲೆ ತನ್ನ ಅಭಿಲಾಷೆಯಂತೆ ಕೊಡಬೇಕು ಆಗ ನಾನು ಪರಿಗ್ರಹಿಸಬೇಕು ಇದೇ ನನ್ನ ವ್ರತ " ಎಂದನು. " ಯಾವನಾಗಲಿ ತಾನು ಕೊಡುವ ಅಲ್ಪಾರ್ಥಕ್ಕೆ ಉಗುಳಿ ಹೊಡೆದು ಕೊಡುವನೇನಯ್ಯಾ ? ಇಂತಪ್ಪ ವ್ರತವನ್ನು ಹಿಂದೆ ನಾನೆಂ

ದೂಕೇಳಿಲ್ಲ ನೋಡಿಯೂ ಇಲ್ಲ ಹಾಗೆ ಹಠವನ್ನು ಹಿಡಿಯಬೇಡ ಕೊಟ್ಟಿದನ್ನು ತೆಗೆದುಕೊ-ಕೋ" ಎಂದು ನಾನು ಹೇಳಿದೆನು ಆ ಅಂಧನು "ಸ್ವಾಮಿಾ! ಕೊಡುವ ಹಣವು ಅಲ್ಪವಾಗಲಿ ಅಧಿಕವಾಗಲಿ ನನಗದು ಮುಖ್ಯವಲ್ಲ, ಉಗುಳದೆ ಹೊಡೆಯದೆ ಕೊಡುವುದು ಒಂದುಸಾವಿರ ರೂಪ್ಯಗಳಾಗಲಿ ನನಗೆ ಬೇಕಾಗಿರುವುದಿಲ್ಲ ಆಸೆಯೂ ನನಗಿಲ್ಲ ದಯವಿಟ್ಟು ನನ್ನ ಪ್ರಾರ್ಥನೆಯನ್ನಂಗೀಕರಿಸಿ ಉಗುಳಿ ಹೊಡೆದು ತಾವು ಕೊಡುವುದನ್ನು ಕೊಟ್ಟುಬಿಡಿ" ಎಂದನು. "ಗುರುಶೇಖರ! ನಿರಪರಾಧಿಯಾದ ಅವನ ಮುಖದಮೇಲೆ ಉಗುಳುವುದು ಹೇಗೆ? ಅವನ ಕೆನ್ನೆಗಳಮೇಲೆ ಹೇಗೆ ಹೊಡೆವುದು? ನನಗೆ ಮನಸ್ಸು ಬರಲಿಲ್ಲ. ನಿನ್ನ ದುಡ್ಡು ನನಗೆ ಬೇಡವೆಂದು ತಿರಸ್ಕರಿಸಿದನು ನಾನು ಕರ್ತವ್ಯವನ್ನರಿಯದೆ ಬಂದುಬಿಟ್ಟೆನು ಇಗೋ ಉಳಿದ ಅಣಕಾರ್ಧವು" ಎಂದು ಆರುಪೈಗಳ ನಾಣ್ಯವನ್ನು ಗುರುಗಳ ಮುಂದಿಟ್ಟು ಆ ಮುದುಕನ ಆ ವ್ರತಕ್ಕೆ ಕಾರಣವೇನು!? ದಯವಿಟ್ಟು ಹೇಳಬೇಕು" ಎಂದು ಬೇಡಿದನು. ಬಳಿಕ ಆ ಚಿದಾನಂದ ಮುನಿಯು ಸ್ವಲ್ಪ ಹೊತ್ತಾಲೋಚಿಸಿ ಆ ಮುದುಕನ ಪೂರ್ವಕಥೆಯನ್ನು ಹೇಳಲಾರಂಭಿಸಿದನು.

## ಮುದಿ ಕುರುಡನ ಕಥೆ.

"ಅಂತೇವಾಸಿವತಂಸವೇ! ಆಲಿಸು ಈ ಪಟ್ಟಣಕ್ಕೆ ಪಶ್ಚಿಮದಲ್ಲಿ ಮೂರು ಹರಿದಾರಿಗಳ ದೂರದಲ್ಲಿ ಒಂದು ಹಳ್ಳಿಯಿದ್ದಿತು ಅದರ ಹೆಸರು "ತುರುಗಲ್ಲು" ಎಂದು ಪ್ರತಿದಿನವೂ ಆ ಗ್ರಾಮದ ತುರುಗಳನ್ನು ಆ ಹಳ್ಳಿಯ ಸಮಿಾಪದಲ್ಲಿದ್ದ ಒಂದು ಬಂಡೆಯಮೇಲೆ ಮಂದೆಹಾಕುತ್ತಿದ್ದುದರಿಂದ ಅವಕ್ಕೆ ಆ ಹೆಸರು ಬಂದಿತ್ತು ಅದು ಈಗ ಹಾಳಾಗಿರುವುದು. ಆ ಗ್ರಾಮವು ಒಳ್ಳೆಯ ಸ್ಥಿತಿಯಲ್ಲಿದ್ದಾಗ ನೀನು ನೋಡಿದ ಆ ಮುದುಕನು ತನ್ನ ಹೆಂಡತಿ ಮಕ್ಕಳೊಡನೆ ಆ ಗ್ರಾಮದಲ್ಲಿ ವಾಸಿಸುತ್ತಿದ್ದನು. ಅವನ ಹೆಸರು ಮುದ್ದುರಂಗನೆಂದು ಇವನ ಆಸ್ತಿಯು ಇಪ್ಪತ್ತು ಎತ್ತುಗಳು ಮಾತ್ರವೇ ಆಗಿದ್ದಿತು ಅವನು ಈ ಎತ್ತುಗಳನ್ನು ಪ್ರತಿದಿನವೂ ಕಾಡಿಗೆ ಹೊಡೆದುಕೊಂಡು ಹೋಗಿ, ಅವುಗಳಮೇಲೆ ಕಟ್ಟಿಗೆಯ ಹೊರೆಗಳನ್ನು ಹೊರಿಸಿ ಊರಿಗೆ ತೆಗೆದುಕೊಂಡು ಬಂದು ಮಾರಿ ಅದರಿಂದ ಬರುವ ಹಣದಿಂದ ಅವನು ಜೀವನ ಮಾಡುತ್ತಿದ್ದನು. ಒಂದು ದಿನ ಅವನು ವಾಡಿಕೆಯಪ್ರಕಾರ ಆ ಇಪ್ಪತ್ತು ಎತ್ತುಗಳನ್ನು ಕಾಡಿಗೆ ಕರೆದುಕೊಂಡು ಹೋಗಿ ಕಟ್ಟಿಗೆಯ ತುಂಡುಗಳನ್ನು ಕತ್ತರಿಸಿ ಎತ್ತುಗಳಮೇಲೆ ಹೇರಿ ಪುರಾಭಿಮುಖವಾಗಿ ಬರುತ್ತಿರಲು, ಒಬ್ಬ ಸನ್ಯಾಸಿಯು ಆ ದಾರಿಯಲ್ಲಿ ಹೋಗುತ್ತಿದ್ದು ಏಕಾಕಿಯಾಗಿ ಎತ್ತುಗಳನ್ನು ಹೊಡೆದುಕೊಂಡು ಹೋಗುತ್ತಿದ್ದ ಮುದ್ದುರಂಗನನ್ನು ಕಂಡನು. ಅವನು ಬಿಸಿಲಿನಲ್ಲಿ ನಡೆದುಬಂದುದರಿಂದಲೂ ಇಪ್ಪತ್ತು ಹೇರುಗಳ ಕಟ್ಟಿಗೆಯನ್ನು ಕತ್ತರಿಸಿದ್ದುದರಿಂದಲೂ ಬಳಲಿ ಒಂದು ಮರದ ನೆರ

ಳಲ್ಲಿ ವಿಶ್ರಾಂತಿಗಾಗಿ ಕುಳಿತನು ಎತ್ತುಗಳು ಮುಂದಕ್ಕೆ ಮೆಲ್ಲನೆ ನಡೆಯುತ್ತಿ
ದ್ದುವು ಆ ಸನ್ಯಾಸಿಯು ಮೆಲ್ಲಗೆ ಅವನಬಳಿಗೆ ಬಂದು ಪೂರ್ವದಲ್ಲಿ ಅವನ ಪರಿ
ಚಯವುಳ್ಳವನಂತೆ ತೋರ್ಪಡಿಸುತ್ತ "ಎಲೈ ತಮ್ಮ! ಸುಖವಾಗಿರುವೆಯಾ?"
ಎಂದು ನಗುತ್ತ ಅವನ ಸಮೀಪದಲ್ಲಿ ಕುಳಿತುಕೊಂಡನು ಹಿಂದೆ ಎಂದೂ ಕಾಣ
ದಿದ್ದ ಆ ಸನ್ಯಾಸಿಯು ಆರೀತಿಯಾಗಿ ಪ್ರಶ್ನೆಮಾಡಿ ಬಳಿಯಲ್ಲಿ ಕುಳಿತುಕೊಂಡು
ದರಿಂದ ಮುದ್ದುರಂಗನು ಆಶ್ಚರ್ಯಪಟ್ಟು, "ಅಣ್ಣಾ! ಎಂದೂ ನಿಮ್ಮನ್ನು
ನೋಡಿದ್ದಂತೆ ನನಗೆ ಜ್ಞಾಪಕವಿಲ್ಲ ನೀವಾದರೋ ಬಹುಕಾಲದಿಂದ ಪರಿಚಿ
ತರಾಗಿರುವವರಂತೆ ಮಾತನಾಡುತ್ತಿರುವಿರಿ ನೀವು ನನ್ನನ್ನು ಯಾವಾಗ ಎಲ್ಲಿ
ನೋಡಿದ್ದಿರೋ ದಯವಿಟ್ಟು ಹೇಳುವಿರಾ?" ಎಂದು ಕೇಳಿದನು. "ಹಿಂದೆ
ಎಂದೂ ನನ್ನನ್ನು ನೀನು ನೋಡದಿದ್ದರೂ ಈಗ ನೋಡಿದೆಯಲ್ಲವೆ? ನಿನ್ನ ಹೆಸರು
ಮುದ್ದುರಂಗಪ್ಪನಲ್ಲವೆ? ಸರಿ! ಆ ಮಾತುಗಳಂತಿರಲಿ! ನಿನಗೀಗ ಒಳ್ಳೆಯದಾ
ಗುವ ಒಂದು ವಿಚಾರವನ್ನು ಹೇಳುವೆನು ಕೇಳು ಆ ವಿಚಾರದಿಂದ ನಿನ್ನ ಬಡತ
ನವು ಹೋಗಿ ಸೌಖ್ಯವಂತನಾಗುವೆ ನಾನು ಹೇಳುವ ಮಾತನ್ನು ನಡೆಯಿಸಿಕೊ
ಡುವೆಯಾ?" ಎಂದಾ ಸನ್ಯಾಸಿಯು ಕೇಳಿದನು ಕಷ್ಟದಶೆಯಲ್ಲಿ ಬಿದ್ದು ಕಳವ
ಳಿಸುತ್ತಿದ್ದ ಅವನು "ಆಹಾ! ನನ್ನ ಬಡತನವು ನೀಗುವಂತೆ ನನಗಾವುದನ್ನೋ
ಈ ಸನ್ಯಾಸಿಯು ಹೇಳುವನಂತೆ! ಇವನು ನನ್ನಪಾಲಿನ ಭಾಗ್ಯದೇವತೆಯಂತೆ
ಬಂದಿರುವನೆಂದು ತೋರುವುದು ಈ ಕಷ್ಟದಶೆಯು ತೀರುವುದಿಲ್ಲವೆ? ನಾನು
ಭಾಗ್ಯವಂತನಾಗುವೆನಲ್ಲವೆ?" ಎಂದು ತನ್ನ ಮನಸ್ಸಿನಲ್ಲಿ ಬಗೆದು ಆನಂದಪರವ
ಶನಾಗಿ "ಅಣ್ಣಾ! ಕಾರಣವಿಲ್ಲದೆ ನನ್ನಮೇಲೆ ಇಷ್ಟು ಕೃಪೆಯುಂಟಾದುದಕ್ಕೆ
ನಾನು ಬಹಳವಾಗಿ ಕೃತಜ್ಞತೆಯಿಂದ ನಮಸ್ಕರಿಸುವೆನು, ಬಡತನದಿಂದ ನನ್ನನ್ನು
ಪಾರುಗಾಣಿಸುವೆನೆಂದರೆ ನಾನು ಒಪ್ಪದಿರುವೆನೆ? ಆಗಲಿ ನೀವು ಹೇಳಿದಂತೆ
ನಡೆಯುತ್ತೇನೆ ಏನು ಹೇಳುವಿರೋ ದಯಮಾಡಿ ಬೇಗ ಹೇಳಿ" ಎಂದಾ
ಒಕ್ಕಲಿಗನು ನುಡಿದನು.

ಸನ್ಯಾಸಿಯು ಆ ಮಾತಿಗೆ ಸಂತೋಷಿಸಿ "ಅಯ್ಯಾ! ಏನು ಹೇಳುವನೋ
ಎಂದು ಹೆದರಬೇಡ ಸಹೋದರನೆ! ನಾನು ಹೇಳುವ ಮಾತನ್ನು ಕೇಳಿ ಆಮೇ
ರಿಗೆ ನೀನು ನಡೆದರೆ ಉಭಯರಿಗೂ ಒಳ್ಳೆಯದಾಗುವುದು ಇದು ಸತ್ಯ ಕೇಳು,
ನನ್ನಬಳಿಯಲ್ಲಿ ಒಂದು ಅಂಜನವಿರುವುದು ಅನೇಕ ವರ್ಷಗಳು ಒಬ್ಬ ಸಿದ್ಧಪುರು
ಷನನ್ನಾಶ್ರಯಿಸಿ ಆ ಅಂಜನವನ್ನು ಸಂಪಾದಿಸಿದೆನು ಇದನ್ನು ಯಾರಿಗೂ ಹೇಳ
ಬಾರದು ಇದರ ಪ್ರಯೋಜನವನ್ನು ಕೇಳು ಈ ಕಾಡಿಗೆಯನ್ನು ಒಂದು ಸಾಸು
ವೆಯಕಾಳಿನಷ್ಟು ತೆಗೆದುಕೊಂಡು ಬಲಗಣ್ಣಿಗೆ ಬಳಿದುನೋಡಿದರೆ ಭೂಗರ್ಭದ
ಲ್ಲಿರುವ ನಿಕ್ಷೇಪವು ಕಾಣಿಸುವುದು ಅತ್ತನೋಡು ಆ ಎದುರಾಗಿ ತೋರುವ ಬೆಟ್ಟ

ದಬುಡದಲ್ಲಿ ಒಂದು ದೊಡ್ಡ ನಿಧಿಯಿದೆ ಅದರಲ್ಲಿ ಚಿನ್ನ ಮುತ್ತು ರತ್ನಗಳು ಹೇರಳವಾಗಿವೆ ಹಿಂದೆ ಒಂದು ದಿನ ಈ ದಾರಿಯಲ್ಲಿ ಬರುತ್ತ ಅಂಜನವನ್ನು ಹಾಕಿ ನೋಡಲು ನಿಕ್ಷೇಪವು ಕಾಣಿಸಿತು, ಈಗ ನಾನು ಹೇಳುವ ಉಪಾಯವೇನೆಂದರೆ:—ನೀನೀ ಎತ್ತುಗಳಮೇಲೆ ಹೇರಿರುವ ಕಟ್ಟುಗೆಯನ್ನು ಬದಿಗೆ ತಳ್ಳಿ ಆ ಎತ್ತುಗಳನ್ನು ಹೊಡೆದುಕೊಂಡು ನನ್ನೊಡನೆಬಾ ಅವುಗಳ ಮೇಲೆ ಹಾಕಿರುವ ಸಣಬಿನ ಹೆಣಿಕೆ ಚೀಲಗಳನ್ನೂ ತೆಗೆದುಕೊ ಅಲ್ಲಿಗೆ ಹೋದಬಳಿಕ ಆ ನಿಧಿಯನ್ನು ಮೇಲಕ್ಕೆ ತೆಗೆದು ಇಪ್ಪತ್ತು ಚೀಲಗಳಲ್ಲಿ ತುಂಬಿ ಎತ್ತುಗಳಮೇಲೆ ಹೇರುವಾಗ ನಮಗಿಬ್ಬರಿಗೂ ಒಂದು ನಿಬಂಧನೆಯಿರಬೇಕು ಏನೆಂದರೆ:— ಆ ಇಪ್ಪತ್ತೆತ್ತುಗಳಲ್ಲಿ ಧನದ ಹೇರುಗಳಿಂದಕೂಡಿದ ಹತ್ತು ಎತ್ತುಗಳನ್ನು ನನಗೆ ಕೊಟ್ಟು ಉಳಿದ ಹತ್ತನ್ನು ನೀನು ತೆಗೆದುಕೊಳಬೇಕು ಹೀಗೆ ಮಾಡಿದರೆ ನನಗೆ ಕೊಡುವ ಹತ್ತು ಎತ್ತುಗಳಿಗಾಗಿ ನಿನ್ನ ಹತ್ತು ಎತ್ತುಗಳಮೇಲೆ ಹೇರಿರುವ ಹಣವು ಸಮಂತಾಗುವುದು ಇದನ್ನು ನೀನು ಒಪ್ಪದಿರುವಪಕ್ಷದಲ್ಲಿ ನಾನು ಯಾವ ದಾನವನ್ನೂ ಕೊಡಲಾಗುವುದಿಲ್ಲ ಮತ್ತು ಹಣವನ್ನು ತೆಗೆಯುವುದೂ ಇಲ್ಲ ನಿನ್ನ ಅಭಿಪ್ರಾಯವೇನು ?" ಹೇಳು ಎಂದು ಕೇಳಿದನು.

ಹಣವೆಂದರೆ ಹೆಣವೂ ಬಾಯಿಬಿಡುವುದಂತೆ ಮುದ್ದುರಂಗಪ್ಪನಿಗೆ ಆಸೆ ಹುಟ್ಟಿತು ಆದರೆ ಹಣದಸಹಿತವಾಗಿ ಹತ್ತು ಎತ್ತುಗಳನ್ನು ಸನ್ಯಾಸಿಗೆ ಕೊಡಲಿಷ್ಟವಿರಲಿಲ್ಲ ಹಾಗೆ ಕೊಡದಿದ್ದರೆ ತಾನಾಕಾರ್ಯವನ್ನು ಮಾಡುವುದೇ ಇಲ್ಲವೆಂದು ಹೇಳಿರುವುದರಿಂದ ತಾನು ಅವನಿಗೆ ವಿರೋಧವಾಗಿ ಮಾತನಾಡಿದರೆ ಅವನು ನಿಕ್ಷೇಪವನ್ನು ತೆಗೆವುದೇ ಇಲ್ಲವೆಂದು ಭಯಪಟ್ಟು, ಹೃದಯಸ್ಥವಾದ ಅಭಿಪ್ರಾಯವನ್ನು ಮರೆಮಾಚಿ "ಅಣ್ಣಾ! ನನ್ನ ವಿಚಾರದಲ್ಲಿ ಹೀಗೆ ಸಂದೇಹಪಡಬಹುದೇ ? ನನ್ನ ಬಡತನವನ್ನು ಹೋಗಲಾಡಿಸುವುದಕ್ಕೆ ನಿರ್ವ್ಯಾಜಕೃಪೆಯಿಂದ ಪ್ರಯತ್ನಿಸಿರುವ ನಿಮ್ಮ ಮಾತಿಗೆ ನಾನು ಬದಲು ಹೇಳುವೆನೆ ? ನಾನು ಹತ್ತು ಎತ್ತುಗಳನ್ನು ಕಳೆದುಕೊಂಡರೂ ನನಗೆ ಜೀವಾವಧಿ ಬದುಕುವಷ್ಟು ಭಾಗ್ಯಬರುವುದಲ್ಲವೆ ? ಅಲ್ಪವಿಚಾರಕ್ಕೆ ನಾನು ಹಾಗೆ ಆಸೆಪಡುವನಲ್ಲ ನಿಮ್ಮಿಷ್ಟಾನುಸಾರವಾಗಿ ನೀವು ಧನದ ಹೇರುಗಳೊಡನೆ ಹತ್ತೆತ್ತುಗಳನ್ನು ತೆಗೆದುಕೊಳ್ಳಬಹುದು" ಎಂದು ಹೇಳಿದನು. ಸನ್ಯಾಸಿಯು ಅವನ ಮಾತನ್ನು ನಿಜವೆಂದು ನಂಬಿ ಸಂತೋಷಿಸಿದನು.

ಆಬಳಿಕ ಇಬ್ಬರೂ ಜೇಗಬೇಗನೆ ನಡೆದು, ಮುಂದೆ ಹೋಗುತ್ತಿದ್ದ ಎತ್ತುಗಳನ್ನು ನಿಲ್ಲಿಸಿ ಅವುಗಳಮೇಲಿರುವ ಕಟ್ಟುಗೆಯ ಹೊರೆಗಳನ್ನು ಕೆಳಕ್ಕೆತಳ್ಳಿ

ಹಿಂದಕ್ಕೆ ಹೊಡೆದುಕೊಂಡು ಬೆಟ್ಟದಕಡೆಗೆ ನಡೆದು ಒಂದು ಗವಿಯೊಳಕ್ಕೆ ಹೋದರು.

ಆಗ ಸನ್ಯಾಸಿಯು ಒಕ್ಕಲಿಗನನ್ನು ಕಂಡು "ಎಲೈ ತಮ್ಮ! ಈ ಗವಿಯ ಹೊರಗೆ ಒಳ್ಳೆಯ ಹಸಲೆ ಇದೆ ಎತ್ತುಗಳನ್ನಲ್ಲಿ ಮೇಯುಲಿಕ್ಕೆ ಬಿಟ್ಟು ಚೀಲಗಳನ್ನು ತೆಗೆದುಕೊಂಡು ನನ್ನೊಡನೆಬಾ ನಿಧಿಯನ್ನು ತೆಗೆದು ಮೂಟೆಗಳನ್ನುಕಟ್ಟಿ ಬಳಿಕ ಎತ್ತುಗಳ ಮೇಲೆ ಹೇರುವ" ಎಂದು ಹೇಳಲು ಮುದ್ದುರಂಗಣ್ಣನು ಹಾಗೆಯೇ ಮಾಡಿ ಚೀಲಗಳನ್ನೆತ್ತಿಕೊಂಡು ಸನ್ಯಾಸಿಯು ಹಿಂದೆ ಹೋದನು ಅವರಿಬ್ಬರೂ ಸ್ವಲ್ಪ ದೂರದವರೆಗೆ ಹೋದಬಳಿಕ ಆ ಸನ್ಯಾಸಿಯು ಒಂದು ಕಡೆ ನಿಂತು ಕೆಲವು ಸಣ್ಣ ಕಡ್ಡಿಪುಳ್ಳೆಗಳನ್ನಾಯ್ದು ರಾಶಿಮಾಡಿ ತನ್ನ ಬಳಿಯಲ್ಲಿದ್ದ ಚಕುಮುಕಿಯಿಂದ ಬೆಂಕಿಯನ್ನೇರ್ಪಡಿಸಿ ಒಂದು ಚೀಲದಿಂದ ಒಂದು ಚಿಟಿಕೆಯಷ್ಟು ಹುಡಿಯನ್ನು ತೆಗೆದು ಆ ಬೆಂಕಿಯಲ್ಲಿ ಹಾಕಿದನು ಒಡನೆಯೇ ಅದರಲ್ಲಿ ಅಧಿಕವಾದ ಹೊಗೆಯುಂಟಾಗಿ ಆಕಾಶಕ್ಕೆ ವ್ಯಾಪಿಸಿತು ಆ ಹೊಗೆಯು ಸ್ವಲ್ಪ ನಿಂತಮೇಲೆ ದೊಡ್ಡ ಶಬ್ದವಾಗಿ ನೆಲವು ಸೀಳಿ ದೊಡ್ಡ ಬಿರಕುಬಿಟ್ಟಿತು ಅದರಲ್ಲಿ ಹಲವು ಮೆಟ್ಟಲುಗಳು ಗೋಚರಿಸಿದುವು ಸನ್ಯಾಸಿಯು ಆ ಒಕ್ಕಲಿಗನ ಕೈಯನ್ನು ಹಿಡಿದು ಒಳಕ್ಕೆ ಕರೆದುಕೊಂಡು ಹೋದನು ಬಳಿಕ ಅಲ್ಲಿ ಒಂದು ನಿಧಿಯು ಕಾಣಿಸಿತು ಅದರಲ್ಲಿ ರತ್ನಗಳು ಚಿನ್ನದ ಬಗೆಬಗೆಯ ನಾಣ್ಯಗಳು ರಾಶಿರಾಶಿಗಳಾಗಿದ್ದುವು ಅವುಗಳನ್ನು ನೋಡುತ್ತಲೇ ಮುದ್ದುರಂಗಣ್ಣನಿಗೆ ವಿಸ್ಮಯವುಂಟಾಯಿತು ಸ್ವಲ್ಪ ಭಯವೂ ಉಂಟಾಯಿತು ವೈಮರೆತನು ಸನ್ಯಾಸಿಯು ಬೇವಿನಸೊಪ್ಪನ್ನು ತಂದು ಮಂತ್ರಿಸಿದನು ಬಳಿಕ ಒಕ್ಕಲಿಗನೆಚ್ಚತ್ತು ಸನ್ಯಾಸಿಯನ್ನು ಕಂಡು "ಸ್ವಾಮಿಾ! ನನಗೆ ಭಯವಾಗುತ್ತಿದೆ ನಾನು ನಿಲ್ಲಲಾರೆನು" ಎಂದನು ಸನ್ಯಾಸಿಯು ಮತ್ತೆ ಮಂತ್ರಿಸಿ "ಎಲೈ ಕೃಷೀವಲನೇ! ಹೆದರಬೇಡ ನಾನಿರುವೆನು" ಎಂದನು ಅವನಿಗೆ ಧೈರ್ಯಯುಂಟಾಯಿತು ಇಬ್ಬರೂ ಆ ಧನವನ್ನು ಚೀಲಗಳಲ್ಲಿ ತುಂಬಿ ಕಟ್ಟಿದರು ಇಬ್ಬರೂ ಮೇಲ್ಗಡೆಗೆ ಹೊತ್ತು ತಂದರು ಬಳಿಕ ಆ ಸನ್ಯಾಸಿಯು ಯಾವುದೋ ಒಂದು ಮಂತ್ರವನ್ನು ಜಪಿಸಲು ಉಚ್ಚರಿಸಿದನು ಸೀಳಿದ್ದ ಭೂಮಿಯು ಯಥಾಸ್ಥಿತಿಯಾಗಿ ಮುಚ್ಚಿಕೊಂಡು ಮೊದಲಿನಂತೆಯೇ ಆಯಿತು.

ಮೊದಲಿನಿಂದಲೂ ನಡೆದುದನ್ನು ಕ್ರಮವಾಗಿ ಎವೆಯಿಕ್ಕದೆ ನೋಡುತ್ತಿದ್ದ ಕಾಷ್ಠವಿಕ್ರಯಿಯು ಪರಮಾಶ್ಚರ್ಯವನ್ನು ಪಡೆದು ತನ್ನಲ್ಲಿ "ಓಹೋ! ಇವನು ಸಾಮಾನ್ಯನಾದ ಸನ್ಯಾಸಿಯಲ್ಲ ಮಹಾಮಹಿಮೆಯುಳ್ಳ ಮಾಂತ್ರಿಕನೆಂದು ತೋರುತ್ತಿದೆ ಭೂ ಗರ್ಭದಲ್ಲಿರುವ ಸಮಸ್ತ ಧನವೂ ಈ ಸನ್ಯಾಸಿಯು

ಅಧೀನವೆಂದು ತೋರುತ್ತಿರುವುದು" ಎಂದಾಲೋಚಿಸಿದನು. ಅಷ್ಟರಲ್ಲಿ ಮುದ್ದುರಂಗನನ್ನಾ ಸನ್ಯಾಸಿಯು ಕರೆದು "ಎಲಾ ಮುದ್ದುರಂಗಪ್ಪ! ಇನ್ನೇನು? ಕತ್ತಲಾಗುತ್ತ ಬಂದಿತು ಬೇಗನೆ ಹೋಗಿ ಆ ಇಪ್ಪತ್ತು ಎತ್ತುಗಳನ್ನೂ ಹೊಡೆದುಕೊಂಡುಬಾ! ಊರಿಗೆ ಹೊರಡೋಣ" ಎಂದು ನುಡಿದನು ಅವನು ಹಾಗೆಯೇ ಮಾಡಿದನು ಬಳಿಕ ಇಬ್ಬರೂ ಸೇರಿ ಹಣದ ಚೀಲಗಳನ್ನು ಎತ್ತುಗಳಿಗೆ ಹೇರಿ ಜಾರಿ ಬೀಳದಹಾಗೆ ಹಗ್ಗಗಳಿಂದ ಬಿಗಿದರು. ಆಗ ಆ ಸನ್ಯಾಸಿಯು ಅವನನ್ನು ನೋಡಿ "ಎಲಾ! ತಮ್ಮಾ! ಮೊದಲು ನಾವು ಮಾಡಿಕೊಂಡಿರುವ ನಿಬಂಧನೆಯಮೇರೆಗೆ ಎತ್ತುಗಳನ್ನು ಹಂಚು ನನ್ನಿಂದ ನಿನಗೂ ನಿನ್ನಿಂದ ನನಗೂ ಉಪಕಾರವಾಗಿರುವುದಲ್ಲವೆ? ನಿನ್ನ ಪಾಲಿಗೆಬಂದ ಹತ್ತು ಎತ್ತುಗಳನ್ನು ಧನದೊಡನೆ ನನ್ನಕಡೆಗೆ ಬರಮಾಡು ನಿನ್ನ ಭಾಗಕ್ಕೆಬಂದ ಹತ್ತು ಎತ್ತುಗಳನ್ನು ನಿನ್ನ ಮನೆಗೆ ತೆಗೆದುಕೊಂಡು ಹೋಗಿ ಧನವನ್ನು ಭದ್ರಪಡಿಸು ಕಾಷ್ಠವಿಕ್ರಯದಿಂದ ಕಷ್ಟಪಟ್ಟು ಜೀವನವನ್ನು ಮಾಡುವುದನ್ನು ಬಿಟ್ಟು ಭಾರ್ಯಾಪುತ್ರರೊಡನೆ ಸುಖವಾಗಿ ಕಾಲಯಾಪನ ಮಾಡು ನನ್ನ ಜ್ಞಾಪಕವಿರಲಿ ಹಣವನ್ನು ಸಂಪಾದಿಸುವುದು ಬಹುಕಷ್ಟ ಸಂಪಾದಿಸಿದ ಹಣವನ್ನು ಕಾಪಾಡಿಕೊಳ್ಳುವುದೂ ಕಷ್ಟ ಅದು ನಾಶವಾದರೂ ವೆಚ್ಚವಾದರೂ ಬಹುಕಷ್ಟವು ಇದನ್ನು ತಿಳಿದು ಯಾರೂ ಅರಿಯದಂತೆ ಸಂರಕ್ಷಿಸಿಕೊಂಡಿರು ಧನವು ಅತಿಸುಲಭವಾಗಿ ಲಭ್ಯವಾಯಿತೆಂದು ಅಹಂಕರಿಸಬೇಡ ನಿನ್ನ ಕಷ್ಟದಶೆಯನ್ನು ಬಹುಕಾಲದಿಂದಲೂ ನೋಡಿನೋಡಿ ಮರುಕಪಟ್ಟು ಈ ಹತ್ತು ಹೇರುಗಳ ಧನವನ್ನು ನಿನಗೆ ಕೊಟ್ಟಿರುವೆನು ಇನ್ನು ನಾನು ಹೋಗಲೆ?" ಎಂದು ಕೇಳಿದನು ಆ ಕುಡಿಯನು ಅವನನ್ನು ಬಿಡಲಾರದಿದ್ದರೂ ಬೇರೊಂದುಪಾಯವು ತೋರದಿದ್ದುದರಿಂದ ಸ್ವಲ್ಪಮಟ್ಟಿಗೆ ಸಮ್ಮತಿಸಿ ಕಳುಹಿಸಿಕೊಟ್ಟನು ಅವರಿಬ್ಬರೂ ಹೊರಟು ತಂತಮ್ಮ ಭಾಗದ ಎತ್ತುಗಳನ್ನು ಹೊಡೆದುಕೊಂಡು ತಂತಮ್ಮ ದಾರಿಗಳಲ್ಲಿ ತೆರಳಿದರು.

ಅವರಿಬ್ಬರೂ ಹೊರಟುಹೋದಬಳಿಕ ಪುರಾಭಿಮುಖವಾಗಿ ಹೋಗುತ್ತಿದ್ದ ಕಾಷ್ಠವಿಕ್ರಯಿಗೆ ಒಂದಾಲೋಚನೆಯುಂಟಾಯಿತು "ಈ ಸನ್ಯಾಸಿಯು ಸರ್ವಸಂಗಪರಿತ್ಯಾಗ ಮಾಡಿದವನಲ್ಲವೆ? ಇವನಿಗಿಷ್ಟು ಧನವೇಕೆ? ಈ ಧನದಿಂದ ಇವನೇನು ಮಾಡುವನು? ಯಾವುದಾದರೊಂದು ದುರ್ವ್ಯಯವನ್ನು ಮಾಡಬೇಕೇ ಹೊರತು ಇವನು ಮಾಡುವ ಮಹತ್ಕಾರ್ಯವಾವುದಿದೆ? ದೊಡ್ಡ ಕುಟುಂಬಿಯಾದ ನನ್ನಂಥವನಿಗೆ ಏಕೆ ಕೊಡಬಾರದು ಆಗಲಿ! ಅವುದಾದರೊಂದು ಯುಕ್ತಿಯನ್ನು ಹೂಡಿ ಅವನ ಬಳಿಯಲ್ಲಿ ಮತ್ತಷ್ಟು ಹಣವನ್ನು ಸುಲಿದುಕೊಳ್ಳುವೆನು ಸುಮ್ಮನೆ ಬಿಡಬಾರದು ಈಗ ಇವನನ್ನು ತೊರೆದುಬಿಟ್ಟು

ಬಳಿಕ ಪಶ್ಚಾತ್ತಾಪಪಡಬಾರದು ನನ್ನ ಶಕ್ತ್ಯನುಸಾರವಾಗಿ ಪ್ರಯತ್ನಿಸಿ ನೋಡುವೆನು ” ಎಂದು ದುರಾಲೋಚನೆಯನ್ನು ಮಾಡಿ ಯಾವುದೋ ಒಂದು ದೊಡ್ಡ ಕೆಲಸವಿರುವನಂತೆ “ ಸ್ವಾಮಿಾ ಸನ್ಯಾಸಿಗಳೇ ! ಸ್ವಾಮಿಾ ಸನ್ಯಾಸಿಗಳೇ ಎಂದು ಕುತ್ತಿಗೆಯನ್ನೆತ್ತಿ ಗಟ್ಟಿಯಾಗಿ ಕೂಗಿದನು ಆತನು ಹಿಂದಿರುಗಿ ನೋಡಿ, ಆ ವಂಚಕನು ತನ್ನಕಡೆಗೆ ಬರುತ್ತಿರುವುದನ್ನು ಕಂಡು ಎತ್ತುಗಳ ನಿಲ್ಲಿಸಿ ತಾನೂ ನಿಂತನು.

ಆ ಕಾಷ್ಠವಿಕ್ರಯಿಯು ಬೇಗಬೇಗನೆ ನಡೆದು ಬಂದು “ ಸ್ವಾಮಿಾ ! ಮತ್ತೇನೂ ವಿಶೇಷವಿಲ್ಲ ನನ್ನ ಹೃದಯದಲ್ಲಿ ಒಂದಾಲೋಚನೆ ಹುಟ್ಟಿತು ಅದನ್ನು ನಿಮ್ಮೊಡನೆ ಹೇಳದಿರಬಾರದೆಂದು ಕರೆದೆನು ನಾನು ಬಹಳ ಬಡವನು ತಾವು ಕೃಪೆಮಾಡಿ ನೀವಾಗಿ ಬಂದು ನನಗೆ ಧನಸಹಾಯವನ್ನು ಮಾಡಿದಿರಿ ನಿಮ್ಮ ಈ ಧರ್ಮಗುಣವು ಬಹು ಶ್ಲಾಘನೀಯವಾದುದು ಆ ಸುಗುಣವನ್ನು ನೀವು ನನ್ನಲ್ಲಿ ಮತ್ತೆ ಸ್ವಲ್ಪವಿನಿಯೋಗಿಸಿ ನಿಮ್ಮ ಪಾಲಿಗೆ ಬಂದಿರುವ ಹತ್ತು ಎತ್ತುಗಳಲ್ಲಿ ಐದೆತ್ತುಗಳನ್ನು ನನಗೆ ಕೊಟ್ಟು ಉಳಿದ ಐದೆತ್ತುಗಳನು ನೀವು ತೆಗೆದುಕೊಂಡು ಹೋಗಬೇಕೆಂದು ಪ್ರಾರ್ಥಿಸುತ್ತೇನೆ ಕೇವಲ ದರಿದ್ರನಾದುದರಿಂದ ಇನ್ನುಮೇಲೆ ನಮ್ಮಿಬ್ಬರ ಸಮಾಗಮವುಂಟಾಗುವುದು ನಿಶ್ಚಯವಿಲ್ಲ ಆದುದರಿಂದ ನಿಮ್ಮನ್ನು ಬಿಟ್ಟಮೇಲೆ ದುಃಖಪಡುವುದಕ್ಕಿಂತಲೂ ಈಗಲೆ ನಿಮ್ಮನ್ನು ಬೇಡಿಕೊಳ್ಳುವುದೊಳ್ಳಿತೆಂದು ಬಗೆದು ಕೂಗಿದೆನು ಹೀಗೆ ಕೇಳಿದುದಕ್ಕೆ ಪರ್ಯಾಯವೆಣಿಸಿ ನನ್ನಲ್ಲಿ ಕೋಪಗೊಳ್ಳದೆ ನನ್ನನ್ನು ಸಂತುಷ್ಟನನ್ನಾಗಿ ಮಾಡುವುದು ನಿಮ್ಮ ಧರ್ಮ ” ಎಂದು ಪ್ರಾರ್ಥಿಸಿದನು. ಸನ್ಯಾಸಿಯು ಅವನ ಮಾತುಗಳನ್ನು ಕೇಳಿ ನಕ್ಕು “ ಎಲೈ ತಮ್ಮ ! ಇದಕ್ಕಾಗಿ ಇಷ್ಟು ದೈನ್ಯದಿಂದ ಬೇಡಿಕೊಳ್ಳುವುದೇಕೆ ? ಆಗಲಿ ಕೊಡುವೆನು ” ಎಂದು ತನ್ನ ಹತ್ತು ಎತ್ತುಗಳಲ್ಲಿ ಐದನ್ನು ಹೊಡೆದುಕೊಟ್ಟನು. ಮುದ್ದುರಂಗನು ಇಷ್ಟು ಸುಲಭವಾಗಿ ತನ್ನ ಕೋರಿಕೆಯು ಕೈಕೂಡುವುದೆಂದು ಬಗೆದಿರಲಿಲ್ಲ ಆದುದರಿಂದ ತಾನು ಕೇಳಿದೊಡನೆಯೇ ಆ ಸನ್ಯಾಸಿಯು ಸಮ್ಮತಿಸಿ ಐದೆತ್ತುಗಳನ್ನು ಕೊಟ್ಟುದರಿಂದ ಬಹಳವಾದ ಸಂತೋಷವನ್ನು ಹೊಂದಿ ಆ ಎತ್ತುಗಳನ್ನು ತನ್ನ ಕಡೆಗೆ ಸೇರಿಸಿಕೊಂಡು, ಆತನ ಪರೋಪಕಾರ ಬುದ್ಧಿಯನ್ನು ಪ್ರಶಂಸಿಸಿ ನಮಸ್ಕರಿಸಿ ಹಿಂದಿರುಗಿದನು ಸನ್ಯಾಸಿಯು ತನ್ನ ಐದು ಎತ್ತುಗಳನ್ನು ಹೊಡೆದುಕೊಂಡು ಮುಂದರಿದನು.

ಮುದ್ದುರಂಗನಿಗೆ ಅಷ್ಟಕ್ಕೆ ತೃಪ್ತಿಯಾಯಿತೇ ? ನಿರಾಯಾಸವಾಗಿ ಹದಿನೈದು ಹೇರುಗಳ ನಿಕ್ಷೇಪವು ಸಿಕ್ಕಿದೆಯೆಂದು ಬಗೆದು ನಿರಾಶನಾದನೆ ? ಇಲ್ಲ ಇಲ್ಲ ! ಆ ಸನ್ಯಾಸಿಯು ಹತ್ತುಹನ್ನೆರಡು ಗಜಗಳದೂರ ಹೋದನೋ ಇಲ್ಲವೋ

ಅವನು ಮತ್ತೆ ಯಾವುದನ್ನೋ ಆಲೋಚಿಸಿ ಆತನನ್ನು ಕರೆದು ನಿಲ್ಲಿಸಿ " ಅಣ್ಣಾ ! ಒಂದು ಮಾತು ಸಿಟ್ಟುಗೊಳ್ಳದೆ ಕೇಳಿ ಆಲೋಚಿಸಿ ನೋಡಲು ನಿಮ್ಮ ಮಹಿಮೆಯು ಅತ್ಯದ್ಭುತವಾದುದು ಭೂಗರ್ಭದಲ್ಲಿರುವ ಸಮಸ್ತ ನಿಧಿಗಳನ್ನರಿಯುವ ಶಕ್ತಿಯು ನಿಮಗಿದೆ ಅವುಗಳನ್ನು ವಶಪಡಿಸಿಕೊಳ್ಳುವ ಮಹಾಪ್ರಭಾವವು ಇಷ್ಟಪಟ್ಟಾಗ ಎಲ್ಲಿಯೆಂದರೆ ಅಲ್ಲಿ ಎಷ್ಟೆಂದರೆ ಅಷ್ಟು ನಿಧಿಗಳನ್ನು ನೀವು ಪಡೆಯಬಲ್ಲಿರಿ ಇದಲ್ಲದೆ ಸನ್ಯಾಸವನ್ನು ಪಡೆದಿರುವ ನಿಮಗೆ ಧನವೇತಕ್ಕೆ ? ಧನವನ್ನು ತೆಗೆದುಕೊಂಡುಹೋಗಿ ನೀವೇನು ಮಾಡುವಿರಿ ? ಸಾಸಾದರೋ ಮಕ್ಕಳೊಂದಿಗ ? ನನ್ನನ್ನು ಕಾಪಾಡುವುದಕ್ಕೆ ಕೈಗಟ್ಟಿದ ನೀವೀಗ ಅದೇ ಬುದ್ಧಿಯನ್ನು ಸ್ಥಿರವಾಗಿಟ್ಟುಕೊಂಡು ನಿಮ್ಮಲ್ಲಿ ಉಳಿದಿರುವ ಐದು ಹೇರುಗಳನ್ನೂ ನನಗೆ ಕೊಟ್ಟು ಸಂರಕ್ಷಿಸಬೇಕೆಂದು ಬೇಡುವೆನು ದಾರಿದ್ರ್ಯದೋಷದಿಂದ ಹೀಗೆ ಕೇಳಿದೆನಲ್ಲದೆ ಬೇರೆಯಿಲ್ಲ ಮತ್ತೊಬ್ಬರನ್ನಾದರೆ ನಾನು ಕೇಳುತ್ತಿರಲಿಲ್ಲ ನೀವು ಆಶೆಯಿಲ್ಲದವರು ಯೋಗ್ಯರು ನನ್ನಲ್ಲಿ ಕಾರಣವಿಲ್ಲದೆ ಕರುಣವನ್ನು ತೋರಿಸಿದವರು ಆದುದರಿಂದ ಶಂಕೆಯಿಲ್ಲದೆ, ಕೇಳಿಕೊಂಡೆ ನನ್ನ ಮನೋರಥವನ್ನು ಸಫಲಗೊಳಿಸುವಿರೆಂದು ನಂಬಿಕೆಯು ನನಗೆ ದೃಢವಾಗಿರುವುದು ಮಕ್ಕಳಿಗೆ ತಾಯಿಯಾದರೂ ಕೇಳದಿದ್ದರೆ ಕೊಡುವುದಿಲ್ಲವಷ್ಟೆ ? ಆದುದರಿಂದ ನನ್ನ ಅಪೇಕ್ಷೆಯನ್ನು ತಿಳಿಸದಿರುವುದು ಉಚಿತವಲ್ಲವೆಂದು ಕೇಳಿರುವೆನು ಇನ್ನು ತಮ್ಮ ಚಿತ್ತ " ಎಂದು ನುಡಿದನು.

ಸನ್ಯಾಸಿಗೆ ಆಶ್ಚರ್ಯವಾಯಿತು ಮುಕ್ಕಾಲುಪಾಲಿನ ಧನವನ್ನು ಕೊಟ್ಟರೂ ಅವನ ಆಸೆಯು ತೀರದಿದ್ದುದರಿಂದ ಇವನು ದುರಾಶೆಯೆಂದು ತಿಳಿದುಕೊಂಡನು ಆದರೂ ಸ್ವಲ್ಪವೂ ಕೋಪಮಾಡಿಕೊಳ್ಳದೆ " ಅಯ್ಯೋ ! ಪಾಪ ! ಬಡವನು ಹೋಗಲಿ ! ಕೊಟ್ಟುಬಿಡುವೆನು ಬದುಕಿಕೊಳ್ಳಲಿ ನಾನು ಮತ್ತೆಲ್ಲಿಯಾದರೂ ನಿಕ್ಷೇಪವನ್ನು ಸಂಪಾದಿಸಬಲ್ಲೆನು " ಎಂದು ತನ್ನ ಮನಸ್ಸಿನಲ್ಲಿ ಭಾವಿಸಿ " ಎಲೈ ತಮ್ಮಾ ! ಏನೋ ಬಹಳವಾಗಿ ಆಸೆಪಟ್ಟಿರುವೆ ತೆಗೆದುಕೊ ಆದರೆ ಧನವನ್ನು ದುರ್ವಿನಿಯೋಗಪಡಿಸಬೇಡ ಅದನ್ನು ಗೋಪ್ಯವಾಗಿ ಕಾಪಾಡಬೇಕು. " ನವಿತ್ತಂದರ್ಶಯೇತ್ಪ್ರಾಜ್ಞಃ ಕಸ್ಯಚಿತ್ಸ್ವಲ್ಪಮಪ್ಯಹೋ | ಮುನೇರಪಿಯತಸ್ತಸ್ಯ ದರ್ಶನಾಚ್ಚಲತೇಮನಃ ‖ " ಎಂಬಂತೆ ಎಂತಹ ಮುನಿಗಾದರೂ ಧನವನ್ನು ಕಂಡಮಾತ್ರದಿಂದಲೇ ಅವನ ಮನಸ್ಸು ಚಲಿಸುತ್ತದೆ ಆದುದರಿಂದ ಬುದ್ಧಿವಂತನಾದವನು ಯಾವ ಮನುಷ್ಯನಿಗಾಗಲಿ ಸ್ವಲ್ಪವಾದರೂ ಧನವನ್ನು ತೋರಿಸಬಾರದು ಮತ್ತು ಅದು ಸ್ತ್ರೀಸ್ವರೂಪಕ್ಕಿಂತಲೂ ಮೋಹಕರವಾದುದು ಕೇಳು. " ಸ್ತ್ರೀರೂಪಂಮೋಹಕಂಪುಂಸೋ ಯೂನಏವಭವೇತ್ಕ್ಷಣಂ | ಧನಂಸ್ತ್ರೀಬಾಲವೃದ್ಧಾನಾಂ ಷಂಡಾನಾಮಪಿಸರ್ವದಾ ‖ " ಅಂದರೆ ಸ್ತ್ರೀರೂಪವು ಪ್ರಾಯ

ವುಳ್ಳ ಪುರುಷನಿಗೆ ಮಾತ್ರ ಒಂದೆರಡು ತಾಸಿನವರೆಗೆ ಮೋಹವನ್ನುಂಟು ಮಾಡು ವುದು, ಧನವಾದರೋ ಸ್ತ್ರೀಯರಿಗೂ ಹುಡುಗರಿಗೂ ಮುದುಕರಿಗೂ ಕಡೆಗೆ ನಪುಂಸಕರಿಗೂ ಮೋಹವನ್ನುಂಟು ಮಾಡುವುದು, ಆದುದರಿಂದಲೇ ನಿನ್ನ ಧನ ವನ್ನು ಎಂತಪ್ಪ ಸ್ನೇಹಿತರಿಗಾಗಲಿ ತೋರಿಸಬೇಡ ಎಚ್ಚರಿಕೆ ›› ಎಂದು ಹೇಳಿ ತನ್ನ ಐದು ಹೇರುಗಳ ಧನವನ್ನೂ ಎತ್ತುಗಳೊಡನೆ ಕೊಟ್ಟು ಅಪಾರಹಿತನಾಗಿ ಭಗವತ್ಸ್ವರೂಪವನ್ನು ಧ್ಯಾನಿಸುತ್ತ ಹೊರಟುಹೋದನು, ಆ ಎತ್ತುಗಳನ್ನೂ ಹೊಡೆದುಕೊಂಡು ಆ ಮುದ್ದುರಂಗನು ತನ್ನ ದಾರಿಯನ್ನು ಹಿಡಿದು ಇಪ್ಪತ್ತು ಹೇರುಗಳ ಧನವು ದೊರಕಿದುದಕ್ಕಾಗಿ ಆನಂದಪರವಶನಾಗಿ ಹತ್ತು ಮಾರು ದೂರ ಹೋದನು ಆಗ ಅವನಿಗೆ ಮತ್ತೊಂದು ಆಲೋಚನೆಯು ಹೊರಟಿತು ಮರಳಿಯಾ ಸನ್ಯಾಸಿಯನ್ನು ಕೂಗಿದನು ಆತನು “ ಇದೇನು ಮತ್ತೆ ಕರೆಯುತ್ತಿ ರುವನು ? ಇಪ್ಪತ್ತು ಎತ್ತುಗಳೂ ಪೂರ್ಣನಿಕ್ಷೇಪವೂ ಅವನಿಗೆಯೇ ಕೊಟ್ಟುಬಿ ಟ್ಟೆನಲ್ಲ ಮತ್ತೇನವನಿಗೆ ನನ್ನಿಂದ ಬೇಕಾಗಿರಬಹುದು ಆಗಲಿ ಕೇಳುವೆನು ›› ಎಂದು ನಿಂತನು. ಆಗ ಆ ಕಾಷ್ಠವಿಕ್ರಯಿ ಅಲ್ಲಿಗೆ ಬಂದು “ ಅಣ್ಣಾ ! ನಮ ಸ್ಕರಿಸಿ ಮತ್ತೊಂದನ್ನು ಬೇಡುವೆನು ಹೇಗೂ ಉಪಕಾರವನ್ನು ಮನಃಪೂರ್ವಕ ವಾಗಿಯೇ ಮಾಡಿದಿರಿ ಅದು ಪೂರ್ಣವಾಗುವುದಕ್ಕೆ ಇನ್ನು ಸ್ವಲ್ಪ ಉಳಿದಿದೆ ಅದನ್ನು ಸಂಪೂರ್ಣವಾಗಿ ಮಾಡಿರಿ ಯಾರಿಗೆಯೇ ಆಗಲಿ ಅಸಂತುಷ್ಟಿಯಾಗು ವಂತೆ ಅರ್ಧಾನ್ನವನ್ನು ಬಡಿಸಬಾರದೆಂದು ಹಿರಿಯರು ಹೇಳುವರು ನಿಮಗೆ ತಿಳಿ ಯದ ಧರ್ಮಗಳನ್ನು ನಾನು ಹೇಳಬಲ್ಲೆನೆ ? ಈಗಳೊಂದಾಲೋಚನೆಯು ನನ್ನ ಮನಸ್ಸಿನಲ್ಲಿ ತೋರಿದುದರಿಂದ ನಾನು ತಮ್ಮನ್ನು ಕರೆದೆನು ಕೇಳಿರಿ· ನನಗೆ ನಿರ್ವ್ಯಾಜವಾದ ಕರುಣದಿಂದ ಅಪಾರಧನವನ್ನು ಕೊಟ್ಟಿರಲ್ಲವೆ ಆದರೆ ಇದು ಸ್ಥಿರವಾಗಿ ನಿಲ್ಲತಕ್ಕುದಲ್ಲ ಧನಾಪಹರಣಕ್ಕಾಗಿ ಕಳ್ಳರು ದಾರಿನೋಡುತ್ತಿರುವರು ರಾಜರು ಅದನ್ನು ಕಸಿದುಕೊಳ್ಳಲು ನಿರೀಕ್ಷಿಸುವರು ಒಂದುವೇಳೆ ಬೆಂಕಿಬಿದ್ದರೆ ಸರ್ವನಾಶವಾಗುವುದು ಈ ಉಪದ್ರವಗಳಿಂದ ತಪ್ಪಿಸಿಕೊಳ್ಳುವುದು ಅಸಾಧ್ಯ ಯಾರಿಗೂ ತೋರಿಸಬೇಡವೆಂದು ಹೇಳಿದಿರಲ್ಲವೆ ? ಹೇಳದಿದ್ದರೆ ತಾನೆ ಆ ಧನ ಸ್ಥಿತಿಯು ವ್ಯಕ್ತವಾಗದಿರುವುದೆ ? ನಾನು ಕಟ್ಟಿಗೆಯನ್ನು ಮಾರುವ ವೃತ್ತಿ ಯನ್ನು ಬಿಟ್ಟಬಳಿಕ ಜೀವಿಕೆಯನ್ನು ನಡೆಯಿಸಿಕೊಳ್ಳುವಾಗಳೆ ಇವನು ವೃತ್ತಿ ಯನ್ನು ಬಿಟ್ಟು ಜೀವಿಸುತ್ತಿರುವುದು ಹೇಗೆಯೆಂಬ ಸಂಶಯವೆಲ್ಲರಿಗೂ ಉಂಟಾ ಗುವುದಲ್ಲವೆ ? ಆಗ ರಾಜಪುರುಷರಾದಿಯಾಗಿ ನನ್ನಮೇಲೆ ಎಲ್ಲರೂ ಕಣ್ಣಿಡುವ ರಲ್ಲವೆ ? ಪ್ರಥಮದ ದರ್ಶನದಲ್ಲಿಯೇ ನನ್ನನ್ನು “ ತಮ್ಮಾ ! ›› ಎಂದು ಸಂಬೋ ಧಿಸಿದಿರಿ ಆದುದರಿಂದ ತಮ್ಮನನ್ನು ಉದ್ಧರಿಸುವುದು ತಮ್ಮ ಕರ್ತವ್ಯವಲ್ಲವೆ ? ಯತಿಶ್ರೇಷ್ಠರೇ ! ಒಂದುವೇಳೆ ನನ್ನ ಅಜಾಗ್ರತೆಯಿಂದಲೋ, ದೌರ್ಭಾಗ್ಯಬಲ

ದಿಂದಲೋ ಈ ದ್ರವ್ಯವು ಹೋದರೆ ನಾನು ಮೊದಲಿನಂತೆ ದಾರಿದ್ರ್ಯದುಃಖವನ್ನನುಭವಿಸುತ್ತ ಕಟ್ಟಿಗೆಯನ್ನು ಮಾರಿಯೇ ಜೀವಿಸಬೇಕಾಗುವ ದುಃಸ್ಥಿತಿಯು ಏರ್ಪಡದೆ ತಪ್ಪುವುದಿಲ್ಲ ತಾವು ನನ್ನನ್ನು ನಿರಂತರ ಭಾಗ್ಯವಂತನನ್ನಾಗಿ ಮಾಡುವುದಕ್ಕೆ ಮನಃಪೂರ್ವಕವಾಗಿ ಗಟ್ಟಿಯಾದ ಪಟ್ಟನ್ನೆ ಹಿಡಿದಿರಿ ಈ ಸಂದರ್ಭಗಳನ್ನೆಲ್ಲ ವಿವೇಕಪೂರ್ಣತೆಯಿಂದ ವಿಮರ್ಶಿಸಿ ನಿಮ್ಮಬಳಿಯಿರುವ ಕಾಡಿಗೆಯ ಬರಣಿಯನ್ನು ನನಗೆ ಕೊಟ್ಟು ಕಾಪಾಡಬೇಕು ಅದು ನನ್ನಬಳಿಯಿದ್ದರೆ ನನ್ನ ಐಶ್ವರ್ಯವೆಲ್ಲವೂ ಸಶಿಸಿದರೂ ನಾನು ಭಯಪಡಬೇಕಾದುದಿಲ್ಲ ಅದರ ಸಹಾಯದಿಂದ ನಿಧಿಗಳನ್ನು ಕಂಡುಹಿಡಿದು ಸ್ವೇಚ್ಛೆಯಾಗಿ ತಂದು ಸುಖವಾಗಿ ಕಾಲವನ್ನು ಕಳೆವೆನು. ನಾನು ಮೃತನಾಗುವ ಪರ್ಯಂತರವೂ ನಿಮ್ಮ ಉಪಕಾರವನ್ನು ಮರೆಯದೆ ಸ್ಮರಿಸುತ್ತಿರುವೆನು. ಮನಸ್ಸಿನಲ್ಲಿಟ್ಟುಕೊಂಡು ಕೊರೆಯಬಾರದೆಂದು ನನ್ನ ಕೋರಿಕೆಯನ್ನರಿಕೆ ಮಾಡಿರುವೆನು. ನನ್ನ ಮನೋರಥವನ್ನು ದಯವಿಟ್ಟು ಸಫಲ ಗೊಳಿಸಿದರೆ ಒಂದು ಕುಟುಂಬವನ್ನು ಶಾಶ್ವತವಾಗಿ ಸಂರಕ್ಷಿಸಿದ ಪುಣ್ಯವನ್ನು ತಾವು ಪಡೆವಿರಿ." ಎಂದು ಭಯಭಕ್ತಿಗಳನ್ನು ತೋರ್ಪಡಿಸಿ ಆತನಿಗೆ ಮರುಕವುಂಟಾಗುವಂತೆ ಬೇಡಿಕೊಂಡನು. ಆ ಅಂಜನಕರಂಡವನ್ನು ಅವನಿಗೆ ಕೊಡಲು ಆ ಸಂನ್ಯಾಸಿಗೆ ಮನಸ್ಸಿರಲಿಲ್ಲ, "ಅಕಟಕಟಾ! ನಾನೀ ಅಂಜನದ ಬರಣಿಯನ್ನಿವನಿಗೆ ಕೊಟ್ಟುಬಿಟ್ಟರೆ ಮತ್ತೆ ಇದನ್ನು ಮಾಡುವುದಕ್ಕೆ ಒಂದೆರಡು ಸಂವತ್ಸರಗಳಿಗೆ ಕಡಿಮೆ ಯಾಗ ವಹಾಗಿಲ್ಲ, ಅರ್ಧವನ್ನು ಕೊಡೋಣೆಂದರೆ ಇವನು ಒಪ್ಪುವ ಹಾಗೆ ತೋರಲಿಲ್ಲ, ಏನುಮಾಡಲಿ? ಇವನಿಷ್ಟು ವಿಧಗಳಿಂದ ಪ್ರಾರ್ಥಿಸುತ್ತಿರುವುದರಿಂದ ನನ್ನ ಮನಸ್ಸು ಕರಗಿಹೋಯಿತು. ಇವನು ಸೌಖ್ಯವಾಗಿರುವುದಕ್ಕೆ ಯಾವ ಕೆಲಸವಾದರೂ ಮಾಡತಕ್ಕುದೇ ಸರಿ." ಎಂದು ನಿಶ್ಚಯಿಸಿ ಆ ಬರಣಿಯನ್ನು ಕೊಡುವುದಕ್ಕೆ ಮನಸ್ಸು ಮಾಡಿ ಅವನನ್ನು ಕರೆದು, ಕೃಪಾದೃಷ್ಟಿಯಿಂದ ಅವನನ್ನು ನೋಡಿ ನಗುತ್ತ ಇಂತೆಂದನು:—

ತಮ್ಮಾ! ನಿನ್ನ ಅಪೇಕ್ಷೆಯಂತೆ ಕಾಡಿಗೆಯ ಬರಣಿಯನ್ನು ಕೊಡುವೆನು, ಆದರೆ ಇದರಲ್ಲಿ ಒಂದು ರಹಸ್ಯವಿದೆ, ಅದನ್ನು ನಿನಗೆ ಹೇಳದಿದ್ದರೆ ಅಪಾಯವು ಸಂಭವಿಸುವುದು, ಆದುದರಿಂದ ಆ ರಹಸ್ಯವನ್ನು ಹೇಳುವೆನು, ಕೇಳು, ಈ ಅಂಜನವನ್ನು ಬಲಗಣ್ಣಿಗೆ ಮಾತ್ರವೇ ಉಪಯೋಗಿಸಬೇಕು, ಉಪಯೋಗಿಸುವ ಪ್ರಮಾಣವು ಸಾಸುವೆಯ ಕಾಳಿನಷ್ಟೇ, ಹಾಗೆ ಮಾಡಿದರೆ ಭೂಗರ್ಭದಲ್ಲಿ ಎಲ್ಲೆಲ್ಲಿರುವ ನಿಧಿಗಳು ನಿನಗೆ ಕಾಣಿಸುವುವು. ಎಡದ ಕಣ್ಣಿಗೆ ಅದನ್ನಿಟ್ಟುಕೊಳ್ಳಬಾರದು. ಅವಿವೇಕದಿಂದ ಒಂದುವೇಳೆ ಎಡಗಣ್ಣಿಗೆ ಇಟ್ಟುಕೊಂಡರೆ ಎರಡು ಕಣ್ಣುಗಳಿಗೂ ಅಂಧತ್ವವು ಪ್ರಾಪ್ತವಾಗುವುದು. ಬಳಿಕ

ಯಾವ ಔಷಧದಿಂದಲಾಗಲಿ ಆ ಕುರುಡು ಗುಣಕ್ಕೆ ಬರುವುದಿಲ್ಲ. ವಸ್ತುವಿನ ಗುಣದೋಷಗಳನ್ನು ತಿಳಿಸದಿದ್ದರೆ ವಿಪರ್ಯಾಸವಾಗುವುದೆಂದು ಮೊದಲೆ ನಿನಗೆ ತಿಳಿಸಿರುತ್ತೇನೆ. ಇಗೋ ಬರಣಿಯನ್ನು ತೆಗೆದುಕೋ, ಕೆಲವು ಮಂತ್ರಗಳನ್ನು ಉಪದೇಶಿಸುವೆನು, ಅದನ್ನು ಹತ್ತುಸಾವಿರ ಸಾರಿ ಪುನಶ್ಚರಣೆ ಮಾಡು, ಆಗ ನಿನಗೆ ಸಿದ್ಧಿಸುವುದು, ಒಂದುವೇಳೆ ನಿಧಿಗಳನ್ನು ಕಾಯ್ದುಕೊಂಡಿರುವ ಭೂತಪ್ರೇತಪಿಶಾಚಗಳ ದರ್ಶನವಾಗುವುದುಂಟು, ಆಗ ಮಂತ್ರವನ್ನುಚ್ಚರಿಸು ವುದರಿಂದ ಅವು ಮಾಯವಾಗುವುವು ” ಎಂದು ನುಡಿದು ಬರಣಿಯನ್ನವನ ವಶಕ್ಕೆ ಕೊಟ್ಟನು

ದುರಾಶಾಪಿಶಾಚಗ್ರಸ್ಥನಾದ ಅವನಿಗೆ ಬುದ್ಧಿಯು ಹೀನವಾಯಿತು, ಅದೃಷ್ಟವು ತೊಲಗುವಕಾಲ ಬಂದಿತು. ವಿಧಿವಿಲಾಸವನ್ನು ಮೀರಿದವರಾರು? ಸನ್ಯಾಸಿಯು ಕೊಟ್ಟು, ಬರಣಿಯನ್ನು ಎರಡು ಕೈಗಳಿಂದಲೂ ತೆಗೆದುಕೊಂಡನು. ಸಂತೋಷಪರವಶನಾದನು, ಸನ್ಯಾಸಿಯನ್ನು, “ಅಣ್ಣಾ! ನೀವು ನನ್ನ ಸಮಕ್ಷ ದಲ್ಲಿರುವಾಗಲೇ ಒಂದು ಸಾರಿ ಈ ಕಾಡಿಗೆಯನ್ನು ಕಣ್ಣಿಗಿಟ್ಟು ನೋಡುವೆನು, ನಿಕ್ಷೇಪಾದಿಗಳು ಹೇಗೆ ಕಾಣುವುವೋ ಪರೀಕ್ಷಿಸುವೆನು, ನಿಮ್ಮ ಮುಂದೆಯೇ ಅನುಭವಕ್ಕೆ ಬಂದರೆ ಒಳ್ಳೆಯದಲ್ಲವೆ? ಎಂದು ಬರಣಿಯನ್ನು ತೆರೆದು ಸಾಷುವೆ ಯನ್ನು, ಕಾಡಿಗೆಯನ್ನು ತೆಗದು ಬಲಗಣ್ಣಿಗೆ ಹಚ್ಚಿಕೊಂಡನು, ಒಡನೆಯೇ ಅನೇಕ ರತ್ನಗಳೂ, ಚಿನ್ನವೂ, ಚಿನ್ನದ ನಾಣ್ಯಗಳೂ ಅಸಂಖ್ಯಾತವಾಗಿ ಕಾಣಿಸಿ ದುವು. “ಅಂತಪ್ಪ ಮಹಾಭಾಗ್ಯವನ್ನು ಮುಂದೆ ಪಡೆಯಬಹುದಲ್ಲವೆ? ಎಂದು ಮಹಾನಂದವನ್ನು ಹೊಂದಿದನು, ಆಗ ಸನ್ಯಾಸಿಯು, “ಎಲೈ ಸಹೋ ದರನೇ! ಇನ್ನು ಕಣ್ಣನ್ನು ತೊಳೆದುಕೊಂಡು ಬರಣಿಯನ್ನು ಭದ್ರವಾಗಿಟ್ಟು ಕೊಂಡು ಎತ್ತುಗಳನ್ನೂ ಹಣದ ಹೇರುಗಳನ್ನೂ ತೆಗೆದುಕೊಂಡು ಮನೆಗ ತೆರಳು, ನಾನು ಹೇಳಿವ ಮಾತುಗಳೆಲ್ಲವೂ ನೆನಪಿರಲಿ, ಇನ್ನು ನಾನು ಹೊರಡು ವೆನು, ಎಂದು ಹೇಳುತ್ತಿರುವಾಗಲೆ ಆ ಮೂಢನು ತನ್ನಲ್ಲಿ:—“ಆಹಾ! ಈ ಕಾಡಿಗೆಯ ಮಹಿಮೆಯು ಅತ್ಯದ್ಭುತವಾದುದು.” ಆದರೆ ಎಡಗಣ್ಣಿಗೆ ಮಾತ್ರ ಹಚ್ಚಿಕೊಳ್ಳಬಾರದೆಂದು ಸನ್ಯಾಸಿಯು ಒಂದು ಮರ್ಮವನ್ನು ಕಲ್ಪಿಸಿರುವನು, ಇದು ಸುಳ್ಳೆಂದು ತೋರುವುದು, ಒಂದೇ ಕಾಡಿಗೆಯನ್ನು ಒಂದು ಕಣ್ಣಿಗೆ ಹಚ್ಚಿದರೆ ಒಳ್ಳೆಯದಾಗುವುದೇನು? ಮತ್ತೊಂದು ಕಣ್ಣಿಗೆ ಹಚ್ಚಿದರೆ ಕೆಟ್ಟದಾ ಗುವುದೇನು? ಎಲ್ಲಿಯಾದರೂ ಉಂಟೆ? ಈ ಮಾತನ್ನು ನಂಬುವುದು ತಾನೆ ಹೇಗೆ? ಎಂತಹ ವಿವೇಕ ಹೀನನಾದರೂ ಇಂತಹ ಮಾತುಗಳನ್ನು ನಂಬುವನೆ? ಇದರ ರಹಸ್ಯವು ಹೀಗಿರಬಹುದು, ಬಲಗಣ್ಣಿಗೆ ಹಚ್ಚಿಕೊಂಡರೆ ನಿಧಿಗಳು ಕಾಣುವುವು ಎಡಗಣ್ಣಿಗೆ ಹಚ್ಚಿಕೊಂಡರೆ ಅವೆಲ್ಲವೂ ಸ್ವಾಧೀನವಾಗುವುವು

ಇಷ್ಟೇ ಇದರ ರಹಸ್ಯವು ಸನ್ಯಾಸಿಯು ಈ ರಹಸ್ಯವನ್ನು ತಿಳಿಸದೆ "ಕಣ್ಣಿಗೆ ಗೋಚರವಾದುದು ಇವನಿಗೆ ವಶವಾಗದಿರಲಿ, ಎಂಬ ದುರ್ಭಾವನೆಯಿಂದ ಹೀಗೆ ಹೇಳಿರುವನು ಇವನು ಕಪಟಾತ್ಮನು ವಂಚಕನು ನಾನು ಧನಿಕನಾಗುವುದಕ್ಕೆ ಇಷ್ಟವಿಲ್ಲದೆ ಇವನು ಹೀಗೆ ಹೇಳಿರುವನು ಕಾಡಿಗೆಯು ನನ್ನ ಹಸ್ತಗತವಾಯಿತು ಇನ್ನು ನಾನಿದನ್ನು ನನ್ನ ಇಷ್ಟಾನುಸಾರವಾಗಿ ಉಪಯೋಗಿಸಿಕೊಳ್ಳುವೆನು ಇವನಾಜ್ಞೆಗೆ ನಾನೇಕೆ ಒಳಪಡಬೇಕು? ವಾಮನೇತ್ರಕ್ಕೂ ಹಚ್ಚಿಕೊಂಡು ಅದರಿಂದುಂಟಾಗುವ ವಿಶೇಷಗಳನ್ನೂ ತಿಳಿಯುಕೊಳ್ಳುವೆನು" ಎಂದಾಲೋಚಿಸಿ "ಅಣ್ಣಾ! ಒಂದಂಜನದಲ್ಲಿ ಎರಡು ಗುಣಗಳೆಲ್ಲಿಯಾದರೂ ಇರುವುದುಂಟೆ? ಯಾವುದೋ ಒಂದು ಮರ್ಮವಿರುವುದು ಅದನ್ನು ಎಡಗಣ್ಣಿಗೂ ಇಟ್ಟುಕೊಂಡು ಪರೀಕ್ಷಿಸಬೇಕೆಂದು ಬಗೆದಿರುವೆನು" ಎಂದು ನುಡಿದು ಆ ಸನ್ಯಾಸಿಯು ಕೈಗಳನ್ನು ಹಿಡಿದುಕೊಂಡು ಬೇಡವೆಂದೂ ಇದರಿಂದ ನೀನು ಚಿರಕಾಲದವರೆಗೆ ಕೇಡನ್ನನುಭವಿಸುವೆಯೆಂದೂ ಎಷ್ಟು ಸಾರಿ ಹೇಳಿದರೂ ಆ ಮೂಢನು ಕೈಗಳನ್ನು ಬಿಡಿಸಿಕೊಂಡನು. ಆಗ ಆ ಸನ್ಯಾಸಿಯು ಕಂಬನಿಕರೆಯುತ್ತ "ಎಲಾ ತಮ್ಮಾ! ನಿನಗೆಷ್ಟೋ ಉಪಕಾರವನ್ನು ಮಾಡಿರುವೆನು ನಿನಗೆ ಕೇಡು ಸಂಭವಿಸಿದರೆ ನೋಡಲಾರೆನು ನಿನಗೆ ಕೆಟ್ಟುದಾಗುವುದು ನನಗಿಷ್ಟವಿಲ್ಲ ನನ್ನ ಮಾತನ್ನು ಕೇಳು ಸಾಹಸವನ್ನು ಮಾಡಬೇಡ" ಎಂದು ನುಡಿದು ಮತ್ತೆ ಎರಡು ಕೈಗಳನ್ನೂ ಬಿಗಿಯಾಗಿ ಹಿಡಿದನು ಮೂರ್ಖನಾದ ಆ ಕಟ್ಟಿಗೆ ಮಾರುವನು ಸನ್ಯಾಸಿಯನ್ನು ಲಕ್ಷ್ಯಮಾಡದೆ "ನಿಮ್ಮ ಉಪಾಯಗಳೆಲ್ಲವನ್ನೂ ಒಲ್ಲೆ ಕಣ್ಣಿಗೆ ಕಂಡ ನಿಧಿಯು ವಶವಾಗದಿರಲೆಂದು ಎಡಗಣ್ಣಿಗೆ ಕಾಡಿಗೆಯನ್ನು ಹಚ್ಚಬೇಡವೆಂದು ನೀವು ಹೇಳಿದುದು ಬಿಡಿಬಿಡಿ ಎಂದು ಗರ್ಜಿಸುತ್ತ ಕೈಗಳನ್ನು ಬಿಡಿಸಿಕೊಂಡು ದೂರಕ್ಕೆಸರಿದು ಮತ್ತೆಲ್ಲ ಬರುವನೋ ಈ ಸನ್ಯಾಸಿಯೆಂದು ಬಲುಬೇಗನೆ ಕಾಡಿಗೆಯನ್ನು ತೆಗೆದು ಎಡಗಣ್ಣಿಗೆ ಇಟ್ಟುಕೊಂಡ ಒಡನೆಯೇ ನೋಟವು ನಿಂತುಹೋಯಿತು ಒಂದೆರಡು ನಿಮಿಷದಲ್ಲಿಯೇ ಕಣ್ಣುಗುಡ್ಡೆಗಳು ಕರಗಿದುವು ಕಣ್ಣೆರಡೂ ಕುರುಡಾದುವು ಸನ್ಯಾಸಿಯು ಏನು ತಾನೆ ಮಾಡಿಯಾನು? "ಅಕಟಾ! ಈ ಮೂರ್ಖನಿಗೆ ನಾನು ಶತ್ರುವಾದೆನಲ್ಲ! ದುರ್ಯೋಧನನಿಗೆ ಸಮುಪದೇಶವನ್ನು ಮಾಡಿದ ಭೀಷ್ಮದ್ರೋಣರಿಗೆ ಆದಗೌರವವೇ ನನಗೂ ಆಯಿತಲ್ಲ!" ಎಂದು ಬಹಳವಾಗಿ ಮರುಗಿದನು. ಮದ್ದುರಂಗನು ತನ್ನ ದುಸ್ಸಾಹಸದಾಯ ದುರ್ದಶೆಯನ್ನು ಹೊಂದಿ "ಅಯ್ಯೋ! ಕೆಟ್ಟೆನಲ್ಲ! ಹೇಳಿದ ಮಾತನ್ನು ಕೇಳದೆ ಕಾಡಿಗೆಯನ್ನು ಎಡಗಣ್ಣಿಗೆಹಚ್ಚಿ ಕುರುಡನಾದೆನಲ್ಲ! ಅಕಟಾ! ಅಣ್ಣಾ! ಪ್ರತ್ಯಕ್ಷ! ನಿಮ್ಮ ಮಾತುಗಳಲ್ಲಿ ನಂಬಿಗೆಯಿಡದೆ ಅಸತ್ಯವೆಂದು ಬಗೆದು, ನನ್ನನ್ನು ನಾನೆ ಈ ಅವಸ್ಥೆಗೆ ತಂದುಕೊಂಡೆನು ನನ್ನ ಮೂಢ

ತ್ವವು ನನ್ನನ್ನು ಕೆಡಿಸಿತು "ಅತಿಯಾಶೆ ಗತಿಗೆಡಿಸಿತು" ಎಂಬಂತಾಯ್ತು ನನ್ನ ಅಪರಾಧಗಳನ್ನು ಕ್ಷಮಿಸಿ ಕರುಣಿಸಿ ನೇತ್ರದಾನವನ್ನು ಮಾಡಿ ಪುಣ್ಯ ವನ್ನು ಪಡೆಯಿರಿ ಇದಕ್ಕೆ ತಕ್ಕಚಿಕಿತ್ಸೆಯು ನಿಮಗೆ ತಿಳಿದೇ ಇರುವುದು ಸಂಶಯವಿಲ್ಲ ನಿಮ್ಮ ಮಾತುಗಳನ್ನು ನಾನು ಅಲಕ್ಷಿಸಿದುದಕ್ಕಾಗಿ ಕೋಪಿಸ ಬೇಡಿ" ಎಂದು ಹಲವುಬಗೆಯಿಂದ ಹಲುಬಿದನು.

ಸನ್ಯಾಸಿಗೆ ಮರುಕವು ಮಾಡುವುದಕ್ಕೆ ಪ್ರತಿಯಾಗಿ ಅತ್ಯಾಗ್ರಹವುಂಟಾ ಯಿತು ತುಟಿಗಳಲುಗಿದುವು ಶಾಪವಿಡುವುದಕ್ಕೆ ಮನಸ್ಸಾಯಿತು ಸಹಜಕ್ಷಮಾ ಶೀಲನಾದುದರಿಂದ ಆ ಮನಸ್ಸನ್ನು ಬಿಗಿಹಿಡಿದು ಅವನಿಗೆ ಕಣ್ಣನ್ನು ಒರಿಸುವುದು ಅಸಾಧ್ಯವಾಗಿದ್ದುದರಿಂದ ಅವನನ್ನು ನೋಡಿ "ಎಲಾ ಬುದ್ಧಿಹೀನನೇ ! ನಿರ್ಭಾ ಗ್ಯನೆ ! ನಿತ್ಯದರಿದ್ರನಾದ ನಿನ್ನನ್ನು ಧನವಂತನನ್ನಾಗಿ ಮಾಡಬೇಕೆಂದು ಬಗೆದು ಅಪಾರವಾದ ಧನವನ್ನು ಕೊಟ್ಟುದಾಯಿತು ಅವಿವೇಕಿಯಾದ ನಿನ್ನಂತಹ ನೀಚ ನಿಗೆ ಇಂತಪ್ಪ ಸಂಪತ್ತು ದೊರೆತರೇನು ನಿಲ್ಲುವುದೆ ? ನಿನ್ನ ಹಣೆಯಲ್ಲಿ ಬ್ರಹ್ಮದೇ ವರು ಹೀಗೆ ಅಂಧನಾಗಿ ಅನ್ನವಸ್ತ್ರಗಳಿಗಿಲ್ಲದೆ ತೊಳಲಿ ಬಳಲುವಂತೆ ಬರೆದಿರಲು ಅದಕ್ಕೆ ವಿರೋಧವಾಗಿ ಹೇಗೆತಾನೆ ನಡೆದೀತು "ಹರಿಣಾಪಿಹರೇಣಾಪಿ ಬ್ರಹ್ಮ ಣಾಪಿಸುರೈರಪಿ | ಲಲಾಟಲಿಖಿತಾರೇಖಾಃ ಪರಿಮಾರ್ಷ್ಟುಂನಶಕ್ಯತೇ ||" ಎಂದು ನೀತಿಜ್ಞರು ಹೇಳಿರುವರು. ನೀನು ಇಂತಹ ದುರದೃಷ್ಟವಂತನೆಂದರಿಯದೆ ಕೇಳಿ ದಹಾಗೆಲ್ಲ ನಿನಗೆ ಕೊಟ್ಟುದು ನನ್ನ ತಪ್ಪು ನಿಷ್ಕಪಟದಿಂದ ನಾನು ನುಡಿದರೂ ಅದನ್ನು ನೆಚ್ಚದೆ ದುರಾಲೋಚನೆಯನ್ನು ಮಾಡಿ ಅತ್ಯಾಶೆಪಟ್ಟುದರಿಂದ ನಿನ್ನನ್ನು ಆಶಾಪಿಶಾಚವು ಹೀಗೆ ಕಷ್ಟಕ್ಕೆ ಗುರಿಮಾಡಿತೆಂದು ಭಾವಿಸಬೇಕಾಗಿದೆ ಬುದ್ಧಿ ಪೂರ್ವಕವಾಗಿ ನೀನಾಗಿ ತಂದುಕೊಂಡ ಕಷ್ಟಕ್ಕೆ ಈಗ ನೀನತ್ತರೆ ಫಲವೇನು ಛೀ ! ಛೀ !! ನೀಚನೇ ! ಮುಚ್ಚು ಬಾಯಿಯನ್ನು ! ನಿನ್ನ ಕಣ್ಣುಗಳು ಮತ್ತೆ ಬ ರುವಂತೆ ಮಾಡುವ ಔಷಧವು ನನ್ನಲ್ಲಿಲ್ಲ ಅಂತಹ ಶಕ್ತಿಯೂ ನನಗುಂಟಾಗುವು ದಿಲ್ಲ ನೀನು ಮೃತನಾಗುವವರೆಗೂ ಹೀಗಿರತಕ್ಕುದೇ ಅಪಾತ್ರನಾದ ನಿನಗೆ ಕೊಟ್ಟ ಈ ಭಾಗ್ಯವನ್ನು ತೆಗೆದುಕೊಂಡುಹೋಗಿ ಮತ್ತಾವನಿಗಾದರೂ ಕೊಡು ವೆನು ಎಂದು ನುಡಿದ ನನ್ನನ್ನು ನೋಡಲು ಸೈರಿಸದೆ ಮುಖದಮೇಲೆ ಉಗುಳ್ದು ಕೆನ್ನೆಗಳಮೇಲೆ ಹೊಡೆದು ಅವನಿಗೆ ಕೊಟ್ಟಿದ್ದ ಕಾಡಿಗೆಯ ಬರಣಿಯನ್ನು ತೆಗೆ ದುಕೊಂಡು ಅವನು ಬಹಳವಾಗಿ ಪ್ರಾರ್ಥಿಸಿ ಆ ಹಣವು ತನ್ನ ಮನೆಗೆ ಸೇರು ವಂತಾದರೂ ಮಾಡಬೇಕೆಂದು ಮೊರೆಯಿಟ್ಟರೂ ಕಿವಿಯಲ್ಲಿ ಹಾಕಿಕೊಳ್ಳದೆ ಧನದ ಮೂಟೆಗಳೊಡನೆ ಅವನ ಇಪ್ಪತ್ತೆತ್ತುಗಳನ್ನು ತಿರುಗಿಸಿಕೊಂಡು ತನ್ನ ದಾರಿಯನ್ನು ಹಿಡಿದು ಹೊರಟುಹೋದನು.

ಬಳಿಕ ಭಾಗ್ಯಹೀನನಾದ ಆ ಕಾಷ್ಠವಿಕ್ರಯಿಯು ತನ್ನ ಅತ್ಯಾಸೆಗೆ ತಕ್ಕ ಫಲವಾದುದನ್ನು ಬಾರಿಬಾರಿಗೆ ನೆನೆದು ದುಃಖಿಸುತ್ತ ಕುರುಡನಾದುದ

ರಿಂದ ದಾರಿಯನ್ನರಿತು ಊರಿಗೆ ಹೋಗಲಾರದೆ ದಾರಿಯಲ್ಲಿಯೇ ಕುಳಿತು ಅಳುತ್ತಿರಲು ಆ ದಾರಿಯಲ್ಲಿ ಹೋಗಿಬರುತ್ತಿದ್ದವರು ಅವನಲ್ಲಿ ಕೃಪೆಯನ್ನುತೋರಿ ಅವನನ್ನು ಕರೆದುಕೊಂಡುಹೋಗಿ ಮನೆಯಲ್ಲಿ ಬಿಟ್ಟರು. ಅವನ ಹೆಂಡತಿಮಕ್ಕಳು ನಡೆದ ಪರಿಸ್ಥಿತಿಯನ್ನು ಕೇಳಿ ಅಂತಪ್ಪ ಮಹಾನಿಕ್ಷೇಪವು ದೊರೆತಿರಲು ಬುದ್ಧಿಪೂರ್ವಕವಾಗಿ ಹೋಗಲಾಡಿಸಿಕೊಂಡುದೇ ಅಲ್ಲದೆ ಕಣ್ಣುಗಳನ್ನೂ ಹೋಗಲಾಡಿಸಿಕೊಂಡು ಮನೆಗೆಬಂದ ಅವನಲ್ಲಿ ಅಧಿಕವಾಗಿ ಮುಳಿದು, ಅವನಿಗನ್ನ ವಸ್ತ್ರಗಳನ್ನು ಕೊಟ್ಟು ಕಾಪಾಡುವುದಕ್ಕೆ ಪ್ರತಿಯಾಗಿ ಅವನನ್ನು ಮನೆಯಿಂದ ಹೊರಗಡಿಸಿದರು. ಮೊದಲು ನಿರ್ಭಾಗ್ಯನಾದ ಅವನಿಂದ ಸಂರಕ್ಷಿಸಲ್ಪಡುತ್ತಿದ್ದ ಸತೀಸುತರೇ ಅವನಿಗೆ ವಿಪತ್ತುಬಂದಾಗ ನಿರ್ದಯರಾಗಿ ಅವನನ್ನು ಮನೆಯಿಂದ ಹೊರಡಿಸಿದುದಕ್ಕಾಗಿ ಅವನು ಬಹಳವಾಗಿ ದುಃಖಿಸಿ ಪರಮಾತ್ಮನನ್ನು ಧ್ಯಾನಿಸುತ್ತ ಇತರರ ಸಹಾಯದಿಂದ ಈ ಪಟ್ಟಣಕ್ಕೆ ಬಂದು ಹೆಬ್ಬಾಗಿಲಬಳಿಯಲ್ಲಿ ಕುಳಿತು, ಮಾರ್ಗವಲ್ಲಿ ಬರುತ್ತಹೋಗುತ್ತ ಇರುವ ಮಂದಿಯನ್ನು ಭಿಕ್ಷವನ್ನು ಬೇಡಿ ಅವರಿಂದ ತನಗೆ ಲಭಿಸುವುದರಲ್ಲಿಯೇ ತೃಪ್ತಿಯನ್ನು ಹೊಂದಿ ಉದರಭರಣವನ್ನು ಮಾಡುತ್ತಿರುವನು ಒಂದುವೇಳೆ ಏನು ದೊರೆಯದಿದ್ದರೆ ಆ ದಿನದಲ್ಲಿ ಉಪವಾಸವನ್ನು ಮಾಡುವನು ಹೀಗೆ ಬಹು ದೈನ್ಯದಿಂದ ಕಾಲವನ್ನು ನೂಕುತ್ತಿರುವನು.

ಸತ್ಯಶೀಲನೇ ! ಕೇಳಿದೆಯಾ ? ಆ ಕಾಷ್ಠವಿಕ್ರಯಿಯಾದ ಮುದ್ದುರಂಗನೇ ನೀನು ನೋಡಿದ ಕುರುಡ ತಿರಿಕೊರೆಯನು ಅವನು ತನಗೆತಾನೆ ಅಜ್ಞಾನದಿಂದ ಮಾಡಿಕೊಂಡ ವಿಪತ್ತಿಗೆ ಪ್ರಾಯಶ್ಚಿತ್ತವಾಗಿ ಸನ್ಯಾಸಿಯು ಹೋಗುವಾಗ ಮಾಡಿಹೋದ ಉಗುಳುವಿಕೆ ಮತ್ತು ಕಪೋಲತಾಡನಗಳೇ ತಕ್ಕ ಕೃತ್ಯವನ್ನಾಗಿ ಬಗೆದು, ತನಗೆ ಧರ್ಮವನ್ನು ಮಾಡುವ ಮಾನವರು ತನ್ನನ್ನು ಮೋರೆಯಮೇಲೆ ಉಗುಳಿ ಕೆನ್ನೆಗಳಿಗೆರಡು ಪೆಟ್ಟುಗಳನ್ನು ಕೊಟ್ಟಹೊರತು ಯಾವ ಪದಾರ್ಥವನ್ನೂ ತೆಗೆದುಕೊಳ್ಳಬಾರದೆಂದು ದೃಢವ್ರತವನ್ನು ಹಿಡಿದಿರುವನು ಆಮೇರಿಗೆ ಮಾಡಿದರೆ ಹೊರತು ದಾರಿಗರು ಕೊಟ್ಟ ಪದಾರ್ಥವನ್ನವನು ಪರಿಗ್ರಹಿಸುವುದಿಲ್ಲ ಇದು ಆಶ್ಚರ್ಯವಾದ ಪದ್ಧತಿಯಾದುದರಿಂದ ನಿನಗೆ ಕಷ್ಟವಾಗಿ ತೋರಿತು ನಿನಗೆಯೇ ಅಲ್ಲ ಯಾರಿಗಾಗಲಿ ಉಗುಳುವುದೂ ಹೊಡೆಯುವುದೂ ಯುಕ್ತವಾಗಿ ತೋರುವುದೆ ? ವತ್ಸ ! ಸತ್ಯಶೀಲ ! ಆದುದರಿಂದಲೇ “ ವಿಮರ್ಶೆಯಿಂದ ಕಾರ್ಯಗಳನ್ನು ಮಾಡಬೇಕು ಅಪಾತ್ರರಿಗೆ ದಾನ, ಧರ್ಮ, ಉಪದೇಶಗಳನ್ನು ಮಾಡಬಾರದು ಅತ್ಯಾಸೆಪಡಬಾರದು ದೇವರು ತನಗೆ ಎಷ್ಟು ಕೊಡುವನೋ ಅಷ್ಟರಲ್ಲಿ ತೃಪ್ತನಾಗಬೇಕು ಯಥಾಲಾಭ ಸಂತುಷ್ಟನಾದವನು ಎಂದಿಗೂ ಕೇಡನ್ನು ಪಡೆಯಲಾರನು ತೃಪ್ತಿಯಿರಬೇಕು ” ಎಂದುಮುಂತಾಗಿ ಹಿರಿಯರು ಹೇಳುವರು.

ಎಂದಿಂತು ಚಿದಾನಂದಮುನಿಯು ತನ್ನ ಶಿಷ್ಯನಿಗೆ ವಿಚಿತ್ರ ಕಥಾಶ್ರವಣ ವನ್ನು ಮಾಡಿಸಿದನು. ಭೂತಭವಿಷ್ಯದ್ವರ್ತಮಾನ ಕಾಲವೇದಿಯಾದ ಆತನಿಂದ ಶಿಷ್ಯನು ಛಿನ್ನಸಂಶಯನಾಗಿ ಸಂತುಷ್ಟನಾದನು.

ಇಂತು ಐದನೆಯ ದಿನದ ಕಥೆ ಮುಗಿದುದು.



—: ಆರನೆಯ ದಿನದ ಕಥೆ. :—

ನಮಃ ಶ್ರೀ ಸತ್ಯಸಂಧಾಯ ನಮಃ ಸತ್ಯಸ್ವರೂಪಿಣೇ |
ನಮೋ ರಘುಕುಲೇಶಿತ್ರೇ ಶ್ರಿತಾಭೀಷ್ಟಪ್ರದಾಯಿನೇ ||

ಚಿದಾನಂದ ಸತ್ಯಶೀಲರು ಆ ದಿನವೆಲ್ಲ ಅಲ್ಲಿಯೇ ಇದ್ದು ಬೆಳಗಿನಜಾವ ದಲ್ಲಿ ಹೊರಟು ನರ್ಮದಾತೀರದ ಪ್ರಸಿದ್ಧ ಸ್ಥಲಗಳನ್ನೆಲ್ಲ ಸಂದರ್ಶಿಸುತ್ತ ನಡೆದು ಮಧ್ಯಾಹ್ನದವೇಳೆಗೆ ಒಂದು ಚಿಕ್ಕಹಳ್ಳಿಗೆ ಬಂದರು ಅಲ್ಲಿ ವಾಸಿಸುವು ದಕ್ಕೆ ವಸತಿಯಾದ ಮಂಟಪವೂ ಸ್ನಾನಪಾನಾರ್ಹವಾದ ಒಂದು ಕೊಳವೂ ಇತ್ತು, ಅಲ್ಲಿ ಇಳಿದು ಭೋಜನಾದಿಗಳನ್ನು ಮಾಡಿಕೊಂಡು ಮುಂದಿನ ಪ್ರಯಾ ಣವನ್ನು ಮಾಡಬೇಕೆಂದು ಬಗೆದು ಗುರುಶಿಷ್ಯರಾಲೋಚಿಸಿ ನಿಂತರು ಯೋಗಿಯು ಕೊಳದಲ್ಲಿ ಸ್ನಾನಾದಿಗಳನ್ನು ತೀರಿಸಿಕೊಂಡು ಪರಿಶುದ್ಧವಾದ ಒಂದು ಸ್ಥಲದಲ್ಲಿ ಕುಳಿತು ಜಪವನ್ನು ಮಾಡುತ್ತಿದ್ದನು. ಶಿಷ್ಯನಾ ಹಳ್ಳಿಯೊಳಕ್ಕೆ ಹೋಗಿ ತನಗೆ ಬೇಕಾದ ಅಡುಗೆಯ ಸಾಮಗ್ರಿಗಳನ್ನು ತೆಗೆದುಕೊಂಡು ಬಂದು ಅಡಿಗೆಯನ್ನು ಮಾಡಿದನು ಆವೇಳೆಗೆ ಚಿದಾನಂದಮುನಿಯು ಜಪವನ್ನು ಮುಗಿಯಿಸಿಕೊಂಡು ಊಟಕ್ಕೆ ಕುಳಿತನು ಇಬ್ಬರಿಗೂ ಊಟವಾಯಿತು ಸತ್ಯಶೀಲನು ಗುರುವಿನಸಮೀಪ ಪಕ್ಕೆ ಬಂದು ಕುಳಿತು “ ಮಹಾತ್ಮಾ ನಾವು ಮಾಡುವ ಪ್ರತಿಯೊಂದು ನಿಲ್ದಾಣ ದಲ್ಲಿಯೂ ಯಾವುದಾದರೊಂದು ವಿಚಿತ್ರ ವಿಷಯವು ಕಾಣುತ್ತಲೇ ಇರುವುದು ಅದು ನನಗೆ ಆಶ್ಚರ್ಯವಾಗಿ ತೋರುವುದೂ, ಅದರ ವಿವರವನ್ನು ನಿಮ್ಮಿಂದ ತಿಳಿದುಕೊಳ್ಳುತ್ತಿರುವುದೂ ಒಂದು ಪದ್ಧತಿಯಾಯಿತು ಈ ದಿನವುಕೂಡ ಒಂದು ವಿಶೇಷವನ್ನು ಕಂಡುಬಂದಿರುವೆನು ಈ ಹಳ್ಳಿಯ ನಡುವೆ ಒಂದು ವಿಶಾಲವಾದ ಮಂದಿರವೊಂದು ಕಟ್ಟಲ್ಪಟ್ಟಿರುವುದು ಆದರೆ ಅದು ಈಗಿನಸ್ಥಿತಿಯಲ್ಲಿ ಸುಟ್ಟು ಳಿದ ಕಟ್ಟಡವಾಗಿ ಕಾಣುತ್ತಿರುವುದು ಗೋಡೆಗಳು ಮಾತ್ರ ನಿಂತಿರುವುವು ಸ್ವಲ್ಪ ವಾದರೂ ಅಚ್ಚಳಿಯದಿರುವ ಆ ಗೋಡೆಗಳ ಶಿಲ್ಪಚಾತುರ್ಯವನ್ನು ನೋಡಿ ದರೆ ಅದು ಒಬ್ಬ ಧನಿಕನ ಮನೆಯಾಗಿರಬಹುದೆಂದೂ ಹಿಂದೆ ಅತ್ಯುನ್ನತವಾದ ಸಂಪದ್ಯುತವಾಗಿ ಇರಬಹುದೆಂದೂ ತೋರುತ್ತಿರುವುದು ನೇತ್ರಾರ್ಹವಾದ ಆ ಸುಂದರಮಂದಿರವು ಸುಟ್ಟುಹೋದಂತಿರುವುದಕ್ಕೂ ಅದರ ಒಡೆಯನು ಹಾಗೆ ಅಂದಗೆಟ್ಟ ಮನೆಯನ್ನು ಮತ್ತೆನೇರ್ಪಡಿಸಿಕೊಂಡು ಅದರಲ್ಲಿ ವಾಸಮಾಡದಿರು

ವುದಕ್ಕೂ ಯಾವುದೋ ಒಂದು ಕಾರಣವಿರಬಹುದೆಂದು ಭಾವಿಸಿ ಊರಿನವರನ್ನು ಕೇಳಿ ತಿಳಿದುಕೊಳ್ಳುವುದಕ್ಕೆ ಕಾಲವ್ಯವಧಾನವಿಲ್ಲದಿದ್ದುದರಿಂದ ಅವರನ್ನು ಕೇಳದೆ ತಮ್ಮನ್ನು ಕೇಳಿ ತಿಳಿದುಕೊಳ್ಳಬಹುದೆಂದು ಬಂದುಬಿಟ್ಟೆನು ಮುನಿವರ್ಯನೇ ! ಭೂತಭವಿಷ್ಯದ್ವೇತ್ತರಾದ ತಾವು ಆ ವಿಚಾರವನ್ನು ದಯವಿಟ್ಟು ಹೇಳಬೇಕೆಂದು ಬೇಡುವೆನು ” ಎಂದು ಕೇಳಿದನು ಅದಕ್ಕೆ ಆ ಮಹಾಯೋಗಿ ಯಿಂತೆಂದನು.

## ಬುದ್ಧಿಹೀನ ಮುದ್ದುವೀರನ ಕಥೆ.

ವತ್ಸ ! ಸತ್ಯಶೀಲ ! ಆ ನಿರಾಂತದ ವೃತ್ತಾಂತವು ವಿನೋದಕರವಾದುದು ಕೇಳು ನೀನು ಬಗೆದಂತೆ ಆ ಮನೆಯು ಸುಡಲ್ಪಟ್ಟಿರುವುದು ಸತ್ಯವೇ. ಒಂದುನೂರು ಸಂವತ್ಸರಗಳ ಕೆಳಗೆ ಈ ಗ್ರಾಮದಲ್ಲಿ ಅಣುವಂತಹೆಗ್ಗಡೆಯೆಂಬ ಒಬ್ಬ ಧನಿಕನಿದ್ದನು ಹೆಗ್ಗಡೆಯೆಂದರೆ ಗ್ರಾಮದ ಮುಖ್ಯಾಧಿಕಾರಿ ಇವನನ್ನು ಚೌದರೀ (ಚವುರಿರಂಗ) ಎಂದೂ ಕರೆವರು ಆ ಮನೆಯುವನದೇ ಆ ಹೆಗ್ಗಡೆಯು ಬಡಬಗ್ಗರಿಗೆ ಅನ್ನವನ್ನಿಟ್ಟು ಬಟ್ಟೆಗಳನ್ನು ಕೊಟ್ಟು ಆದರಿಸುತ್ತಿದ್ದನು. “ದುರ್ಭಿಕ್ಷೇಚಾನ್ನದಾತಾರಂ ” ಎಂಬ ಶ್ಲೋಕಾರ್ಥವನ್ನು ಚೆನ್ನಾಗಿ ತಿಳಿದಿದ್ದನು. ತಾನಿರುವ ಗ್ರಾಮದಲ್ಲಿಯೂ ಸುತ್ತುಮುತ್ತಲಿನ ಗ್ರಾಮಗಳಲ್ಲಿಯೂ ನಾಲಸೋಲಗಳನ್ನು ಕೊಟ್ಟು ಎಲ್ಲಜನರನ್ನು ತನ್ನ ಅಧೀನರನ್ನಾಗಿ ಮಾಡಿಕೊಂಡಿದ್ದನು ಆತನ ಹೆಂಡತಿಯ ಹೆಸರು ಸುಪ್ರೀತಿ ಅವರಿಬ್ಬರಿಗೂ ಒಬ್ಬ ಮಗನಿದ್ದನು ಅವನ ಹೆಸರು ಚಿಟ್ಟದಪ್ಪ ಹೆಗ್ಗಡೆ.

ಅಣುವಂತ ಹೆಗ್ಗಡೆಯು ತನ್ನ ಮನೆಗೆಲಸಗಳನ್ನು ಮಾಡುವುದಕ್ಕಾಗಿ ಅನ್ನವಸ್ತ್ರಗಳನ್ನು ಕೊಟ್ಟು ತಿಂಗಳಿಗೊಂದುವರಹಾ ಸಂಬಳ ನಿಗದಿಮಾಡಿ ಒಬ್ಬ ಆಳನ್ನು ಇಟ್ಟುಕೊಂಡಿದ್ದನು ಈ ಆಳಿನ ಹೆಸರು ಮುದ್ದುವೀರನು.

ಹೆಗ್ಗಡೆಯ ಮನೆಯಲ್ಲಿ ಕೋಳಿಗಳು ಬಹಳವಾಗಿ ಸಾಕಲ್ಪಡುತ್ತಿದ್ದುವು. ಕೆಲವು ದಿನಗಳಿಗೆಯೇ ಅವು ಲೆಕ್ಕವಿಲ್ಲದಷ್ಟು ವೃದ್ಧಿಯಾದುವು ದಿನದಿನಕ್ಕೆ ಒಂದೊಂದು ಕದಿಯಲ್ಪಟ್ಟು ಬಳಿಕ ಕೆಲವು ದಿನಗಳಿಗೆ ಕೋಳಿಗಳಗುಂಪು ಚಿಕ್ಕದಾಯಿತು ಆಗ ಅಣುವಂತ ಹೆಗ್ಗಡೆಯು ಕೋಳಿಗಳ ಕ್ಷೀಣತೆಯನ್ನು ಕಂಡು ಕಾರಣವನ್ನೂಹಿಸಲಾರದೆ ಖಿನ್ನನಾಗಿ ಒಂದು ದಿನ ಸೇವಕನನ್ನು ಕರೆದು “ ಎಲಾ ! ಮುದ್ದುವೀರ ! ನಿನಗೆ ಅನ್ನವಸ್ತ್ರಗಳ ವಿಚಾರದಲ್ಲಿ ಯಾವ ಕೊರತೆಯನ್ನಾಗಲಿ ಉಂಟುಮಾಡಿಲ್ಲ ನನ್ನ ಕೋಳಿಗಳ ಗುಂಪಿನಲ್ಲಿ ಒಂದೊಂದಾಗಿಯೇ ನಷ್ಟವಾಗುತ್ತಿರುವುದು ಗುಂಪು ದಿನದಿನಕ್ಕೂ ಕರಗುತ್ತಾಬಂದಿತು ಕಾರಣ ತಿಳಿಯಲಿಲ್ಲ ಇಗೋ ! ಈ ದಿನ ನಿನ್ನವಶಕ್ಕೆ ಈ ಕೋಳಿಗಳನ್ನೆಣಿಸಿಕೊಡುವೆನು ಇವುಗಳಲ್ಲಿ ಒಂದಾದರೂ ಕಡಿಮೆಯಾಗಬಾರದು ಕಡಿಮೆಯಾದರೆ ನಿನ್ನನ್ನು ಬಹಳವಾಗಿ ಶಿಕ್ಷಿಸುವೆನು ಎಚ್ಚರದಿಂದ ಕಾಪಾಡುತ್ತಿರು ” ಎಂದಾಜ್ಞಾಪಿಸಿದನು.

ಆಗ ಆ ಸೇವಕನು ಹೆದರಿ " ಅಯ್ಯೋ ! ನಾನು ಹೆಚ್ಚು ಕಡಿಮೆ ಅರ್ಧರಾತ್ರಿಯವರೆಗೆ ಎಚ್ಚತ್ತಿರುವೆನು ಅವರೆಗೆ ಒಂದಾದರೂ ಹೋಗುವುದಿಲ್ಲ ನಡುರಾತ್ರಿಯಾದಮೇಲೆ ಹೋಗುವುದೋ ಏನೋ ! ಯಾರು ಬಲ್ಲರು ? ಪ್ರತಿದಿನವೂ ನಿದ್ದೆಯಿಲ್ಲದೆ ಕಾದಿರುವರಾರು ? ನಾನೇನು ಮಾನವನಲ್ಲವೆ ? ನನಗೆ ಸ್ವಲ್ಪ ನಿದ್ದೆಹತ್ತುತ್ತಲೇ ದುರ್ಮಾರ್ಗನಾವನೋ ಸಮಯವನ್ನು ನೋಡುತ್ತಿದ್ದು ಒಂದನ್ನೋ ಎರಡನ್ನೋ ಅಪಹರಿಸಿಕೊಂಡು ಹೋಗುವನು ಇದಕ್ಕೆ ನಾನೇನು ಮಾಡಲಿ ? ಆಗಲಿ ! ಉಪಾಯವನ್ನು ಮಾಡಿ ಹೇಗಾದರೂ ಕಳ್ಳನನ್ನು ಹಿಡಿದು ಅವನಿಗೆ ತಕ್ಕಪ್ರಾಯಶ್ಚಿತ್ತವನ್ನು ಮಾಡಿಸಲೇ ಮಾಡಿಸುವೆನು ಹೆಗ್ಗಡೆಯು ಈ ದಿನ ಕಠಿನವಾದ ಆಜ್ಞೆಯನ್ನು ಮಾಡಿರುವನು ಹೊತ್ತಿಗೆ ಸರಿಯಾಗಿ ನನಗೆ ನಿದ್ದೆ ಬರುತ್ತದೆಯೇ ಹೊರತು ಬಾರದಿರದು ಎಚ್ಚರಿಕೆಯಿಲ್ಲವೆ ಒಂದುವೇಳೆ ಇವುಗಳಲ್ಲೊಂದನ್ನು ಹೋಗಲಾಡಿಸಿದರೆ ನಾಳೆಯ ಉದಯದಲ್ಲಿ ನನಗೆ ಶಿಕ್ಷೆಯು ತಪ್ಪುವುದೇ ಇಲ್ಲ ಇದಕ್ಕೆ ಯಾವ ಉಪಾಯವನ್ನು ಮಾಡಲಿ ? " ಎಂದಾಲೋಚನೆಯನ್ನು ಮಾಡಿ ಒಂದುಪಾಯವನ್ನಾಲೋಚಿಸಿ ಉದ್ದವಾದ ಒಂದು ಹುರಿಯನ್ನು ತಂದು ಸಾಲಾಗಿ ಒಂದರಹಿಂದೊಂದನ್ನು ಸೇರಿಸಿ ಎಲ್ಲಕೋಳಿಗಳ ಕಾಲುಗಳಿಗೂ ಕಟ್ಟಿ ಆ ಹುರಿಯ ಒಂದು ಕೊನೆಯನ್ನು ನನ್ನ ನಡುವಿನಲ್ಲಿ ಕಟ್ಟಿಕೊಂಡು ಮಲಗುವೆನು ಸರಿ ! ಇದೊಂದು ಒಳ್ಳೆಯ ಉಪಾಯ ಈ ದಿನ ತಪ್ಪದೆ ಆ ಕಳ್ಳನು ನನಗೆ ದೊರೆವನು ನಾನು ಕೋಳಿಗಳನ್ನು ಕಟ್ಟಿರುವುದನ್ನು ಕಾಣದೆ ಕಳ್ಳನು ಬಂದು ಯಾವುದನ್ನು ಹಿಡಿದುಕೊಂಡರೂ ಹುರಿಯು ಅಲುಗಾಡುವುದು ಆಗ ನನ್ನ ನಡುವಿನಲ್ಲಿ ಕಟ್ಟಲ್ಪಟ್ಟಿದ್ದ ಹಗ್ಗವೂ ಎಳೆಯಲ್ಪಟ್ಟು ನನ್ನನ್ನು ಎಚ್ಚರಗೊಳಿಸುವುದು ತಟ್ಟನೆ ಎದ್ದು ನಾನವನನ್ನು ಹಿಡಿದು ಹೆಗ್ಗಡೆಗೊಪ್ಪಿಸುವನು " ಎಂದು ನಿಶ್ಚಯಿಸಿಕೊಂಡು ಹಾಗೆಯೇ ಕೋಳಿಗಳ ಕಾಲ್ಗಳಿಗೆ ಕಟ್ಟಿದ್ದ ಹಗ್ಗವನ್ನು ತನ್ನ ನಡುವಿಗೆ ಬಂಧಿಸಿ ಮಲಗಿ ಸ್ವಲ್ಪಹೊತ್ತಿನತನಕ ಹಾಡುತ್ತ ಎಚ್ಚರವಾಗಿದ್ದನು ನಿದ್ದೆಯು ತಲೆಹಾಕಿತು ಬಳಿಕ ಗಾಢನಿದ್ರಾಪರವಶನಾದನು.

ಆ ಸಮಯದಲ್ಲಿ ಒಂದಿಲಿಯು ಅವನಮೇಲೆ ಹೋಗುತ್ತ ತನ್ನ ದಾರಿಗೆ ಅಡ್ಡವಾಗಿದ್ದ ಮತ್ತು ಮುದ್ದುವೀರನು ತನ್ನ ನಡುವಿಗೆ ಕಟ್ಟಿಕೊಂಡಿದ್ದ ಹುರಿಯನ್ನು ಕಡಿದು ಮುಂದಕ್ಕೆ ಹೋಯಿತು ಬಳಿಕ ಒಂದಿನಿಸುಹೊತ್ತಿಗೆ ಕೋಳಿಗಳ ಕಳ್ಳನು ಬಂದು ಮಲಗಿದ್ದ ಮುದ್ದುವೀರನಿಗೆ ಸ್ವಲ್ಪ ದೂರದಲ್ಲಿದ್ದ ಮೊದಲನೆಯ ಕೋಳಿಯನ್ನು ಹಿಡಿದು ಅದಕ್ಕೆ ಹುರಿಯನ್ನು ಕಟ್ಟಿರುವುದನ್ನು ಕಂಡು ಮೆಲ್ಲನೆ ಎಳೆದನು ಆಗ ಎಲ್ಲಕೋಳಿಗಳೂ ಸಾಲಾಗಿ ಬರಲಾರಂಭಿಸಿತು ಓಡಿಹೋಗದೆ ಎಲ್ಲವೂ ಒಂದೇಸಾರಿ ಸಿಕ್ಕಿದುದಕ್ಕೆ ಬಹಳವಾಗಿ ಸಂತೋಷಿಸಿ ಎಲ್ಲ ಕೋಳಿಗಳನ್ನೂ ತೆಗೆದುಕೊಂಡು ಓಡಿಹೋದನು, ಕಳ್ಳನು ಅವುಗಳನ್ನು ಹಿಡಿ

ದಾಗ ಎಲ್ಲವೂ ಕೂಗಿಕೊಂಡುವು ಆದರೂ ಗಾಢನಿದ್ರಾಪರವಶನಾದ ಮುದ್ದು ವೀರನಿಗೆ ಆ ಶಬ್ದವು ಕಿವಿಗೆ ಬೀಳಲಿಲ್ಲ ಅವನು ಶಾಂತವಾಗಿ ಅರುಣೋದಯ ಸಮಯದಲ್ಲಿ ಎಚ್ಚರಗೊಂಡನು ಆಗ ಸುತ್ತಲೂ ನಿಟ್ಟಿಸಿ ನೋಡಲು ಒಂದು ಕೋಳಿಯಾದರೂ ಇರಲಿಲ್ಲ ಎದೆ ನಡುಗಿತು ಒಡನೆಯೇ ಅಣುವಂತ ಹೆಗ್ಗಡೆಯ ಬಳಿಗೆ ಹೋಗಿ ನಡೆದ ವೃತ್ತಾಂತವನ್ನೆಲ್ಲ ತಿಳಿಯಿಸಿದನು. ಆ ಮಾತನ್ನು ಕೇಳುತ್ತಲೆ ಅವನ ಅವಿವೇಕವನ್ನು ಕುರಿತು ಆಗ್ರಹೋದಗ್ರನಾಗಿ ತನ್ನ ಕೈಗಳು ನೋಯುವವರೆಗೂ ಹೊಡೆದನು, ಅಯ್ಯೋ ! ಪಾಪ ! ಅವನೇನುತಾನೆ ಮಾಡಿಯಾನು ? ಹಾಗೆ ಹೊಡೆಯಿಸಿಕೊಂಡು ಸುಮ್ಮನೆ ಒಂದುಕಡೆ ಕುಳಿತನು ಅವನು ಹೆಗ್ಗಡೆಯಬಳಿಯಲ್ಲಿ ಸೇರಿ ಎರಡು ವಾರಗಳು ಮಾತ್ರ ಆಗಿದ್ದಿತು ಅವನು ಬಂದು ಸೇರಿದುವು ಮೊದಲು ಇದೇ ಅವನು ಮಾಡಿದ ಮೊವಲನೆಯ ಅಪರಾಧ.

ಬಳಿಕ ಎರಡುಮೂರು ದಿನಗಳು ಕಳೆದುವು ಒಂದು ದಿನ ಆ ಹೆಗ್ಗಡೆಯ ಹೆಂಡತಿ ಸುಶೀಲೆಯು ಒಂದು ಚೀಟಿಯನ್ನು ಬರೆದು ಮುದ್ದುವೀರನಕೈಗೆ ಕೊಟ್ಟು " ಎಲಾ ! ಹಣ್ಣುಗಳನ್ನು ಮಾರುವ ಹರಿಯಣ್ಣನು ಪಕ್ಕದ ಚೊಕ್ಕಹಳ್ಳಿಯಲ್ಲಿರುವನು ಅವನಬಳಿಗೆ ಹೋಗಿ ಅವನಿಗೆ ಈ ಚೀಟಿಯನ್ನು ಕೊಟ್ಟುಬಿಡು ಅವನು ನಿನ್ನಕೈಗೆ ಕೆಲವು ಹಣ್ಣುಗಳನ್ನು ಕೊಡುವನು ಅವುಗಳನ್ನು ತೆಗೆದುಕೊಂಡು ಪ್ರತ್ಯುತ್ತರವನ್ನು ಬರೆಯಿಸಿಕೊಂಡುಬಾ ಹೋಗು " ಎಂದಾಜ್ಞಾಪಿಸಿದಳು. ಆ ಪ್ರಕಾರವಾಗಿ ಹೇಳಿ ಆಕೆ ಕೊಟ್ಟ ಚೀಟಿಯನ್ನು ತೆಗೆದುಕೊಂಡು ಹೋಗಿ ಹಣ್ಣಿನವನಿಗೆ ಕೊಟ್ಟು ಹಣ್ಣುಗಳನ್ನೂ ಚೀಟಿಯನ್ನೂ ಅವನಿಂದ ಪಡೆದುಬರುತ್ತ ಆ ಹಣ್ಣುಗಳನ್ನು ತಿನ್ನಬೇಕೆಂಬ ಆಸೆಯಾಗಲು ತನ್ನಲ್ಲಿ " ಇಷ್ಟು ಹಣ್ಣುಗಳಿರುವುವಲ್ಲವೆ ? ಈ ಹಣ್ಣುಗಳೇ ಹಣ್ಣಿನವನು ಕೊಟ್ಟುವೆಂದು ಹೇಳಿ ಕೆಲವು ಹಣ್ಣುಗಳನ್ನೂ ಈ ಚೀಟಿಯನ್ನೂ ನಮ್ಮ ಹೆಗ್ಗಡೆಸಾನಿಗೆ ಕೊಡುವೆನು ನಾಲ್ಕು ಹಣ್ಣುಗಳನ್ನು ಮಾತ್ರ ನೀಗಳೆ ಇಲ್ಲಿ ತಿನ್ನುವೆನು ಹೇಗೆತಾನೆ ಅವಳು ತಿಳಿದುಕೊಳ್ಳಬಲ್ಲಳು ? ಎಲ್ಲ ಹಣ್ಣುಗಳನ್ನೂ ತೆಗೆದುಕೊಂಡುಹೋಗಿ ಆವಳಿಗೆ ಕೊಟ್ಟರೂ ಆ ಹೆಂಗಸು ನನಗೆ ಒಂದು ಹಣ್ಣನ್ನೂ ಕೊಡುವುದಿಲ್ಲ ಇದು ನಿಜ ಅವಳು ಕೊಡುವುದೆಂದರೇನು ? ಎಲ್ಲಿನ ಮಾತು ? ಅವಳೋ ಕೊಡುವಳು ? ನನಗಾಸೆ ಹುಟ್ಟಿತು ಹಣ್ಣು ತಿನ್ನುವುದಕ್ಕೆ ತಿಂದು ಆಸೆಯನ್ನು ತೀರಿಸಿಕೊಳ್ಳುವೆನು ಆದುದಾಗಲಿ " ಎಂದು ಹಿಂದುಮುಂದರಿಯದೆ ಆಲೋಚಿಸಿ ನಾಲ್ಕು ಹಣ್ಣುಗಳನ್ನು ಭಕ್ಷಿಸಿ ಉಳಿದವುಗಳನ್ನು ತೆಗೆದುಕೊಂಡು ಹೋಗಿ ಚೀಟಿಯನ್ನೂ ಹಣ್ಣುಗಳನ್ನೂ ಹೆಗ್ಗಡೆಯ ಹೆಂಡತಿಗೆ ಕೊಟ್ಟನು.

ಸುಶೀಲೆಯು ಚೀಟಿಯನ್ನು ಓದಿಕೊಂಡಳು ಅದರಲ್ಲಿ ಐವತ್ತು ಹಣ್ಣುಗಳನ್ನು ಕಳುಹಿಸಿಕೊಟ್ಟಿರುವಂತೆ ಬರೆಯಲ್ಪಟ್ಟಿದ್ದಿತು ಹಣ್ಣುಗಳನ್ನು ಎಣಿಸಿದಳು

ನಾಲ್ವತ್ತಾರು ಮಾತ್ರ ಇತ್ತು ಸೇವಕನನ್ನು ನೋಡಿ "ಎಲಾ! ಮುದ್ದುವೀರ! ಏನೋ? ಐವತ್ತು ಹಣ್ಣುಗಳನ್ನು ಕಳುಹಿಸಿರುವಂತೆ ಚೀಟಿಯಲ್ಲಿ ಬರೆದಿದೆ ಯಲ್ಲ ನೀನು ಕೊಟ್ಟಿರುವುದು ನಾಲ್ವತ್ತಾರು ಮಾತ್ರವೆ? ಉಳಿದ ನಾಲ್ಕುಹಣ್ಣು ಗಳನ್ನೇನುಮಾಡಿದೆ? ತಿಂದೆಯಾ? ಇಲ್ಲದೆ ಯಾರಿಗಾದರೂ ಕೊಟ್ಟೆಯಾ? ಹೇಳು ನಿಜವನ್ನು ಹೇಳು ಹೇಳದಿದ್ದರೆ ನಿನ್ನಮೈ ಒಡೆದುಹೋಗುವಂತೆ ಹೊಡ ಯಿಸುವೆನು" ಎಂದು ಹೆದರಿಸಿ ಕೇಳಿದಳು. ಬುದ್ಧಿಹೀನನಾದ ಮುದ್ದುವೀ ರನು ಆಕೆಯ ತರ್ಜನಭರ್ಜನಗಳಿಗೆ ಹೆದರಿ ಗಡಗಡನೆ ನಡುಗುತ್ತ ತಾನುಮಾ ಡಿದ ತಪ್ಪನ್ನೊಪ್ಪಿಕೊಂಡು ನಡೆದುದನ್ನು ಹೇಳಿಬಿಟ್ಟನು ಹೆಗ್ಗಡೆಯು ಬಂದ ಮೇಲೆ ಸುಶೀಲೆಯು ಇದ್ದುದನ್ನೆಲ್ಲ ಹೇಳಿದಳು. ಹೆಗ್ಗಡೆಯು ನಿರ್ದಯನಾಗಿ ಸೇವಕನನ್ನು ಬಹಳವಾಗಿ ಹೊಡೆದನು ಇದು ಅವನು ಮಾಡಿದ ಎರಡನೆಯ ಅಪ ರಾಧ.

ಮತ್ತೆ ಕೆಲವು ದಿನಗಳು ಕಳೆದುವು ಹೆಗ್ಗಡೆಯು ತನ್ನ ಕುಮಾರನಿಗೆ ಮದುವೆಯನ್ನು ಮಾಡಲು ನಿಶ್ಚಯಿಸಿದನು. ಆ ಗ್ರಾಮಕ್ಕೆ ೫-೬ ಗಾವುದಗಳ ದೂರದಲ್ಲಿ ಕನಕನಹಳ್ಳಿ ಗ್ರಾಮದಲ್ಲಿರುವ ಕೆಂಪಣ್ಣಹೆಗ್ಗಡೆಯೆಂಬಾತನ ಮಗ ಳನ್ನು ತೆಗೆದುಕೊಳ್ಳುವಂತೆ ನಿಷ್ಕರ್ಷೆಯಾಯಿತು ವಿಳಂಬಿ ಸಂವತ್ಸರದ ಮಾಘ ಬಹುಳ ದಶಮಿ ದಿನದಲ್ಲಿ ಲಗ್ನವನ್ನಿಟ್ಟರು ಮುಹೂರ್ತದಿನಕ್ಕೆ ಸರಿಯಾಗಿ ಕನ ಕನಹಳ್ಳಿಯನ್ನು ಸೇರುವಂತೆ ಪ್ರಯಾಣವನ್ನು ಸಿದ್ಧಪಡಿಸಿಕೊಂಡರು ಸೇವಕ ನನ್ನು ಕರೆದು "ಎಲಾ! ಮುದ್ದುವೀರ! ಇಲ್ಲಿಗೆ ಒಂದು ಹರಿದಾರಿಯಲ್ಲಿ "ಮುದ್ದಲಹಳ್ಳಿ" ಎಂಬ ಗ್ರಾಮವೊಂದಿರುವುದನ್ನು ನೀನು ಬಲ್ಲೆಯಲ್ಲವ? ಅಲ್ಲಿ ಕೃಷ್ಣಪ್ಪನೆಂಬ ಒಬ್ಬ ನೇಯಿಗೆಯವನಿರುವನು ಅವನಬಳಿಗೆ ಹೋಗಿ ಮದುವೆಗಾಗಿ ನಮಗೆ ಕೆಲವು ವಸ್ತ್ರಗಳನ್ನು ಕೊಡುವನು ತೆಗೆದುಕೊಂಡುಬಾ ನಿನ್ನನ್ನು ಕಳುಹಿಸುವೆನೆಂದಾತನೊಡನೆ ಹೇಳಿರುವೆನು ಹೋಗಿ ಬೇಗನೆ ಹೊರ ಟುಬಾ" ಎಂದಾಜ್ಞಾಪಿಸಿದನು. ಅವನು ಒಪ್ಪಿಕೊಂಡು ಹೊರಟು ಆ ಗ್ರಾಮ ವನ್ನು ಸೇರಿ ನೇಯಿಗೆಯವನ ಮನೆಗೆ ಹೋಗಿ ಹೆಗ್ಗಡೆಯು ತನ್ನೊಡನೆ ಹೇಳಿದ ಮಾತುಗಳನ್ನು ಹೇಳಿದನು. ಕೂಡಲೆ ಕೃಷ್ಣಪ್ಪನವನ ಮಾತಿನಮೇರೆ ಕೆಲವು ನೂತನ ವಸ್ತ್ರಗಳನ್ನು ಒಂದು ಮೂಟೆಯಲ್ಲಿ ಕಟ್ಟಿ ಅವನ ವಶಕ್ಕೆ ಕೊಟ್ಟನು ಹೆಗ್ಗಡೆಯ ಕಿಂಕರನು ಆ ಮೂಟೆಯನ್ನು ತೆಗೆದುಕೊಂಡು ಕೃಷ್ಣಪ್ಪನ ಅಪ್ಪಣೆ ಯನ್ನು ಪಡೆದು ಹೆಗ್ಗಡೆಯು ವಾಸಿಸುತ್ತಿದ್ದ "ಸುಪರ್ಣಪುರ" ವೆಂಬ ಗ್ರಾಮದ ಮಾರ್ಗವನ್ನು ಹಿಡಿದುಬರುತ್ತ ಬಿಸಿಲು ಬಲುತೀಕ್ಷ್ಣವಾಗಿದ್ದುದರಿಂ ದಲೂ, ಹಿಂದಿನ ದಿನದರಾತ್ರಿ ಮದುವೆಯ ಪ್ರಯಾಣಕ್ಕೋಸುಗ ಎಲ್ಲಪದಾರ್ಥ ಗಳನ್ನೂ ಮೂಟೆಗಳನ್ನಾಗಿ ಕಟ್ಟುತ್ತಿದ್ದುದರಿಂದ ಹೊತ್ತು ಬಹಳವಾಗಿಯಾಗಿ

ನಿದ್ದೆಯು ಕಡಿಮೆಯಾದುದರಿಂದಲೂ ಬಳಲಿಕೆಯುಂಟಾಗಿ ಸ್ವಲ್ಪಹೊತ್ತು ವಿಶ್ರಮಿಸಿ ಕೊಂಡು ಹೋಗಬೇಕೆಂದು ದಾರಿಯು ಸಾಲುಮರಗಳಲ್ಲಿ ಒಂದು ದೊಡ್ಡ ಮರದ ನೆರಳಲ್ಲಿ ನೂತನ ವಸ್ತ್ರಗಳ ಮೂಟೆಯನ್ನಿಟ್ಟುಕೊಂಡು ಅದರ ಮೇಲೆಯೇ ಒಂದು ಬಟ್ಟೆಯನ್ನುಹಾಸಿ ಮಲಗಿದನು ಎಚ್ಚತ್ತಿರಬೇಕೆಂದು ಅವನಭಿಪ್ರಾಯಪಟ್ಟಿದ್ದರೂ ತಣ್ಣನೆಯ ಗಾಳಿ ಬೀಸುತ್ತಿದ್ದುದರಿಂದ ಮಲಗಿದೊಡನೆಯೇ ನಿದ್ದೆಬಂದಿತು ಮೈಮರೆತು ಗಾಢನಿದ್ರಾಪರವಶನಾದನು. ಆಗ ಆ ದಾರಿಯಲ್ಲಿ ಹೋಗುತ್ತಿದ್ದ ಯಾವನೋ ಒಬ್ಬನು ಆ ಮರದಕೆಳಗೆ ಬಂದು ಕುಳಿತನು ಗೊರಕೆಗಳನ್ನಿಡುತ್ತ ಹೊರಗಣ ತಿಳಿವಳಿಕೆ ಸ್ವಲ್ಪವಾದರೂ ಇಲ್ಲದೆ ನಿದ್ರಿಸುತ್ತಿರುವ ಹೆಗ್ಗಡೆಯ ಸೇವಕನನ್ನು ಕಂಡು ಆ ದಾರಿಗನಿಗೆ ಚಿತ್ತವೃತ್ತಿಯು ಮಾರ್ಪಟ್ಟಿತು ಆ ಜವಳಿಯ ಗಂಟನ್ನು ಕದಿಯಬೇಕೆಂಬ ಆಸೆಯು ಅವನನ್ನು ಪ್ರೇರಿಸಿತು ಸುತ್ತಲೂ ನೋಡಿದನು ಬಿಸಿಲುಹೊತ್ತು ಆ ದಾರಿಯಲ್ಲಿ ಯಾರೂ ಸುಳಿಯುತ್ತಿರಲಿಲ್ಲ ಧೈರ್ಯವಾಯಿತು ಎದ್ದು ಅವನಬಳಿಗೆ ಹೋದನು ಮೈಕೈಗಳನ್ನು ಮುಟ್ಟಿದನು ಸಂಪೂರ್ಣವಾಗಿ ನಿದ್ರಾಂಗನಾಲೋಲನಾಗಿರುವನೆಂದು ನಿರ್ಧರಿಸಿಕೊಂಡು ಮೆಲ್ಲನೆ ಮೂಟೆಯನ್ನು ಕದಲಿಸಿ ಈಚೆಗೆ ತೆಗೆದನು ಅಲ್ಲಿಗೂ ಅವನಿಗೆ ಎಚ್ಚರವಾಗಲಿಲ್ಲ ತನ್ನ ಮನೋರಥವು ಫಲಿಸಿತೆಂದು ತಿಳಿದು ಆ ಮೂಟೆಯನ್ನೆತ್ತಿ ತಲೆಯಮೇಲಿಟ್ಟುಕೊಂಡು ಕಾಲಿಗೆ ಬುದ್ಧಿಹೇಳಿದನು ಅವನಿಗೆ ಹಲವುಸಾರಿ ಪಲಾಯನ ಮಂತ್ರಸಿದ್ಧಿಯ ಫಲವು ಅನುಭವಿತವಾಗಿರುವುದೆಂದು ತೋರುವುದು ಒಡನೆಯೇ ಅಲ್ಲಿ ನಿಲ್ಲದೆ ಸಿಟ್ಟೋಟದಿಂದ ತನ್ನ ಗನ್ತವ್ಯಸ್ಥಾನವನ್ನು ಸೇರಿದನು.

ಇತ್ತಲಾ ಮುದ್ದುವೀರನು ಬಹಳಹೊತ್ತಿಗೆ ಎಚ್ಚತ್ತು ಕಣ್ಣುಬಿಟ್ಟು ಆಲಸ್ಯವಾದುದರಿಂದ ತನ್ನ ಒಡೆಯನು ಕೋಪಿಸಿಕೊಳ್ಳುವನೆಂಬ ಭಯದಿಂದ ಬೇಗನೆ ಹೋಗಬೇಕೆಂದು ಬಗೆದು ಪಕ್ಕದಲ್ಲಿ ಕಣ್ಣಿಟ್ಟನು ಮೂಟೆಯು ಕಾಣಿಸಲಿಲ್ಲ ಆಗ ಅವನಿಗುಂಟಾದ ಭಯವು ಇಷ್ಟಿಷ್ಟೆಂದು ಹೇಳಲಳವಲ್ಲ ಮೂಟೆಯನ್ನಾವನೋ ಕದ್ದುಕೊಂಡು ಪೋದನೆಂದು ಬಗೆದು ದಿಕ್ಕುದಿಕ್ಕುಗಳನ್ನು ನೋಡುತ್ತ ಹೆಗ್ಗಡೆಯು ಹೊಡೆವನೆಂಬ ಭಯವು ಹೆಚ್ಚಲು ಅಳಲಾರಂಭಿಸಿದನು ಅವನಿನ್ನೇನು ತಾನೆ ಮಾಡಿಯಾನು ಒಂದಿನಿಸುಹೊತ್ತು ಅಳುತ್ತಿದ್ದು ಹೆಗ್ಗಡೆಯು ಅಪ್ಪಣೆಯಂತೆ ಬೇಗ ಹೋಗುವುದಕ್ಕೆ ಪ್ರತಿಯಾಗಿ ಸಾಯಂಕಾಲಕ್ಕೆ ಬರಿಯಕೈಯಿಂದ ಮೆಲ್ಲನೆ ಹಳ್ಳಿಯನ್ನು ಸೇರಿದನು ಊಟವಿಲ್ಲದೆ ಒಂದೆರಡು ತಾಸುಗಳನ್ನು ಕಳೆದು ಸ್ವಲ್ಪ ಕತ್ತಲೆಯಾದ ಸಮಯದಲ್ಲಿ ಹೆಗ್ಗಡೆಯ ಮನೆಗೆ ಬಂದನು.

“ ಏತಕ್ಕೆಯೋ ಬರಲಿಲ್ಲವಲ್ಲ ತನ್ನ ಸೇವಕನು ! ಎಲ್ಲಿಗೆ ಹೋದನೆಯೋ ? ಏನಾದನೋ ? ” ಎಂದು ಅಣುವಂತ ಹೆಗ್ಗಡೆಯು ದಾರಿಯನ್ನಿದಿರುನೋಡು

ತ್ತಿದ್ದು ಅವನು ಮನೆಗೆ ಬರುತ್ತಲೇ ಅವನ ಕೈಯಲ್ಲಿ ಮೂಟೆಯಿಲ್ಲದಿದ್ದುದನ್ನು ಕಂಡು ಹೆದರಿ " ಎಲಾ ಮಡೆಯ ! ಮಂಕ ! ಮುಟ್ಠಾಳ ! ಕತ್ತಲೆಯಾಗುವವರೆಗೆ ಏನು ಮಾಡುತ್ತಿದ್ದೆ ? ಎಲ್ಲಿದ್ದೆ ? ನೀನುತಂದ ಬಟ್ಟೆಗಳೆಲ್ಲಿ ? " ಎಂದು ಗದರಿಸಿ ಕೇಳಿದನು ಮುದ್ದುವೀರನು ಪ್ರತ್ಯುತ್ತರವನ್ನು ಕೊಡದೆ ಭಯಪಟ್ಟು ರೋದಿಸಲಾರಂಭಿಸಿದನು. ಹೆಗ್ಗಡೆಯು ಅವನ ಅಭಿನಯದಿಂದಲೇ ಅವನು ಬಟ್ಟೆಯ ಗಂಟನ್ನು ಕಳೆದುಕೊಂಡು ಬಂದಿರುವನೆಂದರಿತು " ಎಲಾ ! ತೊತ್ತಿನ ಮಗನೆ ! ನೇಯಿಗೆಯುವನು ಕೊಟ್ಟ ಬಟ್ಟೆಗಳನ್ನೇನು ಮಾಡಿದೆ ? ಹೇಗೆ ಹೋಗಲಾಡಿಸಿದೆ ? ನೇಯಿಗೆಯ ಕೃಷ್ಣಪ್ಪನು ಹೊಸ ಅರುವೆಗಳನ್ನು ಕೊಟ್ಟನೆ ಇಲ್ಲವೆ ? ನಡೆದ ವಿಚಾರವನ್ನು ನಿಜವಾಗಿ ಹೇಳು ಇಲ್ಲದಿದ್ದರೆ ನಿನ್ನನ್ನು ಕೊಂದುಬಿಡುವೆನು " ಎಂದು ಭಯಪಡಿಸಿದನು. ಆ ಮಂಕನು ತಾನು ವಸ್ತ್ರಗಳ ಮೊಟ್ಟೆಯನ್ನು ಕಳೆದುಕೊಂಡ ಬಗೆಯನ್ನು ತಿಳಿಯಿಸಿ ತನ್ನ ತಪ್ಪನ್ನು ಮನ್ನಿಸಬೇಕೆಂದು ಬಲುದೈನ್ಯದಿಂದ ಬೇಡಿಕೊಂಡನು ಆದರೂ ಕಠಿನಚಿತ್ತನಾದ ಆ ಹೆಗ್ಗಡೆಯು ಅವನನ್ನು ಪ್ರಾಣಮುರಿವಂತೆ ಹೊಡೆದೇಬಿಟ್ಟನು.

ಬಳಿಕ ಹೆಗ್ಗಡೆಯು ಮತ್ತೊಬ್ಬನನ್ನು ಕಳುಹಿಸಿ ವಸ್ತ್ರಗಳನ್ನು ತರಿಸಿಕೊಂಡನು ಆತನು ಬಾರಿಬಾರಿಗೂ ಯಾವುದಾದರೊಂದು ತಪ್ಪನ್ನುಮಾಡಿ ನಷ್ಟವನ್ನು ಮಾಡುತ್ತಿರುವ ಆ ಸೇವಕನನ್ನು ಬಿಟ್ಟು ಬುದ್ಧಿವಂತನಾದ ಮತ್ತಾವನನ್ನಾದರೂ ನಿಯಮಿಸಿಕೊಳ್ಳಬೇಕೆಂದಾಲೋಚಿಸಿದನು. ಆದರೆ ಅವನನ್ನು ಬಿಡುವುದಕ್ಕೆ ಆತನಿಗೆ ಇಷ್ಟವಿಲ್ಲದೆ ಆ ಸಂಕಲ್ಪವನ್ನು ಅಲ್ಲಿಗೆಯೇ ತಡೆದನು ಏಕೆಂದರೆ ಹೆಗ್ಗಡೆಯು ಬಹುಲೋಭಿ ಅದರಿಂದ ತನ್ನಲ್ಲಿ " ಓಹೋ ! ಇವನನ್ನು ಬಿಟ್ಟು ಮತ್ತೊಬ್ಬನನ್ನು ನಿಯಮಿಸಿಕೊಂಡರೆ ಅವನು ಇವನಂತೆ ಹೊಡೆದರೂ ಬಡಿದರೂ ಸುಮ್ಮನಿರುವನೆ ? ಬರುವವನು ಅಲ್ಪವೇತನಕ್ಕೆ ಬರುವನೆ ? ಹೆಚ್ಚಾದ ಸಂಬಳವನ್ನು ಕೊಡಬೇಕಲ್ಲವೆ ? ಏಕೆ ? ದಂಡ ! ವ್ಯರ್ಥವಾಗಿ ಮನೆಯಲ್ಲಿರುವ ಹಣವನ್ನು ಧಾರೆಯೆರೆಯಬೇಕಲ್ಲವೆ ? ಈ ಮುದ್ದುವೀರನಾದರೋ ಬುದ್ಧಿಹೀನನೆಂಬುದು ನಿಜವೇ ! ಆದರೆ ಹೇಳಿದ ಕೆಲಸವನ್ನು ಒಲ್ಲೆನೆಂದು ಹೇಳದೆ ಮಾಡುವನು ತುಂಬಾ ಭಯಸ್ಥನು ಇಂಥವನಾದುದರಿಂದಲೇ ಅಲ್ಪವೇತನಕ್ಕೆ ಒಪ್ಪಿರುವನು ಇಂತಪ್ಪ ಅಚ್ಚುಕಟ್ಟಾದ ಅಚ್ಚು ಕಾಯ್ತನನ್ನು ಬಿಟ್ಟು ಬರಿಯ ಹರಟೆಗಾರರನ್ನು ತಂದಿಟ್ಟುಕೊಂಡು ಅವರೊಡನೆ ಹೋರಾಡುತ್ತಿರುವರು ಯಾರು ? ಓಟೆಯು ಮಡಕೆಯಾದರೂ ಒರಗಿಸಿಟ್ಟು ಬಳಸಬೇಕಲ್ಲದೆ ಬಿಸಾಡುವರುಂಟೆ ? ಹೀಗೆಯೇ ಕೆಲವು ದಿನಗಳವರೆಗೆ ತಾಳಿಯಿದ್ದರೆ ಇವನೇ ಅಭ್ಯಾಸವಶದಿಂದ ಯುಕ್ತಿಗಳನ್ನರಿತು ಗಟ್ಟಿಗನಾಗಬಾರದೇಕೆ ? " ಎಂದು ತನಗೆ ತಾನೆ ಆಲೋಚನೆಯಿಂದ ನಿರ್ಧರಿಸಿಕೊಂಡು ಅವನನ್ನು ಬಿಡದೆ ಊಳಿಗಕ್ಕಿಟ್ಟುಕೊಂಡಿದ್ದನು ಮುದ್ದುವೀರನು ಮಾಡಿದ ತಪ್ಪುಗಳಲ್ಲಿ ಇದು ಮೂರನೆಯದು.

ಹೆಗ್ಗಡೆಯು ಮದುವೆಯ ಸಂಭಾರವನ್ನೆಲ್ಲ ಸಿದ್ಧಪಡಿಸಿಕೊಂಡು ಬರಬೇಕಾದ ಮುಖ್ಯ ಬಂಧುಗಳನ್ನೆಲ್ಲ ಕರೆದುಕೊಂಡು ಹತ್ತಾರುಬಂಡಿಗಳನ್ನು ಕಟ್ಟಿಸಿ ಮನೆಯ ಬಾಗಿಲುಗಳಿಗೆ ಒಳ್ಳೆಯ ಬೀಗಗಳನ್ನು ಹಾಕಿ ಭದ್ರಪಡಿಸಿ, ಮುದ್ದು ಸೇವಕನನ್ನೂ ಕರೆದುಕೊಂಡು ಮದುವೆಗೆ ಹೊರಟನು. ಆಗ ಕೃಷ್ಣಪಕ್ಷದ ದಿನಗಳು ಆಗಿನ ಕಾಲದಲ್ಲಿಯೂ ಬಂಡಿಗಳ ಪ್ರಯಾಣವು ರಾತ್ರಿಯವೇಳೆಗಳಲ್ಲಿ ಸಾಗುತ್ತಿದ್ದಿತು. ಹೆಗ್ಗಡೆಯು ಸೇವಕನನ್ನು ಕರೆದು “ ಎಲಾ ಮುದ್ದುರಂಗಾ ! ಇದು ಕತ್ತಲೆಯಕಾಲ ರಾತ್ರಿಯೆಲ್ಲ ಬಂಡಿಗಳು ನಡೆಯಬೇಕಾಗಿದೆ ದೊಡ್ಡ ಮನುಷ್ಯರನೇಕರು ಬರುತ್ತಿರುವರು ಅವರು ಬಂಡಿಗಳಲ್ಲಿ ಮಲಗಿ ನಿದ್ರಿಸುತ್ತಿರುವಾಗ ಅವರ ಪದಾರ್ಥಗಳಲ್ಲಿ ಯಾವುದಾದರೂ ಕೆಳಕ್ಕೆ ಬಿದ್ದರೆ ಅವುಗಳನ್ನವರರಿಯದೆ ಹೋಗಬಹುದು ಆದುದರಿಂದ ನೀನು ಬಂಡಿಗಳ ಹಿಂದೆಯೇ ನಡೆದುಬರುತ್ತ ಯಾವ ಬಂಡಿಯಿಂದಲಾಗಲಿ ಯಾವುದಾದರೂ ಕೆಳಕ್ಕೆ ಬಿದ್ದರೆ ಅದನ್ನೆತ್ತಿ ಬಂಡಿಗಳಲ್ಲಿಡುತ್ತಲಿರು ತಿಳಿಯಿತೇ ? ಎಚ್ಚರಿಕೆ ! ” ಎಂದಾಜ್ಞಾಪಿಸಿ ತಾನು ತನ್ನ ಕಳತ್ರ ಪುತ್ರರೊಡನೆ ಒಂದು ಬಂಡಿಯಲ್ಲಿ ಕುಳಿತುಕೊಂಡನು.

ಬಂಡಿಗಳು ಒಂದರಹಿಂದೊಂದು ಸಾಲಾಗಿ ಹೊರಡತೊಡಗಿತು ಎರಡು ಯಾಮಗಳವರೆಗೆ ಅವನು ಬಂಡಿಗಳ ಹಿಂದೆಯೇ “ ಯಾವಾಗ ಯಾವ ವಸ್ತುವು ಕೆಳಕ್ಕುರುಳುವುದೋ ” ಎಂದು ಭಯದಿಂದ ನೋಡಿಕೊಳ್ಳುತ್ತಲಿ ಬರುತ್ತಿದ್ದನು. ಆಬಳಿಕ ನಡೆವುದಕ್ಕೆ ಅವನಿಗೆ ಸಾಧ್ಯವಿಲ್ಲದೆ ಹೋಯಿತು ಅವನಿಗೆ ಅಧಿಕವಾದ ನಿದ್ರೆಯು ಆವೇಶಿಸಿತು ಆ ಗುಳಿಕೆಗಳು ಒಂದರಹಿಂದೊಂದು ಬರಹತ್ತಿತು ಬಂಡಿಗಳಲ್ಲಿ ಎಲ್ಲರೂ ಕುರುಕೆಗಳನ್ನಿಡುತ್ತ ನಿದ್ರಿಸುತ್ತಿರುವರು ಎತ್ತುಗಳು ತೂಕಡಿಕೆಯಿಂದ ತೂಗಾಡುತ್ತ ಮೆಲ್ಲಗೆ ನಡೆಯುತ್ತಿರುವುವು ಇದನ್ನುಕಂಡ ಮುದ್ದುವೀರನಿಗೆ ತಡಯಲಾರದಂತೆ ನಿದ್ರೆಯು ಬಂದಿತು ಹೆಗ್ಗಡೆಯ ಆಜ್ಞೆಗೆ ಹೆದರಿ ಬಾರಿಬಾರಿಗೂ ತೂಂಕಡಿಸಿ ಮುಗ್ಗರಿಸಿ ಬೀಳುತ್ತಲೂ ಏಳುತ್ತಲೂ ಮಹಾಕಷ್ಟದಿಂದ ನಡೆಯುತ್ತಿದ್ದನು. ಆ ಸಮಯದಲ್ಲಿ ಎತ್ತುಗಳು ಒಂದೊಂದಾಗಿ ಸಗಣಿಯನ್ನು ಹಾಕುತ್ತಬಂದುವು ಅವುದು ಬಿದ್ದರೂ ಎತ್ತಿ ಬಂಡಿಗಳಲ್ಲಿ ಹಾಕಬೇಕೆಂದಲ್ಲವೆ ಒಡೆಯನಾಜ್ಞೆ ? ಕೃಷ್ಣಪಕ್ಷದ ರಾತ್ರಿಗಳು ನಿದ್ರೆಯಮಂಕು ಮುದ್ದುರಂಗನಿಗೆ ಬೀಳುತ್ತಿರುವುದೇನು ಗಣ್ಯವಾದ ಪದಾರ್ಥವೇ ಅಲ್ಲವೆ ? ಎಂಬ ಜ್ಞಾನವೇ ಇಲ್ಲ ತಟತಟನೆ ಸೆಗಣಿ ಕೆಳಕ್ಕೆ ಬಿದ್ದಾಗಳೆಲ್ಲ ಆಯಾ ಬಂಡಿಯ ಎತ್ತುಗಳ ಸೆಗಣಿಯೆಲ್ಲವನ್ನೂ ಎತ್ತಿ ಆ ಬಂಡಿಯೊಳಕ್ಕೆ ಹಾಕುತ್ತಿದ್ದನು ಬೆಳಗಾಯಿತು ಆವೇಳೆಗೆ ಆ ಸೇವಕನು ಹಿಂದೆ ಬಿದ್ದು ಮೆಲ್ಲಮೆಲ್ಲನೆ ನಡೆಯುತ್ತ ಬರುತ್ತಿದ್ದನು ಶಕಟಚೋದಕರು (ಬಂಡಿಯನ್ನು ನಡೆಯಿಸುವರು ಬಂಡಿಹೋವರು) ಎಚ್ಚತ್ತು ಹೊಡೆಯುತ್ತಬಂದುದರಿಂದ ಎತ್ತುಗಳು ಬೇಗಬೇಗನೆ ನಡೆಯಲಾರಂಭಿಸಿದುವು ಸೂರ್ಯೋ

ದಯವಾಗುವವೇಳೆಗೆ ಬಂಡಿಗಳು ದಾರಿಯನಡುವೆ ಒಂದು ಸತ್ರವನ್ನು ಸೇರಿ ನಿಂತವು ಎಲ್ಲರೂ ನಿದ್ರೆಯಿಂದೆಚ್ಚತ್ತರು.

ಅಯ್ಯೋ! ಪಾಪ! ಆ ಬಂಡಿಗಳಲ್ಲಿ ಪ್ರಯಾಣಮಾಡಿ ಬಂದವರೆಲ್ಲ ಭಾಗ್ಯವಂತರು ತಾವು ಹೋಗುವಕಡೆಯಲ್ಲಿ ಮದವಣಿಗಿತ್ತಿಯ ಕಡೆಯವರು ತಮ್ಮನ್ನು ನೋಡುವುದಕ್ಕೆ ಬಂದರೆ ಡಂಭನಾಗಿರಲೆಂದು ಅಮೂಲ್ಯ ವಸ್ತ್ರಾಭರಣಗಳನ್ನು ಧರಿಸಿ ಬಂದಿದ್ದರು ಅವರ ಆಲೋಚನೆಯೆಲ್ಲವೂ ನಿರರ್ಥಕವಾಯಿತು ಏನು ಹೇಳುವುದು ? ಅವರ ಅಮೂಲ್ಯಗಳಾದ ವಸ್ತ್ರಗಳೆಲ್ಲವೂ ಸೆಗಣಿಯಿಂದ ತುಂಬಿದ್ದಿತು ಅವರ ದೇಹಗಳೆಲ್ಲವೂ ಸೆಗಣಿಯಿಂದ ಎಳೆದಹಾಗಾಗಿದ್ದುವು ತಾವು ಈ ಸ್ಥಿತಿಗೆ ಬರುವುದಕ್ಕೇನು ಕಾರಣವೋ ಎನನಗೆ ತಿಳಿಯಲೇ ತಿಳಿಯದು ಅನಕ್ಕ ಪಡುವರು ಕೆಲವು ಕಾರಣವನ್ನೂಹಿಸುತ್ತಿರುವವರು ಕೆಲವರು ದುಃಖಿಸುತ್ತಿರುವವರು ಕೆಲವರು ಆಗಿದ್ದರು ಇದು ಹೀಗಾಗಿರುವುದೆಂದು ಯಾರೂ ಊಹಿಸಲಾರದೆ ಹೋದರು ಎಲ್ಲರೂ ಆಶ್ಚರ್ಯಮಗ್ನರಾಗಿ ನಿಶ್ಚೇಷ್ಟತೆಯಿಂದಿದ್ದರು ಅಷ್ಟರಲ್ಲಿ ಹಿಂಬಾಲಿಸಿ ಮೆಲ್ಲನೆ ಬರುತ್ತಿದ್ದ ಮುದ್ದುವೀರನು ಅಲ್ಲಿಗೆ ಬಂದು ಸೇರಿದನು. ವಿವಾಹಮಹೋತ್ಸವಕ್ಕೆಂದು ಹೊರಟವರು "ಎಲಾ ಮುದ್ದುವೀರ! ನೀನು ರಾತ್ರಿಯೆಲ್ಲಾ ಬಂಡಿಗಳ ಹಿಂದೆಯೇ ಅಲ್ಲವೆ ಬರುತ್ತಿದ್ದುದು ? ಇಗೋ ನೋಡು ನಮ್ಮ ಶರೀರಗಳನ್ನೂ ಬಟ್ಟೆಗಳನ್ನೂ ನಾವು ನಿದ್ರೆಯಿಂದೆದ್ದು ನೋಡಲಾಗಿ ಹೀಗೆ ಸಮಸ್ತವೂ ಸೆಗಣಿಮಯವಾಗಿರುವುದಲ್ಲ! ಹೇತುವೇನಿರಬಹುದು ? ಹೀಗೆ ಗೋಮಯಮಯವಾಗುವುದಕ್ಕೆ ಕಾರಣವೇನಾದರೂ ನಿನಗೆ ತಿಳಿವುದೇ ?" ಎಂದು ಕೇಳಿದರು. ಅವರು ಹೀಗೆ ಕೇಳುತ್ತಲೇ ಆ ಮೂರ್ಖನಿಗೆ ಅಪರಿಮಿತವಾದ ಕೋಪವುಂಟಾಯಿತು ಮುಖವೆಲ್ಲವೂ ಕೆಂಪಾಯಿತು ಅವನವರನ್ನು ಕ್ರೂರದೃಷ್ಟಿಯಿಂದ ನೋಡುತ್ತ "ಓಹೋ! ಹೀಗೆ ಕೇಳುವಿರೇಕೆ ? ಏನಾಯಿತು "ನಿನಗೆ ತಿಳಿವುದೇ" ಎಂದು ಕೇಳಬೇಕೆ ? ಏಕೆ ತಿಳಿಯದೆಹೋಗುವುದು ? ನಾವು ಪ್ರಯಾಣವಾಗಿ ಬರುವಾಗ ನಮ್ಮ ಹೆಗ್ಗಡೆಯ ಆಜ್ಞೆಯೇನಾಯಿತೆಂಬುದು ನಿಮಗೆ ಜ್ಞಾಪಕವಿಲ್ಲವೆ ? ಮೈಮರೆತು ಹೋಗುವಷ್ಟು ನಿದ್ರೆ ನಿಮಗೆ ಹೇಗೆ ಬಂದಿತಯ್ಯಾ! ಅಯ್ಯೋ! ನಾನೊಂದುವೇಳೆ ಹಿಂದೆ ನಡೆದುಕೊಂಡು ಬಾರದಿದ್ದಪಕ್ಷದಲ್ಲಿ ನಮ್ಮ ಎತ್ತುಗಳಿಟ್ಟ ಸೆಗಣಿಯೆಲ್ಲವೂ ವ್ಯರ್ಥವಾಗಿ ಹೋಗುತ್ತಿದ್ದಿತಲ್ಲವೆ ? ನಾನು ಜಾಗರೂಕತೆಯಿಂದ ಬರುತ್ತ ಎತ್ತುಗಳು ಸೆಗಣಿಯನ್ನು ಹಾಕುತ್ತಲೇ ಬಂಡಿಗಳೊಳಕ್ಕೆ ಅದನ್ನು ಹಾಕಿಬಿಡುತ್ತಿದ್ದೆನು" ಎಂದು ನುಡಿದನು. ಇದೆಲ್ಲವೂ ಈ ಮೂರ್ಖನ ಕೃತ್ಯವೆಂದೇ ಎಲ್ಲರೂ ತಿಳಿದುಕೊಂಡರು ಕೆಲವರು ಅತ್ಯುಗ್ರತೆಯಿಂದ ಅವನನ್ನು ಹೊಡೆವುದಕ್ಕೆ ಹೋದರು. ಹಲವರು ಅವನು ಬುದ್ಧಿಹೀನತೆಯಿಂದ ಮಾಡಿದ ಕೆಲಸವನ್ನು ಕುರಿತು ಅವ

ಅಧಿಕಪ್ರಸಂಗವನ್ನು ಕುರಿತು ನಗಲಾರಂಭಿಸಿದರು ಆ ಮೂಢನನ್ನೇನ ಮಾಡಿ ದರೆತಾನೆ ಫಲವೇನು ? ಹೆಗ್ಗಡೆಯ ಬಂಧುಗಳು ಅವನಗೊಡವೆಗೆ ಹೋಗದೆ ಮೂಟೆಗಳಲ್ಲಿಯೂ ಪೆಟ್ಟಿಗೆಗಳಲ್ಲಿಯೂ ಇದ್ದುದರಿಂದ ಸೆಗಣಿಗೆ ಸಿಕ್ಕದೆ ಉಳಿ ದಿದ್ದ ಸಲವೆಯ ಬಟ್ಟೆಗಳನೆಲ್ಲರೂ ಧರಿಸಿದರು ಒಡವೆಗಳನ್ನು ಚೆನ್ನಾಗಿ ತೊಳೆದು ಅಲಂಕರಿಸಿಕೊಂಡರು ಸೆಗಣಿಯು ಸ್ಪರ್ಶವುಂಟಾಗಿದ್ದ ಬಟ್ಟೆಗಳನ್ನು ಅಲ್ಲಿದ್ದ ಒಂದು ಕೆರೆಯಲ್ಲಿ ಚೆನ್ನಾಗಿ ಒಗೆದು ಒಣಗಿಸಿಕೊಂಡರು.

ಹೀಗೆ ಹೆಗ್ಗಡೆಯ ನೆಂಟರಿಷ್ಟರೆಲ್ಲರೂ ಸುಮ್ಮನಾದರೂ ಹೆಗ್ಗಡೆಯು ಮಾತ್ರ ಸುಮ್ಮನಾಗಲಿಲ್ಲ. ತನ್ನ ಬಂಧುಗಳ ಬಟ್ಟೆಬರೆಗಳನ್ನು ಹಾಗೆ ಕೊಳಕು ಮಾಡಿದ ಆ ಮೂರ್ಖನನ್ನು ಸುಮ್ಮನೆ ಬಿಡಬಾರದೆ, ಅವನನ್ನು ಹಿಡಿದೆಳೆದು ತಂದು ಜುಟ್ಟನ್ನು ಹಿಡಿದು ತಲೆಯನ್ನು ಮೇಲಕ್ಕೆತ್ತಿ "ಎಲಾ ಪಶುವೇ ! ಬಂಡಿ ಯಿಂದ ಯಾವುದಾದರೊಂದು ಪದಾರ್ಥವು ಕೆಳಕ್ಕೆ ಬಿದ್ದರೆ ಎತ್ತಿ ಬಂಡಿಯ ಲ್ಲಿಡು" ಎಂದು ಹೇಳಿದೆನಲ್ಲವೆ ಎತ್ತುಗಳಿಟ್ಟ ಸಗಣಿಯನ್ನು ಬಂಡಿಯೊಳಕ್ಕೆ ಹಾಕುವಂತೆ ಆಜ್ಞಾಪಿಸಿದನೆ? ಇಷ್ಟುಮಟ್ಟಿಗೆ ಬುದ್ಧಿಯಿಲ್ಲವೆ ? ಎಂದು ನುಡಿದು ಮೈಯೆಲ್ಲ ಬಾಸುಂಡೆಗಳೇಳುವಂತೆ ಬೆತ್ತದಿಂದ ಚೆನ್ನಾಗಿ ಹೊಡೆದನು. ಕೆಲ ಬಂಧುಗಳೋಡಿಬಂದು ಕನಿಕರದಿಂದ ಅವನನ್ನು ಬಿಡಿಸಿಬಿಟ್ಟರು" ಇದು ಮುದ್ದು ವೀರನ ನಾಲ್ಕನೆಯ ಅಪರಾಧವು.

ಹೆಗ್ಗಡೆಯೂ ಆತನ ಬಂಧುಗಳೂ ಆ ನಿಲ್ದಾಣದಿಂದ ಹೊರಟು ಮದುವ ಣಗಿತ್ತಿ ಇರುವ ಕನಕನಹಳ್ಳಿಯನ್ನು ಸೇರಿದರು. ಬೀಗರು ಹೆಗ್ಗಡೆಗೂ ಆತನ ಬಂಧುವರ್ಗಕ್ಕೂ ಅನುಕೂಲವಾದ ಬಿಡದಿಯನ್ನು ತೋರಿಸಿ ತಮ್ಮ ಕುಲಧರ್ಮ ದಂತೆ ಮಹಾವೈಭವದಿಂದ ವಿವಾಹ ಮಹೋತ್ಸವವನ್ನು ನೆರವೇರಿಸಿದರು. ವಧುವು ಇನ್ನೂ ಪ್ರೌಢಸ್ಥಿತಿಗೆ ಬಂದಿಲ್ಲ. ಆದರೂ ಅವರ ಕುಲಾಚಾರದಂತೆ ಮುಹೂರ್ತವಾದ ದಿನದಿಂದ ಮೂರು ದಿನಗಳು ಮದವಣಿಗನು ಅತ್ತೆಯ ಮನೆ ಯಲ್ಲಿ ರಾತ್ರಿಹೊತ್ತು ಮಲಗಿಕೊಳ್ಳಬೇಕಾದ ನಿಯಮವಿದ್ದುದರಿಂದ ಆರೀತಿ ಯಾಗಿಯೇ ಮೊದಲನೆಯದಿನದಲ್ಲಿ ತಕ್ಕಹಾಗೆ ಏರ್ಪಡಿಸಿದರು. ಸರ್ವಾಲಂ ಕಾರಸಂಗತವಾದ ಒಂದು ಕೊಟ್ಟಡಿಯಲ್ಲಿ ವರನಿಗೆ ಹಾಸಿಗೆಯನ್ನು ಹಾಸಿ ಕೊಟ್ಟರು. ಹೆಗ್ಗಡೆಯು ತನ್ನ ಮೂಢಸೇವಕನನ್ನು ಕರೆದು "ಎಲಾ ಮುದ್ದು ವೀರ! ನಮ್ಮ ಹುಡುಗನಿನ್ನೂ ಚಿಕ್ಕವನು. ನೀನು ಅವನು ಮಲಗುವ ಮನೆಯಲ್ಲಿ ತಕ್ಕ ಸೌಕರ್ಯಗಳನ್ನಣಿಮಾಡಿ ಅವನು ಮಲಗಿಕೊಂಡ ಬಳಿಕ ಬಾಗಿಲನ್ನು ಮುಚ್ಚಿಕೊಂಡು ಬಾ" ಎಂದಪ್ಪಣೆಮಾಡಿದನು. ಅವನಾಪ್ರಕಾರವಾಗಿ ತಾನಾ ಗಿಯೇ ಶಯ್ಯಾಗೃಹದ ಪ್ರವೇಶವು ದೊರೆತಬಗ್ಗೆ ಸಂತೋಷಿಸುತ್ತ ಆ ಕೊಟ್ಟಡಿ ಯನ್ನು ಹೊಕ್ಕು ಹಾಸಿಗೆಯನ್ನು ಕೊಡಹಿ ಹಾಸುವದು, ಅದರಮೇಲೆ ಮಗ್ಗಲು

ಹಾಸಿಗೆಯನ್ನು ಹಾಸುವುದು, ತಲೆಗಿಂಬುಗಳನ್ನು ಸೇರ್ಪಡಿಸುವುದು, ದೀಪಗಳನ್ನು ಬೆಳಗಿಸುವುದು, ಹಣ್ಣುಗಳು, ಭಕ್ಷ್ಯಗಳು, ಹಾಲು, ತಾಂಬೂಲ, ಗಂಧಪುಷ್ಪಗಳು ಮೊದಲಾದುವನ್ನು ತಂದಿಡುವುದು ಮೊದಲಾದ ಕೆಲಸಗಳನ್ನು ಮಾಡುತ್ತಿದ್ದನು ಬಳಿಕ ತಾನು ತಂದಿಟ್ಟ ಬಗೆಬಗೆಯ ಹಣ್ಣುಗಳು ಮೊದಲಾದುವನ್ನು ನೋಡುತ್ತ ನೋಡುತ್ತ ಅವನ ಬಾಯಿಯಲ್ಲಿ ನೀರೂರತೊಡಗಿತು ಅವುಗಳನ್ನು ತಿನ್ನಬೇಕೆಂಬ ಆಸೆಯವನನ್ನು ಬಾಧಿಸತೊಡಗಿತು ಅವನು ತನ್ನಲ್ಲಿ "ಆಹಾ! ಎಂತಹ ಭಕ್ಷ್ಯಗಳಿವು? ಘಮಘಮಿಸುವ ಇವುಗಳನ್ನು ನೋಡಿದಕೆ ನನ್ನ ಬಾಯಿಯಲ್ಲಿ ನೀರು ಊರುತ್ತಿರುವುದು ಈ ಹಣ್ಣುಗಳೋ! ಇವುಗಳಿಗೆ ಯಾವ ಯಾವ ಹೆಸರಿರುವುದೋ! ತಿಳಿಯದು ಸ್ವಲ್ಪ ರುಚಿನೋಡಲೇ? ಆಗಲಿ! ಇವುಗಳೆಲ್ಲ ಮರ್ಯಾದೆಗಾಗಿ ಇಡಲ್ಪಟ್ಟಿರುವುವೇ ಹೊರತು ತಿಂದುಬಿಡುವುದಕ್ಕಲ್ಲವೆಂದು ತೋರುವುದು ಇವುಗಳನ್ನು ಹೆಗ್ಗಡೆಯ ಮಗನಾದ ಬೆಟ್ಟದಪ್ಪನು ತಿನ್ನುವನೇ? ಸಕಲ ಪದಾರ್ಥಗಳನ್ನೂ ಸಂತುಷ್ಟಿಯಾಗಿ ತಿಂದು ಇರುವ ಈ ಪುಟ್ಟ ಬೆಟ್ಟದಪ್ಪನಿಗೆ ಈ ಪದಾರ್ಥಗಳೇತಕ್ಕೆ? ಇವುಗಳಮೇಲೆ ಮನಸ್ಸಾದರೂ ಹೋಗುವುದೇ? ಇವುಗಳನ್ನು ಕಣ್ಣಿಂದಲಾದರೂ ನೋಡುವನೇ? ಇಲ್ಲ! ಇಲ್ಲ!! ಈ ರಾತ್ರಿ ಕಳೆದು ಬೆಳಗಾದಮೇಲೆ ಯಾವ ಪರಿಚಾರಕನೋ ಬಂದು ತೆಗೆದುಕೊಂಡು ಹೋಗಿ ತಿಂದುಬಿಡುವನು ಯಾವನಿಗೋ ಏತಕ್ಕಾಗಬೇಕು ಇವುಗಳನ್ನು ನಾನೇ ಏತಕ್ಕೆ ತಿನ್ನಬಾರದು? ಇದರಿಂದುಂಟಾಗುವ ಪ್ರಮಾದವು ತಾನೆ ಏನು? ತಿಂದು ನನ್ನಾಶೆಯನ್ನು ತೀರಿಸಿಕೊಳ್ಳುವೆನು ಇವುಗಳನ್ನು ಕುರಿತು ಯಾರೂ ಪ್ರಶ್ನೆಮಾಡಲಾರರು ಇವುಗಳನ್ನಾರೂ ನೋಡಲೂ ಆರರು" ಎಂದು ಭಾವಿಸಿ ಆ ಪದಾರ್ಥಗಳೆಲ್ಲವೂ ಮಿತವಾಗಿಯೇ ಇದ್ದುದರಿಂದ ಅವನು ತಿನ್ನುವುದಕ್ಕೆ ಪ್ರಾರಂಭಿಸಿ ಒಂದೆರಡಾದರೂ ಉಳಿಯದಂತೆ ಎಲ್ಲವನ್ನೂ ತಿಂದು ಹಾಲನ್ನೂ ಕುಡಿದುಬಿಟ್ಟನು. ಹೀಗೆ ತಿಂದಬಳಿಕ ಅವಿವೇಕಿಯಾದ ಅವನಿಗೆ ಹೆದರಿಕೆಯುಂಟಾಯಿತು ನಡುಕಹತ್ತಿತು "ಅಯ್ಯೋ! ಸತ್ತೆನು! ಸತ್ತೆನು!! ಎಂತಹ ಕೆಟ್ಟಕೆಲಸವನ್ನು ಮಾಡಿದೆನು ಹೆಗ್ಗಡೆಯು ಕಂಡರೆ ಸುಮ್ಮನೆ ಬಿಡುವನೆ? ಹಣ್ಣುಹಂಪಲುಗಳನ್ನಿಟ್ಟಿದ್ದ ತಟ್ಟೆಗಳೆಲ್ಲವೂ ಬರಿಯವಾಯಿತಲ್ಲ! ಬೆಟ್ಟದಪ್ಪ ಹೆಗ್ಗಡೆಯೊಂದುವೇಳೆ ಬಯಸಿ ಏನನ್ನಾದರೂ ತಿನ್ನಬೇಕೆಂದು ಬರುವಿಕೆಯು ತಟಸ್ಥಿಸಿದರೆ ಆಗ ನನ್ನ ಗತಿಯೇನಾಗುವುದೋ ತಿಳಿಯದಲ್ಲ ಆಲೋಚಿಸದೆ ಆತುರಪಟ್ಟು ತಪ್ಪುಕೆಲಸವನ್ನು ಮಾಡಿದೆನಲ್ಲ! ಕಳೆದುದು ಕಳೆಯಿತು ಇನ್ನು ಚಿಂತಿಸಿ ಫಲವೇನು? ಆಗಲಿ! ಈ ಸಂಕಟವನ್ನು ಜಾಣ್ಮೆಯಿಂದ ಸಾಕಾಗುವಷ್ಟು ಪ್ರಯತ್ನಿಸಿ ತಪ್ಪಿಸಿಕೊಳ್ಳಬೇಕು" ಎಂದಾಲೋಚಿಸಿ ಪಕ್ಕದ ಕೊಟ್ಟಡಿಗೆಗೆ ಹೋದನು ಅಲ್ಲಿ ಆಕಡೆ ಈಕಡೆ ನೋಡಿದನು ಅಲ್ಲಿ ಒಂದು ಚಾಪೆಯಮೇಲಿ

ಡಲ್ಪಟ್ಟಿದ್ದ ಒಂದೆರಡು ಸೇರಿನಷ್ಟು ಹುಣಿಸೆಯಹಣ್ಣನ್ನೂ ಒಂದು ತಂಬಿಗೆಯಲ್ಲಿ ಒಂದೆರಡು ಸೇರಿನಷ್ಟು ಹರಳೆಣ್ಣೆಯನ್ನೂ ಕಂಡನು ಅವನಿಗೆ ಅತಿಸಂತೋಷವಾಯಿತು ಅದನ್ನು ರಹಸ್ಯವಾಗಿ ತಂದು ಶಯ್ಯಾಗೃಹದಲ್ಲಿ ತಟ್ಟೆಗಳನ್ನಿಟ್ಟಿದ್ದ ಸ್ಥಲದಲ್ಲಿಟ್ಟು ಆ ತಟ್ಟೆಗಳನ್ನು ಮಂಚದಕೆಳಗೆ ಬಚ್ಚಿಟ್ಟನು.

ಆ ರಾತ್ರಿ ಎಲ್ಲರಿಗೂ ಊಟ ಉಪಚಾರಗಳಾದುವು ಪ್ರತಿಯೊಬ್ಬರೂ ಅವರವರಿಗೆ ಅನುಕೂಲವಾಗಿರುವ ಕಡೆಗಳಲ್ಲಿ ಹಾಸಿಕೊಂಡು ಮಲಗಿದರು ಬೆಟ್ಟದಪ್ಪಹೆಗ್ಗಡೆಯು ತನಗಾಗಿಯೇರ್ಪಡಿಸಿದ್ದ ಕೊಟ್ಟಡಿಯನ್ನು ಪ್ರವೇಶಿಸಿ ಆ ಅಲಂಕಾರ ವಿಧಾನವನ್ನು ತಿರುತಿರುಗಿ ನೋಡುತ್ತ ಮಂಚದಮೇಲಕ್ಕೆ ಹೋದನು. ಒಡೆಯನ ಆಜ್ಞೆಯಂತೆ ಮುದ್ದುವೀರನು ಬಾಗಿಲನ್ನು ಮುಚ್ಚಿಕೊಂಡುಹೋಗಿ ಯಾವುದೋ ಒಂದು ಮಹಾಕಾರ್ಯವನ್ನು ಸಾಧಿಸಿದವನಂತೆ ಸಂತೋಷದಿಂದ ಕುಣಿಯುತ್ತ ತಾನೊಂದುಕಡೆ ಸ್ಥಿರಮನಸ್ಸಿನಿಂದ ಮಲಗಿದನು ಒಡನೆಯೇ ನಿದ್ದೆಹತ್ತಲು ಕುರುಕುಗಳನ್ನಿಡುತ್ತ ಮೈಮರೆತನು.

ಅತ್ತ ಮದವಣಿಗನು ಮಂಚದಮೇಲೆ ಮಲಗುವುದಕ್ಕೆಮುಂಚೆ ಮಂಚದ ಬಳಿಯಲ್ಲಿಟ್ಟಿದ್ದ ಹುಣಿಸೆಯ ಹಣ್ಣನ್ನೂ ಎಣ್ಣೆಯ ತಂಬಿಗೆಯನ್ನೂ ನೋಡಿದನು ಇವನು ಮುದ್ದುವೀರನಿಗಿಂತಲೂ ಬುದ್ಧಿವಂತನು ಹೀಗೆಂದು ಆಲೋಚಿಸಿದನು. "ಎಲ್ಲೆಲ್ಲಿಯೂ ಮಾವನ ಮನೆಯ ಮಲಗುವ ಮನೆಯನ್ನು ಚೆನ್ನಾಗಿ ಅಲಂಕರಿಸುವುದೂ, ಮದವಣಿಗನು ತಿನ್ನುವುದಕ್ಕಾಗಿ ಒಗೆಬಗೆಯ ಭಕ್ಷ್ಯಗಳೂ, ಹಣ್ಣುಹಂಪಲುಗಳೂ, ಹಾಲೂ ಇಡಲ್ಪಡುವುದೆಂದು ನಾನಲ್ಲಲ್ಲಿ ಕೇಳಿರುವೆನು ಇಲ್ಲಿ ಈಗ ಹುಣಿಸೆಯಹಣ್ಣೂ ಅವುಡಲೆಣ್ಣೆಯೂ ಇಡಲ್ಪಟ್ಟಿರುವುದು ಏಕೆ ? ಮದುವೆಯಲ್ಲಿ ಹೀಗೆ ಇಡಲ್ಪಟ್ಟ ಹುಣಿಸೆಯಹಣ್ಣನ್ನು ತಿಂದು ಅವುಡಲೆಣ್ಣೆಯನ್ನು ಕುಡಿವುದು ಅಳಿಯನಿಗೆ ಪದ್ಧತಿಯಾಗಿರಬಹುದೇನೋ ? ಹಾಗಿಲ್ಲದಿದ್ದರೆ ಈ ಪದಾರ್ಥಗಳನ್ನು ಮಾತ್ರ ಇಲ್ಲಿಟ್ಟಿರುವುದಕ್ಕೆ ಕಾರಣವೇನು ? ನಾನೊಂದುವೇಳೆ ಇವುಗಳನ್ನು ಉಪಯೋಗಪಡಿಸಿಕೊಳ್ಳದಿದ್ದರೆ ನನ್ನನ್ನು ಅನಾಗರಿಕನೆಂದೂ ಆಚಾರವಿಚಾರವನ್ನರಿಯದವನೆಂದೂ ತಿರಸ್ಕರಿಸುವರೋ ಹೇಗೋ ! ಪರಿಹಾಸಮಾಡುವರೊ ? ಇಂತಹ ಆಚಾರವನ್ನು ಹಿಂದೆ ನಾನೆಂದೂ ಕೇಳಿಲ್ಲ ಮಾವನ ಮನೆಯ ಆಚಾರವನ್ನು ನಾನು ಅನುಸರಿಸಬೇಕಾದುದು ಧರ್ಮವೇ ಅಲ್ಲವೇ ? " ಎಂದು ಬಗೆದು ತಟ್ಟೆಯಲ್ಲಿಟ್ಟಿದ್ದ ಹುಣಿಸೆಯಹಣ್ಣನ್ನು ಅತಿಕಷ್ಟದಿಂದ ತಿಂದು, ಅವುಡಲೆಣ್ಣೆಯನ್ನು ತೀರಕುಡಿದನು ಹೇಳಲಾಗುವುದೇ ಅವನ ಅವಸ್ಥೆಯನ್ನು ? ಎರಡೂ ಬೇದಿಯಾಗುವ ವಸ್ತುಗಳೇ ಆದುದರಿಂದ ಒಂದು ತಾಸಿನಮೇಲೆ ಹೊಟ್ಟೆಯಲ್ಲಿ ಸಂಕಟವುಂಟಾಗಿ ಹೊರಕ್ಕೆ ಹೋಗುವುದಕ್ಕೆಕೂಡ ಸಾಧ್ಯವಾಗದೆಯೆ ಬೇದಿಗಳಾಗುವುದಕ್ಕೆ ಮೊದಲಾಯಿತು ಅವನೇನು ಮಾಡಿಯಾನು ? ಆ

ರಾತ್ರಿಯೆಲ್ಲ ಲೆಕ್ಕವಿಡಲಾಗದಷ್ಟುಸಾರಿ ವಿರೇಚನವಾಯಿತು ಮಲಗುವ ಮನೆಯೆಲ್ಲವೂ ಮಲಮಯವಾಯಿತು ದುರ್ಗಂಧವು ತುಂಬಿತು ಬೆಳಗಾಗುತ್ತಲೇ ಮನೆಯವರು ಬಂದು ಬಾಗಿಲುತೆಗದು ನೋಡಿದರು ಮದವಣಿಗನು ಸ್ವಲ್ಪವೂ ಸ್ಮೃತಿಯಿಲ್ಲದಂತೆ ಆ ಕೊಳೆಯಲ್ಲಿಯೇ ಬಿದ್ದಿದ್ದನು ಆಗಲೂ ಬೇದಿಗಳು ನಿಲ್ಲದೆ ಆಗುತ್ತಲೇ ಇದ್ದಿತು.

ಆಕಸ್ಮಾತ್ತಾಗಿ ಅಷ್ಟು ಉಪದ್ರವವುಂಟಾಗುವುದಕ್ಕೆ ಕಾರಣವನ್ನರಿಯದೆ ಎಲ್ಲರೂ ಭಯಪಟ್ಟರು ಆಗ ಕೆಲವರು ವೈದ್ಯರನ್ನು ಹುಡುಕುವುದಕ್ಕೆ ಹೋದರು ಕೆಲರು ಯಾವ ಯಾವ ಚಿಕಿತ್ಸೆಯನ್ನೋ ಮಾಡತೊಡಗಿದರು ಕೆಲವರು ಯಾವುದೋ ಒಂದು ಭೂತದ ಸೋಂಕು ಆಗಿರುವುದೆಂದು ಮಂತ್ರಿಸಲಾರಂಭಿಸಿದರು ಅಲ್ಲಲ್ಲಿ ಔಷಧದ ಬರಣಿಗಳೂ ಬೇವಿನಸೊಪ್ಪು ವಿಭೂತಿಯ ಉಂಡೆಗಳೂ ನಿಂಬೆಯಹಣ್ಣುಗಳೂ ಕೋಳಿಯಮರಿಗಳೂ ತುಂಬಿದ್ದುವು. ಬೇವಿನಸೊಪ್ಪಿನಿಂದ ಮಂತ್ರಿಸಿ ವಿಭೂತಿಯನ್ನೆರಚಿ ನಿಂಬೆಯಹಣ್ಣುಗಳನ್ನು ಕುಯ್ದು ದಿಕ್ಕುದಿಕ್ಕಿಗೂ ಹಾಕಿ ಕೋಳಿಪಿಳ್ಳೆಗಳ ಕುತ್ತಿಗೆಗಳನ್ನು ಕತ್ತರಿಸಿದರು ಏನುಮಾಡಿದರೂ ಅವನಿಗೆ ಸ್ಮೃತಿಬರಲಿಲ್ಲ ಬೇದಿಗಳೂ ನಿಲ್ಲಲಿಲ್ಲ ಆಗ ಮುಪ್ಪುವೀರನು ತನಗಾ ಮದುವೆಯಲ್ಲಿ ಸ್ನೇಹಿತರಾದವರಲ್ಲಿ ಒಬ್ಬನೊಡನೆ ರಹಸ್ಯವಾಗಿ “ ಅಯ್ಯಾ ! ನಿನ್ನೆಯರಾತ್ರಿ ಮಲಗುವ ಮನೆಯಲ್ಲಿ ಮಣಸೆಯಹಣ್ಣನ್ನೂ ಅವುಡಲೆಣ್ಣೆಯನ್ನೂ ಇಟ್ಟಿದ್ದರು ಅದನ್ನು ನಾನುಮಾತ್ರ ಇಡಲಿಲ್ಲ ಪ್ರಾಯಿಕವಾಗಿ ಆತನು ಅವೆರಡನ್ನೂ ಉಪಯೋಗಿಸಿಕೊಂಡಿರಬಹುದು ಅದರಿಂದಲೇ ಆತನಿಗೆ ವಿರೇಚನವುಂಟಾಗಿದೆ ಈಗ ಅದಕ್ಕೆ ತಕ್ಕ ಚಿಕಿತ್ಸೆಯನ್ನು ಮಾಡಿದರೆ ಮದುವೆಯ ಗಂಡು ಬದುಕಬಹುದು ” ಎಂದು ಮನಸ್ಕರಿಸಿದನು ಮಾದರೂ ಇರದೆ ಆನೆಯು ತನ್ನ ತಲೆಯಮೇಲೆ ತಾನೇ ಮಣ್ಣನ್ನೆರಚಿಕೊಳ್ಳುವಂತೆ ತನ್ನ ಕೆಲಸವನ್ನು ತಾನೇ ಹೇಳಿದನು ಆ ಸ್ನೇಹಿತನು ತನ್ನ ಯಜಮಾನನೊಡನೆ ಹೇಳಲು ಆ ವಿಷಯವು ಊರಿನಲ್ಲೆಲ್ಲರಿಗೂ ತಿಳಿಯಿತು ಅವನೇ ಈ ದುಷ್ಟಕೃತ್ಯವನ್ನು ಮಾಡಿರಬಹುದೆಂದು ಸಂದೇಹಿಸಿ ಹೆಗ್ಗಡೆ ಅವನನ್ನು ಕರೆದು ನಿಜವನ್ನು ಹೇಳೆಂದು ಪ್ರಹರಿಸಲು ಆ ಪ್ರಹಾರಗಳನ್ನು ತಡೆಯಲಾರದೆ ಅವನು ನಡೆದ ವಿದ್ಯಮಾನವನ್ನೆಲ್ಲ ಹೇಳಿದನು ಅವನನ್ನು ಎಷ್ಟು ಶಿಕ್ಷಿಸಿದರೂ ಬರುವ ಲಾಭವೇನು ? ತನ್ನ ಮಗನನ್ನು ಬದುಕಿಸಿಕೊಳ್ಳುವುದೇ ಮುಖ್ಯ ಕರ್ತವ್ಯವಾದುದರಿಂದ ವೈದ್ಯರನ್ನು ಕರೆಯಿಸಿ ತಾನೆಷ್ಟು ಲುಬ್ಧನಾದರೂ ವಿಧಿಯಿಲ್ಲದೆ ಅವರಿಗೆ ಅಧಿಕವಾದ ದ್ರವ್ಯವನ್ನು ಕೊಟ್ಟು ಎಷ್ಟೋ ಚಿಕಿತ್ಸೆಗಳನ್ನು ಮಾಡಿಸಿದನು ಕೊನೆಗೆ ಮದವಣಿಗನು ಮೃತ್ಯುಮುಖದಿಂದ ತಪ್ಪಿಸಿಕೊಂಡು ಒಂದು ತಿಂಗಳ ಕಾಲಕ್ಕೆ ಕಟ್ಟಿಗೆಯನ್ನೂರಿಕೊಂಡು ನಡೆವಸ್ಥಿತಿಗೆ ಬಂದನು ಅವನಿಗಾರೋಗ್ಯವುಂಟಾಗುವವರೆಗೆ ಹೆಗ್ಗ

ಡೆಯೂ ಆತನ ಹೆಂಡತಿಯೂ ಆ ಗ್ರಾಮದಲ್ಲಿಯೇ ವಾಸಮಾಡುತ್ತಿದ್ದು ಬಳಿಕ ಆರೋಗ್ಯವಂತನಾದ ಪುತ್ರನನ್ನು ಕರೆದುಕೊಂಡು ತನ್ನ ಗ್ರಾಮಕ್ಕೆ ಹೋದನು ಇದು ಆ ಮೂಢಕಿಂಕರನು ಮಾಡಿದ ಐದನೆಯ ಅಪರಾಧವು.

ಅದು ಮೊದಲ್ಗೊಂಡು ಬುದ್ಧಿಹೀನನಾದ ಆ ಸೇವಕನನ್ನು ಹೊರಡಿಸಿ ಮತ್ತೊಬ್ಬನನ್ನು ನಿಯಮಿಸಿಕೊಳ್ಳಬೇಕೆಂದಾ ಹೆಗ್ಗಡೆಯು ಆಲೋಚಿಸುತ್ತಿದ್ದನು ಆದರೆ ಆತನಿಗೆ ತಕ್ಕಮನುಷ್ಯನು ದೊರೆಯಲಿಲ್ಲ ಹೀಗಿರುತ್ತಿರಲು ಸೊಸೆಯು ಪುಷ್ಪವತಿಯಾಗಿರುವಂತೆಯೂ, ತಿಥಿ ವಾರ ನಕ್ಷತ್ರಾದಿಗಳತ್ಯುತ್ತಮವಾಗಿರುವುದರಿಂದ ವಿಕಾರಿ ಸಂವತ್ಸರದ ವೈಶಾಖ ಶುದ್ಧ ಸಪ್ತಮಿದಿನ ಋತುಶಾಂತಿಪ್ರಸ್ತುತಕ್ಕೆ ಪುರೋಹಿತರು ಮುಹೂರ್ತವನ್ನಿಟ್ಟಿರುವಂತೆಯೂ ಬೀಗನು ಕಾಗದವನ್ನು ಬರೆದು ಶುಭಚಿಹ್ನೆಗಳನ್ನಿಟ್ಟು ಕಳುಹಿಸಿದನು ಕಾಗದವನ್ನು ಕಂಡೊಡನೆಯೇ ಶುಭಸಂಭಾರಂಗಳೊಡನೆ ಬಂದು ಶಾಂತಿಪ್ರಸ್ತುತವನ್ನು ನೆರವೇರಿಸಿಕೊಂಡು ಹೆಣ್ಣನ್ನು ಕರೆದುಕೊಂಡು ಹೋಗಬೇಕೆಂದು ಅದರಲ್ಲಿ ಬರೆಯಲ್ಪಟ್ಟಿದ್ದಿತು ಲಗ್ನದ ದಿನಕ್ಕೆ ಹಿಂದಿನ ದಿನದಲ್ಲಿ ಬರುತ್ತೇವೆಂದು ಹೆಗ್ಗಡೆಯು ಉತ್ತರವನ್ನು ಬರೆದು ಅದೇ ಆಳಿನವಶಕ್ಕೆ ಕೊಟ್ಟುಕಳುಹಿದನು.

ಬಳಿಕ ಪ್ರಯಾಣಕ್ಕೆತಕ್ಕ ಸನ್ನಾಹವನ್ನು ಮಾಡಿದನು ಆದರೆ ಅಕಸ್ಮಾತ್ತಾಗಿ ಆತನಿಗೂ ಆತನ ಮಗನಿಗೂ ಜ್ವರವು ಬಂದುದರಿಂದ ಬೀಗನ ಕಾಗದದ ಬರೆವಣಿಗೆಯಂತೆ ವೈಶಾಖಶುದ್ಧ ಸಪ್ತಮಿ ಮುಹೂರ್ತಕ್ಕೆ ಹೋಗಲವಕಾಶವಾಗಲಿಲ್ಲ ತಮ್ಮ ಸ್ಥಿತಿಗತಿಗಳನ್ನು ಬೀಗನಿಗೆ ತಿಳಿಯಪಡಿಸಿ ಬೇರೊಂದು ಮುಹೂರ್ತವನ್ನು ನಿಶ್ಚಯಿಸುವಂತೆ ಮಾಡಬೇಕೆಂಬ ಉದ್ದೇಶದಿಂದ ತನ್ನ ಯಥಾಪ್ರಕಾರದ ಆಳನ್ನು ಬರಮಾಡಿಕೊಂಡು “ ಎಲಾ ! ನೀನು ತ್ವರೆಯಾಗಿ ಬೀಗರ ಊರಿಗೆ ಹೋಗಿ ನಮ್ಮ ರೋಗಸ್ಥಿತಿಯನ್ನು ಹೇಳಿ ಬೇರೊಂದು ಲಗ್ನವನ್ನು ಏರ್ಪಡಿಸುವಂತೆ ನಾನು ಹೇಳಿದೆನೆಂದು ಹೇಳು ಇಗೋ ಈ ಪತ್ರವನ್ನು ತೆಗೆದುಕೊಂಡು ಹೋಗು ಇದರಲ್ಲಿ ಈಗ ನಿನ್ನೊಡನೆ ಹೇಳಿದ ಸಮಾಚಾರವನ್ನೇ ಬರೆದಿದೆ ಇನ್ನೊಂದು ವಿಚಾರವೇನೆಂದರೆ:—ನೀನು ಇಲ್ಲದಸಲ್ಲದ ಮಾತುಗಳನ್ನಾಡುವ ಅಧಿಕಪ್ರಸಂಗಿ ಇದುವರೆಗೆ ನಿನಗೆ ಹೇಳಿದ ಕೆಲಸಗಳನ್ನೆಲ್ಲ ವಕ್ರವಕ್ರವಾಗಿ ಮಾಡಿರುವೆಯಲ್ಲದೆ ಸರಿಯಾಗಿ ಮಾಡಿಲ್ಲ ನನಗೆ ನಿನ್ನ ಭಯವೇ ಭಯವು ಯಾವಾಗ ಯಾವ ಕೆಟ್ಟಕೆಲಸವನ್ನು ಮಾಡುವೆಯೋ ಎಂದು ಭಯವಾಗುತ್ತಿದೆ ಒಂದು ಕೆಲಸವನ್ನು ಮಾಡು ಇಲ್ಲಿಂದ ನೇರವಾಗಿಹೋಗು ಅವರೊಡನೆ ಐದಾರು ಮಾತುಗಳಲ್ಲಿ ನಿನ್ನ ಸಂಭಾಷಣೆಯನ್ನು ಮುಗಿಸಿಕೊಂಡುಬಾ ಅತಿಭಾಷೆಯನ್ನಾಡಿದುದು ನನಗೆ ತಿಳಿದರೆ ನಿನ್ನ ಮೈಬಿರಿಯುವಂತೆ ಹೊಡೆಯದೆ ಬಿಡೆನು ಎಚ್ಚರಿಕೆ ನಾನು ಹೇಳಿದ ಕೆಲಸವನ್ನು ಮುಗಿಸಿಕೊಂಡು ಬೇಗನೆ ಬಂದುಬಿಡು ” ಎಂದು ಕಟ್ಟಾಜ್ಞೆಮಾಡಿ ಕಳುಹಿಸಿದನು.

ಮುದ್ದುರಂಗನು ಹೆಗ್ಗಡೆಯನ್ನು ಬೀಳ್ಕೊಂಡು ಆತನ ಬೀಗನಿರುವ ಕನಕನಹಳ್ಳಿಗೆ ಹೋಗುತ್ತಿರಲು ದಾರಿಯಲ್ಲಿ ಹೆಗ್ಗಡೆಯು ಕೊಟ್ಟ ಕಾಗದವೆಲ್ಲಿಯೋ ಜಾರಿ ಬಿದ್ದುಹೋಯಿತು ಮೊದಮೊದಲು ಅವನಿಗೆ ಅಧೈರ್ಯವುಂಟಾಯಿತು ಆಮೇಲೆ ಹೇಗೋ ಧೈರ್ಯವನ್ನು ತಂದುಕೊಂಡು “ಹು ! ಆ ಕಾಗದವು ಹೋದರೆತಾನೆ ಏನು ? ನಾನು ನನ್ನ ಮಾತುಗಳಿಂದಲೇ ಎಲ್ಲವನ್ನೂ ತಿಳಿಸಬಲ್ಲೆನು” ಎಂದು ನಿಶ್ಚಯಿಸಿಕೊಂಡು ನಿರ್ಭಯವಾಗಿ ಹೋದನು ಅವನು ಕನಕನಹಳ್ಳಿಯನ್ನು ಸೇರಿದನು ಬೀಗನು ತನ್ನ ಅಳಿಯನ ಮನೆಯ ಸೇವಕನಿವನೆಂದು ತಿಳಿದವನಾದುದರಿಂದ ಆದರಪೂರ್ವಕವಾಗಿ ಅವನನ್ನು ಒಳಕ್ಕೆ ಕರೆದುಕೊಂಡು ಹೋಗಿ “ಅಯ್ಯಾ ! ನಿನ್ನ ಹೆಸರು ಮುದ್ದುರಂಗಪ್ಪನಲ್ಲವೆ ? ಎಲೈ ಮುದ್ದುರಂಗಣ್ಣಾ ! ನಮ್ಮ ಬೀಗರ ಊರಿನಿಂದ ಯಾವಾಗ ಹೊರಟೆ ? ಎಂದು ಕೇಳಿದನು ಬಳಿಕ ಅವರಿಬ್ಬರಿಗೂ ಈ ಕೆಳಗೆ ಹೇಳುವಂತೆ ಸಂಭಾಷಣೆಯು ನಡೆಯಿತು.

ಕೆಂಪಣ್ಣ ಹೆಗ್ಗಡೆ—ಊರುಬಿಟ್ಟು ಎಷ್ಟು ದಿನಗಳಾದುವು ?

ಮುದ್ದುವೀರ—ನನ್ನ ಹೆಸರು ಮುದ್ದುರಂಗಣ್ಣನೆಂದಲ್ಲ.

ಕೆಂಪಣ್ಣ ಹೆಗ್ಗಡೆ—ಮತ್ತೇನು ?

ಮು—ನಿಮಗೆ ಜ್ಞಾಪಕವಿಲ್ಲವೆ ? ಇಷ್ಟುಬೇಗನೆ ಮರೆತಿರಾ ?

ಕೆಂ—ಮರೆತೆನು ನಮ್ಮವು ಪ್ರಾಣಿಗಳಿಗೆ ಸ್ವಾಭಾವಿಕವಲ್ಲವೆ ? ಈಗ ಹೇಳು ನಿನ್ನ ಹೆಸರನ್ನು.

ಮು—ಮುದ್ದುವೀರನೆಂದು ನನ್ನ ಹೆಸರು

ಕೆಂ—ಸರಿ ! ಮುದ್ದುವೀರಪ್ಪ ! ನಮ್ಮ ಬೀಗರ ಊರಿನಿಂಧ ಯಾವಾಗ ಹೊರಟೆ ?

ಮು—ಹೊರಟು ಮೂರು ದಿನಗಳಾದುವು.

ಕೆಂ—ಬರುವ ದಾರಿಯಲ್ಲಿ ಒಂದು ತೊರೆಯಿರುವುದಲ್ಲವೆ ? ಅದು ಬಹಳ ದೊಡ್ಡದು ನೀರು ಹೆಚ್ಚಾಗಿ ಹರಿಯುತ್ತಿರುವುದಲ್ಲವೆ ? ಹಾದುಬರಲು ಸಾಧ್ಯವೋ ?

ಮು—ಈಗ ಆ ಹೊಳೆಯಲ್ಲಿ ನೀರು ಬಹಳಮಟ್ಟಿಗೆ ಕಡಿಮೆಯಾಗಿದೆ ಜನರು ಸಾಧಾರಣವಾಗಿ ನಡೆದುಹೋಗುತ್ತಿರುವರು.

ಕೆಂ—ನಮ್ಮ ಬೀಗಂದಿರಾದ ಅಣುವಂತ ಹೆಗ್ಗಡೆಯವರು ಗ್ರಾಮದಲ್ಲಿರುವರೆ ? ಕೊಯಿಲು ಪೂರಯಿಸಿತೇ ?

ಮು—ಅವರು ಮನೆಯಲ್ಲಿಯೇ ಇರುವರು ಕೊಯಿಲು ಕೆಲಸಗಳೆಲ್ಲವೂ ಮುಗಿದುವು.

ಕೆಂಪಣ್ಣ ಹೆಗ್ಗಡೆಯ ಹೆಂಡತಿ—ನಮ್ಮ ಅಳಿಯನು ಆರೋಗ್ಯವಾಗಿರುವನೇ ?

ಮುದ್ದು—ನಿಮ್ಮ ಅಳಿಯನೇ ?

ಎಂದಿಂತು ಏನೋ ಹೇಳತೊಡಗಿ ಅಷ್ಟರಲ್ಲಿ ತನ್ನ ಹೆಗ್ಗಡೆಯು ಹೇಳಿದ ಮಾತುಗಳನ್ನು ನೆನಪಿಗೆ ತಂದುಕೊಂಡು " ಓಹೋ ! ಪ್ರಮಾದವಾಗುತ್ತಿದ್ದಿತಲ್ಲ ! ಅದೃಷ್ಟ ! ಅದೃಷ್ಟ !! ಬಾಯಿ ಜಾರಿಯೇನಾದರೂ ಹೇಳಿದ್ದರೆ ಪ್ರಹಾರಗಳು ಬೀಳುತ್ತಿದ್ದುವಲ್ಲ ! ಅಬ್ಬಬ್ಬ ! ತಪ್ಪಿತು ! ತಪ್ಪಿತು !! ಆಗಲಿ ಇನ್ನು ಎಚ್ಚರಿಕೆಯಿಂದಿರುವೆನು ಆರು ಮಾತಿಗಿಂತಲೂ ಹೆಚ್ಚಾಗಿ ಮಾತಾಡಬೇಡವೆಂದಲ್ಲವೆ ಒಡೆಯನು ಹೇಳಿದ್ದುದು ? ಈಗಲೇ ಮಿಂಚಿಹೋಗಿರುವುದಲ್ಲ ! ಏನುಮಾಡುವುದು ? ಹೆಚ್ಚಾಗಿ ಮಾತುಗಳನ್ನಾಡುವಂತೆ ಮಾಡಿ ಇವರು ನನ್ನನ್ನು ಹೊಡೆಯಿಸಬೇಕೆಂದು ಬಗೆದಮಾತ್ರಕ್ಕೆ ನಾನಿವರ ಮಾಯೆಗೆ ಒಳಗಾಗುವೆನೆ ? ನಾನೇನು ಹುಚ್ಚನೆ ? ನೋಡುವೆನು ಇವರ ಶಕ್ತಿಯೂ ನನ್ನ ಜಾಣ್ಮೆಯೂ ಈಗ ತಿಳಿವುದು " ಎಂದು ತನ್ನಲ್ಲಿ ಬಗೆದು ಮೌನಮುದ್ರೆಯನ್ನು ವಹಿಸಿ ಸುಮ್ಮನಾದನು.

ತನ್ನ ಅಳಿಯನ ವಿಚಾರವನ್ನು ಕೇಳಿದಕೂಡಲೆ ಪ್ರತ್ಯುತ್ತರವನ್ನು ಹೇಳದೆ ಅವನು ಎಂಜಲುನುಂಗುತ್ತ ಇರುವುದನ್ನು ಕಂಡು, ಆಕೆಗೆಯೇನೋ ತೋರಿ " ಏನಪ್ಪಾ ! ಉತ್ತರವನ್ನು ಕೊಡದಿರುವೆ ? ನನ್ನ ಅಳಿಯನು ಕ್ಷೇಮವಾಗಿರುವನೇ ? ಎಂದು ಮತ್ತೊಮ್ಮೆ ಕೇಳಿದಳು ಅದಕ್ಕೂ ಉತ್ತರವಿಲ್ಲ ತುಟಿಗಳನ್ನು ನೆನೆಯಿಸಿಕೊಳ್ಳುತ್ತ ಅಲುಗಾಡಿಸುತ್ತಿದ್ದನು. ಆಗ ಆ ಗಂಡಹೆಂಡರಿಬ್ಬರೂ " ಏಕೆ ಉತ್ತರವನ್ನು ಕೊಡದೆ ಬಾಯಿಮುಚ್ಚಿಕೊಂಡಿರುವೆ ? ನಮ್ಮ ಜಾಮಾತೃವು ಕುಶಲದಿಂದಿರುವನಲ್ಲವೆ ? " ಎಂದು ಕೇಳಿದರು. ಆಗಲೂ ಆ ಮೊದ್ದುಮುದ್ದುವೀರನು ಬಾಯಿಬಿಡಲಿಲ್ಲ " ಆತನಿಗೆ ಅನಾರೋಗ್ಯವೇನಾದರೂ ಆಗಿದೆಯೋ ? " ಎಂದು ಪುನಃ ಪ್ರಶ್ನೆಮಾಡಿದರು ಅದಕ್ಕೂ ಮೌನಮುದ್ರೆಯೇ ದಂಪತಿಗಳಿಗೆ ಸಂದೇಹವು ಸಂಭವಿಸಿತು " ನಮ್ಮ ಮಗಳ ಗಂಡನು ಮನೆಯಲ್ಲಿಯೋ ಇದ್ದನೇನಯ್ಯ ! ಇದ್ದುದನ್ನು ನುಡಿಯಬಾರದೆ ? " ಎಂದರು ಉತ್ತರವಿಲ್ಲ.

ಆಗ ಅವರು ಕಣ್ಣೀರನ್ನು ಸುರಿಸುತ್ತ " ಏನಪ್ಪಾ ! ಇನ್ನೇನಾದರೂ ಆಗಬಾರದುದಾಗಿದೆಯೋ ? ಎಂದು ಕೇಳಿದರು ಯಾವ ಪ್ರಶ್ನೆಗೂ ಉತ್ತರವನ್ನು ಸಿರಲಿಲ್ಲ ಉತ್ತರವನ್ನು ಹೇಳುವುದಕ್ಕೆ ಪ್ರತಿಯಾಗಿ ತಲೆಯನ್ನು ಬಾಗಿಸಿಕೊಂಡು ನೆಲವನ್ನು ನೋಡುತ್ತಿದ್ದನು ಅವನ ಚರ್ಯೆಗಳನ್ನು ನೋಡಿ ತಮ್ಮ ಅಳಿಯನು ಮೃತನಾಗಿರುವನೆಂದು ತಿಳಿದುಕೊಳ್ಳದೆ ಅತ್ತರು ಆ ರೋದನ ಧ್ವನಿಯನ್ನು ಕೇಳಿ ಬಂಧುಮಿತ್ರರೆಲ್ಲರೂ ಬಂದರು ಯಾವುದೋ ಒಂದು ಪ್ರಮಾದವು ನಡೆದಿರುವುದೆಂದು ತಿಳಿದು ಪರಿತಾಪದಿಂದ ಅವರೆಲ್ಲರೂ ಕಂಬನಿಗಳನ್ನು ಬಿಡುತ್ತ ಬಂದರು. ಎಲ್ಲರೂ ಈಪರಿಯಾಗಿ ಅಳುತ್ತಿರುವುದನ್ನು ಕಂಡು ಆ ಸೇವಕನಿಗೂ

ಕಣ್ಣುಗಳಲ್ಲಿ ನೀರು ಸುರಿಯುಹತ್ತಿತು ಹಾಗೆ ಅವನ ಕಣ್ಣುಗಳಲ್ಲಿಯೂ ನೀರುತುಂಬಿಬರುವುದನ್ನು ಕಂಡು ಅಳಿಯನು ನಿಜವಾಗಿಯೂ ಮೃತನಾಗಿರುವನೆಂದೇ ಭಾವಿಸಿದರು ಅದನ್ನು ನಿಶ್ಚಯಿಸಲೂ ನಿಶ್ಚಯಿಸಿಕೊಂಡರು.

ಅಯ್ಯೋ ! ಪಾಪ ! ಸತ್ಯಸ್ಥಿತಿಯನ್ನು ಅರಿಯದೆ ಎಲ್ಲರೂ ಬಹಳಹೊತ್ತಿನವರೆಗೆ ಅಳುತ್ತಿದ್ದು, ಬಳಿಕ ನಡೆಯುಬೇಕಾಗಿರುವ ಕೃತ್ಯಗಳನ್ನು ನಡೆಯಿಸಲಾರಂಭಿಸಿ ಅವರ ಕುಲಾಚಾರಾನುಸಾರವಾಗಿ ಎಲ್ಲಕರ್ತವ್ಯಗಳನ್ನು ಸಾಂಗವಾಗಿ ನಡೆಯಿಸಿಬಿಟ್ಟರು ಮದವಣಗಿತ್ತಿಯನ್ನು ವಿಧವೆಯನ್ನಾಗಿ ಮಾಡಿದಬಳಿಕ ಆ ಭೃತ್ಯನೊಡನೆ “ ಅಯ್ಯಾ ! ನೀನಿನ್ನು ಹೊರಟುಹೋಗು ಅವರಿಗೂ ನಮಗೂ ಇಷ್ಟು ತ್ವರೆಯಾಗಿ ಸಂಬಂಧವು ತಪ್ಪಿಹೋಗುವುದೆಂದು ನಾವು ಭಾವಿಸಿರಲಿಲ್ಲ ಬಾಲಕುಟುಂಬವು ಕೆಟ್ಟುಹೋಯಿತು ದೈವಸಂಕಲ್ಪವು ಹೀಗಿದ್ದಿತೇನೋ ? ಯಾರೇನು ಮಾಡಬಲ್ಲರು ” ಎಂದು ನುಡಿದರು. ಇಂತಪ್ಪ ಅಮಂಗಳಗಳಾಗಿಯೂ ಭಯಂಕರಂಗಳಾಗಿಯೂ ಇರುವ ಕಾರ್ಯಗಳು ನಡೆಯುತ್ತಿದ್ದರೂ ಆ ಅವಿವೇಕಿಭೃತ್ಯನು ಸತ್ಯವನ್ನು ವ್ಯಕ್ತಗೊಳಿಸದೆ ತೂಷ್ಣೀಂಭಾವದಿಂದಿದ್ದು ಎಲ್ಲವೂ ಆದಬಳಿಕ ಪ್ರಯಾಣವಾಗಿ ತನ್ನ ಗ್ರಾಮದ ಮಾರ್ಗವನ್ನು ಹಿಡಿದು ಹೋಗುತ್ತ ತಾನು ಏಳನೆಯುಮಾತು ಹೇಳದಿದ್ದು ತನ್ನ ಪಂತವನ್ನು ಗೆದ್ದುಕೊಂಡುದಕ್ಕೆ ಅತಿಸಂತೋಷವನ್ನು ಹೊಂದುತ್ತ ನಡೆದು ತಾನು ಹೊರಟದಿನದಿಂದ ಎಂಟನೆಯ ದಿನದಲ್ಲಿ ಮನೆಯನ್ನು ಸೇರಿದನು ಅತ್ತ ಹೆಗ್ಗಡೆಗೂ ಆತನ ಮಗನಿಗೂ ಸಂಪೂರ್ಣಾರೋಗ್ಯವುಂಟಾಯಿತು. ಬೀಗನ ಮನೆಗೆಹೋದ ಮುದ್ದೀರನು ಹೊರಟುಬಾರದ ಏತಕ್ಕಿಷ್ಟುಕಾಲ ತಡೆದಿರುವನೆಂದು ಹೆಗ್ಗಡೆ ಮೊದಲಾದವರು ಆಲೋಚಿಸುತ್ತಿದ್ದರು. ಅಷ್ಟರಲ್ಲಿ ಅವನು ಬರಲು ಹೆಗ್ಗಡೆಯುವನನ್ನು ನೋಡಿ “ ಏನೆಲಾ ! ನೀನಿಲ್ಲಿಂದ ಹೊರಟು ಏಳುದಿನಗಳಾಗಿ ಹೋದುವಲ್ಲ ! ಬೇಗನೆ ಬರಬೇಕೆಂದು ನಾನು ಹೇಳಿರಲಿಲ್ಲವೆ ? ಆಗಲಿ ! ಅಲ್ಲಿಯು ವಿಶೇಷಗಳೇನು ? ನಮ್ಮ ಬೀಗನು ನನ್ನ ಮಾತನ್ನಂಗೀಕರಿಸಿ ಮುಹೂರ್ತವನ್ನು ಬೇರೆ ನಿಯಮಿಸಿ ಶಾಂತಿಪ್ರಸ್ತುತಕ್ಕೆ ಏರ್ಪಾಡು ಮಾಡಿರುವನೆ ? ಏನು ಹೇಳಿದನು ” ಎಂದು ಪ್ರಶ್ನೆಮಾಡಿದನು ಆಗ ಆ ನೀಚಸೇವಕನು ಆತನೊಡನಿಂತೆಂದನು. “ ನಾನು ಅವರ ಗ್ರಾಮಕ್ಕೆ ಹೋಗಿ ಅವರ ಮನೆಯನ್ನು ಸೇರುತ್ತಲೇ ನನ್ನನ್ನಾರು ಪ್ರಶ್ನೆಗಳನ್ನು ಕೇಳಿದರು ಉತ್ತರವನ್ನು ಹೇಳಿದೆನು ಏಳನೆಯಸಾರಿ ತಮ್ಮ ಅಳಿಯನ ಆರೋಗ್ಯವನ್ನು ಕುರಿತು ಪ್ರಶ್ನೆಮಾಡಿದರು ನೀವು ಐದಾರು ಮಾತುಗಳಲ್ಲಿ ಸಂಭಾಷಣೆಯನ್ನು ಮುಗಿಸಿಕೊಂಡು ಬರಬೇಕೆಂದು ಹೇಳಿದ್ದಿರಲ್ಲವೆ ? ಆದುದರಿಂದ ಏಳನೆಯ ಪ್ರಶ್ನೆಗೆ ಉತ್ತರವನ್ನು ಕೊಡಲೇ ಇಲ್ಲ ಅವರು 'ತಮ್ಮ ಕೈಲಾದಷ್ಟುಮಟ್ಟಿಗೆ ನನ್ನ ಬಾಯಿಯಿಂದ ಮಾತನ್ನು ಹೊರಡಿಸಬೇ

ಕೆಂದು ಎಷ್ಟೋ ಪ್ರಯತ್ನ ಮಾಡಿದರು ಆದರೂ ನನ್ನ ಬಾಯಿಂದ ಮಾತನ್ನು ಹೊರಡಿಸುವುದಕ್ಕೆ ಅವರಿಗೆ ಸಾಧ್ಯವೇ ಆಗಲಿಲ್ಲ ಬಹಳವಾಗಿ ಅತ್ತರು ಏನೇನೋ ಮಾಡಿದರು ನಾನು ಮಾತನಾಡದಿದ್ದುದರಿಂದ ಸಂದೇಹಗೊಂಡು ತಮ್ಮ ಅಳಿಯನು ಸತ್ತನೆಂದು ನಿಶ್ಚಯಿಸಿ ತಮ್ಮ ಮಗಳ ಮಾಂಗಲ್ಯವನ್ನು ಕೂಡ ತೆಗೆದುಹಾಕಿ ಚರಮಕಾಲದ ಕೆಲಸಗಳನ್ನೆಲ್ಲ ಮಾಡಿಬಿಟ್ಟರು ಏನುಮಾಡಿದರೇನು ? ನಾನು ಬಾಯಿಬಿಡಲಿಲ್ಲ ಆರು ಮಾತುಗಳು ಹೊರತು ನನ್ನ ಬಾಯಿಯಿಂದ ಏಕನೆಯಮಾತು ಹೊರಡಲೇ ಇಲ್ಲ ಎಲ್ಲವೂ ಆದಬಳಿಕ ನನ್ನನ್ನು ಹೋಗೆಂದರು ಅಲ್ಲಿಂದ ಹೊರಟುಬರುವಾಗ ದಾರಿಯಲ್ಲಿ ಎಲ್ಲಿಯೂ ನಿಲ್ಲದೆ ಹೊರಟುಬಂದೆನು " ಎಂದಲ್ಲಿಂದ ತಾನು ಹೊರಟುದು ಮೊದಲು ಮತ್ತೆ ಅಲ್ಲಿಗೆ ಬಂದು ಸೇರುವವರೆಗೆ ನಡೆದ ವೃತ್ತಾಂತವನ್ನೆಲ್ಲ ದಾರಕ್ಕೆ ಮಣಿಯನ್ನು ಕೋದಂತೆ ಹೇಳಿ ತನ್ನ ಅಭಿನಿವೇಶವನ್ನು ಕುರಿತು ತನ್ನನ್ನುತಾನೇ ಹೊಗಳಿಕೊಂಡನು.

ಸತ್ಯಶೀಲ ! ಕೇಳಿದೆಯಾ ? ಈ ಯಮಂಗಳದ ಸುದ್ದಿಯನ್ನು ಕೇಳಿದ ಹೆಗ್ಗಡೆಯ ಮನಸ್ಸ್ಥಿತಿ ಆಗ ಹೇಗಿರಬಹುದೋ ? ಆಲೋಚಿಸು ಆತನಿಗೆ ಉಂಟಾದ ದುಃಖಕ್ಕೂ ಕೋಪಕ್ಕೂ ಮೇರೆಯೇ ಇಲ್ಲ ಆಗಳೇ ಅವನಮೇಲೆ ಬಿದ್ದು ಕೊಲ್ಲಬೇಕೆಂದು ಬಗೆದು ಅತ್ಯುಗ್ರತೆಯಿಂದ ಅವನಮೇಲೆ ಬೀಳುವಷ್ಟರಲ್ಲಿ ಆತನ ಹೆಂಡತಿಯು ತದುದ್ದೇಶವನ್ನರಿತು ಅಡ್ಡವಾಗಿ ಬಂದು ತಡೆದುದರಿಂದ ನಿಂತು " ಎಲಾ ಪಾಪೀ ! ದುರಾತ್ಮ ! ದ್ರೋಹೀ ! ಬುದ್ಧಿಹೀನ ! ಎಂಥ ಅಮಂಗಲಕಾರ್ಯವನ್ನು ಮಾಡಿದೆಯೋ ? " ಐದಾರು ಮಾತುಗಳಲ್ಲಿ ಕಾರ್ಯವನ್ನು ಮುಗಿಸಿಕೊಂಡುಬಾ ಎಂದು ಹೇಳಿದ ಮಾತಿಗೆ ಇದೋ ಅರ್ಥವು ದುರ್ಮಾರ್ಗ ! ನಿನ್ನನ್ನು ಕಡಿದು ನಿನ್ನ ಮಾಂಸವನ್ನು ನಾಯಿನರಿಗಳಿಗೆ ಹಾಕಿದರೂ ಅಪರಾಧವಿಲ್ಲ " ಎಂದು ನುಡಿದು ಹಲ್ಲುಗಳನ್ನು ಕಡಿಯುತ್ತ ಅವನಿಗಿಂತ ಬುದ್ಧಿಹೀನನಾದ ಹೆಗ್ಗಡೆಯು ಅವನಮೇಲೆ ಬಿದ್ದು ಅವನನ್ನು ಬಹಳವಾಗಿ ಹೊಡೆದನು ಹೇಳಿದಂತೆ ಮಾಡಿದರೂ ಪ್ರಹಾರಗಳು ತಪ್ಪದಿದ್ದುದಕ್ಕಾಗಿ ಚಿಂತಿಸುತ್ತ ಅವನು ಬಾಧಾತಿಶಯದಿಂದ ಒಂದು ಮೂಲೆಯಲ್ಲಿ ಮಲಗಿ ಮೂಲುಗುತ್ತಿದ್ದನು.

ಹೆಗ್ಗಡೆಯು ಆ ಮಂಕು ಕಿಂಕರನು ಮಾಡಿದ ದುಷ್ಕಾರ್ಯಕ್ಕೆ ಬಹಳವಾಗಿ ದುಃಖಿಸಿ, ಭಾರ್ಯಾಪುತ್ರರೊಡನೆ ತಾನೇ ಹೊರಟುಹೋಗಿ ಬೀಗನೊಡನೆ ಮಾತನಾಡಿ ನಡೆದ ವರ್ತಮಾನವನ್ನು ಹೇಳಿ ಅಚಾತುರ್ಯದಿಂದ ನಡೆದ ಅಮಂಗಲ ಕಾರ್ಯಕ್ಕೆ ತಕ್ಕ ಪ್ರಾಯಶ್ಚಿತ್ತವನ್ನಿಟ್ಟು ಶಾಂತಿಪ್ರಸ್ತುತವನ್ನು ಮಾಡಿಕೊಂಡು ಬರುವಂತೆ ನಿಶ್ಚಯಿಸಿ, ತನಗೆ ಬೇಕಾದ ದೊಡ್ಡ ಮನುಷ್ಯರೊಡನೆ ಹೇಳಿ

ಪ್ರಯಾಣಸನ್ನಾಹವನ್ನು ಮಾಡಿದನು ಆದರೆ ತನ್ನೊಡನೆ ಈಸಲ ತನ್ನ ಆ ಸೇವಕನನ್ನು ಕರೆದುಕೊಂಡು ಹೋಗಲಾಗದೆಂದು ಅವನನ್ನು ಮನೆಯಲ್ಲಿಯೇ ಬಿಟ್ಟು ಹೋಗುವಂತೆ ನಿರ್ಧರಿಸಿದನು. ಆಗ ಹೆಗ್ಗಡೆಯು ಅವನನ್ನು ಕರೆದು “ ಎಲಾ ! ಪಾಪಾತ್ಮಾ ! ನೀನು ಮಾಡಿದ ಮಹಾಪರಾಧವು ಕ್ಷಮಿಸತಕ್ಕದಲ್ಲ ಈಗ ನಿನಗೆ ಮಾಡಿದ ಶಿಕ್ಷೆಯು ಸಾಲದು ನೀನು ಇಂತಪ್ಪ ದುಷ್ಕಾರ್ಯಗಳನ್ನು ಅನೇಕಾವೃತ್ತಿ ಮಾಡಿರುವುದರಿಂದ ನಾವೀಗ ನಿನ್ನನ್ನು ಬಿಟ್ಟುಹೋಗಬೇಕಾಗಿ ಬಂದಿತು ಹೋಗಿಬರುವೆವು ಇದುವರೆಗೆ ನಮ್ಮೊಡನೆ ಬರುತ್ತಿದ್ದು ನಮಗೆ ಮಾಡಿದ ಮೇಲು ಸಾಕು ಇಲ್ಲಿಯೇ ಇದ್ದು ಮನೆಯನ್ನು ಎಚ್ಚರಿಕೆಯಿಂದ ನೋಡಿಕೊಂಡಿರು ಮನೆಯೊಳಕ್ಕೆ ಒಂದಿರುವೆಯನ್ನಾದರೂ ಪ್ರವೇಶಗೊಳಿಸಬೇಡ ತಿಳಿಯಿತೇ ? ನಾವು ಹೋಗಿ ಅಲ್ಲಿನ ಕಾರ್ಯಗಳನ್ನು ನೆರವೇರಿಸಿಕೊಂಡು ಬೇಗನೆಬರುವೆವು ಎಂದು ಹೇಳಿ ಸಮಾಧಾನಮಾಡಿ ಒಪ್ಪಿಸಿ ಹೆಂಡತಿಯನ್ನೂ ಮಗನನ್ನೂ ಮಿತಪರಿವಾರವನ್ನೂ ಕರೆದುಕೊಂಡು ಪಯಣವಾಗಿ ಹೊರಟನು. ಅವರು ಹೊರಟ ಎರಡು ಮೂರು ದಿನಗಳವರೆಗೆ ಮುದ್ದುವೀರನು ಎಚ್ಚರಿಕೆಯಿಂದ ಮನೆಯನ್ನು ಕಾದುಕೊಂಡಿದ್ದನು. ನಾಲ್ಕನೆಯ ದಿನದಲ್ಲಿ ಸಮೀಪದಲ್ಲಿದ್ದ ಒಂದು ರಂಧ್ರದಿಂದ ಇರುವೆಗಳ ಒಂದುಸಾಲು ಹೊರಟು ಮನೆಯೊಳಕ್ಕೆ ಪ್ರವೇಶಿಸುತ್ತಿದ್ದುವು ಅವುಗಳನ್ನು ನೋಡುತ್ತಲೇ ಮುದ್ದುವೀರನಿಗೆ ಭಯವುಂಟಾಯಿತು “ ಅಯ್ಯೋ ! ಒಂದಿರುವೆಯನ್ನಾದರೂ ಪ್ರವೇಶಗೊಳಿಸಬೇಡವೆಂದು ಆಜ್ಞಾಪಿಸಿರಲು ಸಾಲುಗಟ್ಟಿಕೊಂಡು ಈ ಹಾಳಿರುವೆಗಳು ಒಳಕ್ಕೆ ಹೋಗುತ್ತಿರುವುವಲ್ಲ ! ಏನುಮಾಡಲಿ ? ಹೆಗ್ಗಡೆಯು ಬಂದು ಇದನ್ನು ನೋಡಿದರೆ ನನ್ನನ್ನು ಬದುಕಗೊಳಿಸುವನೆ ? ಈ ದುಷ್ಟಜೀವಿಗಳನ್ನು ಇಲ್ಲದಂತೆ ಏನುಮಾಡಬೇಕು ಎಂದು ಬಗೆಬಗೆಯಿಂದ ಆಲೋಚಿಸಿ ಕಡೆಗೆ ನಿರ್ಧಾರಣೆ ಮಾಡಿಕೊಂಡು ಆ ಇರುವೆಗಳೆಲ್ಲವೂ ಮನೆಯೊಳಕ್ಕೆ ಹೊರಟುಹೋದಬಳಿಕ ಅವುಗಳನ್ನೆಲ್ಲವನ್ನೂ ನಾಶಗೊಳಿಸಬೇಕೆಂಬ ಭಾವನೆಯಿಂದ ಬಾಗಿಲುಗಳೆಲ್ಲವನ್ನೂ ಭದ್ರಪಡಿಸಿ ಮನೆಗೆ ಬೆಂಕಿಯನ್ನಿಟ್ಟನು.

ಅಕಸ್ಮಾತ್ತಾಗಿ ಹೆಗ್ಗಡೆಯ ಮನೆಗೆ ಬೆಂಕಿ ಬಿದ್ದಿರುವುದೆಂದು ಬಗೆದು ಊರಿನವರೆಲ್ಲ ಗುಂಪುಗುಂಪಾಗಿ ಬಂದು ನೆರೆದು ನೀರನ್ನು ತಂದು ಆರಿಸುವುದಕ್ಕೆ ಪ್ರಯತ್ನಪಟ್ಟರು. ಆದರೆ ಆ ಮೂಢಸೇವಕನು ಅಡ್ಡಬಂದು ಅವರನ್ನೆಲ್ಲ ತಡೆಯುತ್ತ ಬೇಡ, ಬೇಡ, ನಮ್ಮ ಒಡೆಯನಾದ ಹೆಗ್ಗಡೆಯ ಅಪ್ಪಣೆಯು ಪ್ರಕಾರ ಗೃಹವು ಚೊಕ್ಕಳಿಕೆಯಿಂದಿರಬೇಕೆಂದು ನಾನೇ ಬೆಂಕಿಯನ್ನು ಹಚ್ಚಿರುವೆನು. ನೀವಿನ್ನಾವುದನ್ನೂ ಮಾಡಬೇಡಿರೆಂದು ಸಂಪೂರ್ಣವಾಗಿ ಅವರ ವ್ಯಾಪಾರವನ್ನು ನಿಲ್ಲಿಸಿಬಿಟ್ಟನು. “ ಯಜಮಾನನು ಮನೆಗೆ ಬೆಂಕಿಯನ್ನಿಡು

ವಂತೆ ಏತಕ್ಕೆತಾನೆ ಅಪ್ಪಣೆಮಾಡಿಯಾನು, ಇದೇನೋ ಆಶ್ಚರ್ಯವಾಗಿರುವುದು. ಆತನ ಆಜ್ಞೆಯಿಲ್ಲದಿದ್ದರೆ ಇವನು ತಾನಾಗಿ ಮನೆಗೆ ಬೆಂಕಿಯಿಡುವುದಕ್ಕೆ ಸಾಹಸವನ್ನು ಮಾಡುತ್ತಿದ್ದನೆ? ಇವನು ಹೀಗೇತಕ್ಕೆ ಹೇಳುತ್ತಿರುವನು. ಹೇಗಾದರೂ ಆಗಲಿ! ಮನೆಯು ಸುಟ್ಟುಹೋಗುತ್ತಿದ್ದರೆ ನಾವು ಹಾಗೆಯೇ ನೋಡಿಕೊಂಡಿರುವುದು ನ್ಯಾಯವಲ್ಲ ಆರಿಸುವ" ಎಂದು ಗ್ರಾಮಸ್ಥರೆಲ್ಲರೂ ಒಬ್ಬರ ಹಿಂದೊಬ್ಬರು ಬಿಂದಿಗೆಗಳಲ್ಲಿ ನೀರನ್ನು ತುಂಬಿಕೊಂಡು ಬಂದರು, ಆದರೂ ಪ್ರಯೋಜನವಾಗಲಿಲ್ಲ, ಗಾಳಿಯು ಹೆಚ್ಚಾಗಿ ಬೀಸುತ್ತಿದ್ದುದರಿಂದ ಮುಗಿಲು ಮುಟ್ಟುವಂತೆ ಜ್ವಾಲೆಗಳೆದ್ದು ಅವರು ಬರುವಷ್ಟರೊಳಗಾಗಿ ಹೆಗ್ಗಡೆಯ ಮನೆಯು ಸಮಸ್ತ ವಸ್ತುಸಮೂಹದೊಡನೆ ಪೂರ್ಣವಾಗಿ ಸುಟ್ಟು ಬೂದಿಯಾಯಿತು. ಗ್ರಾಮಸ್ಥರು ಪರಿತಾಪದಿಂದ ಹಿಂದಿರುಗಿದರು.

ಸೇವಕನು. ಮನೆಯು ಉರಿದು ಸಾಂಗಶೀತಲವಾದ ಬಳಿಕ ಬೂದಿಯನ್ನೆಲ್ಲ ತೆಗೆದುಕೊಂಡುಹೋಗಿ ಸ್ವಲ್ಪದೂರದಲ್ಲಿ ರಾಶಿಹಾಕಿ ಸಗಣಿಯನ್ನು ತಂದು ಸುಟ್ಟು ಕಪ್ಪಗೆ ಆಗಿರುವ ಮನೆಗಳನ್ನು ಸಾರಿಸಿ ರಂಗವಲ್ಲಿಯನ್ನು ಹಾಕಿ ಮನೆಯಲ್ಲಿ ಒಂದಿರುವೆಯಾದರೂ ಕಾಣದಿದ್ದುದಕ್ಕೆ ಮಹದಾನಂದವನ್ನು ಹೊಂದಿ ನಡುಮನೆಯಲ್ಲಿ ಸುಟ್ಟಗೋಡೆಗಳ ನಡುವೆ ಒಂದು ಬಟ್ಟೆಯನ್ನು ಹಾಸಿಕೊಂಡು ಮಲಗಿ ನಿದ್ರಿಸುತ್ತಿದ್ದನು.

ಅತ್ತ ಹೆಗ್ಗಡೆಯು ತಾನು ಹೋಗಿದ್ದ ಎಲ್ಲ ಕಾರ್ಯಗಳನ್ನೂ ಮುಗಿಸಿಕೊಂಡು ವಿವೇಕಹೀನನಾದ ಸೇವಕನನ್ನು ಮನೆಯಲ್ಲಿ ಕಾವಲಿಟ್ಟು ಬಂದಿರುವುದಕ್ಕಾಗಿ ಹೆದರುತ್ತ ಪ್ರಯಾಣಮಾಡಿ ಆದಿನದಲ್ಲಿಯೇ ತನ್ನ ಗ್ರಾಮವನ್ನು ಸೇರಿದನು. ಬಂದು ನೋಡಲಾಗಿ ಅತಿ ಸುಂದರವಾದ ತನ್ನ ಮಂದಿರವು ಸುಟ್ಟು ಶಿಥಿಲವಾದ ಗೋಡೆಗಳು ಮಾತ್ರ ಉಳಿದಿರುವುದನ್ನು ಕಂಡನು. ಆತನು ಎದೆಯನ್ನು ಬಡಿದುಕೊಳ್ಳುತ್ತ ಕೆಳಕ್ಕೆ ಬಿದ್ದು ಮೂರ್ಛೆಯನ್ನು ಹೊಂದಿ ಸ್ವಲ್ಪ ಕಾಲಕ್ಕೆ ಎಚ್ಚತ್ತು ಗೋಳಿಡುತ್ತ ಮನೆ ಸುಟ್ಟುದಕ್ಕೆ ಕಾರಣವನ್ನರಿಯದೆ ಕಳವಳಹೊಂದಿ ಒಳಹೊಕ್ಕು ಮೊಂಡುಗೋಡೆಗಳ ನಡುವೆ ಸುಖವಾಗಿ ನಿದ್ರಿಸುತ್ತಿದ್ದ ಮೊಂಡನನ್ನು ಎಚ್ಚರಗೊಳಿಸಿ, "ಅಯ್ಯೋ! ಮನೆಯು ಧನಧಾನ್ಯಾದಿ ಸಮಸ್ತ ಸಂಪತ್ತಿನೊಡನೆ ಸುಟ್ಟುಹೋಯಿತಲ್ಲ, ಮುಳುಗಿಹೋದೆನಲ್ಲ! ಏನು ಕಾರಣವೋ?" ಎಂದು ಕೇಳಿದನು. ಅವನು ಮನೆಯ ಒಳಕ್ಕೆ ಇರುವೆಗಳು ಪ್ರವೇಶಿಸುತ್ತಿದ್ದುದು ಮೊದಲುಗೊಂಡು ಅದುವರೆಗೆ ನಡೆದುದನ್ನೆಲ್ಲ ತಪ್ಪದೆ ನುಡಿದು, "ಅಯ್ಯಾ! ನಿಮ್ಮ ಅಪ್ಪಣೆಯನ್ನು ಅನುಸರಿಸಿ, ಮನೆಯೊಳಕ್ಕೆ ಇರುವೆಗಳು ಪ್ರವೇಶಿಸದಿರುವುದಕ್ಕಾಗಿ ನಾನು ಪಟ್ಟ ಕಷ್ಟವಷ್ಟಿಷ್ಟಲ್ಲ. ನಿಜವೋ ಅಲ್ಲವೋ ಗ್ರಾಮಸ್ಥರನ್ನು ಕೇಳಿ, ಇಷ್ಟುಕಷ್ಟ ಪಟ್ಟುದಕ್ಕೋಸ್ಕರ ನನಗೇನಾ

ದರೂ ಬಹುಮಾನವನ್ನು ಕೊಡಬೇಕು. ಮನೆಯ ಬೂದಿಯನ್ನೆತ್ತಿಹಾಕುವುದಕ್ಕೂ, ಸಗಣಿಯನ್ನು ತಂದು ಸಾರಿಸುವುದಕ್ಕೂ ಪೂರ್ಣವಾಗಿ ಎರಡು ದಿನಗಳು ಹಿಡಿದುವು. ಈಗ ನೋಡಿ ಎಷ್ಟು ಚೊಕ್ಕಟವಾಗಿಯೂ ಬೆಳಕು ಗಾಳಿ ನಿಷ್ಕಂಟಕವಾಗಿ ಬರುವುದಾಗಿಯೂ ಇರುವುದು ಎಂದು ಹೇಳಿದನು.

ಅಷ್ಟರಲ್ಲಿ ಗ್ರಾಮಸ್ತರು ಬಂದು ತಾವು ಉರಿಯುತ್ತಿರುವ ಬೆಂಕಿಯನ್ನಾರಿಸುವುದಕ್ಕೆ ಬಂದುದನ್ನೂ, ಮುದ್ದುವೀರನು ಅದನ್ನು ತಡೆದುದನ್ನೂ, ಅವನೊಡನೆ ಹೋರಾಡಿ ಬರುವಷ್ಟರಲ್ಲಿ ಮನೆಯು ಸುಟ್ಟು ಭಸ್ಮೀಭೂತವಾದುದನ್ನೂ ಹೆಗ್ಗಡೆಯೊಡನೆ ಹೇಳಿದರು. ಸಾವಿರಾರು ರೂಪಾಯಿಗಳನ್ನು ವೆಚ್ಚಮಾಡಿ ಕಟ್ಟಿಸಿದ ತನ್ನ ಮನೋಹರವಾದ ಮನೆಯು ನಾಮಾವಶಿಷ್ಟವಾದುದದನ್ನು ಕಂಡು, ಲಕ್ಷೋಪಲಕ್ಷ ರೂಪಾಯಿಗಳ ಬೆಲೆಬಾಳುವ ವಸ್ತ್ರಭೂಷಣಾದಿ ಸಮಸ್ತ ಸಂಪತ್ತು ಬೂದಿಯ ಪಾಲಾದುದನ್ನು ಬಗೆದುದರಿಂದ ಆಗ ಆಹೆಗ್ಗಡೆಯ ಹೃದಯವು ಏನಾಗಿಹೋಯಿತೋ? ಎಷ್ಟು ದುಃಖಕ್ಕೆ ಒಳಗಾಯಿತೋ! ಎಷ್ಟು ಮಟ್ಟಿಗೆ ಕೋಪವು ಬಳೆಯಿತೋ! ಸತ್ಯಶೀಲನೆ, ಹೇಳಬಲ್ಲವರಾರು? ತನ್ನನ್ನು ತಾನರಿಯದಂತಹ ಉಗ್ರತೆಯಿಂದ ಆ ಹೆಗ್ಗಡೆ ಅವನಮೇಲೆ ಬಿದ್ದು ತನಗೆ ಶಕ್ತಿಯಿರುವವರೆಗೆ ಅವನನ್ನು ಚನ್ನಾಗಿ ಪ್ರಹರಿಸಿ, "ಎಲಾ! ಪಾಪಿ! ನೀನು ನನ್ನ ಮನೆಗೆ ಬಂದುದು ಮೊದಲು ಹೇಳಲಾಗದಿರುವಷ್ಟು ನಷ್ಟವನ್ನು ಮಾಡಿದೆ. ನಿನ್ನನ್ನು ನಿಯಮಿಸಿದ ಪ್ರತಿಯೊಂದು ಕೆಲಸವನ್ನೂ ಕೆಡಿಸಿ, ಅನೇಕಾಪರಾಧಗಳನ್ನು ಮಾಡಿದೆ. ಅದನ್ನೆಲ್ಲವನ್ನೂ ಸಹಿಸಿಕೊಂಡು ಬಡವನೆಂದು ಬಗೆದು ನಿನ್ನನ್ನು ಬಿಡಲೊಲ್ಲದೆ ಕಾಪಾಡಿದೆನು. ಕೊನೆಗೆ ಗಂಡನಿರುವಾಗಲೇ ನನ್ನ ಸೊಸೆಗೆ ವೈಧವ್ಯಾಚಾರವನ್ನು ನಡೆಯಿಸಿದೆ. ಅಷ್ಟುಕಾಲವೆ ನಿನ್ನನ್ನು ಮನೆಗೆ ಕಾವಲಿಟ್ಟು ಹೋದುದಕ್ಕೆ ಸರ್ವಸಾಮಗ್ರಿಯೊಡನೆ ನನ್ನ ದಿವ್ಯತರವಾದ ಭವನವನ್ನು ವೀತಿಹೋತ್ರನಪಾಲು ಮಾಡಿದೆ. ಇಂತಹ ಮಹತ್ಕಾರ್ಯವನ್ನು ಮಾಡಿದುದಕ್ಕೆ ಬಹುಮಾನವನ್ನು ಬೇರೆ ಕೇಳಿದೆ. ಅಯ್ಯೋ! ನನ್ನ ಹೊಟ್ಟೆಯು ಉರಿದುಕೊಂಡು ಬರುತ್ತಿರುವುದು ನಿನ್ನನ್ನೇನು ಮಾಡಲಿ?" ಎಂದು ಅವನನ್ನು ಕತ್ತುಹಿಡಿದು ಕೆಳಕ್ಕೆತಳ್ಳಿ ಎದೆಯಮೇಲೆ ಕುಳಿತು ಗುದ್ದುವುದಕ್ಕೆ ಪ್ರಾರಂಭಿಸಿದನು.

ಅಷ್ಟರಲ್ಲಿ ಗ್ರಾಮದ ದೊಡ್ಡಮನುಷ್ಯರು ಬಂದು ಬಿಡಿಸಿದರು. ಹೆಗ್ಗಡೆಯು ಅವನನ್ನು ಕ್ರೂರದೃಷ್ಟಿಯಿಂದ ನೋಡುತ್ತ "ಎಲಾ! ಮೂಢ! ಇದುವರೆಗೆ ನೀನು ಮಾಡಿದ ಅಪರಾಧಸಪ್ತಕವೇ ಸಾಕು, ಎಲ್ಲವೂ ನಾಶವಾಯಿತು. ಇನ್ನು ನಮ್ಮ ಮೂವರ ಪ್ರಾಣಗಳು ಮಾತ್ರ ಉಳಿದಿವೆ "ಜೀವನ್ ಭದ್ರಾಣಿ ಪಶ್ಯತಿ" ಎಂಬಂತೆ ಮುಂದೆ ನನ್ನ ಅದೃಷ್ಟವು ಹೇಗಿರುವುದೋ ಹಾಗಾಗಲಿ,

ಇನ್ನು ನಿನ್ನ ಸಹವಾಸವು ಸಾಕು. ನಮ್ಮ ಮನೆಯನ್ನು ಬಿಟ್ಟು ಹೊರಡು.” ಎಂದು ನುಡಿದು ಆಗಳೆ ಹೊರಡಿಸಿದನು.

ಮುದ್ದುವೀರನು “ಅಯ್ಯೋ! ನಾನು ಜಾಗರೂಕತೆಯಿಂದಿದ್ದು ಎಷ್ಟು ಒಳ್ಳೆಯ ಕಾರ್ಯಗಳನ್ನು ಮಾಡಿದರೂ ತಪ್ಪುಗಳನ್ನೆ ಹುಡುಕಿ ಬಾರಿಬಾರಿಗೆ ನನ್ನನ್ನು ಹೊಡೆಯುತ್ತಿರುವುದೇ ಉಪಚಾರವಾಯಿತಲ್ಲಾ! ಈ ಹಾಳುಸೇವೆಯನ್ನು ಬಿಟ್ಟುಹೋಗುವುದೇ ಕ್ಷೇಮಕರ ಇದಿಲ್ಲದಿದ್ದರೆ ಕಡಿಮೆಯಾಗುವುದೇನು? ಎಂದು ಹೇಳಿಕೊಳ್ಳುತ್ತ ಹೊರಟುಹೋದನು

ಹೆಗ್ಗಡೆಯು ತನಗೆ ಸಂಭವಿಸಿದ ಅಪರಿಮಿತ ನಷ್ಟಕಷ್ಟಗಳನ್ನು ಕುರಿತು ಚಿಂತಾಕ್ರಾಂತನಾಗಿ ಆಗ್ಗೆ ಒಂದು ಚಿಕ್ಕಮನೆಯನ್ನು ಕಟ್ಟಿಸಿಕೊಂಡು ಅಲ್ಲಿ ವಾಸಮಾಡುತ್ತಿದ್ದನು. ಆದರೆ ಆ ವ್ಯಾಕುಲವೇ ವ್ಯಾಧಿಯಾಗಿ ಪರಿಣಮಿಸಿ ಆ ಹೆಗ್ಗಡೆಯು ಒಂದು ತಿಂಗಳಲ್ಲಿ ಮೃತನಾದನು ಎರಡನೆಯ ತಿಂಗಳಲ್ಲಿ ಆತನ ಪತ್ನಿಯು ಪಂಚತ್ವವನ್ನು ಪಡೆದಳು. ಬಳಿಕ ಆತನ ಕುಮಾರನು ನಿಸ್ಸಹಾಯನಾಗಿದ್ದುದರಿಂದ ಆ ಗ್ರಾಮವನ್ನು ಬಿಟ್ಟು ಮಾವನವರಿರುವ ಗ್ರಾಮಕ್ಕೆ ಹೋಗಿ ಬೇರೊಂದು ಮನೆಯನ್ನು ಕಟ್ಟಿಸಿಕೊಂಡು ತನ್ನ ಹೆಂಡತಿಯೊಡನೆ ಅಲ್ಲಿ ವಾಸ ಮಾಡುತ್ತಿದ್ದನು.

ಸತ್ಯಶೀಲನೆ! ಬಹುಶಿಲ್ಪಿ ಕಲ್ಪನಾಚಾತುರ್ಯದಿಂದೊಪ್ಪುತ್ತಿದ್ದ ಆ ಹೆಗ್ಗಡೆಯ ಮನೆಯು ಸುಟ್ಟಂದಿನಿಂದ ಆ ಮನೆಯ ಗೋಡೆಗಳು ಹಾಗೆಯೇ ನಿಂತಿರುವುವು. ವತ್ಸಾ! ನೀನು ಆ ಗ್ರಾಮದಲ್ಲಿ ಈ ದಿನ ನೋಡಿಬಂದ ಗೋಡೆಗಳು ಅವೇ ಎಂದು ನುಡಿದು ಮತ್ತಿಂತೆಂದನು.

ಪ್ರಿಯಶಿಷ್ಯನೇ! ದೇಹಬಲಕ್ಕಿಂತಲೂ ಬುದ್ಧಿಬಲವೇ ಶ್ರೇಷ್ಠವಾದದು ಬುದ್ಧಿಯಿಲ್ಲದವನ ಒಡನಾಟವು ಅಪಾಯಕರವಾದುದು ಬುದ್ಧಿಹೀನನು ಕಾಲಾಂತರದಲ್ಲಿ ಅಪಾಯಕ್ಕೊಳಗಾಗುವನು ಈಬಗ್ಗೆ ನೀತಿಜ್ಞರು ಹೀಗೆ ಹೇಳುವರು.

ಮತಿರೇವಬಲಾದ್ಗರೀಯಸೀ ತದಭಾವೇಕರಿಣಾಮಿಯಂದಶಾ।
ಇತಿಘೋಷಯತೀನಡಿಂಡಿಮಃ ಕರಿಣೋಹಸ್ತಿಪಕಾಹತಃಕ್ವಣನ್ ॥

“ಬುದ್ಧಿಯೇ ಬಲಕ್ಕಿಂತಲೂ ದೊಡ್ಡದು ಅದಿಲ್ಲದಿದ್ದುದರಿಂದ ಆನೆಗೆ ಈಗೀಯವಸ್ಥೆಯು ಪ್ರಾಪ್ತವಾಗಿರುವುದು” ಎಂದು ಸಾರುವಂತೆ ಮಾವಟಿಗನಿಂದ ಹೊಡೆಯಲ್ಪಟ್ಟು ಡಿಂಡಿಮವು ಧ್ವನಿಮಾಡುತ್ತಿರುವುದು.

ಎಂದು ನುಡಿದು ಚಿದಾನಂದಮುನಿಯು ಶಿಷ್ಯನ ಸಂದೇಹವನ್ನು ನಿವೃತ್ತಿ ಮಾಡಿದನು.

ಇಂತು ಆರನೆಯ ಕಥೆ ಮುಗಿದುದು.



## —: ಏಳನೆಯ ಕಥೆ. :—

ರವಿವಂಶವತಂಸಾಯ ರಾಘವಾಯಮಹಾತ್ಮನೇ
ಜಾನಕೀಪ್ರಾಣನಾಥಾಯ ಜಗದೀಶಾಯತೇನಮಃ ||

## ಬ್ರಹ್ಮರಾಕ್ಷಸನ ಕಥೆ.

ಚಿದಂಬರ ಸತ್ಯಶೀಲರು ಆ ದಿನವೆಲ್ಲ ಆ ಸ್ಥಲದಲ್ಲಿಯೇ ಇದ್ದು ಅಧ್ವಶ್ರಮವನ್ನು ತೀರಿಸಿಕೊಂಡು ಉಷಃಕಾಲಕ್ಕೆ ಎದ್ದು ಸ್ನಾನಸಂಧ್ಯಾದ್ಯನುಷ್ಠಾನಗಳನ್ನು ನೆರವೇರಿಸಿ ಆ ಸ್ಥಲವನ್ನು ಬಿಟ್ಟು ಹೊರಟು ಬಹಳ ದೂರದವರೆಗೆ ನಡೆದು ಯಾವ ಗ್ರಾಮವೂ ದೊರೆಯದಿದ್ದುದರಿಂದ ನಡುಗಾಡಿನೊಳಗಿದ್ದ ಒಂದು ದೊಡ್ಡ ಮಂಟಪವನ್ನು ಕಂಡು ಅಲ್ಲಿಳಿದರು. ಸುತ್ತಮುತ್ತಲೂ ಯಾವ ಗ್ರಾಮವೂ ಇರಲಿಲ್ಲ ನಿರ್ಜನ ಪ್ರದೇಶವಾಗಿದ್ದಿತು ಆದರೂ ನಿರ್ಭೀತರಾಗಿ ಅವರಿರ್ವರೂ ಅಲ್ಲಿ ನಿಂತರು ಮಂಟಪವು ಮಾತ್ರ ದಾರಿಗರಿಗಾಗಿಯೇ ಧರ್ಮಾತ್ಮರಿಂದ ಕಟ್ಟಲ್ಪಟ್ಟಿದುದರಿಂದ ಅದರ ಅನುಕೂಲತೆಗೆ ಸಂತೋಷಪಟ್ಟು ಹಿಂದಿನ ಉಪ್ಪಯಣದಲ್ಲಿ ಉಳಿದಿದ್ದು ಮೂಟೆಗಟ್ಟಿ ತಂದಿದ್ದ ಸಾಮಗ್ರಿಯನ್ನೇ ಅಲ್ಲಿ ಉಪಯೋಗಿಸಲೆಣಿಸಿ ಆವೇಳೆಗೆ ಒಂದೊಂದಾಗಿ ಸಂಪಾದಿಸಿ ಒದಗಿಸಿಕೊಂಡಿದ್ದ ಪಾತ್ರೆಗಳಲ್ಲಿಯೇ ಆ ಚಿದಾನಂದಮುನಿಯು ಶಿಷ್ಯನಿಂದ ಅಡಿಗೆಮಾಡಿಸಿ ಪದ್ಧತಿಯಂತೆ ಭಗವದಾರಾಧನೆಯನ್ನು ಮಾಡಿ ಪಾಕಸಿದ್ಧವಾದ ಪದಾರ್ಥವನ್ನು ನಿವೇದನವನ್ನು ಮಾಡಿ ಭೋಜನವನ್ನು ಮಾಡಿದಬಳಿಕ ಯೋಗೀಂದ್ರನು ಒಂದು ಮರದಡಿಯಲ್ಲಿ ವಿಶ್ರಮಿಸಿಕೊಂಡನು. ಶಿಷ್ಯನು ಊಟಮಾಡಿದ ಬಳಿಕ ಮುಸರೆಗಳನ್ನು ತೊಳೆದು ಪಾಕಮಾಡಿದ ಸ್ಥಲವನ್ನು ಪರಿಶುದ್ಧಗೊಳಿಸಿ ಗುರುವಿನಬಳಿಗೆ ಬಂದು ವಂದಿಸಿ ಸಮೀಪದಲ್ಲಿ ಕುಳಿತನು ಮುನೀಂದ್ರನು ಬಳಲಿಕೆಯನ್ನು ಕಳೆದು ಎದ್ದು ಕುಳಿತುಕೊಂಡನು ಸಾಯಂಕಾಲವಾಯಿತು ಇಬ್ಬರೂ ಸಂಧ್ಯಾಕೃತ್ಯವನ್ನು ನೆರವೇರಿಸಿದರು ಬಳಿಕ ಕೊಳದ ದಡದಲ್ಲಿ ವಿಶಾಲವಾಗಿದ್ದ ಒಂದು ದೊಡ್ಡ ಬಂಡೆಯಮೇಲೆ ಇಬ್ಬರೂ ಕುಳಿತರು ಬೆಳುತಿಂಗಳಕಾಲ ಸತ್ಯಶೀಲನು ತನ್ನ ಆಚಾರ್ಯನನ್ನು ಕುರಿತು “ಸ್ವಾಮೀ! ಈ ಬಂಡೆಯು ಬಹು ವಿಶಾಲವಾಗಿರುವುದು ಸುತ್ತಮುತ್ತ ಎಲ್ಲಿನೋಡಿದರೂ ಬೆಟ್ಟಗುಟ್ಟಗಳೇ ಇಲ್ಲ ಎಲ್ಲೆಲ್ಲಿ ನೋಡಿದರೂ ಬೆಲ್ಲವನ್ನು ಕುಟ್ಟುವುದಕ್ಕೆ ಒಂದು ಕಲ್ಲಾದರೂ ದೊರೆಯುವ ಹಾಗಿಲ್ಲ ಇಲ್ಲಿಮಾತ್ರ ಈ ಬಂಡೆಯು ಹೇಗೆ ಬಂದಿತು? ಇದಲ್ಲದೆ ಈ ಬಂಡೆಯ ಮೇಲೆ ಒಂದು ದೊಡ್ಡ ಯಂತ್ರವು ಉದ್ಧೃತವಾಗಿದೆ ನಡುವಣ ಮನೆಗಳಲ್ಲಿ ಕೆಲವು ಅಕ್ಷರಗಳಿವೆ ಅದು ದೇವನಾಗರಿಯ ಅಕ್ಷರಗಳೆಂದು ತೋರುವುದು ಇಲ್ಲಿಗೆ ಯಾರು ಬಂದು ಏಕೆ ಈ ಯಂತ್ರವನ್ನು ಬರೆದರು? ದಯವಿಟ್ಟು ಹೇಳಬೇಕು

ಎಂದು ಪ್ರಾರ್ಥಿಸಿದನು. ಅಷ್ಟರಲ್ಲಿ ಮೊದಲನೆಯ ಯಾಮದ ಕೊನೆಯಲ್ಲಿ ಭಯಂಕರಾಕಾರನಾದ ಒಬ್ಬ ಬ್ರಹ್ಮರಾಕ್ಷಸನು ಆ ಮಹಾ ಯೋಗಿಯ ಮುಂದೆ ಬಂದುನಿಂದು ಒಂದು ಸಮಸ್ಯೆಯನ್ನಿತ್ತನು.

" ತತಃಕಿಂತತಃಕಿಂತತಃಕಿಂತತಃಕಿಂ "

ಮಹಾಯೋಗಿಯು ನಸುನಗುತ್ತ ಭಯಗ್ರಸ್ತನಾಗಿ ನಡನಡುಗುತ್ತಿದ್ದ ಶಿಷ್ಯನನ್ನು ನೋಡಿ ಮಂತ್ರಪುರಶ್ಚರಣದಿಂದ ವಿಭೂತಿಯನ್ನವನ ಹಣೆಗೆಹಚ್ಚಿ ಭಯನಿವಾರಣ ಮಂತ್ರವನ್ನು ಅವನ ಕಿವಿಯಲ್ಲುಪದೇಶಿಸಿ ಬ್ರಹ್ಮರಾಕ್ಷಸನ ಕಡೆಗೆ ತಿರುಗಿ

ಹಯೋಪಾಯುವೇಗಃಸ್ವಯಸ್ಥೇಮಯುಕ್ತ |
ಸ್ತನುತ್ರಾಣಬಾಣಾದಿಯುಕ್ತೋನುರಕ್ತಃ |
ರಣೇತಸ್ಯಭೀರ್ದರ್ಶನೇಸ್ಯೈನಿಕಾನಾಂ | (**ತತಃಕಿಂತತಃಕಿಂತತಃ ಕಿಂತತಃಕಿಂ**) ||

*ಸಮಸ್ಯಾಪೂರಣವನ್ನು ಮಾಡಿದನು ಆ ಬ್ರಹ್ಮರಾಕ್ಷಸನು ಬಹಳವಾಗಿ ಸಂತೋಷಪಟ್ಟು ಅಂತರ್ಧಾನವನ್ನು ಪಡೆದನು.

ಸತ್ಯಶೀಲನಿಗೆ ಆಶ್ಚರ್ಯವಾಯಿತು " ಗುರುಗಳೇ ! ಬ್ರಹ್ಮರಾಕ್ಷಸನೆಂದು ಅವರಿವರು ಹೇಳುತ್ತಿದ್ದುದನ್ನು ಕೇಳುತ್ತಿದ್ದೆನಲ್ಲದೆ ನಾನೆಂದೂ ಈಸ್ವರೂಪವನ್ನು ನೋಡಿಯೇ ಇಲ್ಲ ತಾವು ಮಂತ್ರಿಸಿ ಹಣೆಗೆ ವಿಭೂತಿಯನ್ನಿಟ್ಟು ಭಯನಿವಾರಣ ಮಂತ್ರವನ್ನು ಉಪದೇಶಿಸದಿದ್ದರೆ ನನ್ನಗತಿಯೇನಾಗುತ್ತಿದ್ದಿತೋ ? " ಎಂದು ನುಡಿದನು. ಯೋಗೀಶ್ವರನು " **ಪ್ರಿಯಶಿಷ್ಯನೆ ! ಇವನ ಆಟವು ಇಷ್ಟಕ್ಕೆಯೇ ಮುಗಿಯಲಿಲ್ಲ ಈ ರಾತ್ರಿಯಲ್ಲಿ ನಾವು ನಿದ್ದೆಹೋದರೆ ಇವನು** ಬಂದು ನಮ್ಮಿಬ್ಬರನ್ನೂ ಭಕ್ಷಿಸಿಬಿಡುವನು ಆದುದರಿಂದ ನಾವು ಬೆಳಗಾಗುವವರೆಗೆ ನಿದ್ರೆಮಾಡಬಾರದು ನೀನು ಬಂಡೆಯವಿಚಾರವನ್ನು ಕೇಳಿದೆಯಲ್ಲವೆ ? ಈ ಬಂಡೆಯು ಇಲ್ಲಿಗೆ ಬರುವುದಕ್ಕೆ ಕಾರಣಭೂತನಾದವನು ಇವನೇ ಇವನ ಕಥೆಯನ್ನು ನಾಲ್ಕನೆಯ ಯಾಮದಲ್ಲಿ ನಿನಗೆ ಹೇಳುವೆನು " ಎಂದು ಹೇಳಿದ ಚಿದಾನಂದ ಮುನಿಗೆ ವಂದನೆಯನ್ನು ಮಾಡಿ ಆತನ ಮಹಿಮೆಯನ್ನು ಕೊಂಡಾಡುತ್ತ ಇರುವಷ್ಟರಲ್ಲಿ ಎರಡನೆಯ ಯಾಮವು ಪ್ರಾಪ್ತವಾಯಿತು ಮತ್ತೆ ಆ ಬ್ರಹ್ಮರಾಕ್ಷ

* ಒಬ್ಬ ಯೋಧನಿಗೆ ವಾಯುವೇಗದಂತೆ ವೇಗವುಳ್ಳ ಕುದುರೆಯೂ ಬಲಯುಕ್ತವಾದ ಶರೀರವೂ ಅಂಬು ಬಿಲ್ಲು ಬತ್ತಳಿಕೆ ಮೊದಲಾದ ಯುದ್ಧಸಾಮಗ್ರಿಯೂ ಇದೆ. ಹೀಗಿದ್ದರೂ ಸೈನಿಕರನ್ನು ಕಂಡ ಕೂಡಲೆ ಹೆದರಿಕೆಯುಂಟಾದರೆ ಆ ಯೋಧನಿಗೆ ಪ್ರಾಪ್ತವಾಗಿರುವ ಆ ಯುದ್ಧದ ಸಾಮಗ್ರಿಯಿಂದ ಪ್ರಯೋಜನವೇನೆಂದು ತಾತ್ಪರ್ಯ

ಸನು ಭಯಂಕರವಾದ ಆಕೃತಿಯಿಂದಲೂ, ಸಿಡಿಲದನಿಯನ್ನನುಕರಿಸುವ ಗರ್ಜನೆಯಿಂದಲೂ ಬಂದು ಕಣ್ಣ ಇದಿರಿನಲ್ಲಿ ನಿಂತು ಮರಳಿ " ತತಃಕಿಂತತಃಕಿಂತತಃಕಿಂತತಃಕಿಂ " ಎಂದು ಸಮಸ್ಯೆಯನ್ನು ಕೊಟ್ಟನು ಆಬಳಿಕ ಚಿದಾನಂದಯೋಗಿಯು,

† " ಸದನ್ನಂಸುಖೋಷ್ಣಂ ಸುದುಗ್ಧಂಚಸದ್ಯೋ |
ಘೃತಂಸೂಪಶಾಕಾದಿಕಂ ಭಕ್ಷ್ಯಭೋಜ್ಯಂ |
ಸುಸಿದ್ಧಂತಥಾಪಿಕ್ಷುಧಾಹೀನತಾಚೇ |
ತ್ತತಃಕಿಂತತಃಕಿಂತತ.ಕಿಂತತಃಕಿಂ ‖ "

ಎಂದಾ ಸಮಸ್ಯೆಯನ್ನು ಪೂರಯಿಸಿದನು ಬ್ರಹ್ಮರಾಕ್ಷಸನು ಪರಮಾನಂದದಿಂದ ಕುಣಿಯುತ್ತ ಹೊರಟುಹೋದನು.

ಸತ್ಯಶೀಲನು " ಗುರುವರ್ಯ ! ನನಗೆ ತುಂಬ ಆಶ್ಚರ್ಯವಾಗುವುದು ಸಮಸ್ಯಾಪೂರಣದಿಂದ ಬ್ರಹ್ಮರಾಕ್ಷಸನಿಗೆ ಬರುವ ಲಾಭವೇನು ? ಅವನು ಸಂತೋಷದಿಂದ ಕುಣಿಯುತ್ತ ಹೋಗುವುದೇನು ? " ಎಂದು ಕೇಳಿದನು ಚಿದಾನಂದಮುನಿಯು ಆ ಅಂತೇವಾಸಿಯನ್ನು ಆಶೀರ್ವದಿಸುತ್ತ ವತ್ಸ ! ಈ ವಿಚಾರವು ಕಥೆಯನ್ನು ಸಂಪೂರ್ಣವಾಗಿ ಕೇಳುವುದರಿಂದ ನೀನು ಸುಲಭವಾಗಿ ತಿಳಿಯಬರುವುದು ತ್ವರೆಪಡಬೇಡ ಎಂದು ಹೇಳಿದನು ಬಳಿಕ ಯಾವಯಾವ ವಿಷಯಗಳನ್ನು ಕುರಿತೋ ಸಂಭಾಷಣೆಯನ್ನು ಮಾಡುತ್ತ ಎಚ್ಚರದಿಂದ ಇರುವಷ್ಟರಲ್ಲಿ ಮತ್ತೆ ಆ ಬ್ರಹ್ಮರಾಕ್ಷಸನು ಬಂದು ಯಥಾಪ್ರಕಾರವಾಗಿ " ತತಃಕಿಂತತಃಕಿಂ ತತಃಕಿಂತತಃಕಿಂ " ಎಂದು ಸಮಸ್ಯೆಯನ್ನು ಕೊಟ್ಟನು ಆಗ ಮೂರನೆಯ ಯಾಮವಾಗಿದ್ದಿತು ಚಿದಾನಂದಯೋಗಿಯು ಇಂತೆಂದನು.

* " ಸುಗಂಧಂಸುಪುಷ್ಪಂ ಸುಶಯ್ಯಾಸುಕಾಂತಾ |
ವಸಂತೋಋತುಃ ಪೂರ್ಣಿಮಾರಾತ್ರಿರಾಸೀತ್ |

---

† ಸುಖೋಷ್ಣವಾದ ಅನ್ನವೂ, ಹಾಲೂ, ಆಗತಾನೆ ಬೆಣ್ಣೆಯನ್ನು ಕಾಸಿದ ತುಪ್ಪವೂ ತೊವ್ವೆ ಪಲ್ಯ ಮುಂತಾದ ವ್ಯಂಜನಗಳೂ, ಬಗೆಬಗೆಯ ಭಕ್ಷ್ಯಭೋಜ್ಯಗಳೂ ಸಿದ್ಧವಾಗಿವೆ. ಆದರೆ ಇವೆಲ್ಲವೂ ಉಳ್ಳ ಮನುಷ್ಯನಿಗೆ ಹಸಿವೊಂದಿಲ್ಲದಿದ್ದರೆ, ಆ ಅನ್ನವೇಕೆ ? ಹಾಲು ಮೊಸರು ಮೊದಲಾದ ಸಾಮಗ್ರಿಗಳಿಂದ ಪ್ರಯೋಜನವೇನು ? ಭಕ್ಷ್ಯ. ಭೋಜ್ಯ, ಮೊದಲಾದವುಗಳಿಂದ ಫಲವೇನು ?

* ಗಂಧಪುಷ್ಪಗಳೂ, ಹಂಸತೂಲಿಕಾ ತಲ್ಪವೂ, ಸುಂದರಿಯೂ ಯೌವನವತಿಯೂ ಆದ ಸ್ತ್ರೀಯೂ, ವಸಂತಋತುವೂ, ಹುಣ್ಣಿಮೆಯ ಚಂದ್ರನಿಂದ ಶೋಭಿಸುವ ರಾತ್ರಿಯೂ ಇಷ್ಟು ಅನುಕೂಲಗಳಿದ್ದು ಯಾವಾಗ ಪುರುಷನಿಗೆ ಮುಖ್ಯವಾದ ಪುಂಸ್ತ್ವವಿಲ್ಲದಿರುವುದೋ ಆಗ ಆ ಗಂಧಪುಷ್ಪಾದಿಗಳಿಂದ ಫಲವೇನು ? ವಸಂತರ್ತುವಿನಿಂದಲೂ ಪೂರ್ಣಿಮಾ ರಾತ್ರಿಯಿಂದಲೂ ಪ್ರಯೋಜನವೇನು ?

ಯದಾನಾಸ್ತಿಪುಂಸ್ತ್ವಂ ಸರಸ್ಯಪ್ರಧಾನಂ |
ತತಃಕಿಂತತಃಕಿಂತತಃಕಿಂತತಃಕಿಮ್ ‖ ''

ಎಂಬಾಯತಿಪುಂಗವನು ಸಮಸ್ಯಾಪೂರಣವನ್ನು ಮಾಡಿದನು ಬ್ರಹ್ಮರಾಕ್ಷಸನು ಆನಂದದಿಂದ ಆ ಯೋಗಿಗೆ ಸಾಷ್ಟಾಂಗ ವಂದನೆಯನ್ನುಮಾಡಿ ತೆರಳಿದನು. ಬಳಿಕ ಗುರುಶಿಷ್ಯರು ತತ್ವಾರ್ಥವಿಚಾರವನ್ನು ಮಾಡುತ್ತ ಕಾಲವನ್ನು ಕಳೆದರು ನಾಲ್ಕನೆಯ ಜಾವವು ಪ್ರಾಪ್ತವಾಯಿತು ಯಥಾಪ್ರಕಾರವಾಗಿ ಬ್ರಹ್ಮರಾಕ್ಷಸನು ಪ್ರತ್ಯಕ್ಷವಾಗಿ ಬಂದು ಅದೇ ಪದ್ಯಭಾಗವನ್ನು ಸಮಸ್ಯೆಯಾಗಿ ಕೊಟ್ಟನು ಆಗ ಮುನಿಶ್ರೇಷ್ಠನು ಹೀಗೆ ಆ ಪದ್ಯವನ್ನು ಪೂರಯಿಸಿದನು.

† " ಮುಖಂಪಂಕಜಂಲೋಚನೇಖಂಜರೀಟೌ |
ಸ್ತನೌಶ್ರೀಫಲೇವಿದ್ರುಮಶ್ಚಾಧರಶ್ಚ |
ಯದಾಪ್ರಾಣನಾಥೇನಹೀನಾಸುರೂಪಾ |
ತತಃಕಿಂತತಃಕಿಂತತಃಕಿಂತತಃಕಿಂ ‖ ''

ಇಷ್ಟಾದಬಳಿಕ ಬ್ರಹ್ಮರಾಕ್ಷಸನು ಚಿದಾನಂದಮುನಿಗೆ ದಂಡವತ್ಪ್ರಣಾಮಗಳನ್ನು ಮಾಡಿ ಬದ್ಧಾಂಜಲಿಯಾಗಿ ನಿಂತು " ಸ್ವಾಮಿಾ ! ಇಂದಿಗೆ ನನ್ನ ಶಾಪವು ವಿಮೋಚನವಾಯಿತು ನಾನು ಕೆಲವು ಕಾಲದಿಂದಲೇ ಇಲ್ಲಿ ವಾಸಿಸುತ್ತಿರುವುದು ಇವಕ್ಕೆಮುಂಚೆ ನನ್ನ ಅವಸ್ಥೆಯು ಬೇರೆಯಾಗಿದ್ದಿತು ಸರ್ವಜ್ಞರಾದ ತಾವುಬಲ್ಲಿರಿ ಅಗೋ ! ನನಗೆ ವಿಮಾನವು ಬಂದಿವೆ ಆಶೀರ್ವಾದವನ್ನು ಮಾಡಿ ಕಳುಹಿಸಿಕೊಡಿ ಹೋಗಿಬರುವೆನು '' ಎಂದರಿಕ ಮಾಡಿದನು ಚಿದಾನಂದ ಮುನಿಯು ಆಶೀರ್ವಾದವನ್ನು ಮಾಡಿದನು ಆ ಬ್ರಹ್ಮರಾಕ್ಷಸನ ದಿವ್ಯವೇಷಧಾರಿಯಾಗಿ ಸ್ವರ್ಗದತ್ತ ತೆರಳಿದನು.

ಸತ್ಯಶೀಲನು ಮಹದಾಶ್ಚರ್ಯವನ್ನು ಹೊಂದಿ ಸ್ವಾಮಿಾ ! ಇದೇನು ವಿಚಿತ್ರವೋ ನಾನೆಂದೂ ಕಾಣೆನು ಈ ಬಂಡೆಯು ಇಲ್ಲಿಗೆ ಬರುವುದಕ್ಕೆ ಈ ಬ್ರಹ್ಮರಾಕ್ಷಸನೇ ಕಾರಣನೆಂದು ಹೇಳಿದರಲ್ಲವೆ ? ಆತನ ಕಥೆಯನ್ನು ದಯವಿಟ್ಟು ಹೇಳಬೇಕೆಂದು ಪ್ರಾರ್ಥಿಸಿದನು ಚಿದಂಬರಯೋಗಿಯಿಂತೆಂದನ .

ವತ್ಸ ! ಸತ್ಯಶೀಲ ! ಆಲಿಸು ವಿರೂಪಾಕ್ಷಶರ್ಮನೆಂಬ ಬ್ರಾಹ್ಮಣನೊಬ್ಬನಿದ್ದನು ಜ್ಯೋತಿಷ್ಟೋಮಾದಿ ಯಜ್ಞಗಳನ್ನು ಮಾಡಿದವನು ಮತ್ತು ವೇದಗಳನ್ನು ಪದಕ್ರಮ ಜಟಾಕ್ರಮವಾಗಿ ಅಧ್ಯಯನ ಮಾಡಿದವನು ಆದರೂ ಕೆಲವು

---

† ಕಮಲದಂತೆ ಮುಖವೂ ದಾಸಂಹಕ್ಕಿಗಳಂತಪ್ಪ ಕಣ್ಣುಗಳೂ ಬಿಲ್ವಫಲಗಳಂತಿರುವ ಸ್ತನಗಳೂ ಹವಳದಂತಿರುವ ತುಟಿಗಳೂ ಉಳ್ಳ ರೂಪವತಿಯಾಗಿದ್ದು ಗಂಡನಿಲ್ಲದಿದ್ದರೆ ! ಆ ಮುಖನೇತ್ರಾದಿಗಳ ಸೌಂದರ್ಯದಿಂದ ಯಾವ ಪ್ರಯೋಜನವೂ ಇಲ್ಲವೆಂಬ ಭಾವವು.

ದುರ್ಗುಣಗಳನ್ನು ಪಡೆದು ನಿರಂತರವೂ ವರ್ತಿಸುತ್ತಿದ್ದನು "ನಾನು ಸರ್ವಜ್ಞನು, ನನ್ನ ಸಮಾನರಿಲ್ಲ" ಎಂದು ಗರ್ವಿಸಿ ಬಂದ ವಿದ್ವಾಂಸರನ್ನು ಧಿಕ್ಕರಿಸುತ್ತ, ಪತಿತರಲ್ಲಿಯೇ ಸ್ನೇಹವನ್ನು ಬಳೆಯಿಸುತ್ತ, ಇಂದ್ರಿಯಪರವಶನಾಗಿ ಪರಸ್ತ್ರೀಯರನ್ನಪಹರಿಸುತ್ತ ಬ್ರಹ್ಮಸ್ವವನ್ನಪಹರಿಸುತ್ತ ದುಷ್ಟವರ್ತನವುಳ್ಳವನಾಗಿದ್ದನು. ಶಿಷ್ಯರತ್ನವೇ! "ಬಲವಾನಿಂದ್ರಿಯಗ್ರಾಮೊ ವಿದ್ವಾಂಸಮಪಿಕರ್ಷತಿ" ಎಂಬ ವಾಕ್ಯವು ಸುಳ್ಳಾಗುವುದೇ? ಹೀಗಿರುತ್ತಿರಲು ಕೆಲವುಕಾಲಕ್ಕೆ ನಿಷ್ಠಾಪರನೂ, ವೇದವೇದಾಂಗವೇದಿಯೂ, ಜಿತೇಂದ್ರಿಯನೂ ಆದ ಶಂಕರಭಟ್ಟಾರಕನೆಂಬ ಒಬ್ಬ ಯತಿಯು ವಿರೂಪಾಕ್ಷಶರ್ಮನು ವಾಸಮಾಡುತ್ತಿದ್ದ ಪೆನ್ನಗರವೆಂಬ ಗ್ರಾಮಕ್ಕೆ ಬಂದನು ಊರಿನವರೆಲ್ಲರೂ ಆ ಯತಿಯನ್ನು ಗೌರವದಿಂದ ಬರಮಾಡಿಕೊಂಡು ಭಿಕ್ಷೆಯನ್ನು ಮಾಡಿದರು ವಿರೂಪಾಕ್ಷಶರ್ಮನಿಗೆ ಅದು ಸಮಾಧಾನವಿಲ್ಲದೆ ಹೋಯಿತು ನಿಷ್ಕಾರಣವಾಗಿ ಆ ಯತಿಯಲ್ಲಿ ದ್ವೇಷವನ್ನಿಟ್ಟನು ಯತಿಯ ಇದಿರಿನಲ್ಲಿ ಬಂದು ಆತನನ್ನು ಬಹಳವಾಗಿ ನಿಂದಿಸಿದನು ಆ ದಿನದ ರಾತ್ರಿಯಲ್ಲಿ ವೇಷಾಂತರದಿಂದ ಬಂದು ಆ ಶಂಕರಭಟ್ಟಾರಕನ ದೇವತಾರ್ಚನಾ ಸಾಮಗ್ರಿಗಳನ್ನು ಕದ್ದನು ಬೆಳಗಾದ ಬಳಿಕ ಯತಿಯು ಎಚ್ಚತ್ತು ಸ್ನಾನಾದ್ಯನುಷ್ಠಾನಗಳನ್ನು ಮುಗಿಸಿಕೊಂಡು ದೇವಾರ್ಚನೆಗೆ ಪ್ರಾರಂಭಿಸುವಷ್ಟರಲ್ಲಿ ಆತನಿಗೆ ಅತ್ಯಂತ ಪ್ರಿಯವಾದ ವಾಸುದೇವಮೂರ್ತಿಯ ಸಾಲಗ್ರಾಮವು ಗೋಚರಿಸಲಿಲ್ಲ ಪೂಜೋಪಕರಣಗಳೊಂದೂ ಕಾಣಿಸಲಿಲ್ಲ ಇದಿರಿಗೆ ಬಂದು ನಿಂದಿಸಿದರೂ ಸ್ವಲ್ಪವೂ ಕೋಪಗೊಳ್ಳದ ಆ ಯತಿಪುಂಗವನಿಗೆ ಆಗ ದಂದಿಷ್ಟು ಕೋಪವು ಹುಟ್ಟಿತು ಕಣ್ಣುಮುಚ್ಚಿ ದಿವ್ಯದೃಷ್ಟಿಯಿಂದ ನೋಡಿ ವಿರೂಪಾಕ್ಷಶರ್ಮನ ದುಷ್ಕೃತ್ಯಗಳನ್ನು ತಿಳಿದು "ಇವನ ಕೃತ್ಯಗಳಿಂದ ಇವನಿಗೆ ಬ್ರಹ್ಮರಾಕ್ಷಸತ್ವವು ತಕ್ಕುದಾಗಿದೆ ಆಗಲಿ ಇವನೀಗಲೇ ಬ್ರಹ್ಮರಾಕ್ಷಸನಾಗಲಿ" ಎಂದು ಶಪಿಸಿದನು ಒಡನೆಯೇ ಆ ಓದಿದ ಮೂಢನಿಗೆ ಬ್ರಹ್ಮಪಿಶಾಚತ್ವವು ಪ್ರಾಪ್ತವಾಯಿತು ಆಗಳೆ ಮನೆಯಲ್ಲಿದ್ದವರನ್ನೆಲ್ಲ ಭಕ್ಷಿಸಿದನು. ಪೂರ್ವವೈರದಿಂದ ಆ ಯತಿಯನ್ನು ನುಂಗಲಿಕ್ಕೆ ಬಂದು ಆತನ ತೇಜೋವಿಶೇಷದಿಂದ ಹೆದರಿದನು ಆದರೂ ಸ್ವಲ್ಪ ಧೈರ್ಯಗೊಂಡು ಮೇಲೆ ಬೀಳುವುದಕ್ಕೆ ಬರಲು ಯತಿಯು ಪಿಶಾಚಸ್ತಂಭನ ಮಂತ್ರವನ್ನುಚ್ಚರಿಸಿ ಕದಲದಂತೆ ನಿಲ್ಲಿಸಿದನು. ಆಗ ಆ ಬ್ರಹ್ಮರಕ್ಷಸ್ಸು ಕಣ್ಣೀರನ್ನು ತುಂಬಿ ಮಾತಾಡುವುದಕ್ಕೆ ಸಹ ಶಕ್ತಿಯಿಲ್ಲದೆ ಸ್ತಂಭೀಭೂತನಾಗಿರಲು ಯತಿಯ ಹೃದಯವು ಕರಗಿ "ಎಲಾ! ನೀನೆಷ್ಟು ಓದಿದರೇನು? ಎಷ್ಟು ಯಜ್ಞಗಳನ್ನು ಮಾಡಿದರೇನು? ನಿನ್ನ ಪರಸ್ತ್ರೀಹರಣಾದಿ ದುಷ್ಕಾರ್ಯಗಳು ಅವುಗಳ ಫಲವನ್ನು ನಾಶಗೊಳಿಸಿ ನಿನ್ನನ್ನು ಈ ಸ್ಥಿತಿಗೆ

ತಂದುವು *ನಿನ್ನ ಕಾರ್ಯಗಳಿಂದ ನಿನಗೆ ಮುಂದಿನ ಜನ್ಮದಲ್ಲಿ ಬ್ರಹ್ಮರಾಕ್ಷಸತ್ವವು ಬರಬೇಕಾಗಿದ್ದಿತು ನನ್ನ ಕೋಪವು ಈಗಲೇ ನಿನ್ನನ್ನು ಈ ಬ್ರಹ್ಮರಾಕ್ಷಸತ್ವಕ್ಕೆ ಗುರಿಮಾಡಿತು ಚಿಂತೆಯಿಲ್ಲ ಕೇಳು ಈ ಪಕ್ಕದ ಕಾಡಿನಲ್ಲಿದ್ದು ವನ್ಯಮೂಲಫಲಗಳಿಂದ ಜೀವಿಕೆಯನ್ನು ನಡೆಯಿಸಿಕೊಂಡಿದ್ದರೆ ಮುಂದೆ ಒಂದು ನೂರು ವರ್ಷಗಳಿಗೆ ನಿನಗೆ ಸುಗತಿಯು ಪ್ರಾಪ್ತವಾಗುವುದು ತಪ್ಪಿದರೆ ನಿನಗೆ ಮತ್ತಷ್ಟು ಕಷ್ಟವು ಪ್ರಾಪ್ತವಾಗುವುದು" ಎಂದು ನುಡಿದು ಅಲ್ಲಿಂದ ಮುಂದಕ್ಕೆ ತೆರಳಿದನು.

ಬ್ರಹ್ಮರಾಕ್ಷಸನು ಪಕ್ಕದಕಾಡಿನ ಒಂದು ನಿರ್ಜನಪ್ರದೇಶಕ್ಕೆ ಹೋಗಿ ಅಲ್ಲಿ ವಾಸಮಾಡುತ್ತಿದ್ದನು ಆದರೇನು ? ಅವನು ಆ ಯತಿಯ ಮಾತಿನಂತೆ ನಡೆಯಲಿಲ್ಲ ಅಲ್ಲಿದ್ದ ಒಂದು ಅಶ್ವತ್ಥವೃಕ್ಷದಮೇಲಿರುತ್ತ ವಿಶ್ರಾಂತಿಗಾಗಿ ಆ ಮರದ ಕೆಳಕ್ಕೆ ಬರುವವರನ್ನೆಲ್ಲ ಕೊಂದು ಭಕ್ಷಿಸುತ್ತ ದಾರಿಗರಿಗೆ ಯಮಸದೃಶನಾಗಿದ್ದನು. ಒಂದು ದಿನ ಬಹು ಸದಾಚಾರಸಂಪನ್ನನೂ, ಮಂತ್ರವಿದ್ಯಾಪ್ರವೀಣನೂ, ಶ್ರೀಚಕ್ರದ ಆರಾಧನೆಯಿಂದ ಮಹಾಮಹಿಮಯುತನೂ ಆಗಿದ್ದ ಮಹಾದೇವಶರ್ಮನೆಂಬ ಒಬ್ಬ ಬ್ರಾಹ್ಮಣೋತ್ತಮನು ಯಾವುದೋ ಒಂದು ಕಾರ್ಯಾರ್ಥವಾಗಿ ದೇವನಗರವೆಂಬ ತನ್ನ ಅಗ್ರಹಾರದಿಂದ ಹೊರಟು ಬ್ರಹ್ಮರಾಕ್ಷಸನ ಕಾಡಿನ ದಾರಿಯಲ್ಲಿ ಬರುತ್ತ ಬಳಲಿ ಬ್ರಹ್ಮಗ್ರಹವಿರುವ ಅರಳಿಯ ಮರದ ನೆರಳಿಗೆ ಬಂದು ವಿಶ್ರಮಿಸಿಕೊಂಡನು. ತನಗಾಹಾರವು ದೊರಕಿತೆಂದು ಸಂತೋಷಿಸಿ ಆತನ ಮಹಿಮೆಯನ್ನರಿಯದೆ ಆತನನ್ನು ಕೊಂದು ತಿನ್ನುವುದಕ್ಕಾಗಿ ಚಕ್ಕನೆ ಮರದಿಂದ ಕೆಳಕ್ಕೆ ದುಮುಕಿ ಭಯಂಕರರೂಪದಿಂದ ಮುಂದೆ ನಿಂತನು ಮಹಾದೇವಶರ್ಮನು ಅವನನ್ನು ಬ್ರಹ್ಮರಾಕ್ಷಸನೆಂದು ತಿಳಿದು, ಮಹಾ ಮಂತ್ರಬಲದಿಂದ ಅವನ ಸತ್ವವನ್ನು ಅಡಗಿಸಿ ಸ್ತಂಭನಗೊಳಿಸಿ ದಿಗ್ಬಂಧನೆಯನ್ನು ಮಾಡಿ ಅವನನ್ನು ಕುರಿತು " ನೀನಾರು ? ಇಲ್ಲಿಗೇತಕ್ಕೆ ಬಂದೆ ? " ಎಂದು ಪ್ರಶ್ನೆಮಾಡಿದನು. ಅವನು ಆತನ ಮಹಾಮಹಿಮೆಗೆ ಬೆರ್ಚಿ ಗಡಗಡನೆ ನಡುಗುತ್ತ ತನ್ನ ಜನ್ಮವನ್ನೂ ತಾನು ಮಾಡುತ್ತಿದ್ದ ದುಷ್ಕೃತ್ಯಗಳನ್ನೂ, ಅದರಿಂದ ಪ್ರಾಪ್ತವಾದ ರಾಕ್ಷಸಭಾವವನ್ನೂ ಈಗಿನ ತನ್ನ ದುರ್ವೃತ್ತಿಯನ್ನೂ ಬಿನ್ನೈಸಿದನು. ಮಹಾದೇವಶರ್ಮನು ಅದನ್ನು ಕೇಳಿ " ಓಹೋ ! ನಿನ್ನ ದುರಾಚಾರವು ಈ ಬಗೆಯಾಗಿರುವುದೇ ? ಸರಿಸರಿ ! ನಿನಗೆ ತಕ್ಕಶಿಕ್ಷೆಯನ್ನು ವಿಧಿಸಿ ಇನ್ನುಮೇಲೆ ಇಲ್ಲಿಗೆ

---

* ಸಂಯೋಗಂ ಪತಿತೈರ್ಗತ್ವಾ - ಪರಸ್ಯೈವಚಯೋಷಿತಂ । ಅಪಹೃತ್ಯಚ ವಿಪ್ರಸ್ವಂ – ಭವತಿ ಬ್ರಹ್ಮರಾಕ್ಷಸಃ ॥ (ಮನು - ೧೨ ೬೦) ಪರಸ್ಯ ಯೋಷಿತ ಹೃತ್ವಾ - ಬ್ರಹ್ಮಸ್ವಮಪಹೃತ್ಯಚ । ಅರಣ್ಯೇ ನಿರ್ಜಲೇ ದೇಶೇ ಭವತಿ ಬ್ರಹ್ಮರಾಕ್ಷಸಃ ॥ (ಯಾಜ್ಞ .. ೨೧೨)

ಬರುವ ಮಾನವರಿಗೆ ನಿನ್ನದೆಸೆಯಿಂದುಂಟಾಗುತ್ತಿದ್ದ ಪ್ರಾಣೋಪದ್ರವವನ್ನು ನಿವಾರಿಸುವೆನು" ಎಂದು ಅತ್ಯಾಗ್ರಹದಿಂದ ನುಡಿದು, ಅಕ್ಕಪಕ್ಕಗಳಲ್ಲಿ ನೋಡಿ ಸಮೀಪದಲ್ಲಿ ಒಂದು ಗುಡ್ಡವೂ ಅದರ ಅಡಿಯಲ್ಲಿ ಒಂದು ದೊಡ್ಡ ಬಂಡೆಯೂ ಇದ್ದುದನ್ನು ಕಂಡು ಅಲ್ಲಿಗೆ ಬ್ರಹ್ಮರಾಕ್ಷಸನನ್ನು ಕರೆದೊಯ್ದು "ಎಲಾ! ದುಷ್ಟಾ! ಈ ದೊಡ್ಡ ಬಂಡೆಯನ್ನು ಹೊತ್ತುಕೊಂಡು ನನ್ನಹಿಂದೆಬಾ" ಎಂದಾಜ್ಞಾಪಿಸಿದನು. ಬ್ರಹ್ಮರಾಕ್ಷಸನಾ ಮಾತನ್ನು ಮೀರಲಾರದೆ ಆ ಬಂಡೆಯನ್ನೆತ್ತಿ ನೆತ್ತಿಯಮೇಲೆ ಹೊತ್ತುಕೊಂಡು ಆತನಹಿಂದೆ ನಡೆಯತೊಡಗಿದನು ಒಂದೆರಡು ಹರಿದಾರಿ ಬಂದಮೇಲೆ ಆ ಶರ್ಮನ ಮಂತ್ರಬಲದಿಂದ ಆ ಬಂಡೆಯು ಅತಿಭಾರವಾಗಿ ಆ ರಾಕ್ಷಸನಿಗೆ ಹೊರಲಾಗದಿರಲು ಅವನಾ ಶರ್ಮನನ್ನು ನೋಡಿ, "ಸ್ವಾಮೀ! ನಾನು ಮಾಡುತ್ತಿದ್ದುದು ದೊಡ್ಡ ಅಪರಾಧವು ಅದರ ಫಲವು ಅನುಭವಕ್ಕೆ ಬಂತು ಇನ್ನುಮೇಲೆ ಈ ದುರ್ಮಾರ್ಗವೃತ್ತಿಯನ್ನು ಬಿಟ್ಟು ವರ್ತಿಸುವೆನು ಕನಿಕರಿಸಿ ನನ್ನನ್ನು ಬಿಟ್ಟುಬಿಡಿ ಎಂದು ಬಹುವಾಗಿ ಮೊರೆಯಿಟ್ಟನು ಆಗ ಆ ಶರ್ಮನು ತನ್ನ ಮನಸ್ಸಿನಲ್ಲಿ 'ಪಾಪ! ಇವನನ್ನು ಬಿಟ್ಟುಬಿಡುವುದೇ ಉಚಿತವು ಆದರೂ ಪರರಿಗೆ ಕೇಡನ್ನು ಮಾಡದಂತೆ ಇವನನ್ನು ಹದ್ದಿನಲ್ಲಿರಿಸಬೇಕು ಇವನಿಗೆ ಶಾಪಾವಸಾನಕಾಲವು ಸಮೀಪಕ್ಕೆ ಬಂದಿರುವುದು ಇವನಿಗೆ ತಕ್ಕ ಉಪಕಾರವನ್ನೇ ಮಾಡುವೆನು" ಎಂದು ಬಗೆದು ಅವನನ್ನು ನೋಡಿ "ಎಲಾ! ಬ್ರಹ್ಮರಾಕ್ಷಸನೇ! ಇಗೋ! ಈ ಕೊಳದಬಳಿಯಲ್ಲಿ ಈ ಬಂಡೆಯನ್ನಿಡು ನೀನು ಪಶ್ಚಾತ್ತಾಪದಿಂದ ಬೇಡಿಕೊಳ್ಳುತ್ತಿರುವೆ ಆದುದರಿಂದ ಇನ್ನಾದರೂ ನನ್ನ ಮಾತನಾಲಿಸು ನಿನಗೆ ಸ್ವೇಚ್ಛಾವಿಹಾರವಿಲ್ಲದಿರುವಂತೆ ಮಂತ್ರಬಲದಿಂದ ನಿನ್ನನ್ನು ಕಟ್ಟಿರುತ್ತೇನೆ ಈ ಬಂಡೆಯಕೆಳಗೆ ವಾಸಿಸುತ್ತಿರು ಆದರೆ ಅತ್ತಿತ್ತ ಕದಲದೆ ಇರಬೇಕು ಈ ದಾರಿಯಲ್ಲಿ ಬರುವವರಲ್ಲಿ ಅನೇಕ ಭಕ್ತರೂ ಭಾಗವತೋತ್ತಮರೂ ಸಾಧುಗಳೂ ಯತಿಗಳೂ ನೀನು ವಾಸಿಸುತ್ತಿರುವ ಈ ಬಂಡೆಯ ಮೇಲೆ ಕುಳಿತುಕೊಳ್ಳುವರು ಅವರ ಪಾದಧೂಳಿಯು ನಿನಗೆ ಸ್ವಲ್ಪಸ್ವಲ್ಪವಾಗಿ ಸೋಂಕುತ್ತಿರುವುದು. ಆದುದರಿಂದ ನಿನ್ನ ಪಾಪಗಳು ದಿನಕ್ರಮದಲ್ಲಿ ಕ್ಷೀಣಿಸುತ್ತಬಂದು ಸ್ವಲ್ಪ ಪುಣ್ಯವು ಗೋಚರಿಸುವುದು ಆಗ ಇಲ್ಲಿಗೆ ಮಹಾಮಹಿಮನಾದ ಯೋಗೀಶ್ವರನೊಬ್ಬನು ಶಿಷ್ಯನೊಡನೆ ಬರುವನು ಆಗ ನಿನಗೆ ಚಲನಶಕ್ತಿಯು ಹುಟ್ಟುವುದು ನೀನಾಗ ಬಂಡೆಯ ಕೆಳಗಣಿಂದ ರಾತ್ರಿಯಹೊತ್ತಿನಲ್ಲಿ ಹೊರಕ್ಕೆ ಬಂದು ಪ್ರತಿಯೊಂದು ಯಾಮದಲ್ಲಿಯೂ "ತತಃಕಿಂತತಃಕಿಂತತಃಕಿಂತತಃಕಿಂ" ಎಂಬ ಸಮಸ್ಯೆಯನ್ನು ಕೊಡು ಆತನು ಪ್ರತಿಯಾಮದಲ್ಲಿಯೂ ಉತ್ತರವನ್ನು ಕೊಡುವನು ಆ ನಾಲ್ಕನೆಯಯಾಮದಲ್ಲಿ ಶಾಪವಿಮೋಚನೆಯಾಗಿ ನೀನು ಮಾಡಿರುವ ಯಜ್ಞಗಳಫಲವಾಗಿ ದೇವವಿಮಾನವು ಸಿದ್ಧವಾಗುವುದು

ನಿನಗೆ ದಿವ್ಯರೂಪವೂ ಬರುವುದು ಬಳಿಕ ಆತನಿಂದ ಅಪ್ಪಣೆಯನ್ನು ಪಡೆದು ಹೊರಡು ನಿನಗಲ್ಲಿ ಶಾಶ್ವತಸುಖವು ಲಭಿಸುವುದು ” ಎಂದು ಹೇಳಿ ಆ ಮಹಾದೇವಶರ್ಮನು ತನ್ನ ದಾರಿಯನ್ನು ಹಿಡಿದನು.

ಸತ್ಯಶೀಲನೇ ! ಕೇಳಿದೆಯಾ ಬ್ರಹ್ಮರಾಕ್ಷಸನ ವೃತ್ತಾಂತವನ್ನು ? ಆವನು ಆ ಬಂಡೆಯಿಂದ ಹೊರಗೆ ಬರುವುದಕ್ಕಾಗಲಿ ಹಳುವುದಕ್ಕಾಗಲಿ ಆತನಿಗೆ ಶಕ್ತಿಯಿಲ್ಲದಿರುವುದಕ್ಕೋಸ್ಕರ ಆ ಶರ್ಮನು ಉದ್ಧರಿಸಿದುದೇ ಈ ಬಂಡೆಯಮೇಲಣ ಯಂತ್ರವಿನ್ಯಾಸವು ಹೆಚ್ಚು ಕಡಿಮೆ ಇನ್ನೂರು ಸಂವತ್ಸರಗಳಿಂದಲೂ ಈ ಬಂಡೆಯು ಇಲ್ಲಿ ಬಿದ್ದಿರುವುದು ಇವನ್ನು ಒಂದುಸಾವಿರ ಮಂದಿ ನೂರವರೂ ಎತ್ತಲಾರರು ಅಂದಮೇಲೆ ತೆಗೆದುಕೊಂಡು ದೂರದಿಂದ ತರುವುದೆಂದರೇನು ? ಬ್ರಹ್ಮರಾಕ್ಷಸನು ಅತಿಬಲಶಾಲಿಯಾದುದರಿಂದ ಎರಡು ಹರಿದಾರಿಯಿಂದ ಹೊತ್ತು ತಂದನು. ”

ಎಂದಿಂತು ಬಂಡೆಯ ವೃತ್ತಾಂತವನ್ನು ಚಿದಾನಂದಯತಿಯು ಹೇಳಲು ಶಿಷ್ಯನು ಸಂತೋಷಿಸಿ ಗುರುಮಹಿಮೆಯನ್ನು ಅಧಿಕವಾಗಿ ಶ್ಲಾಘಿಸಿದನು.

ಹೀಗೆ ಆ ರಾತ್ರಿಯನ್ನು ಕಳೆದು ಸೂರ್ಯೋದಯಕ್ಕೆ ಪೂರ್ವವೇ ಸ್ನಾನ ಸಂಧ್ಯಾದಿಗಳನ್ನಾಚರಿಸಿ ಮುಂದಕ್ಕೆ ಪ್ರಯಾಣ ಮಾಡಿದರು.

ಇಂತು ಏಳನೆಯ ಕಥೆ ಮುಗಿದುದು.



—: ಎಂಟನೆಯ ದಿನದ ಕಥೆ. :—

ಧಾರಾಧರನಿಭಾಂಗಾಯ ಧಾತ್ರೀಶ್ವರನುತಾಯಚ |
ಧರಾಧರಧರಾಯಾಸ್ತು ಮೇ ಪ್ರಣಾಮಃ ಪದೇಪದೇ || ”

ಏಳನೆಯ ನಿಲ್ದಾಣವನ್ನು ಬಿಟ್ಟು ಹೊರಟು ಗುರುಶಿಷ್ಯರಿಬ್ಬರೂ ಹತ್ತನೆಯ ಸ್ಥಲಕ್ಕೆ ಬಂದರು ತಾವು ಬಂದು ತಂಗಿದ ಆ ಸ್ಥಲವು ಒಂದಗ್ರಹಾರವಾಗಿದ್ದಿತು ಆ ಬ್ರಾಹ್ಮಣಾಗ್ರಹಾರಕ್ಕೆ ಸೇರಿದಂತೆ ಊರಿನಹೊರಗೆ ಒಂದು ದೊಡ್ಡ ಆಲದ ಮರವಿದ್ದಿತು ಅದಕ್ಕೆ ಅತಿಸಮೀಪದಲ್ಲಿ ಒಂದು ಕೊಳವು ನಿರ್ಮಲವಾದ ಸಿಹಿನೀರುಳ್ಳುದಾಗಿ ವಿಶಾಲ ಸೋಪಾನಗಳಿಂದ ಪ್ರಕಾಶಿಸುತ್ತಿದ್ದಿತು ಗುರುಶಿಷ್ಯರು ತಾವಾವಿನ ವಾಸಮಾಡುವುದಕ್ಕೆ ಅದೆ ತಕ್ಕಸ್ಥಲವೆಂದು ಅಲ್ಲಿಯೆ ಅಗ್ರಹಾರವೊಳಕ್ಕೆ ಹೋಗಿ ಬೇಕಾದ ಅಡಿಗೆಯ ಸಾಮಗ್ರಿಗಳನ್ನು ತೆಗೆದುಕೊಂಡು ಬಂದು ಅಡಿಗೆ ಮಾಡಿ ಊಟಮಾಡಿದರು ಯೋಗೀಂದ್ರನು ಯಾವ ಯಾವ ಒಳ್ಳೆಯ ಕಥೆಗಳನ್ನೋ ಹೇಳುತ್ತ ಶಿಷ್ಯನನ್ನು ಆನಂದವಾರ್ಧಿಯಲ್ಲಿ ಮುಳುಗಿಸಿ ಒಂದು ಯಾಮದಪೊತ್ತು ಕಳೆದನು ಬಳಿಕ ಆ ಶಿಷ್ಯನು ಗುರುವರ್ಯನ ಅಡಿದಾವರೆಗಳಿಗೆರಗಿ ಸ್ವಾಮಿ ! ನನ್ನದೊಂದರಿಕೆ

ಯುಂಟು ಪ್ರತಿದಿನವೂ ನಾನು ಹೀಗೆ ಪೀಡಿಸುತ್ತಿರುವುದರಿಂದ ಬೇಸರಪಡದೆ ಕೇಳುತ್ತಿರುವ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಹೇಳುತ್ತಿರುವುದರಿಂದ ಪರಶ್ಶತ ವಂದನೆಗಳನ್ನು ತಮ್ಮ ಸನ್ನಿಧಿಯಲ್ಲಿ ಅರ್ಪಿಸುತ್ತೇನೆ ಕ್ಷಮಿಸಬೇಕು.

"ನಾನು ಅಡುಗೆಯ ಪದಾರ್ಥಗಳಿಗಾಗಿ ಅಗ್ರಹಾರದೊಳಕ್ಕೆ ಹೋಗಿದ್ದೆನಷ್ಟೆ? ಬ್ರಾಹ್ಮಣವೀಧಿಯಲ್ಲಿ ಒಂದು ಮನೆಯ ಬಾಗಿಲಲ್ಲಿ ನಿಜವಾದ ಮನುಷ್ಯಳೆಂಬ ಭ್ರಾಂತಿಯನ್ನುಂಟುಮಾಡುವ ಸುಂದರವಾದ ಒಂದು ಸ್ತ್ರೀವಿಗ್ರಹವನ್ನು ಕಂಡೆನು ನಾನು ತಮ್ಮೊಡನೆ ಸಂಚಾರಕ್ಕೆ ಹೊರಟಂದಿನಿಂದಲೂ ಎಷ್ಟೋ ವಿಗ್ರಹಗಳನ್ನು ನೋಡಿರುವೆನಲ್ಲದೆ ಇಂತಪ್ಪ ವಿಗ್ರಹವನ್ನು ನಾನೆಲ್ಲಿಯೂ ಕಂಡಿಲ್ಲ ಅದು ಭೂಮಿಯ ಮೇಲೆ ಅಡಿಗಳಷ್ಟೂರದಂತೆ ನಿಲ್ಲಿಸಲ್ಪಟ್ಟಿದೆ ಪಕ್ಕಗಳಲ್ಲಿಯಾಗಲಿ ಮೇಲೆಯಾಗಲಿ ಅದಕ್ಕೆ ಯಾವ ಸಂಬಂಧವೂ ಇಲ್ಲ ಶಿಲ್ಪಿಕಲ್ಪಿತವಾಗಿದ್ದ ಪಕ್ಷದಲ್ಲಿ ಅವನದನ್ನು ಯಾವ ಆಧಾರದಮೇಲೆ ನಿಲ್ಲಿಸಿರುವನು? ಭೂಮಿಗೂ ಅದರ ಪಾದಗಳಿಗೂ ಎರಡಡಿಗಳ ಅಂತರವಿದೆ ಅದು ನಿರಾಧಾರವಾಗಿ ಅಂತರಾಳದಲ್ಲಿ ನಿಂತಿರುವುದಕ್ಕೆ ಕಾರಣವೇನಿರಬಹುದು? ಅಗ್ರಹಾರದಲ್ಲಿ ಯಾರನ್ನಾದರೂ ಕೇಳಿ ತಿಳಿದುಕೊಳ್ಳೋಣವೆಂದು ಬಗೆದೆನು ಹೆಚ್ಚು ಹೊತ್ತಾಗುವುದೆಂದು ಹೆದರಿ ನಿಮ್ಮಿಂದಲೇ ಆ ವಿಚಾರವನ್ನು ತಿಳಿದುಕೊಳ್ಳೋಣವೆಂದು ಬಂದುಬಿಟ್ಟೆನು ಆ ವಿಗ್ರಹವನ್ನು ನೋಡಿ ಆಶ್ಚರ್ಯಪಡುವ ಜನರು ಆ ಊರಲ್ಲಿ ಯಾರೂ ಇಲ್ಲ ಹಾಗೆ ಅಂತರಾಳದಲ್ಲಿ ನಿಂತಿರುವ ಆ ಪ್ರತಿಮೆಯು ಶಿಲಾನಿರ್ಮಿತವಾದುದೋ ಲೋಹನಿರ್ಮಿತವಾದುದೋ ಅಥವಾ ದಾರುಮಯವಾದುದೋ ತಿಳಿಯಲು ಸಾಧ್ಯವೇ ಇಲ್ಲ ದಯವಿಟ್ಟು ಆ ವಿಗ್ರಹದ ವಿಚಾರವನ್ನು ತಿಳಿಸಬೇಕೆಂದು ಪ್ರಾರ್ಥಿಸುತ್ತೇನೆ" ಎಂದು ಕೇಳಿದ ಸತ್ಯಶೀಲನನ್ನು ನೋಡಿ ಚಿದಾನಂದಯೋಗಿಯು ಸ್ವಲ್ಪ ಹೊತ್ತು ಆಲೋಚಿಸಿ ತಚ್ಚರಿತ್ರವನ್ನು ದಿವ್ಯದೃಷ್ಟಿಯಿಂದರಿತು ಹೀಗೆ ಹೇಳಲಾರಂಭಿಸಿದನು.

## ಕಲಾವತಿಯ ಕಥೆ.

ನೀನು ನೋಡಿದ ಆ ಅಂತರಾಳ ವಿಗ್ರಹದ ಚರಿತ್ರೆಯು ಬಹು ವಿಚಿತ್ರವಾದುದು ಕೇಳು ಈಗ ಆ ವಿಗ್ರಹವು ಯಾವ ಮನೆಯ ದ್ವಾರದಲ್ಲಿರುವುದೋ ಆ ಮನೆಯಲ್ಲಿ ಹರಿಶರ್ಮನೆಂಬ ಬ್ರಾಹ್ಮಣನು ಕಾಂತಿಮತಿಯೆಂಬ ಹೆಂಡತಿಯೊಡನೆ ವಾಸಮಾಡುತ್ತಿದ್ದನು ಆತನ ಸಂತತಿಯವರೇ ಈಗಲೂ ಆ ಮನೆಯಲ್ಲಿ ವಾಸಿಸುತ್ತಿರುವರು. ಆ ಬ್ರಾಹ್ಮಣನಿಗೆ ನಾಲ್ಕುಮಂದಿ ಮಕ್ಕಳಾಗಿ ಕ್ರಮಕ್ರಮವಾಗಿ ಅಭಿವೃದ್ಧಿಯನ್ನು ಹೊಂದಿ ಎಲ್ಲ ವಿದ್ಯೆಗಳನ್ನೂ ಕಲಿತು ವಿದ್ವದಗ್ರಣಿಗಳೆನ್ನಿಸಿಕೊಂಡಿದ್ದರು ಅವರಲ್ಲಿ ನಾಲ್ಕನೆಯವನು ಅತಿಸೌಂದರ್ಯವುಳ್ಳವನು ಅವನನ್ನು ಎಲ್ಲರೂ ಅಭಿನವಮದನನೆಂದು ಕರೆಯುತ್ತಿದ್ದರು. ಅವನ ಸೊಬಗು

ಜಯಂತ ನಲಕೂಬರ ಮನ್ಮಥರ ಸೊಬಗನ್ನು ಮೀರಿಸಿತ್ತು ರೂಪಕ್ಕೆ ತಕ್ಕಂತೆ ಆತನ ಹೆಸರು ಸೋಮಸುಂದರಶರ್ಮನೆಂದು ಆದರೆ ನಾಮರೂಪಗಳಿಗೆ ತಕ್ಕ ಹಾಗೆ ಮಾತ್ರ ಆತನ ನಡೆವಳಿಕೆಯಿರಲಿಲ್ಲ ನಿರಂತರವೂ ದುಷ್ಟರೊಡನೆ ಸೇರಿ ತಿರುಗುತ್ತ ಮನೆಯ ಹಂಬಲವನ್ನೆ ತೊರೆದು ಸಮಯಕ್ಕೆ ಸರಿಯಾಗಿ ಬಂದು ಭೋಜನವನ್ನು ಮಾಡಿಕೊಂಡು ಹೋಗಿ ಸ್ವೇಚ್ಛೆಯಾಗಿ ಪ್ರವರ್ತಿಸುತ್ತಿದ್ದನು. ಆತನ ತಾಯ್ತಂದೆಗಳು ಬಗೆಬಗೆಯಾಗಿ ಬುದ್ಧಿವಾದವನ್ನು ಹೇಳುತ್ತಿದ್ದರೂ ಅವರ ನುಡಿಗಳನ್ನು ಪೆಡಗಿವಿಗಳೊಳಿಟ್ಟು ಒಳ್ಳೆಯ ಸ್ವಭಾವವುಳ್ಳ ಅಣ್ಣತಮ್ಮಂದಿರನ್ನು ಕೂಡ ಲಕ್ಷಿಸದೆ ಅವರನ್ನು ಬಗೆಬಗೆಯಾಗಿ ಬಯ್ಯುತ್ತ ವರ್ತಿಸುತ್ತಿದ್ದನು ಒಂದು ದಿನ ತಾಯಿತಂದೆಗಳೊಡನೆಯೂ ಅಣ್ಣತಮ್ಮಂದಿರೊಡನೆಯೂ ಜಗಳವಾಡಿದನು ಅವರೆಲ್ಲರೂ ಸೇರಿ ಸೋಮಸುಂದರನನ್ನು ತಿರಸ್ಕರಿಸಿ ಮನೆಯಿಂದ ಹೊರಡಿಸಿಬಿಟ್ಟರು ಮಾಡುವುದೇನು ? ಆತನು ರೋಷಪಟ್ಟು ಒಂದು ದಿನ ಬೆಳಗಿನ ಯಾಮದಲ್ಲಿಯೇ ಎದ್ದು ಯಾರಸಂಗಡವೂ ಹೇಳದೆ ಊರನ್ನೆ ಬಿಟ್ಟು ಹೊರಟುಹೋದನು ಆಗ್ಗೆ ಆತನ ವಯಸ್ಸು ಇಪ್ಪತ್ತು ವರ್ಷ.

ಈಪರಿಯಾಗಿ ಮನೆಮಾರುಗಳನ್ನು ಬಿಟ್ಟು ಹೊರಟುಹೋದ ಸೋಮಸುಂದರಶರ್ಮನು ಕಾಡುಬೀಡುಗಳಲ್ಲಿ ತೊಳಲಿ ಊರೂರನ್ನೂ ತಿರುಗಿ ಪರಿಪರಿಯ ಕಷ್ಟಗಳನ್ನನುಭವಿಸುತ್ತ ಕೊನೆಗೆ ಮಳಯಾಳದೇಶವನ್ನು ಸೇರಿ ಅಲ್ಲಿ ಒಂದು ದೊಡ್ಡ ಗ್ರಾಮವನ್ನು ಪ್ರವೇಶಿಸಿ ಬೀದಿಯಲ್ಲಿ ಹೋಗುತ್ತಿರಲು ಒಂದು ಮನೆಯ ಬಾಗಿಲಲ್ಲಿ ನಿಂತಿದ್ದ ಆದೇಶದ ಒಬ್ಬ ಹೆಂಗಸು ಆತನ ಅಂದಚಂದಗಳನ್ನು ಎವೆಯಿಕ್ಕದೆ ನೋಡಿ ಮೋಹಿಸಿ ಮದನಬಾಣಸಂತಪ್ತಹೃದಯಳಾಗಿ, ಬೀದಿಯಲ್ಲಿ ಹೋಗುತ್ತ ಯಾರ ಪರಿಚಯವೂ ಇಲ್ಲದಿದ್ದುದರಿಂದ ಸುತ್ತಲೂ ನೋಡಿಕೊಂಡು ನಡೆಯುತ್ತಿದ್ದ ಆತನನ್ನು ಕರೆದು, ಮನೆಯೊಳಕ್ಕೆ ಕರೆದುಕೊಂಡುಹೋಗಿ ಒಂದು ಪೀಠದಮೇಲೆ ಕುಳ್ಳಿರಿಸಿ ಮೆಲ್ಲಮೆಲ್ಲನೆ ಆತನನ್ನು ವಿಚಾರಿಸುವುದಕ್ಕೆ ಪ್ರಾರಂಭಿಸಿದಳು.

ಕಲಾವತಿ—ಸ್ವಾಮಿ! ತಾವು ಯಾವ ಗ್ರಾಮದವರು ತಮ್ಮ ಹೆಸರೇನು? ಕುಲವಾವುದು ? ಈ ಪ್ರಾಂತ್ಯಕ್ಕೆ ಬರಲು ಕಾರಣವೇನು ?

ಸೋಮಸುಂದರ— (ತನ್ನಲ್ಲಿ) ಇವಳಾವಳೋ ನನ್ನನ್ನು ಮೋಹಿಸಿರುವಂತೆ ತೋರುವುದು. ನನ್ನ ಮನೋರಥವು ಸಿದ್ಧಿಸಿದಂತೆಯೇ ಆಯಿತು. ಮನೆಯನ್ನು ಬಿಟ್ಟು ಇಷ್ಟುದೂರ ಬಂದುದಕ್ಕೆ ಒಳ್ಳೆಯದೇ ಆಗುವ ಹಾಗಿದೆ. (ಪ್ರಕಾಶವಾಗಿ) ಲಲನಾರತ್ನವೆ ! ಏನು ಹೇಳಲಿ ನನ್ನ ವೃತ್ತಾಂತವನ್ನು ? ನರ್ಮದಾತೀರದಲ್ಲಿ ಬ್ರಾಹ್ಮಣಾಗ್ರಹಾರವೊಂದಿದೆ. ಅದರ ಹೆಸರು ಸುಶರ್ಮಾಗ್ರಹಾರವೆಂದು. ಸುಶರ್ಮನೆಂಬ ರಾಜನು

ಬ್ರಾಹ್ಮಣರಿಗೆ ಧನಧಾನ್ಯ ವಿಶಿಷ್ಟಗಳಾದ ದಿವ್ಯಭವನಗಳನ್ನು ಕಟ್ಟಿಸಿ ದಾನ ಮಾಡಿದುದರಿಂದ ಅವಕ್ಕೆ ಆ ಹೆಸರು ಬಂದಿತೆಂದು ಹೇಳುವರು. ನಾನು ಬ್ರಾಹ್ಮಣನು, ನನ್ನ ಹೆಸರು ಸೋಮಸುಂದರಶರ್ಮನೆಂದು, ನನಗೆ ತಾಯ್ತಂದೆಗಳೂ ಮೂವರಣ್ಣಂದಿರೂ ಉಂಟು ಅವರಿಗೂ ನನಗೂ ಒಂದು ದಿನದಲ್ಲಿ ಮನಸ್ತಾಪವುಂಟಾಗಿ ನನ್ನನ್ನು ಮನೆಯಿಂದ ಹೊರಡಿಸಿಬಿಟ್ಟರು. ನಾನು ಪ್ರಾಣದಮೇಲೆ ಅಪೇಕ್ಷೆಯನ್ನು ತೊರೆದು ಮನೆಯನ್ನು ಬಿಟ್ಟು ಹೀಗೆ ಬಂದುಬಿಟ್ಟೆನು.

ಕಲಾವತಿ—(ತನ್ನಲ್ಲಿ) ಭಾಪು! ಭಾಪು!! ನನ್ನ ಅದೃಷ್ಟವು ಫಲಿಸಿದಂತಿದೆ. ಈತನನ್ನು ಪತಿಯನ್ನಾಗಿ ಮಾಡಿಕೊಂಡು ಇಷ್ಟಸುಖವನ್ನು ಅನುಭವಿಸುವೆನು. (ಪ್ರಕಾಶ) ಪಾಪ! ಪಾಪ!! ಈ ಸುಂದರ ವಿಗ್ರಹನನ್ನು ಅಣ್ಣತಮ್ಮಂದಿರ ಮಾತಂತಿರಲಿ? ಒಂಬತ್ತು ತಿಂಗಳು ಹೊತ್ತು ಹೆತ್ತು ಸಾಕಿ ಸಲಹಿದ ತಾಯಿತಂದೆಗಳು, ಬಿಟ್ಟರೆಂದರೆ ನನಗೆದುಃಖವುಂಟಾಗುವುದು. ಅಕಟಕಟಾ! ಸ್ವಾಮಿಾ! ನನ್ನದೊಂದು ಬಿನ್ನಹವಿದೆ ವಿಜ್ಞಾಪಿಸಲೇ?

ಸೋ-ಸುಂ—ಸುಂದರಿ! ಸಂದೇಹವೇಕೆ?

ಕಲಾ—ವಿಪ್ರವರ್ಯ! ನನ್ನ ಭಾಗ್ಯವಿಶೇಷವೇ ನಿಮ್ಮನ್ನಿಲ್ಲಿಗೆ ಅಷ್ಟುದೂರದಿಂದ ಕರೆದುತಂದಿರುವುದೆಂದು ನಾನು ಭಾವಿಸುತ್ತೇನೆ. ನನ್ನರಿಕೆಯ ನ್ನಾಲಿಸಿ! ನಾನು ಶೂದ್ರಕನ್ಯೆ. ಯೌವನವತಿಯಾದರೂ ಕನ್ಯಾಧರ್ಮವನ್ನು ಬಿಡದೆ ನಿಷ್ಠಾಪರಳಾಗಿರುವೆನು. ಸಾಧಾರಣವಾಗಿ ನಮ್ಮ ದೇಶದಲ್ಲಿ ನಾವು ವಿವಾಹವನ್ನು ಮಾಡಿಕೊಳ್ಳುವುದಿಲ್ಲ. ಮನಸ್ಸಿಗೆ ಮೆಚ್ಚಿದ ಪುರುಷನನ್ನು ವರಿಸಿ ಜೀವಾವಧಿ ಆತನೊಡನೆ ಸಂಸಾರ ಮಾಡಿಕೊಂಡಿರುವುದೇ ಈ ದೇಶದ ಆಚಾರವು. ಆಚಾರವೇ ಹೀಗಿರುವುದರಿಂದ ಯಾರೂ ಆಕ್ಷೇಪಿಸುವುದೇ ಇಲ್ಲ. ನಮ್ಮ ತಾಯಿಯೂ ಹೀಗೆಯೇ ಇದ್ದು ನನ್ನನ್ನು ಹೆತ್ತು ಬೆಳೆಯಿಸುತ್ತಿದ್ದು ಕೆಲವು ತಿಂಗಳುಗಳ ಕೆಳಗೆ ಪಂಚತ್ವವನ್ನು ಪಡೆದಳು. ನನಗೆ ಅಧಿಕವಾದ ಐಶ್ವರ್ಯವಿದೆ. ಈವರೆಗೆ ನನಗೆ ತಕ್ಕವಯೋರೂಪ ಸಂಪನ್ನನಾದ ಪುರುಷನು ಲಭಿಸದಿದ್ದುದರಿಂದ ಕನ್ಯಾತ್ವದಿಂದಲೇ ವರ್ತಿಸುತ್ತಿರುವೆನು. ಸುಂದರರೂಪವುಳ್ಳ ನಿಮ್ಮನ್ನು ನೋಡುತ್ತಲೇ ಪೂರ್ಣವಾಗಿ ನನ್ನ ಹೃದಯವು ನಿಮ್ಮಲ್ಲಿ ಲಗ್ನವಾಗಿದೆ ನನ್ನ ಅರಿಕೆಯನ್ನು ನಿರಾಕರಿಸದೆ, ನನ್ನ ಕೈಹಿಡಿದು ನನ್ನ ಐಶ್ವರ್ಯಕ್ಕೂ ನನಗೂ ಒಡೆಯರಾಗಿ ನನ್ನನ್ನು ಕೂಡಿ ಸಕಲ ಭೋಗಗಳನ್ನೂ ಅನುಭವಿಸಿ. ಒಲ್ಲದ ತಾಯಿತಂದೆಗಳ ಹಂಬಲನ್ನು ಬಿಡಿ. ಪ್ರತಿದಿನವೂ

ನಿಮಗೆ ಬೇಕಾಗುವ ಸಮಸ್ತ ಪಧಾರ್ಥಗಳನ್ನೂ ಸಿದ್ಧಪಡಿಸುವೆನು. ನೀವೇ ಅಡಿಗೆಯನ್ನು ಮಾಡಿ ಭುಜಿಸಿ ಭುಕ್ತಶೇಷವನ್ನು ನನಗೆ ಕೊಡಿ. ನಾನು ನಿಮ್ಮ ಸೇವೆಯನ್ನು ಮಾಡಿಕೊಂಡು ಸಂತೋಷದಿಂದ ಸೌಖ್ಯ ಪಡುವೆನು. ನಾನಿನ್ನು ನಿಮ್ಮನ್ನು ಬಿಡಲಾರೆನು. ಇಗೋ! ಈ ದೇಹವನ್ನು ನಿನಗರ್ಪಿಸಿರುವೆನು. ಇನ್ನುಮೇಲೆ ಈ ದೇಹವು ನಿಮ್ಮದು.

ಹೀಗೆ ನುಡಿದ ಈಕೆಯ ಮಾತುಗಳು ಸೋಮಸುಂದರನಿಗೆ ಅಮೃತಪ್ರಾಯಗಳಾದವು. ಈತನ ಮುಖದಲ್ಲಿ ಸಂತೋಷಸೂಚಕವಾದ ಚಿಹ್ನೆಯು ಕಾಣುತ್ತಲೇ ಕಲಾವತಿಯು ಸಾಹಸಗೊಂಡು ಎದ್ದುಬಂದು ಆತನನ್ನು ಬಿಗಿದಪ್ಪಿದಳು. ಆಕೆ ರೂಪವತಿಯೂ ಯೌವನವತಿಯೂ ಆಗಿದ್ದುದರಿಂದಲೂ, ಆಕೆಯನ್ನು ನೋಡಿ ಆಕೆಯ ಮಾತುಗಳನ್ನು ಕೇಳಿದುದರಿಂದಲೂ, ಪರಿಚಯವೇ ಇಲ್ಲವವಳು ಹಾಗೆ ತನ್ನನ್ನು ಮೋಹಿಸಿ, ಔತ್ಸುಕ್ಯದಿಂದೆದ್ದು ಬಂದು ತನ್ನನ್ನು ಬಿಗಿಯಪ್ಪಿದುದರಿಂದಲೂ ಆತನಿಗೆ ಮೈಯಲ್ಲಿ ಪುಲಕಾಂಕುರವುಂಟಾಯಿತು ಹೊಸದಾದ ಅನ್ಯದೇಶದಲ್ಲಿ ತನಗೆ ಸಮಸ್ತ ಸೌಖ್ಯೋಪೇತವಾದ ಅನುಕೂಲತೆಯೇರ್ಪಟ್ಟುದು ಪುಣ್ಯವಿಶೇಷವೆಂದು ಭಾವಿಸಿ ತಾನೂ ಆಕೆಯನ್ನು ಗಾಢಾಲಿಂಗನ ಮಾಡಿದನು. “ ಕಲ್ಯಾಣೀ ! ನೀನು ನನ್ನನ್ನು ನೋಡಿ ಹೇಗೆ ಭಾವಿಸಿದೆಯೋ ಹಾಗೆಯೇ ನಾನೂ ಭಾವಿಸಿದೆನು ನನ್ನ ಭಾಗ್ಯವು ಫಲಿಸಿದುದರಿಂದಲೇ ಭಗವಂತನು ನನ್ನನ್ನು ತಂದು ನಿನ್ನೊಡನೆ ಸೇರಿಸಿದನು ನನ್ನನ್ನು ನಿನ್ನ ಪ್ರಿಯನನ್ನಾಗಿ ಅಂಗೀಕರಿಸು ” ಎಂದು ನುಡಿದನು.

ಕಲಾವತಿಯು ಅದುಮೊದಲಾಗಿ ತನ್ನ ಸೌಂದರ್ಯಕ್ಕೂ ಮನಸ್ಸಿಗೂ ಸಂಪತ್ತಿಗೂ ತಕ್ಕಪತಿಯು ಲಭಿಸಿದನೆಂದು ಸಂತುಷ್ಟಳಾಗಿ ತಾನು ಮೊದಲು ಆತನೊಡನೆ ಹೇಳಿದಂತೆ ಯಾವುದೊಂದು ಲೋಪವೂ ಇಲ್ಲವಂತೆ ಆತನ ಮನಸ್ಸನ್ನನುಸರಿಸಿ ಸಕಲೋಪಚಾರಗಳನ್ನು ಮಾಡುತ್ತ ಮೋಹಾತಿರೇಕದಿಂದ ಆತನೊಡನೆ ಸುರತಸುಖಗಳನ್ನು ಸ್ವಚ್ಛಂದವಾಗಿ ಅನುಭವಿಸುತ್ತಿದ್ದಳು ಹೀಗೆ ಎರಡು ಸಂವತ್ಸರಗಳ ಕಾಲ ಕಳೆಯಿತು ಒಂದು ದಿನ ಆ ಸೋಮಸುಂದರಶರ್ಮನು ತನ್ನ ಮಾತಾಪಿತೃಗಳನ್ನೂ ಸೋದರರನ್ನೂ ಬಂಧುಮಿತ್ರರನ್ನೂ ನೆನಪಿಗೆ ತಂದುಕೊಂಡು ಸ್ವದೇಶಕ್ಕೆ ಹೋಗಿ ಅವರೆಲ್ಲರನ್ನೂ ಕಂಡುಬರಬೇಕೆಂಬ ಆಸೆಯಿಂದ ನಿರ್ವಿಣ್ಣವದನನಾಗಿ ಹೀಗೆ ಆಲೋಚಿಸಿದನು “ ಏನು ಮಾಡಲಿ ? ಈ ನನ್ನ ಕೋರಿಕೆಯನ್ನು ನನ್ನ ಪ್ರಿಯಳೊಡನೆ ಹೇಳಿದರೆ ನಾನು ಹೋಗುವುದಕ್ಕೆ ಸಮ್ಮತಿಸುವಳೋ ಇಲ್ಲವೋ ? ಇಲ್ಲ ! ಇಲ್ಲ !! ಸಮ್ಮತಿಸುವಹಾಗಿಲ್ಲ ಅವಳು ನನ್ನನ್ನು ಒಂದೆರಡು ನಿಮಿಷಗಳಾದರೂ ಬಿಟ್ಟಿರಲಾರದಿರುವಾಗ ಅತಿಧೂರದಲ್ಲಿರುವ ನನ್ನ ಸ್ಥಲಕ್ಕೆ ಹೋಗಲೊಪ್ಪುವಳೆ ? ನಾನೂ

ಅವಳನ್ನು ಬಿಟ್ಟಿರಲಾರೆನಾದರೂ ಮಾತಾಪಿತೃಗಳಮೇಲಣ ಪ್ರೀತಿಯು ಒಂದಿಷ್ಟುಹೆಚ್ಚಾಗಿ ಆಕರ್ಷಿಸುತ್ತಿರುವುದರಿಂದ ಹೋಗುವುದಕ್ಕೆ ಮನಸ್ಸು ತವಕಿಸುತ್ತಿರುವುದು ನನ್ನ ದೇಶಕ್ಕೆ ಹೋಗಲು ನನ್ನ ಪ್ರಿಯೆಯು ಅಪ್ಪಣೆಕೊಡುವಹಾಗಿಲ್ಲ ಹೇಳದೆ ಹೊರಟುಹೋಗಲು ಸಾಧ್ಯವಿಲ್ಲ" ಎಂದು ಕರ್ತವ್ಯಪರಾಙ್ಮುಖನಾಗಿ ಆಕೆಯೊಡನೆ ಹೇಳಲಾರದೆ ಎಂದಿನಂತೆ ಉಲ್ಲಾಸವಿಲ್ಲದೆ ಆಕೆಯಬಳಿ ವರ್ತಿಸಿದನು.

ಕಲಾವತಿಯು ತನ್ನ ಪ್ರಿಯನು ಆರೀತಿಯಾದ ದೈನ್ಯದಿಂದಿರುವುದನ್ನು ಕಂಡು ಕಾರಣವನ್ನರಿಯದೆ ಏಕಾಂತಸಮಯದಲ್ಲಿ "ಪ್ರಾಣನಾಥ! ಇದೇನಚ್ಚರಿ? ಎಂದಿನಂತೆ ಸಂತೋಷವಾಗಿಲ್ಲದೆ ಈ ದಿನದಲ್ಲಿ ಏನೋ ಒಂದುಬಗೆಯಾದ ಚಿಂತೆಯಿಂದಿರುವಂತೆ ತೋರುತ್ತಿರುವುದು ನನ್ನಿಂದ ಉಪಚಾರಪ್ರವರ್ತನೆಗಳಲ್ಲಿ ಯಾವುದಾದರೂ ಲೋಪವುಂಟಾಗಿರುವುದೇ? ನಿಮ್ಮ ಆಜ್ಞೆಗೆ ವ್ಯತಿರಿಕ್ತವಾಗಿ ನಾನೆಂದಾದರೂ ನಡೆದುಕೊಂಡಿರುವೆನೆ? ಅಕಟಾ! ಈ ಬಗೆಯಾಗಿ ಚಿಂತಾವ್ಯಾಕುಲಿತನೂನನರಾಗಿದ್ದರೆ ನನ್ನ ಮನಸ್ಸು ತಡೆಯಲಾರದು ದೈನ್ಯಕ್ಕೆ ಹೇತುವಾವುದೋ ದಯವಿಟ್ಟು ಅಪ್ಪಣೆಕೊಡಿಸಿದರೆ ನನ್ನ ಕೈಲಾದವಷ್ಟಿಗೆ ನಿಮ್ಮ ಚಿಂತಾವ್ಯಕ್ತಿಯನ್ನು ನಿವಾರಣೆ ಮಾಡುತ್ತೇನೆ" ಎಂದು ಹಲವು ಬಗೆಯಿಂದ ಬೇಡಿಕೊಂಡಳು.

ಸೋಮಸುಂದರಶರ್ಮನು ನಿಜಾಭಿಮತವನ್ನು ತಿಳಿಸುವುದಕ್ಕೆ ಇದೇ ಸಮಯವೆಂದರಿತು ತನ್ನ ಅಂತರಂಗದ ಚಿಂತೆಯನ್ನಿಂತು ವಿವರಿಸಿದನು. "ಪ್ರಿಯೆ! ಕಲಾವತಿ! ಎಡೆಬಿಡದ ಉಪಚಾರಗಳಿಂದ ನನ್ನ ಹೃದಯಕ್ಕೆ ಅತ್ಯಂತಾನಂದವನ್ನು ಬೀರುತ್ತಿರುವ ನಿನಗೆ ನನ್ನ ಅಂತರಂಗಚಿಂತೆಯನ್ನು ಹೇಳದೆ ಏಕೆ ಬಚ್ಚಿಡಬೇಕು? ಕೇಳು, ನಾನು ಯಾರೊಡನೆಯೂ ಹೇಳದೆ ಮನೆಯನ್ನು ಬಿಟ್ಟು ಸಿಟ್ಟಿನಿಂದ ಹೊರಟುಬಂದೆನು ಬಹುಕಾಲ ಕಳೆಯಿತು ಸದ್ಯದಲ್ಲಿ ನನ್ನ ನಡೆನುಡಿಗಳಿಂದ ಕೋಪಿಸಿ ನನ್ನನ್ನು ಹೊರಕ್ಕೆ ನೂಕಿದ ನಮ್ಮ ತಂದೆತಾಯಿಗಳು ಈಗ ಎಷ್ಟು ಚಿಂತಾಕ್ರಾಂತರಾಗಿರುವರೋ ಎಂಬ ಆಲೋಚನೆಯು ನನ್ನ ಮನಸ್ಸಿಗೆ ತಗಲಿ ಕುಂದಿಹೋಗಿರುವೆನು! "ಜನನೀಜನ್ಮಭೂಮಿಶ್ಚ ಸ್ವರ್ಗಾದಪಿಗರೀಯಸೀ" ಎಂಬಂತೆ ತಾಯಿಯು ಸ್ವರ್ಗಕ್ಕಿಂತಲೂ ಶ್ರೇಷ್ಠವಾದವಳಲ್ಲವೆ? ಪ್ರಾಣೇಶ್ವರೀ! ಒಂದುಸಾರಿ ಹೋಗಿ ಅವರನ್ನು ನೋಡಿ ಬರಬೇಕೆಂದು ಆಲೋಚಿಸಿರುತ್ತೇನೆ ಆದರೆ ಅತ್ಯಂತ ಪ್ರಿಯಳಾದ ನಿನ್ನನ್ನು ಬಿಟ್ಟು ಹೋಗುವುದು ಬಹಳ ಕಷ್ಟವಾಗಿ ತೋರುತ್ತದೆ ಆದರೂ ಒಂದುಸಾರಿ ಹೋಗಿ ಹೊತ್ತು ಹೆತ್ತು ಸಾಕಿ ಸಲಹಿದವರನ್ನು ನೋಡಿ ಬರಬೇಕೆಂದು ಆಸೆಯು ನನ್ನನ್ನು ತ್ವರೆಗೊಳಿಸುತ್ತಿದೆ ಅನುಜ್ಞೆಯನಿತ್ತರೆ ಹೋಗಿ ಎಲ್ಲರನ್ನೂ ನೋಡಿಕೊಂಡು ತ್ವರೆಯಾಗಿ ಬಂದುಬಿಡುವೆನು" ಎಂದು ಹೇಳಿದನು.

ಕಲಾವತಿಯಾತನ ನುಡಿಗಳನ್ನು ಕೇಳಿ ತಲೆದೂಗಿ ಕಿರುನಗೆಯಮೊಗದಿಂದ " ಪ್ರಿಯಭರ್ತೃವೇ ! ಈ ಅಲ್ಪವಿಷಯಕ್ಕಿಷ್ಟು ದೈನ್ಯಪಡಬೇಕೆ ? ನಿನ್ನ ಅಭಿಮತಕ್ಕೆ ಪ್ರತಿಯಾಗಿ ನಾನು ನುಡಿವೆನೇ ? ಬೇಡವೆಂದು ಹೇಳಿ ವಿರೋಧಿಸುವೆನೇ ? ಹೆತ್ತ ಮಾತಾಪಿತೃಗಳನ್ನು ನೋಡಲಾಶೆಪಡುವ ನಿಮ್ಮನ್ನು ಹೋಗಬೇಡವೆಂದು ಹೇಳುವಷ್ಟು ಪಾಪಾತ್ಮಳೇ ನಾನು ? ಹಾಗೆ ತಿಳಿಯಬೇಡಿ ತಾಯಿ ತಂದೆಗಳಿಗಿಂತಲೂ ದೊಡ್ಡ ದೇವರಿಲ್ಲವೆಂಬುದನ್ನು ನಾನೂ ಹಿರಿಯರಿಂದ ಕೇಳಿರುವೆನು ನಾಳೆಯ ದಿನವೇ ಪ್ರಯಾಣಮಾಡಿರಿ ನಿಮ್ಮ ಊರಿಗೆ ಹೋಗಿ ಬರಬೇಕಾದರೆ ಹೆಚ್ಚುಕಡಿಮೆ ಒಂದು ತಿಂಗಳ ಹಿಡಿಯಬಹುದು ಅಲ್ಲಿ ಹೆಚ್ಚು ದಿನಗಳು ನಿಲ್ಲಬೇಕಾಗಿಲ್ಲ ನಿಮ್ಮನ್ನು ಕಾಣದ ಪ್ರತಿಯೊಂದು ನಿಮಿಷವೂ ಒಂದೊಂದು ಯುಗವಾಗಿ ನನ್ನ ಮನಸ್ಸಿಗೆ ತೋರುವುದು. ಆದುದರಿಂದ ಹೊರಡಬೇಕೆಂದು ಬಯಸುವಿರಾದರೆ ನಾಳೆಯೇ ಪ್ರಯಾಣಮಾಡಿ ಊರನ್ನು ಸೇರಿ ನೆಂಟರಿಷ್ಟರನ್ನೂ ತಾಯ್ತಂದೆಗಳನ್ನೂ ನೋಡಿ ಅಲ್ಲಿ ಹೆಚ್ಚುಕಾಲ ನಿಲ್ಲದೆ ಹೊರಟುಬನ್ನಿ ವಿಧಿಯಿಲ್ಲದೆ ನಿಮ್ಮ ಪ್ರಯಾಣವನ್ನು ನಾನೊಪ್ಪಬೇಕಾಗಿದೆ " ಎಂದು ನುಡಿದಳು ಅಷ್ಟು ಸುಲಭವಾಗಿ ತನ್ನ ಪ್ರಯಾಣಕ್ಕೆ ಸಮ್ಮತಿಪಡುವಳೆಂದು ತಿಳಿಯದಿದ್ದ ಸೋಮಸುಂದರನು ಕಲಾವತಿಯ ಮಾತುಗಳನ್ನು ಕೇಳಿ ಸಂತೋಷಿಸಿ ಮಾರನೆಯ ದಿನದಲ್ಲಿ ತಾನು ಪ್ರಯಾಣಮಾಡುವುದಕ್ಕೆ ನಿಶ್ಚಯಿಸಿ ಆ ರಾತ್ರಿ ಕಲಾವತಿಯೊಡನೆ ಸುಖವಾಗಿದ್ದನು ಆದರೆ ಯಾವಾಗ ಬೆಳಗಾಗುವುದೋ ಯಾವಾಗ ಪ್ರಯಾಣವಾಗುವೆನೋ ಎಂಬ ಚಿಂತೆಯಿಂದ ಆತನಿಗೆ ನಿದ್ರೆ ಬರಲಿಲ್ಲ ಹೇಗೋ ಆ ರಾತ್ರಿಯನ್ನು ಕಳೆದನು.

ಸೋಮಸುಂದರಶರ್ಮನು ಉದಯಕಾಲಕ್ಕೆದ್ದು ಅತ್ಯುತ್ಸಾಹದಿಂದ ಕಾಲೋಚಿತ ಕೃತ್ಯಗಳನ್ನು ಮುಗಿಸಿ ಕಲಾವತಿಯನ್ನು ಕರೆದು " ಪ್ರಾಣಪ್ರಿಯೆ ! ನಾನು ಪ್ರಯಾಣಕ್ಕೆ ಸಿದ್ಧನಾಗಿರುವೆನು ಆಜ್ಞೆಯನ್ನು ಕೊಡುವೆಯಾ ? ಹೋಗಿ ಬರಲೇ ? ಎಂದನು ಸುದತೀರತ್ನವು ಆತನ ಪ್ರಯಾಣಕ್ಕೆ ಸಮ್ಮತಿಪಟ್ಟು ಆತನು ತಿನ್ನಬಹುದಾದ ಕೆಲವು ಭಕ್ಷ್ಯಗಳನ್ನು ಮೊದಲೇ ಸಿದ್ಧಮಾಡಿದ್ದು ತಂದುಕೊಟ್ಟು "ಇಗೋ ನೀವು ತಿನ್ನಲಿಕ್ಕೆ ಅರ್ಹಗಳಾದ ಕೆಲವು ತಿಂಡಿಯ ಪದಾರ್ಥಗಳನ್ನು ಗಂಟುಕಟ್ಟಿ ಕೊಟ್ಟಿರುವೆನು. ಸುಮ್ಮನೆ ಹೆಚ್ಚು ಮಾತುಗಳನ್ನಾಡಿ ಪ್ರಯೋಜನವಿಲ್ಲ, ನಾನು ಒಂದು ಕ್ಷಣವಾದರೂ ನಿಮ್ಮನ್ನು ತೊರೆದಿರಲಾರೆ ಇದು ತಮ್ಮ ಮನಸ್ಸಿಗೆ ತಿಳಿದೇ ಇರುವುದು. ಹೆಚ್ಚುಕಾಲವಲ್ಲಿ ನಿಲ್ಲದೆ ಬೇಗನೆ ಹೊರಟುಬನ್ನಿ" ಎಂದು ನುಡಿದು ಕಂಬನಿಗರೆದಳು. ಶರ್ಮನಾಕೆಯನ್ನು ಸಂತೈಸಿ ಬೇಗನೆ ಹೊರಟುಬರುವಂತೆ ಭಾಷೆಗೊಟ್ಟು, ಗಾಢಾಲಿಂಗನವನ್ನು ಮಾಡಿ, ಚುಂಬಿಸಿ, "ಎಲೈ ನನ್ನ ಜೀವಿತೇಶ್ವರಿಯೇ ! ನಿನ್ನನ್ನಗಲಿದು ಬಹಳಕಾಲವಲ್ಲಿ

ನಿಲ್ಲುವೆನೆ? ತಂದೆತಾಯ್ಗಳನ್ನು ನೋಡುವ ಆಸೆಯೊಂದು ನನ್ನ ಹೃದಯದಲ್ಲಿ ಹುಟ್ಟಿಲಾಗಿ ಹೋಗಲಪೇಕ್ಷಿಸಿವೆನೇ ಹೊರತು ಹಾಗಿಲ್ಲದಿದ್ದರೆ ಹೋಗುವುದಕ್ಕೆ ಪ್ರಯತ್ನವೇ ಮಾಡುತ್ತಿರಲಿಲ್ಲ, ಮನಸ್ಸಿನಲ್ಲಿಯೂ ಬಗೆಯುತ್ತಿರಲಿಲ್ಲ. ಪ್ರಯಾಣಕ್ಕೆ ಹಿಡಿಯುವ ಕಾಲವಲ್ಲದೆ ಅಲ್ಲಿ ಒಂದೆರಡು ದಿನಗಳು ಮಟ್ಟಿಗೆ ಇದ್ದು ಹಿಂದಿರುಗಿ ಬರುವೆನು. ಸ್ವಲ್ಪ ತಾಳ್ಮೆಯನ್ನು ವಹಿಸಿ ಮನಸ್ಸನ್ನು ಹಿಡಿದು ಕೊಂಡಿರು" ಎಂದು ಹೇಳಿ ಸಂತೈಸಿ ಮತ್ತೆ ಮುತ್ತಿಟ್ಟುಕೊಂಡು, ಪ್ರಯಾಣ ವಾಗಿ ಹೊರಟನು.

ಆತನು ಶೀಘ್ರಗಮನದಿಂದ ಸಾಯಂಕಾಲದವರೆಗೆ ನಡೆದು ಬಳಲಿ ಕತ್ತಲೆಯಾದುದರಿಂದ ಒಂದು ಹಳ್ಳಿಯ ಹತ್ತಿರ ನಿಂತು ಅಲ್ಲಿ ಪ್ರಯಾಣಿಕರಿಗಾಗಿ ಧರ್ಮಾತ್ಮರು ಕಟ್ಟಿಸಿದ್ದ ಒಂದು ಕೊಳವನ್ನು ಕಂಡು ಅಲ್ಲಿಳಿದು, ಪಾದ ಪ್ರಕ್ಷಾಳನವನ್ನು ಮಾಡಿಕೊಂಡು, ಕಲಾವತಿ ಕಟ್ಟಿಕೊಟ್ಟಿದ್ದ ತಿಂಡಿಯ ಗಂಟನ್ನು ಬಿಚ್ಚಿ ಅವುಗಳಲ್ಲಿ ಬೇಕಾದುದನ್ನು ತೃಪ್ತಿಯಾಗಿ ಭಕ್ಷಿಸಿ, ಬೆಳಗಿನ ಜಾವಕ್ಕೆ ಪ್ರಯಾಣ ಮಾಡುವ ಇಚ್ಛೆಯಿಂದ ಆ ಕೊಳದ ದಡದಲ್ಲಿಯೇ ಮಲಗಿದನು. ಆಗ ಬೇಸಗೆಯ ಕಾಲವಾದುದರಿಂದ ತಣ್ಣಗೆ ಮಂದಮಾರುತವು ಬೀಸುತ್ತಿದ್ದಿತು. ಸುಂದರನು ನಿದ್ರಾಂಗನಾಲಿಂಗಿತನಾಗಿ ಮೈಮರೆತನು.

ಬೆಳಗಿನಜಾವವಾಯಿತು, ಆತನು ಎಚ್ಚರವನ್ನು ಹೊಂದಿದನು. ಎದ್ದು ಕುಳಿತು ಕಣ್ಣುಗಳನ್ನುಜ್ಜಿಕೊಂಡು "ಕರಾಗ್ರೇ ವರ್ತತೇ ಲಕ್ಷ್ಮೀಃ | ಕರಮಧ್ಯೇ ಸರಸ್ವತೀ || ಕರಪೃಷ್ಠೇ ಸದಾಗೌರಿ | ಪ್ರಭಾತೇ ಕರದರ್ಶನಂ || ಕಪಿಲಾಂ ದರ್ಪಣಂ ಶಂಖಂ | ಭಾಗ್ಯವಂತಂಚ ಭೂಪತಿಂ || ಆಚಾರ್ಯಮನ್ನದಾತಾರಂ ಪ್ರಾತಃಪಶ್ಯೇತ್ಪತಿವ್ರತಾಂ" ಎಂದು ಹೇಳುತ್ತ ಕಣ್ದೆರೆದು ಸುತ್ತಲೂ ನೋಡಿದನು. ಅದು ತಾನು ಮಲಗಿದ್ದ ಸ್ಥಳವಲ್ಲ, ತಾನು ಕೈಕಾಲುಗಳನ್ನ ತೊಳೆದುಕೊಂಡ ಕೊಳವಲ್ಲ. ಯಾವುದೋ ಒಂದು ಮನೆಯ ಬಾಗಿಲ ಪಕ್ಕದಲ್ಲಿರುವ ಒಂದು ಜಗುಲಿಯಮೇಲೆ ಮಲಗಿರುವಂತೆಯೂ, ಅದರ ಗುರುತುಗಳನ್ನು ಪರೀಕ್ಷಿಸಿದಲ್ಲಿ ತಾನು ಮೊದಲದನ್ನು ಕಂಡದುದಾಗಿರುವಂತೆಯೂ ಆತನ ಬುದ್ಧಿಗೆ ತೋರಲು ಅತ್ಯಾಶ್ಚರ್ಯವಾಗ್ರಸ್ತನಾದನು. ಚೆನ್ನಾಗಿ ಬೆಳಗಾದ ಮೇಲೆ ನಿಟ್ಟಿಸಿನೋಡಿದನು. ತಾನು ಯಾವ ಮನೆಯಿಂದ ಪ್ರಯಾಣವಾಗಿ ಹೊರಟನೋ ಆಮಂದಿರವೇ ಅದೆಂದು ಆತನು ಸ್ಪಷ್ಟವಾಗಿ ತಿಳಿದುಕೊಂಡು, ಅಲ್ಲಿಗೆ ತಾನು ಹೇಗೆ ಬಂದುದನ್ನೂ ತಿಳಿಯಲಾರದೆ ಸ್ತಬ್ಧನಾಗಿ ಕುಳಿತನು. ಅಷ್ಟರಲ್ಲಿ ಮನೆಯೊಳಗಿನಿಂದ ಕಲಾವತಿ ಬಂದು ಆತನನ್ನು ಕಂಡು ಆಶ್ಚರ್ಯವನ್ನಭಿನಯಿಸುತ್ತ "ಪ್ರಾಣನಾಥಾ! ಕೃಪಾವನಾಥ! ನಿಮ್ಮ ಸ್ವಗ್ರಾಮಕ್ಕೆ ಹೋಗಬೇಕೆಂದಲ್ಲವೆ ಇಲ್ಲಿಂದ ಪ್ರಯಾಣವಾಗಿ ಹೋದುದು? ಮತ್ತೇಕೆ ಹಿಂದಿ

ರುಗಿ ಬಂಧಿರಿ? ಅತ್ಯಂತ ಪ್ರಿಯಳಾದ ನನ್ನನ್ನು ಬಿಟ್ಟುಹೋಗುವುದಕ್ಕೆ ನಿಮ್ಮ ಮನಸ್ಸು ಒಪ್ಪಲಿಲ್ಲವೆ? ಹಾಗಿದ್ದರೆ, ಏತಕ್ಕೆ ಪ್ರಯಾಣಮಾಡಬೇಕು?" ಎಂದಳು ಸೋಮಸುಂದರನು ಯಾವ ಪ್ರತ್ಯುತ್ತರವನ್ನೂ ಹೇಳದೆ ಒಂದೆ ರಡು ನಿಮಿಷಗಳವರೆಗೆ ಸುಮ್ಮನಿದ್ದು ಕಳವಳಗೊಂಡಿದ್ದ ಹೃದಯವನ್ನು ಸ್ವಲ್ಪ ಸ್ಥಿರಪಡಿಸಿಕೊಂಡು ಮನೆಯೊಳಕ್ಕೆ ಹೋಗಿ ಕುಳಿತುಕೊಂಡು ನಡೆದ ವೃತ್ತಾಂತ ವನ್ನೆಲ್ಲ ಸಾಂಗವಾಗಿ ಹೇಳಿದನು. ಕಲಾವತಿ ಆಶ್ಚರ್ಯವನ್ನಭಿನಯಿಸುತ್ತ "ಅಬ್ಬಬ್ಬ! ಇಂತಹ ಆಶ್ಚರ್ಯವನ್ನು ನಾನು ಹಿಂದೆಯೆಂದೂ ನೋಡಿ ಇಲ್ಲ. ಕೇಳಿಯೂ ಇಲ್ಲ. ಆಲೋಚಿಸಿ ನೋಡಲು, ನೀನು ಮಲಗಿದ್ದ ಆ ಕೊಳದ ಬಳಿ ಯಲ್ಲಿ ಯಾವುದೋ ಒಂದು ಪಿಶಾಚವಿದ್ದು ಅದು ನಿನ್ನನು ಭ್ರಮೆಗೊಳಿಸುವು ದಕ್ಕೆ ಹೀಗೆ ಮಾಡಿರಬಹುದೆಂದು ತೋರುವುದು. ಅಯ್ಯೋ! ಪಾಪ! ಕಷ್ಟ ಪಟ್ಟು ಎಷ್ಟೋ ದೂರದವರೆಗೆ ನಡೆದುಹೋದರೂ ವ್ಯರ್ಥವಾಯಿತಲ್ಲ! ಇನ್ನು ಯೋಚಿಸಿ ಫಲವಿಲ್ಲ. ಹೊರಟ ಸಮಯವು ಒಳ್ಳೆಯದಲ್ಲ. ಇನ್ನು ಹತ್ತು ದಿನಗಳವರೆಗೆ ಪ್ರಯಾಣದ ಮಾತನ್ನೆತ್ತಬೇಡಿ, ಬಳಿಕ ಪ್ರಯಾಣ ಮಾಡಬ ಹುದು" ಎಂದು ಅಗ್ಗೆ ತಕ್ಕಂತೆ ಮಾತನಾಡಿ ಸಮಾಧಾನಪಡಿಸಿ ಆತನೊಡನೆ ಮುನ್ನಿನಂತೆ ಸೌಖ್ಯವಾಗಿ ಬಾಳುತ್ತಿದ್ದಳು. ಹತ್ತು ದಿನಗಳು ಕಳೆದುವು. ಬಳಿಕ ಕಲಾವತಿಯು ಆತನನ್ನು ಮತ್ತೆ ಪ್ರಯಾಣ ಮಾಡಿಸಿದಳು.

ಸತ್ಯಶೀಲ! ಹೇಳಿದುದನ್ನೇ ಹೇಳುತ್ತ ವೃಥಾ ಕಾಲಹರಣ ಮಾಡುವುದ ರಿಂದ ಪ್ರಯೋಜನವಿಲ್ಲ. ಕೇಳು, ಆ ವಿಪ್ರಕುಮಾರನು ನಾನು ಹಿಂದೆ ಹೇಳಿದ ರೀತಿಯಾಗಿ ಕಲಾವತಿಯಿಂದ ಪ್ರಯಾಣಮಾಡಿಸಲ್ಪಟ್ಟು ಹತ್ತು ದಿನಗಳಿಗೊಮ್ಮೆ ಹೊರಟು ಎಂಟು ಸಾರಿ ಹೋದನು. ಆದರೂ ಸಾಯಂಕಾಲವರೆಗೂ ನಡೆದು ತಂಗಿದ ಸ್ಥಳದಲ್ಲಿ ಮಲಗಿ ನಿದ್ರಿಸಿ ಎಚ್ಚತ್ತುವ ಹೊತ್ತಿಗೆ ಕಲಾವತಿಯ ಮನೆಯ ಜಗುಲಿಯಮೇಲಿರುತ್ತಿದ್ದನು. ಆ ರೀತಿಯಾಗಿ ಆತನು ಪ್ರಯಾಣಮಾಡಿ ಹೋಗಿ ತನ್ನ ಮನೆಗೆ ಸೇರಿದಾಗಳೆಲ್ಲ ಕಲಾವತಿಯು ಯಾವುದೋ ಒಂದು ಭೂತವು ಸಂಧವನ್ನು ಹಿಡಿದು ಹೀಗೆ ಮಾಡುತ್ತಿರುವುದೆಂದೂ, ಅದು ಪ್ರಯಾ ಣವನ್ನು ಮುಂದರಿಯಿಸವೆ ವಿಘ್ನಮಾಡುತ್ತಿರುವುದೆಂದೂ, ಆದುದರಿಂದ ಇನ್ನು ಮೇಲೆ ನೀನು ಪ್ರಯಾಣ ಪ್ರಯತ್ನವನ್ನು ಬಿಟ್ಟೇಬಿಡಬೇಕೆಂದೂ ಹೇಳುತ್ತಿದ್ದಳು. ಆದರೂ ಸೋಮಸುಂದರಶರ್ಮನ ಸ್ವದೇಶಗಮನಾಭಿಲಾಷೆಯು ದಿನದಿನಕ್ಕೂ ಬೆಳೆಯುತ್ತಿದ್ದಿತು. ಈ ಪ್ರಕಾರವಾಗಿ ಕೆಲವು ದಿನಗಳು ನಡೆದುವು.

ಕಲಾವತಿಯ ಮನೆಯ ಇದಿರಿನಲ್ಲಿ ಒಂದು ಮನೆಯಲ್ಲಿ ಭದ್ರಾವತಿಯೆಂಬ ಮುದುಕಿಯೊಬ್ಬಳಿದ್ದಳು. ಅವಳ ಮನೆಯಲ್ಲಿ ಅವಳೊಬ್ಬಳೇ ಇದ್ದುದು. ಯಾವುದೋ ಒಂದು ಕಾರಣದಿಂದ ಈ ಭದ್ರಾವತಿಗೂ ಕಲಾವತಿಗೂ ಅತಿ

ದ್ವೇಷವಾಗಿದ್ದಿತು. ಆ ವಿಚಾರವು ಬ್ರಾಹ್ಮಣಕುಮಾರನಿಗೂ ತಿಳಿದಿದ್ದಿತು. ಕಲಾವತಿಯು ತನ್ನ ಪ್ರಿಯನಾಥನನ್ನು ಆ ಭದ್ರಾವತಿಯ ಮನೆಗೆ ಹೋಗದಂತೆಯೂ ಅವಳೊಡನೆ ಮಾತನಾಡದಂತೆಯೂ ಕಟ್ಟುಮಾಡಿದ್ದಳು. ಹೀಗೆ ಕಟ್ಟು ಮಾಡಿ ಆಕೆಯು ಬಹು ಜಾಗರೂಕತೆಯಿಂದಿದ್ದುದರಿಂದ ಬ್ರಾಹ್ಮಣ ಕುಮಾರನು ತನ್ನ ಪ್ರಿಯಳಿಗೆ ಶತ್ರುವಾದ ಅವಳೊಡನೆ ಮಾತನಾಡುವುದಕ್ಕಾಗಲಿ ಅವಳ ಮನೆಗೆ ಹೋಗುವುದಕ್ಕಾಗಲಿ ಒಂದು ದಿನವಾದರೂ ಬಗೆದಿರಲಿಲ್ಲ. ಆದರೂ ಮಹಾ ಯುಕ್ತಿವಂತೆಯಾದ ಆ ಮುದುಕಿಯು, ಕಲಾವತಿಯು ಮಾಡುತ್ತಿದ್ದ ಕಾರ್ಯಗಳನ್ನೂ ಆಕೆಯ ಮನೆಯಲ್ಲಿ ನಡೆವ ವಿಶೇಷವಿಚಾರಗಳನ್ನೂ ಆಗಾಗ್ಗೆ ಗ್ರಹಿಸುತ್ತ ತಾನೇನೂ ಅರಿಯದವಳಂತೆ ನಟಿಸುತ್ತಿದ್ದಳು.

ಈ ವಿಧವಾಗಿ ನಡೆಯುತ್ತಿರಲು, ಕಲಾವತಿಯು ತನ್ನ ದೇಶದ ಆಚಾರದಂತೆ ಒಂದುದಿನ ಮಂಗಳಭಗವತಿಯನ್ನು ಆರಾಧಿಸುವುದಕ್ಕೆ ಪೂಜಾದ್ರವ್ಯಗಳನ್ನು ತೆಗದುಕೊಂಡು ಪುರುಷರಲ್ಲಿಗೆ ಹೋಗತಕ್ಕ ಪದ್ಧತಿಯಿಲ್ಲದ ಕಾರಣ ಪ್ರಿಯ ಭರ್ತಾರನನ್ನು ಮನೆಯಲ್ಲಿರಿಸಿ ಬೇಗನೆ ಅರ್ಚನೆಯನ್ನು ಮುಗಿಸಿಕೊಂಡು ಬರುವಂತೆ ಹೇಳಿ ಊರಿನ ಹೊರಗಿರುವ ದೇವಾಲಯಕ್ಕೆ ಹೋದಳು. ಆಕೆಯು ಹೊರಟುಹೋದ ಬಳಿಕ ಸೋಮಸುಂದರಶರ್ಮನು ಮನೆಯ ಹೊರಕ್ಕೆ ಬಂದು ಜಗುಲಿಯ ಮೇಲೆ ಕುಳಿತುಕೊಂಡು ಹೋಗಿ ಬರುತ್ತಿರುವ ಮಂದಿಯನ್ನು ನೋಡುತ್ತ ಕುಳಿತಿದ್ದನು. ಹಾಗೆ ಆತನು ಒಬ್ಬನೇ ಕುಳಿರುವುದನ್ನು ಭದ್ರಾವತಿ ತಿಳಿದು, ತನ್ನ ಬಳಿಗೆ ಬರುವಂತೆ ಸನ್ನೆಮಾಡಿದಳು ತನ್ನ ಕಾಂತೆಗೆ ತಿಳಿದರೆ ಕೋಪಿಸಿಕೊಳ್ಳುವಳೆಂದು ತಿಳಿದು ಆತನು ಒಂದೆರಡುಸಾರಿ ಸುಮ್ಮನಿದ್ದನು. ಬಳಿಕ ಯಾವುದೋ ಒಂದು ಕೆಲಸವಿರುವಳಂತೆ ಆ ಮುದುಕಿಯು ಮತ್ತೆಮತ್ತೆ ಸನ್ನೆಮಾಡುತ್ತಿದ್ದುದರಿಂದ ಆತನು ಬೀದಿಯಲ್ಲಿ ಯಾರೂ ಇಲ್ಲದಿದ್ದುದನ್ನರಿತು ಆ ವೃದ್ಧಳ ಮನೆಗೆ ಹೋದನು. ಅವಳು ಸೋಮಸುಂದರನೊಡನೆ ರಹಸ್ಯವಾಗಿ ಹೀಗೆ ಹೇಳಿದಳು. “ಕುಮಾರ! ನಿನ್ನ ಚರಿತ್ರವನ್ನು ಮೊದಲಿಂದಲೂ ನಾನರಿತಿರುವೆನು “ಮಹಾಗುಣವಂತೆ ಪ್ರಿಯತಮೆ” ಎಂದು ನೀನಾವಳನ್ನು ನಂಬಿರುವೆಯೋ ಅವಳು ಬಹಳ ಮೋಸಗಾರಳೂ ನೀಚಳೂ ಆಗಿರುವಳು ಬಾಲ್ಯದಲ್ಲಿ ಅವಳ ತಾಯಿಯೂ ನಾನೂ ಒಬ್ಬ ಆಚಾರ್ಯರಬಳಿಯಲ್ಲಿಯೇ ಮಂತ್ರವಿದ್ಯೆಯನ್ನು ಕಲಿತೆವು ನಾವಿಬ್ಬರೂ ಆ ಮಂತ್ರವಿದ್ಯೆಯಲ್ಲಿ ಅತ್ಯಂತ ಪ್ರವೀಣರು ಕಲಾವತಿಯ ತಾಯಿಯೂ ನಿನ್ನಂಥ ಒಬ್ಬನನ್ನು ಅಧೀನಪಡಿಸಿಕೊಂಡು ಅವನು ತನ್ನನ್ನು ಬಿಟ್ಟುಹೋಗದಂತೆ ಉಪಾಯದಿಂದ ತನ್ನಲ್ಲಿಯೇ ಇರಿಸಿಕೊಂಡು ಬಗೆಬಗೆಯ ಕಷ್ಟಗಳನ್ನಿಡುತ್ತಿದ್ದಳು ಅವಳ ಅಧೀನತೆಯಿಂದ ತಪ್ಪಿಸಿಕೊಂಡು ಹೋಗಲಾರದೆ ಆ ಪುರುಷನು ಕಡೆಯವರೆಗೂ ಅವಳಬಳಿಯಲ್ಲಿಯೇ ಇದ್ದು

ಮೃತನಾದನು ಈ ನಿನ್ನ ಪ್ರಿಯೆಯು ಆ ಇರ್ವರಿಗೆ ಸಂಭವಿಸಿದವಳೇ ಇವಳಿಗೆ ಯುಕ್ತವಯಸ್ಸು ಪ್ರಾಪ್ತವಾದಬಳಿಕ ಇವಳ ತಾಯಿಯು ತನಗೆ ಬರುವ ಮಂತ್ರ ವಿದ್ಯೆಯನೆಲ್ಲ ಮಗಳಿಗೆ ಕಲಿಸಿಕೊಟ್ಟು ಕೆಲವು ದಿನಗಳಮೇಲೆ ಪರಲೋಕವಾಸುವಾದಳು.

ಆ ವೃದ್ಧಾಂಗನೆಯು ಸತ್ತುಹೋದಬಳಿಕ ಕಲಾವತಿಗೂ ನನಗೂ ಒಂದು ಮಂತ್ರವಿಚಾರದಲ್ಲ ವಿರೋಧನೇರ್ಪಟ್ಟಿತು ವಿಪ್ರಕುಮಾರಾ ! ನೀನು ಅನೇಕಾ ವೃತ್ತಿ ನಿಮ್ಮ ಗ್ರಾಮಕ್ಕೆ ಹೊರಡಲು ಪ್ರಯಾಣವಾಗಿ ಹೋಗಿ ಮಾರನೆಯ ದಿನದ ಬೆಳಗ್ಗೆ ನೀನು ಅವಳ ಮನೆಯ ಜಗುಲಿಯಮೇಲೆ ಬಂದಿರುವುದನ್ನು ನಾನು ನಿತ್ಯವೂ ನೋಡುತ್ತಲೇ ಇರುವೆನು ಇದು ಅವಳ ಮಂತ್ರಶಕ್ತಿಯಿಂದ ನಡೆ ಯುತ್ತಿರುವ ಕಾರ್ಯವೇ ಹೊರತು ಬೇರೆಯಲ್ಲ ಅವಳು ಆಗಾಗ ನಿನಗೆ ಹೇಳು ತ್ತಿರುವಂತೆ ಭೂತಪ್ರೇತ ಪಿಶಾಚಗಳಿಂದ ಆಗುತ್ತಿರುವ ಕಾರ್ಯವಲ್ಲ ನಿನ್ನನ್ನು ಬಿಟ್ಟಿರುವುದಕ್ಕೆ ಇಷ್ಟವಿಲ್ಲದೆ ನಿನ್ನ ಇಷ್ಟಕ್ಕೆ ಭಂಗವಾದ ಮಾತನ್ನು ಹೇಳಿದರೆ ನೀನು ದುಃಖಿಸುವೆಯೆಂದು ಬಗೆದು ದಾಕ್ಷಿಣ್ಯಕ್ಕೆ ನಿನ್ನ ಪ್ರಯಾಣವನ್ನು ಆಗ್ಗ ಒಪ್ಪಿಕೊಂಡು ನಿನ್ನನ್ನು ತನ್ನ ಮಂತ್ರಶಕ್ತಿಯಿಂದ ಹಿಂದಕ್ಕೆ ಬರಿಸುವಳು ತಾನು ಒಳ್ಳೆಯವಳಂತೆ ನಿನ್ನಮುಂದೆ ನಟಿಸುವಳು.

ಅಯ್ಯಾ ! ಬ್ರಾಹ್ಮಣೋತ್ತಮನೆ ! ಇದು ಅತ್ಯದ್ಭುತವಾದ ಕೃತ್ಯವು ಈ ರಹಸ್ಯವನ್ನು ನಿನಗೆ ತಿಳಿಸಿ ದುಷ್ಟಾತ್ಮಳಾದ ಇವಳ ಅಧೀನತೆಯಿಂದ ನಿನ್ನನ್ನು ತಪ್ಪಿಸಬೇಕೆಂದಾಲೋಚಿಸಿ ಸಮಯವನ್ನು ನಿರೀಕ್ಷಿಸುತ್ತಿದ್ದೆನು ಆ ಪರಮಪಾಪಿ ನಿಯು ಎಡೆಬಿಡದೆ ನಿನ್ನೊಡನಿರುತ್ತಿದ್ದುದರಿಂದ ಅವಕಾಶವಿಲ್ಲದಿದ್ದಿತು ನಿನಗೂ ನನಗೂ ಪರಿಚಯವಿಲ್ಲದಿದ್ದುದರಿಂದ ಆ ಪ್ರಯತ್ನವು ನೆರವೇರುವುದಕ್ಕೆ ತಡೆ ಯಾಗಿದ್ದಿತು ಈ ದಿನ ಹೇಗೋ ಸಮಯವು ದೊರೆಯಿತು ಬಲೆಯಲ್ಲಿ ಸಿಕ್ಕಿಬಿದ್ದ ಹಕ್ಕಿಯಂತೆ ಕಳವಳಗೊಂಡಿದ್ದ ನಿನಗೀ ಉಪಕಾರವನ್ನು ಮಾಡಲಿಕ್ಕೆ ಬಗೆದು ಈ ದಿನ ನಿನ್ನನ್ನು ನಾನಾಗಿ ಕರೆದೆನು ” ಎಂದು ಹೇಳಿದಳು.

ಭದ್ರಾವತಿಯಿಂತು ನುಡಿಯುತ್ತಲೇ ಸೋಮಸುಂದರಶರ್ಮನು ನಿರ್ವಿಣ್ಣ ನಾಗಿ ಆಶ್ಚರ್ಯಪಟ್ಟು ಭೀತಿಯನ್ನು ಪಡೆದವನಾಗಿ ಮುದುಕಿಯು ಹೇಳಿದ ವಿಚಾರವನ್ನೆಲ್ಲ ಸತ್ಯವಾದುದನ್ನಾಗಿ ಬಗೆಗೊಂಡು ಅವಳನ್ನು ಕುರಿತು “ ಎಲೌ ಮಾತೆ ! ನನ್ನಲ್ಲಿ ಹೆಚ್ಚಾದ ಪ್ರೇಮವುಳ್ಳವಳಾಗಿ ವರ್ತಿಸುತ್ತಿದ್ದುದರಿಂದ ನಿಜ ವಾಗಿಯೂ ಅವಳು ಸಾಧುಹೃದಯಳಾದ ಸತಿಯೆಂದು ಭಾವಿಸಿ ಅವಳ ಮಾತುಗಳ ನ್ನೆಲ್ಲ ನಂಬಿದೆನು ಅವಳ ವಂಚನೆಯನ್ನೂ ಕಪಟತಂತ್ರಗಳನ್ನೂ ಶಕ್ತಿಯನ್ನೂ ಈಗ ನಿನ್ನ ಹೇಳಿಕೆಯಿಂದ ತಿಳಿದುಕೊಂಡೆನು ಇಂತು ಮಂತ್ರವೇದಿನಿಯಾದ ಕಾಮಿನಿಯೊಡನೆ ನಾನಿನ್ನಿರಲಾರೆನು ನೀನೀಗ ಕೃಪೆಯಿಂದ ನನ್ನನ್ನು ನನ್ನ ಮಾತಾ ಪಿತೃಗಳಬಳಿಗೆ ಸೇರಿಸಿ ಪುಣ್ಯವನ್ನುಪಡೆ ” ಎಂದು ನುಡಿದು ಅವಳ ಪಾದಗಳ

ಮೇಲೆ ಬಿದ್ದು ಪ್ರಾರ್ಥಿಸಿ ಕಣ್ಣುಗಳಲ್ಲಿ ನೀರಿಟ್ಟನು. ಆತನರೀತಿಯನ್ನು ಕಂಡು ಆ ವೃದ್ಧಾಂಗನೆಯು ಮನಸ್ಸು ಕರಗಿತು “ವತ್ಸ! ನಾನು ನಿನಗುಪದೇಶಿಸುವ ಪದ್ಧತಿಯಂತೆ ನೀನು ನಡೆದರೆ ನಿಮ್ಮ ಮಾತಾಪಿತೃ ಬಂಧುಗಳೊಡನೆ ಸೇರಿ ಸುಖವಾಗಿರವೆ ಹಾಗೆ ಮಾಡದಿದ್ದರೆ ನಿನಗಿಪಳ ಮಂದಿರವೇ ಗತಿ ಇಲ್ಲಿಯೇ ಬಿದ್ದು ಸಾಯುಬೇಕಾಗುವುದು ಇವಳಿಂದ ತಪ್ಪಿಸಿಕೊಂಡು ಹೋದಬಳಿಕ ಮಾಡಬೇಕಾದ ಕೆಲವು ಕಾರ್ಯಗಳಿರುವುವು ಅವುಗಳನ್ನು ಕ್ರಮಪ್ರಕಾರ ಮಾಡಬೇಕು ತಪ್ಪಿದರೆ ನಿನ್ನಲ್ಲಿ ಅಧಿಕವಾದ ಪ್ರೀತಿಯುಳ್ಳ ಇವಳೇ ನಿನ್ನಮೇಲೆ ಆಗ್ರಹವನ್ನು ತಾಳಿ ನಿನ್ನನ್ನು ಕೊಲ್ಲುವಳು ಅಥವಾ ನಿನಗೆ ರೂಪಾಂತರವನ್ನುಂಟು ಮಾಡುವಳು ಅಪ್ರಮತ್ತನಾಗಿ ವರ್ತಿಸಬೇಕು” ಎಂದು ಹೇಳಿ ತನ್ನ ಹೇಳಿಕೆಯಂತೆ ನಡೆವಂತೆ ಆತನೊಪ್ಪಿಕೊಂಡಬಳಿಕ ಹೀಗೆಂದು ಹೇಳಿದಳು.

“ಕುಮಾರ! ಮತ್ತೆ ನಾಳೆಯದಿನ ಪ್ರಯಾಣವನ್ನು ನಿಶ್ಚಯಿಸಿಕೊ ಹೋಗಗೊಳಿಸದೆ ನಿನ್ನ ಪ್ರಯಾಣವನ್ನು ತಡೆವಶಕ್ತಿಯು ತನಗಿರುವುದರಿಂದ ಆ ಮಾಯೆಗಾತಿಯು ಹೋಗಬೇಡವೆಂದು ಹೇಳದೆ ಹೊರಡಲನುಜ್ಞೆ ಕೊಡುವಳು ಬಳಿಕ ನೀನು ಹೊರಟು ಆ ದಿನದ ರಾತ್ರಿಯಲ್ಲಿ ನೀನು ನಿಂತಕಡೆಯಲ್ಲಿ ಅವಳು ಕಟ್ಟಿಕೊಟ್ಟ ತಿಂಡಿಯ ವಸ್ತುಗಳನ್ನು ತಿನ್ನದೆ ಯಾವುದಾದರೊಂದು ಗಿಡದಕೊಂಬೆಗೆ ನೇತುಹಾಕಿ ಎಚ್ಚರಿಕೆಯಿಂದ ನೋಡುತ್ತಿರು ನೀನು ಪ್ರಯಾಣದಲ್ಲಿ ತಂಗಿದ ಸ್ಥಲದಿಂದ ಹೇಗೆ ಇಲ್ಲಿಗೆ ಬರುತ್ತಿದ್ದೆಯೋ ಆ ಚಿತ್ರವನ್ನು ನೀನಾಗ ತಿಳಿದುಕೊಳ್ಳುವೆ? ವತ್ಸ! ಕೇಳು ಆ ಕಾರ್ಯವು ಹೇಗೆ ನಡೆಯುತ್ತಿದ್ದಿತೆಂದರೆ ನೀನವಳು ಕೊಟ್ಟ ವಸ್ತುಗಳನ್ನು ತಿಂದೊಡನೆಯೇ ಗಾಢನಿದ್ರಾಪರನಾಗುತ್ತಿದ್ದೆ ಹಾಗೆ ನೀನು ತಿಂದಪದಾರ್ಥಗಳು ಮಂತ್ರಕಲ್ಪಿತಗಳಾದುವಾದುದರಿಂದ ಅವುಗಳ ಪ್ರಭಾವದಿಂದ ನೀನಿಲ್ಲಿಗೆ ಸೇರುತ್ತಿದ್ದೆ ಇದೇ ಆ ರಹಸ್ಯ ಈಸಲ ಅವುಗಳನ್ನು ತಿನ್ನದೆ ನಾನು ಹೇಳಿದಂತೆ ಮಾಡು ಭಕ್ಷ್ಯಗಳ ಗಂಟನ್ನು ಮರಕ್ಕೆ ಕಟ್ಟಿ ಬಳಿಕ ನಡೆಪ ವಿಧವನ್ನು ತಿಳಿದುಕೊಂಡಮೇಲೆ ಇಗೋ ಈ ಪದಾರ್ಥವನ್ನು ಬಾಯಿಯಲ್ಲಿ ಹಾಕಿಕೊಂಡು ಅಗಿದುನುಂಗಿ ನಿದ್ರಿಸು ಬೆಳಗಾಗುವವೇಳೆಗೆ ನೀನು ನಿಮ್ಮ ಊರನ್ನು ಸೇರುವೆ ತರುವಾಯ ಎಂದಿನಂತೆ ನೀನು ಇಲ್ಲಿಗೆ ಬಾರದಿರುವುದರಿಂದ ತನ್ನಿಂದ ತಪ್ಪಿಸಿಕೊಂಡು ಹೋಗಿರುವನೆಂದೀ ನೀಚಳು ನಿನ್ನಲ್ಲಿ ಶತ್ರುತ್ವದಿಂದ ನಿನ್ನನ್ನು ಕೊಲ್ಲುವುದಕ್ಕೆಂದು ಒಂದು ಶಕ್ತಿಯನ್ನು ಪ್ರಯೋಗಿಸುವಳು ಆ ಶಕ್ತಿಯು ಅವಳ ಆಕೃತಿಯಿಂದಲೇ ಬಂದು ನಿನ್ನನ್ನು ಮೋಹಗೊಳಿಸಿ ನಿನಗೆ ಭ್ರಾಂತಿಯನ್ನುಂಟು ಮಾಡುವುದು ನೀನು ನಿನ್ನ ಮನೆಯನ್ನು ಸೇರಿದದಿನ ಬಹು ಜಾಗರೂಕನಾಗಿರು ಆ ಶಕ್ತಿಯು ನಿನ್ನ ಕಣ್ಣುಗಳಿಗೆ ಗೋಚರಿಸುತ್ತಲೇ ಎದೆಗೆಡದೆ ಧೈರ್ಯವನ್ನವಲಂಬಿಸಿ ಇಗೋ ಈ ವಿಭೂತಿಯನ್ನು ಅದರಮೇಲೆ ಚೆಲ್ಲಿ

ಓ ಮಹಾ ಮಾಯಾಶಕ್ತಿಯೇ ! ಮಾಯಾವತಿಯಾದ ಕಲಾವತಿಯು ನಿನ್ನನ್ನು ಕಳುಹಲು ಅವಳ ರೂಪವನ್ನು ಧರಿಸಿ ನನ್ನನ್ನು ಕೊಲ್ಲುವುದಕ್ಕಾಗಿ ನೀನು ಬಂದಿರುವುದನ್ನು ನಾನು ಬಲ್ಲೆನು ತತ್ಫಲವಾಗಿ ನನ್ನ ಮಹಿಮೆಯಿಂದ ಈಗ ನೀನಾವ ಸ್ವರೂಪವನ್ನು ವಹಿಸಿರುವೆಯೋ ಅದೇ ಸ್ವರೂಪದಿಂದ ಶಿಲಾಕೃತಿಯನ್ನುತಾಳಿ ನನ್ನ ಬಾಗಿಲಲ್ಲಿ ಭೂಸ್ಪರ್ಶವಿಲ್ಲದೆ ಅಂತರಾಳದಲ್ಲಿ ನಿಂತಿರು ” ಎಂದು ಹೇಳು ಆಗ ಸಮಂತ್ರಕವಾದ ಆ ವಿಭೂತಿಯ ಮಹಿಮೆಯಿಂದ ಆ ಶಕ್ತಿಯು ಆ ಕಲಾವತಿಯು ರೂಪದಿಂದಲೇ ಶಿಲಾರೂಪವಾಗಿ ಭೂಮಿಯಮೇಲೆ ಪಾದಗಳ ಸೋಂಕಿಲ್ಲದಂತೆ ನಿಲ್ಲುವಳು ಇದು ಆಶ್ಚರ್ಯಕರವಾದ ದೃಶ್ಯವಾದುವರಿಂದ ಹೀಗೆ ಮಾಡಿದ ನಿನ್ನನ್ನು ಎಲ್ಲರೂ ಕೊಂಡಾಡುವರು ಅಬಳಿಕ ನಿನಗಾರಭಯವೂ ಉಂಟಾಗದು ಸುಖವಾಗಿರು ” ಎಂದು ಪ್ರಬೋಧಿಸಿ ಒಂದು ವಸ್ತುವನ್ನೂ, ವಿಭೂತಿಯನ್ನೂ ಆತನವಶಕ್ಕೆ ಕೊಟ್ಟು “ ಅಯ್ಯಾ ! ಜಾಗ್ರತೆ ! ಈ ವಸ್ತುಗಳನ್ನು ಆಯುವರಿಯದಂತೆ ಭದ್ರವಾಗಿಟ್ಟುಕೊಂಡಿರು ಅವಳು ನಿನ್ನ ಗುಟ್ಟನ್ನರಿತರೆ ನಿನ್ನ ಪ್ರಾಣಗಳನ್ನು ತೆಗೆದುಬಿಡುವಳು ” ಎಂದು ನುಡಿದು “ ಇನ್ನು ಹೊರಡು ಅವಳು ಬರುವ ಹೊತ್ತಾಯಿತು ” ಎಂದು ಒತ್ತಿಯೊತ್ತಿ ಹೇಳಿದಳು.

ವಿಪ್ರಕುಮಾರನು ಆ ವೃದ್ಧವನಿತೆಗೆ ನಮುಸ್ಕರಿಸಿ ಕಲಾವತಿಯ ಮಂದಿರವನ್ನು ಸೇರಿ ತಾನಿಷ್ಟು ಕಾಲದಿಂದಲೂ ಪ್ರೀತಿಸುತ್ತಿದ್ದ ತನ್ನ ಮೋಹನಾಂಗಿಯ ಮಂತ್ರಶಕ್ತಿಯನ್ನು ನೆನೆನೆನೆದು ಭೀತಹೃದಯನಾಗಿ ತನ್ನ ರಹಸ್ಯವನ್ನವಳರಿಯದಂತೆ ವರ್ತಿಸಬೇಕೆಂದು ಭಾವಿಸಿ ಆವಳ ಅಧೀನದಿಂದ ಹೇಗಾದರೂ ತಪ್ಪಿಸಿಕೊಂಡು ಹೋಗಬೇಕೆಂದು ನಿಶ್ಚಯಿಸಿ ಭದ್ರಾವತಿಕೊಟ್ಟ ವಸ್ತುಗಳನ್ನು ಭದ್ರಪಡಿಸಿಕೊಂಡು ಏನೂ ಅರಿಯದವನಂತೆ ತೋರ್ಪಡಿಸಿಕೊಂಡು ಆ ಮಾರನೆಯ ದಿನದಲ್ಲಿ ಕಲಾವತಿಯ ಅಪ್ಪಣೆಯನ್ನು ಪಡೆದು ಪ್ರಭಾತಕಾಲದಲ್ಲಿಯೇ ಪ್ರಯಾಣಮಾಡಿ ಎಂದಿನಂತೆ ಸಾಯಂಕಾಲದವರೆಗೂ ನಡೆದು ಒಂದು ಹಳ್ಳಿಯನ್ನು ಸೇರಿ ತಾನುತಂದ ಭಕ್ಷ್ಯಗಳ ಗಂಟನ್ನು ತಿನ್ನದೆ ಅಲ್ಲಿದ್ದ ಒಂದು ಚಿಕ್ಕ ಆಲದ ಮರದಕೊಂಬೆಗೆ ತಗಲಿಸಿ ಅದರ ಸಮೀಪದಲ್ಲಿದ್ದ ಒಂದು ಮಂಟಪದಲ್ಲಿ ಮಲಗಿ ಎಚ್ಚರದಿಂದಿದ್ದು ಮುದುಕಿ ಹೇಳಿದಂತೆ ಶಕ್ತ್ಯಾಗಮನವನ್ನಿದಿರು ನೋಡುತ್ತಿದ್ದನು ಸ್ವಲ್ಪಹೊತ್ತಿಗೆ ಆ ಭಕ್ಷ್ಯಗಳನ್ನು ಕಟ್ಟಿದ್ದ ಆಲದ ಗಿಡವು ಮಂತ್ರವಸ್ತು ಸಂಪರ್ಕಬಲದಿಂದ ಬೇರುಗಳ ಸಹಿತವಾಗಿ ಮೇಲಕ್ಕೆಹಾರಿ ಒಂದು ನಿಮಿಷದೊಳಗಾಗಿ ಕಣ್ಣಿಗೆ ಕಾಣದಂತೆ ಮಾಯವಾಯಿತು ಸೋಮಸುಂದರಶರ್ಮನಾ ವಿಚಿತ್ರವನ್ನು ಕಂಡು “ ಆಹ ! ಆ ಮಾಯೆಗಾತಿಯು ನನ್ನನ್ನು ಬರಮಾಡಿಕೊಳ್ಳುತ್ತಿದ್ದುದೂ ಹೀಗೆಯೇ ಭಗವತ್ಕೃಪೆಯಿಂದ ಗಂಡದಿಂದ

ಪಾರಾದೆನು" ಎಂದು ಸಂತೋಷಗೊಂಡು ಮುದುಕಿಯು ಕೊಟ್ಟ ವಸ್ತುಗಳನ್ನು ಸಮೀಪದಲ್ಲಿಟ್ಟುಕೊಂಡು ಒಂದು ವಸ್ತುವನ್ನು ಮುದುಕಿ ಹೇಳಿದ್ದ ಪ್ರಕಾರ ಅಗಿದುತಿಂದು ನಿದ್ರಿಸಿದನು.

ಬೆಳಗಾಯಿತು ಕಣ್ದೆರೆದು ನೋಡಿದನು ಅದು ಮಾತಾಪಿತೃ ಸೋದರಯುಕ್ತವಾದ ತನ್ನ ಮನೆಯಾಗಿದ್ದಿತು ಆತನ ಆಗಮನದಿಂದ ಎಲ್ಲರೂ ಪರಮಹರ್ಷವನ್ನು ಪಡೆದು ಆತನಿಂದ ಹಿಂದೆ ನಡೆದ ವೃತ್ತಾಂತವನ್ನೆಲ್ಲ ಕೇಳಿ ಆಶ್ಚರ್ಯಮಗ್ನರಾದರು.

ಅತ್ತ ಕಲಾವತಿಯು ಬೆಳಗಾಗುವವೇಳೆಗೆ ತನ್ನ ಪತಿಯು ನಿತ್ಯದಂತೆ ಮನೆಯ ಜಗುಲಿಯಮೇಲೆ ಕಾಣದೆ, ಆಲದಮರವೊಂದು ಸಮೂಲವಾಗಿಯೂ ಭಕ್ಷ್ಯಗಳ ಗಂಟಿನೊಡನೆಯೂ ಬಿದ್ದಿರುವುದನ್ನು ಕಂಡು, ಆಗ್ರಹಗ್ರಸ್ತ ಮಾನಸಳಾಗಿ, "ಎಲಾ ಮೂಳ! ರಹಸ್ಯವನ್ನಾವಳೋ! ನಿನಗೆ ಹೇಳಿದುದರಿಂದ ನೀನಿಂತಾಚರಿಸಿದೆಯಲ್ಲವೆ? ಇರಲಿ" ಎಂದು ಮಂತ್ರಪುನಶ್ಚರಣೆಯಿಂದ ಒಂದು ಶಕ್ತಿಯನ್ನು ಬರಮಾಡಿಕೊಂಡು, "ಎಲೌ ಶಕ್ತಿಯೇ! ನೀನೀಗಲೆ ತೆರಳಿಹೋಗಿ ನನಗೆ ಪ್ರಿಯನಾಗಿದ್ದು ತಪ್ಪಿಸಿಕೊಂಡು ಹೋಗಿರುವ ಸೋಮಶರ್ಮನೆಂಬ ಬ್ರಾಹ್ಮಣನನ್ನು ಕೊಂದು ಬಾ" ಎಂದಾಜ್ಞೆ ಮಾಡಿದಳು. ಹಸಾದವೆಂದಾಗಲೆ ಶಕ್ತಿಯು ಹೊರಟಿತು.

ಇತ್ತ ಸೋಮಸುಂದರಶರ್ಮನು, ಹಗಲೆಲ್ಲಾ ಮಲಗಿ ನಿದ್ರಿಸಿ, ಸಾಯಂಕಾಲಾನಂತರದಲ್ಲಿ ಸ್ನಾನಮಾಡಿ ಪುಂಡ್ರಧಾರಣೆಯನ್ನು ಮಾಡಿ ಮುದುಕಿಯು ಕೊಟ್ಟ ವಿಭೂತಿಯನ್ನು ಸಮೀಪದಲ್ಲಿಟ್ಟುಕೊಂಡು ಗಾಯತ್ರಿಯನ್ನು ಜಪಿಸುತ್ತ ಮನೆಯ ಮುಂಗಡೆಯ ಒಂದು ವೇದಿಕೆಯಮೇಲೆ ವ್ಯಾಘ್ರಾಜಿನವನ್ನು ಹಾಸಿ ಕುಳಿತು ಶಕ್ತ್ಯಾಗಮನವನ್ನು ನಿರೀಕ್ಷಿಸುತ್ತಿದ್ದನು. ಮನೆಯವರು ಈಚೆಗೆ ಬಾರದಂತೆಯೂ ಭೋಜನಾದಿಗಳನ್ನು ತೀರಿಸಿಕೊಂಡು ಮಲಗುವಂತೆಯೂ ಹೇಳಿದನು.

ಅರ್ಧರಾತ್ರಿ ಸಮಯವಾಯಿತು. ಆಗಲಾ ಕಲಾವತೀ ಪ್ರಹಿತಶಕ್ತಿಯು ಕಲಾವತಿಯಂತೆಯೇ ಮುಂದೆ ಬಂದು ನಿಂತಿತು. ಬ್ರಾಹ್ಮಣ ಕುಮಾರನು ನೋಡಿ ಸ್ವಲ್ಪವಾದರೂ ಹೆದರಲಿಲ್ಲ. ಮೋಹಿಸಲೂ ಇಲ್ಲ. ಗರ್ಜಿಸಿತು ಭಯಪಡಲಿಲ್ಲ. ಭ್ರಾಂತನಾಗಲಿಲ್ಲ, ಒಡನೆಯೇ ಮಂತ್ರಿಸಲ್ಪಟ್ಟಿದ್ದ ವಿಭೂತಿಯನ್ನದರಮೇಲೆ ಎರಚಿ "ಎಲೌ ಮಾಯಾಶಕ್ತಿಯೇ! ಮಾಯೆಗಾತಿಯಾದ ಮಂತ್ರಗಾತಿಯ ಪ್ರೇರಣೆಯಿಂದ ತತ್ಸ್ವರೂಪವನ್ನೆ ಧರಿಸಿ ನನ್ನನ್ನು ಕೊಲ್ಲುವುದಕ್ಕೆ ಬಂದಿರುವೆಯಲ್ಲವೆ? ಬಲ್ಲೆನು! ಬಲ್ಲೆನ!! ಅವಳೊಡನೆ ನಾನು ಬಹಳ ದಿನಗಳವರೆಗೆ ಸುಖವನ್ನನುಭವಿಸಿರುವೆನು. ಅವಳನ್ನೀಗ ಯಾವ ಬಗೆಯಿಂದ ಶಿಕ್ಷಿಸುವುದಕ್ಕೂ

ಮನಸ್ಸೊಪ್ಪದು. ತಿಳಿಯಿತೇ! ಅವಳು ಕಳುಹಿದುದರಿಂದ ಬಂದ ನಿನ್ನನ್ನೀಗ ಶಿಕ್ಷಿಸತಕ್ಕುದು ಉಚಿತವಾಗಿರುವುದು. ನೀನಿದೇ ರೂಪದಿಂದ ಶಿಲಾಕೃತಿಯನ್ನು ತಾಳಿ ಈ ನನ್ನ ಮನೆಯ ಬಾಗಿಲಬಳಿ ಭೂಮಿಸ್ಪರ್ಶವಿಲ್ಲದಂತೆ ನಿಂತಿರು. ನೀವು ದೇವತಾವರ್ಗಕ್ಕೆ ಸೇರಿದವರಾದುದರಿಂದ ನಿಮ್ಮಂಥವರಿಗೆ ಭೂಸ್ಪರ್ಶ ವಿಲ್ಲವಲ್ಲವೆ?" ಎಂದು ನುಡಿದನು. ಒಡನೆಯೇ ಆಶಕ್ತಿಗೆ ಶಿಲಾವಿಗ್ರಹ ಸ್ವರೂಪವು ಪ್ರಾಪ್ತವಾಯಿತು. ನೀನೀಗ ಕಂಡುಬಂದ ಶಿಲಾವಿಗ್ರಹವು ಅದೇ. ಇದು ಆಶ್ಚರ್ಯಕರವಾದ ವಿಷಯವಾದುದರಿಂದ ಮೊದಮೊದಲು ಸುತ್ತಮುತ್ತಲಿನ ಬಹುಮಂದಿ ಬಂದು ಸಂದಣಿಸಿ ನೋಡಿ ಹೋಗುತ್ತಿದ್ದರು. ಬರಾತ್ತ ಬರುತ್ತ ಅತಿಪರಿಚಯದಿಂದ ಅದರಲ್ಲಿ ಎಲ್ಲರಿಗೂ ಔದಾಸೀನ್ಯವುಂಟಾಯಿತು ನೀನು ಹಿಂದೆ ಎಂದೂ ಇಂತಹ ವಿಗ್ರಹಗಳನ್ನು ನೋಡಿರಲಿಲ್ಲವಾಗಿ ಹೊಸದಾಗಿ ಕಂಡ ನಿನಗೆ ಅದ್ಭುತವಾಗಿ ತೋರಿತು ಎಂದಾ ಚಿದಾನಂದ ಮುನಿಯು ಹೇಳಿ ಶಿಷ್ಯನನ್ನು ಆನಂದಗೊಳಿಸಿದನು. ಇಂತು ಕಥಾಕಥನ ಶ್ರವಣಾನಂತರವಲ್ಲಿ ಗುರು ಶಿಷ್ಯರು ಸುಖವಾಗಿ ನಿದ್ರಿಸಿದರು.

ಇಂತು ಎಂಟನೆಯ ಕಥೆ ಮುಗಿದದುದು.



## —: ಒಂಭತ್ತನೆಯ ಕಥೆ :—

ತ್ರಯೀವೇದ್ಯಂ ತ್ರಿಲೋಕೇಶಂ ತ್ರ್ಯಕ್ಷರಾತ್ಮಕವಿಗ್ರಹಂ ॥
ವಂದಾಮಹೇ ವಂದ್ಯಮಾನಂ ವಂದಾರುಸುರಪಾದಪಂ ॥

ಚಿದಾನಂದ ಸತ್ಯಶೀಲರು ಒಭತ್ತನೆಯದಿನದ ಉದಯದಲ್ಲಿ ಎಚ್ಚೆತ್ತು, ಕಾಲ್ಯೋಚಿತ ಕೃತ್ಯಗಳನ್ನು ನಿರ್ವರ್ತಿಸಿ ಪ್ರಯಾಣವಾಗಿ ಬಹುದೂರ ಹೋಗಿ ಒಂದು ಚಿಕ್ಕ ಹಳ್ಳಿಯನ್ನು ಮಧ್ಯಾಹ್ನದವೇಳೆಗೆ ಸೇರಿದರು. ಸಮೀಪದಲ್ಲಿ ಒಂದು ಪೂಜಾರಹಿತವಾದ ಶಕ್ತಿದೇವತೆಯ ಗುಡಿಯಿದ್ದಿತು. ಆದಿನ ಅಲ್ಲಿ ತಂಗುವುದಕ್ಕೆ ಮನಮಾಡಿ ನಿಂತು ಅಡಿಗೆಯ ಸಾಮಗ್ರಿಯನ್ನು ತಂದು ಪಕ್ವಗೊಳಿಸಿ ಭೋಜನವನ್ನು ಮಾಡಿ ಆ ದೇವಾಲಯದಲ್ಲಿ ವಸತಿಯಾದ ಒಂದು ವಸಾರೆಯಲ್ಲಿ ಇಬ್ಬರೂ ವಿಶ್ರಮಿಸಿಕೊಂಡರು.

ಸತ್ಯಶೀಲನು, ವಿಪುಲವಾದ ಶಿಲ್ಪನೈಪುಣ್ಯದಿಂದೊಪ್ಪುತ್ತಿರುವ ಆ ದೇವಾಲಯವನ್ನೂ ಅದರಲ್ಲಿ ಪ್ರತಿಷ್ಠಿತವಾಗಿ ಪೂಜೆಯಿಲ್ಲದೆ ನಿಂತಿರುವ ಶಕ್ತಿವಿಗ್ರಹವನ್ನೂ ನೋಡಿ ಆಶ್ಚರ್ಯಪಟ್ಟು "ಆಚಾರ್ಯವರ್ಯಾ! ಈ ದೇವಾಲಯವು ಪೂರ್ವಕಾಲದಲ್ಲಿ ಬಹುವೈಭವದಿಂದ ಮೆರೆಯುತ್ತಿದ್ದುದೆಂದು ತೋರುವುದು. ಈಗ ಅದೇತಕ್ಕೋ ಹಾಳುಬಿದ್ದಿರುವುದು. ಇದಕ್ಕೆ ಇಂತಹ ದುರ್ದಶೆಯು ಪ್ರಾಪ್ತವಾಗುವುದಕ್ಕೆ ಕಾರಣವೇನೋ ದಯವಿಟ್ಟು ಹೇಳಬೇಕು." ಎಂದು ಪ್ರಾರ್ಥಿಸಿದನು. ಸ್ವಲ್ಪಕಾಲವಾಲೋಚಿಸಿ ಚಿದಾನಂದಯೋಗಿಯಿಂತೆಂದನು.

## ಭೂತಾವಿಷ್ಟಳಾದ ಇಂದಿರಾದೇವಿಯ ಕಥೆ.

ವತ್ಸ! ಸತ್ಯಶೀಲ! ಲಾಲಿಸು. ಈ ದೇವಾಲಯವು ಈ ಸ್ಥಿತಿಯನ್ನು ಪಡೆವುದಕ್ಕೆ ತಕ್ಕ ಕಾರಣವುಂಟು. ಈ ಹಳ್ಳಿಯು ಪೂರ್ವಕಾಲದಲ್ಲಿ ಒಂದು ದೊಡ್ಡ ನಗರವಾಗಿದ್ದಿತು. ಆಗ ಆ ನಗರದಲ್ಲಿ ಕೃಷ್ಣಶರ್ಮನೆಂಬೊಬ್ಬ ಬ್ರಾಹ್ಮಣನಿದ್ದನು. ಅವನು ಭಾಗ್ಯವಂತನು. ಅವನಿಗೆ ರೂಪವಂತನೂ, ಸದ್ಗುಣಗಣ ವಿರಾಜಿತನೂ, ಸದಾಚಾರಸಂಪನ್ನನೂ, ವಿದ್ಯಾವಿವೇಕಶೋಭಿತನೂ ಆದ ಅಚ್ಯುತಶರ್ಮನೆಂಬ ಮಗನೊಬ್ಬನಿದ್ದನು. ಕೃಷ್ಣಶರ್ಮನು ಎಲ್ಲ ವಿಷಯಗಳಲ್ಲಿಯೂ ತನಗೆ ಸಮಾನನಾಗಿಯೂ ಸಮೀಪಗ್ರಾಮದಲ್ಲಿ ವಾಸಮಾಡುವವನಾಗಿಯೂ ಇದ್ದ ಜನಾರ್ದನಶಾಸ್ತ್ರಿಯೆಂಬ ಬ್ರಾಹ್ಮಣೋತ್ತಮನ ಪುತ್ರಿಕೆಯನ್ನು ತಂದು ಮಗನಿಗೆ ಮದುವೆಮಾಡಿದನು. ಆಕೆಯು ರೂಪವತಿಯೂ ಆಗಿದ್ದಳು. ಆಕೆಯ ಹೆಸರು ಇಂದಿರಾದೇವಿ ಮದುವೆಯಾದ ಸ್ವಲ್ಪ ಕಾಲದಲ್ಲಿಯೇ ಇಂದಿರೆಯು ಶುಭನಕ್ಷತ್ರದಲ್ಲಿ ಪುಷ್ಪವತಿಯಾದುದರಿಂದ ಋತುಶಾನ್ತಿ ಪ್ರಸ್ತುತವೂ ಆಗಿ ಅತ್ತೆಯಮನೆಗೆ ಸಂಸಾರಕ್ಕೆ ಬಂದಳು. ಆ ಜಾಯಾಪತಿಗಳು ರೂಪಗುಣ ಪ್ರವರ್ತನಗಳಲ್ಲಿ ಪರಸ್ಪರ ಸಾಮ್ಯವನ್ನು ಪಡೆದು ಇದ್ದುದರಿಂದ ಶಚೀಪುರಂದರರಂತೆ. ಭಾರತೀಪರಮೇಷ್ಠಿಗಳ ಹಾಗೆ, ಪಾರ್ವತೀ ಪರಮೇಶ್ವರರ ಚಂದದಿಂದ, ಲಕ್ಷ್ಮೀನಾರಾಯಣರಂತೆ ಶೋಭಿಸುತ್ತ ಅನ್ಯೋನ್ಯಾನುರಾಗದಿಂದ ಒಪ್ಪುತ್ತಿದ್ದರು. ಅವರ ಮೈತ್ರಿಯು ಕಸುಮಸೌರಭಂಗಳಂತೆ ಹೊಂದಿಕೆಯಾಗಿದ್ದಿತು.

ಹೀಗೆ ಕೆಲವುಕಾಲವಾದಮೇಲೆ ಅಕಸ್ಮಾತ್ತಾಗಿ ಇಂದಿರೆಗೆ ಭೂತಾವೇಶವುಂಟಾಯಿತು ಅದು ಮೊದಲ್ಗೊಂಡು ಆ ದಂಪತಿಗಳಿಗೆ ಸಂಭವಿಸಿದ ಕಷ್ಟಪರಂಪರೆಯು ವಾಚಾಮಗೋಚರವಾದುದು ಹಗಲು ಯಾವ ನಿರ್ಬಂಧವೂ ಕಷ್ಟವೂ ಇರುತ್ತಿರಲಿಲ್ಲ ರಾತ್ರಿಯವೇಳೆಯಲ್ಲಿ ಜಾಯಾಪತಿಗಳು ಶಯ್ಯಾಗೃಹವನ್ನು ಪ್ರವೇಶಿಸುತ್ತಲೆ ಒಬ್ಬ ಪುರುಷನು ಖಡ್ಗಹಸ್ತನಾಗಿ ಆ ಕೊಟ್ಟಡಿಯೊಳಕ್ಕೆ ಬಂದು ಅಚ್ಯುತಶರ್ಮನನ್ನು ಬಂಧಿಸಿ, ದಯಾಹೀನನಾಗಿ ಪ್ರಹರಿಸಿ ಒಂದು ಮೂಲೆಯಲ್ಲಿ ಕೆಡಪಿ ಭರ್ತೃವಿನಂತೆ ಇಂದಿರೆಯೊಡನೆ ರಾತ್ರಿಯೆಲ್ಲ ಮಲಗಿದ್ದು ಅರುಣೋದಯದಲ್ಲಿ ಅಂತರ್ಹಿತನಾಗುತ್ತಿದ್ದನು ಅವನು ಆ ದಂಪತಿಗಳಿಗೆಯೇ ಹೊರತು ಇತರರಕಣ್ಗೆ ಗೋಚರಿಸುತ್ತಿರಲಿಲ್ಲ. ಆದರೂ ಆ ಶರ್ಮನಿಗೆ ಬೀಳುವ ಪೆಟ್ಟುಗಳಿಂದ ಉಂಟಾಗುವ ಬಾಸುಂಡೆಗಳು ಮಾತ್ರ ಎಲ್ಲರಿಗೂ ಕಾಣಿಸುತ್ತಿದ್ದುವು ಒಂದುವೇಳೆ ಪೆಟ್ಟುಗಳಿಗೆ ಹೆದರಿ ಶರ್ಮನು ಮಲಗುವ ಮನೆಯನ್ನು ಸೇರದೆ ಹೊರಗೆಲ್ಲಿ ಮಲಗಿದ್ದರೂ ಆ ಪುರುಷಪಿಶಾಚವು ಪದ್ಧತಿಯಂತೆ ಶರ್ಮನನ್ನು ಹಿಡಿದೆಳೆತಂದು ಮಲಗುವ ಮನೆಯಲ್ಲಿ ಕೆಡವಿ ಹೊಡೆಯುತ್ತಲೇ ಇದ್ದಿತು. ಈ

ಬಾಧೆಯನ್ನು ಸೈರಿಸಲಾರದೆ ತನ್ನ ಗಂಡನು ಶ್ರಮಪಡುತ್ತಿರುವುದನ್ನು ಆ ಇಂದಿರೆಯು ಕಂಡು ತಾನು ಬಹಳವಾಗಿ ರೋದಿಸುತ್ತ ಪ್ರತಿಕ್ರಿಯೆಯನ್ನರಿಯದೆ ಪರಿತಪಿಸುತ್ತಿದ್ದಳು. ಇದನ್ನರಿತು ಅವರಿಗುಂಟಾದ ಮಹತ್ಸಂಕಟವನ್ನು ಕಂಡವರು "ಅಯ್ಯೋ! ಇದೇನಚ್ಚರಿ? ಲೋಕದಲ್ಲಿ ಇಂತಹ ಪಿಶಾಚಗಳೂ ಇರುವುದುಂಟೆ? ಅಕಟಕಟಾ! ಇದು ಇವರು ಮಾಡಿದ ಪಾಪಫಲವು" ಎಂದು ಮರುಗುತ್ತಿದ್ದರು. ಕೃಷ್ಣಶರ್ಮನು ಅಪರಿಮಿತವಾದ ಧನವನ್ನು ವೆಚ್ಚಮಾಡಿ ಸುಪ್ರಸಿದ್ಧರಾದ ಮಾಂತ್ರಿಕರನ್ನು ಬರಿಸಿ ಎಷ್ಟೋ ಚಿಕಿತ್ಸೆಗಳನ್ನು ಮಾಡಿಸಿದನು ಆದರೂ ಅವೆಲ್ಲವೂ ಬೂದಿಯಲ್ಲಿ ಮಾಡಿದ ಹೋಮದಂತಾದುವು ಅದಲ್ಲದೆ ಚಿಕಿತ್ಸೆಗಳನ್ನು ಮಾಡಿದಾಗಳೆಲ್ಲ ಶರ್ಮನಿಗೆ ದ್ವಿಗುಣವಾಗಿ ಪ್ರಹಾರಗಳಾಗುತ್ತಿದ್ದುವು. ಆ ಪಿಶಾಚವು ಆ ಶರ್ಮನೊಡನೆ "ಎಲಾ ಬ್ರಾಹ್ಮಣ! ನನ್ನನ್ನು ಓಡಿಸಿ ನೀನು ನಿನ್ನ ಸತಿಯೊಡನೆ ಸುಖಿಸಲೆಳಸಿ ಚಿಕಿತ್ಸೆಗಳನ್ನು ಮಾಡಿಸುತ್ತಿರುವೆಯಾ? ಮಾಂತ್ರಿಕರ ಆ ಮಂತ್ರತಂತ್ರಗಳು ನನ್ನನ್ನೇನೂ ಮಾಡಲಾರವೆಂದು ತಿಳಿ ನಾನು ಹೆದರಿ ನನ್ನ ಕರ್ತವ್ಯವನ್ನು ಬಿಡುವನಲ್ಲ ನೀನು ಬದುಕಿರುವವರೆಗೂ ಇದೇ ನೀನನುಭವಿಸಬೇಕಾದ ಫಲವು ನನ್ನನ್ನು ಓಡಿಸಬೇಕೆಂದು ಪ್ರಯತ್ನಪಟ್ಟು ಚಿಕಿತ್ಸೆಗಳನ್ನು ಮಾಡಿಸಿದುದರಿಂದ ಈ ದಿನದಿಂದ ನಿನಗೆ ಇಮ್ಮಡಿಯಾದ ಶಿಕ್ಷೆಯನ್ನು ಮಾಡುವೆನು" ಎಂದು ನುಡಿದು ದ್ವಿಗುಣವಾದ ಶಿಕ್ಷೆಯನ್ನು ಮಾಡುತ್ತಿದ್ದನು. ಅಧಿಕವಾದ ಆ ಬಾಧೆಯನ್ನು ತಾಳಲಾರದೆ ನನ್ನ ಹಣೆಯುಬರಹವೇ ಇಷ್ಟೆಂದು ಬಗೆದು ಭೂತಚಿಕಿತ್ಸೆಯನ್ನು ಮಾಡಿಸುವುದನ್ನುಳಿದು ಪಿಶಾಚಪ್ರಹಾರಗಳನ್ನು ಪಡೆದು ಮಹಾದುಃಖವನ್ನನುಭವಿಸುತ್ತಿದ್ದನು ಇಂದಿರಾ ದೇವಿಯ ದುಃಖಕ್ಕೆ ಪಾರವೇ ಇಲ್ಲವಾಯಿತು.

ಹೀಗೆ ಹಲವುಕಾಲ ಕಳೆಯಿತು ಒಂದು ದಿನ ಎಲ್ಲಿಂದಲೋ ಒಬ್ಬ ಸನ್ಯಾಸಿಯು ಬಂದು ಕೃಷ್ಣಶರ್ಮನ ಮನೆಯಲ್ಲಿಳಿದು ಭಿಕ್ಷೆಯನ್ನು ಬೇಡಿ ಆರೋಗಣೆಮಾಡಿ ಸ್ವಲ್ಪಹೊತ್ತು ವಿಶ್ರಮಿಸಿಕೊಂಡು ಮಾತನಾಡುತ್ತ ಪ್ರಸ್ತಾವನಾವಶವಾಗಿ ಆತನ ಸೊಸೆಯು ಭೂತಾವಿಷ್ಟಳಾಗಿರುವುದನ್ನೂ ಆ ಭೂತದಿಂದ ತನ್ನ ಮಗನಿಗೆ ಉಂಟಾಗಿರುವ ಉಪದ್ರವವನ್ನು ವಿಶದವಾಗಿ ತಿಳಿಸಿದನು.

ಆ ಸನ್ಯಾಸಿಯು ಬಹಳವಾಗಿ ಮರುಗಿ ಕೃಷ್ಣಶರ್ಮನನ್ನು ಕಂಡು "ಅಯ್ಯಾ! ಕೃಷ್ಣಶರ್ಮಾ! ಆ ಭೂತವು ಸಾಮಾನ್ಯವಾದುದಲ್ಲವೆಂದು ತೋರುವುದು. ಮಂತ್ರ ತಂತ್ರಗಳಿಗೆ ಕಟ್ಟುಬಿದ್ದು ಅದು ಇಂದಿರಾದೇವಿಯನ್ನು ಬಿಡುವುದಾಗಿಲ್ಲ. ನಿಮ್ಮ ಮಗನಿಗೆ ಬಾಧೆಯು ತಪ್ಪುವಹಾಗೂ ಇಲ್ಲ. ಅವರಿಬ್ಬರನ್ನೂ ತೀರ್ಥಯಾತ್ರೆಗೆ ಕಳುಹಿಸಿಕೊಡು. ಅದರಿಂದ ಅವರ ಕರ್ಮವು ಪರಿಪಕ್ವವಾಗಿ ಆ ಭೂತಪೀಡೆಯು ತಪ್ಪಿ ಒಂದುವೇಳೆ ಸುಖವುಂಟಾಗುವುದೋ ಏನೋ ನೋಡೋಣ" ಎಂದು ನುಡಿದು ತನ್ನ ದಾರಿಯನ್ನು ಹಿಡಿದು ಹೊರಟುಹೋದನು.

ಕೃಷ್ಣಶರ್ಮನಿಗೆ ಸನ್ಯಾಸಿಯ ಮಾತುಗಳು ಯುಕ್ತಿಯುಕ್ತವಾಗಿ ತೋರಿದುದರಿಂದ ಸಾಕಾಗುವಷ್ಟು ದ್ರವ್ಯವನ್ನು ಕೊಟ್ಟು ಮಗನನ್ನೂ ಸೊಸೆಯನ್ನೂ ಕೆಲ ಪರಿಚಾರಕರನ್ನೂ ತೀರ್ಥಯಾತ್ರೆಗೆ ಪ್ರಯಾಣಮಾಡಿಸಿ ಕಳುಹಿಸಿಕೊಟ್ಟನು ಅಚ್ಯುತಶರ್ಮನು ಅವರೆಲ್ಲರೊಡನೆ ಹೊರಟು ಅಲ್ಲಲ್ಲಿ ದೊರೆಯುವ ಪುಣ್ಯತೀರ್ಥಗಳಲ್ಲಿ ಸ್ನಾನಮಾಡುತ್ತ ಪ್ರಯಾಣಮಾಡಿದನು. ಎಲ್ಲಿಹೋದರೂ ಆ ಪುರುಷಪಿಶಾಚದ ಕಾಟವು ಮಾತ್ರ ತಪ್ಪಲಿಲ್ಲ. ರಾತ್ರಿಯಾಗುತ್ತಲೇ ಆ ದಂಪತಿಗಳಿದ್ದಲ್ಲಿಗೆ ಸಿದ್ಧನಾಗಿ ಬಂದು ಯಥಾಪ್ರಕಾರವಾಗಿ ವೇದಿಸುತ್ತಿದ್ದನು. ಇತರರ ಕಣ್ಣುಗಳಿಗೆ ಮಾತ್ರ ಗೋಚರಿಸದಿದ್ದುದರಿಂದ ಅವರ ಹೇಳಿಕೆಯು ಎಲ್ಲರಿಗೂ ಅತಿ ಆಶ್ಚರ್ಯವನ್ನುಂಟುಮಾಡುತ್ತಿದ್ದಿತು.

ಅಚ್ಯುತಶರ್ಮನೂ ಇಂದಿರಾದೇವಿಯೂ ಸುಪ್ರಸಿದ್ಧಗಳಾದ ತೀರ್ಥಗಳಲ್ಲಿ ಮಿಯುತ್ತ ಹೊರಟುಬಂದು ಒಂದು ದಿವಸ ಸಾಯಂಕಾಲದಲ್ಲಿ ಒಂದು ಬ್ರಾಹ್ಮಣಾಗ್ರಹಾರವನ್ನು ಸೇರಿ, ಅಲ್ಲಿ ಒಬ್ಬಬ್ರಾಹ್ಮಣನ ಮಂದಿರವು ನಿರ್ಮಲವಾಗಿದ್ದುದನ್ನು ಕಂಡು ಆ ಮನೆಯ ಒಕ್ಕತಿಯನ್ನು ಕೇಳಿಕೊಂಡು ಅಲ್ಲಿಳಿದರು. ಆ ಮನೆಯಲ್ಲಿ ಹೆಂಡತಿ ಮತ್ತು ಗಂಡ ಇವರಿಬ್ಬರೆ ಇದ್ದುದರಿಂದ ಆಗಂತುಕರಿಗೆ ಯಾವ ಬಗೆಯ ತೊಂದರೆಯೂ ಇರಲಿಲ್ಲ. ಅಚ್ಯುತಶರ್ಮನು ತನ್ನ ಪರಿವಾರದೊಡನೆ ಅಲ್ಲಿಗೆ ಬಂದ ಹೊತ್ತಿನಲ್ಲಿ ಆ ಮನೆಯ ಯಜಮಾನನು ಕಾರ್ಯಾಂತರ ವ್ಯಾಜದಿಂದ ಯಾವುದೋ ಒಂದು ಗ್ರಾಮಕ್ಕೆ ಹೋಗಿದ್ದನು ಆತನ ಹೆಸರು ಗೋಪಾಲಭಟ್ಟನು. ಆತನು ಮಹಾ ಮಂತ್ರವೇದಿ. ಕಾಳಿಕಾದೇವಿಯ ಉಪಾಸಕನು, ಮಹಾ ನಿಷ್ಠಾಪರನು. ಆತನ ಹೆಸರನ್ನು ಕೇಳಿದಮಾತ್ರದಿಂದ ಎಲ್ಲರೂ ಭಯಪಡುತ್ತಿದ್ದರು. ಹೀಗೆ ಮಹಾಮಹಿಮ ಸಂಪನ್ನನಾಗಿ ಆತನಿರುತ್ತಿದ್ದರೂ ಆತನಿಗೆ ಸ್ವಲ್ಪವಾದರೂ ಅಹಂಕಾರವಿಲ್ಲ. ಕೋಪವು ಆತನಿಗೆ ಬರುತ್ತಲೇ ಇರಲಿಲ್ಲ. ಪರಮಶಾಂತನು ಪರೋಪಕಾರ ಧುರೀಣನು, ಭಾರ್ಯಾಭರ್ತೃಗಳಿಬ್ಬರೇ ಇದ್ದುದರಿಂದ ಅನ್ಯರನ್ನು ಯಾಚಿಸದೆ ಕೇವಲ ಕಷ್ಟವನ್ನೂ ಪಡದೆ ಹಿರಿಯರು ಸಂಪಾದಿಸಿಟ್ಟಿದ್ದ ದ್ರವ್ಯದಿಂದಲೇ ಅನ್ನವಸ್ತ್ರಗಳಿಗೆ ಯಾವ ಕೊರತೆಯೂ ಇಲ್ಲದಂತೆ ನಿಶ್ಚಿಂತನಾಗಿ ಜೀವನವನ್ನು ನಡೆಯಿಸಿಕೊಳ್ಳುತ್ತಿದ್ದನು. ಯಾರ ಸಹವಾಸಕ್ಕೂ ಆತನು ಹೋಗುತ್ತಿರಲಿಲ್ಲ. ಹೊಸದಾಗಿ ಬಂದವನಾದುದರಿಂದ ಅಚ್ಯುತಶರ್ಮನಿಗೆ ಆತನ ಮಂತ್ರಶಕ್ತಿಯು ಗೊತ್ತಿರಲಿಲ್ಲ. ಪ್ರಸಕ್ತಿಯಿಲ್ಲದುದರಿಂದ ಯಾರೂ ಹೇಳಲೂ ಇಲ್ಲ. ಅನಸೂಯೆಯೆಂಬ ಆತನ ಪತ್ನಿಯು ಬಹಳ ಒಳ್ಳೆಯವಳು. ಗಂಡನಂತೆಯೇ ಪರೋಪಕಾರ ಬುದ್ಧಿಯೂ ಶಾಂತಿಯೂ ಉಳ್ಳ ಪರಮಸಾಧ್ವಿ. ಆಕೆ ತನ್ನ ಮನೆಗೆ ಬಂದ ಆಗಂತುಕರನ್ನು ಬಹಳವಾಗಿ ಆದರಿಸಿ ಸ್ಥಲವಸತಿಯನ್ನು ಕಲ್ಪಿಸಿಕೊಟ್ಟು ಬಹುದಿನಗಳಿಂದಲೂ ಪರಿಚಯವು

ಳ್ಳವಳಂತೆ ಪರಮಸ್ನೇಹಯುಕ್ತಳಾಗಿ ಸಂಭಾಷಿಸುತ್ತಿದ್ದಳು. ಅಚ್ಯುತಶರ್ಮನೊಡನೆ ಬಂದಿದ್ದ ಅಡುಗೆಯ ಪರಿಚಾರಕರು ತಕ್ಕ ಪರಿಕರಗಳನ್ನು ಹವಣಿಸಿಕೊಂಡು ಒಂದುಕಡೆ ಪಾಕಪ್ರಯತ್ನವನ್ನು ಮಾಡಿದರು. ಅಷ್ಟರಲ್ಲಿ ಸೂರ್ಯನು, ಅಚ್ಯುತಶರ್ಮನಿಗುಂಟಾಗುವ ಪಚ್ಚೆಗಳನ್ನು ನೋಡಲಾರದೆಯೋ ಎಂಬಂತೆ ಪಶ್ಚಿಮ ಕಡಲನ್ನು ಸೇರಿದನು. ಅಷ್ಟರವರೆಗೆ ಮನೆಯ ಗೃಹಿಣಿಯೊಡನೆ ಬಗೆಬಗೆಯಾಗಿ ಸಂಭಾಷಿಸುತ್ತಿದ್ದ ಅಚ್ಯುತಶರ್ಮನು ತನಗೆ ಆದಿನದ ರಾತ್ರಿಯಲ್ಲಿ ಸಂಭವಿಸುವ ಬಾಧೆಯನ್ನು ನೆನಸಿ ರೋಧಿಸಲಾರಂಭಿಸಿದನು. ಆತನ ಹೆಂಡತಿಯೂ ಆತನ ಬಳಿಯಲ್ಲಿ ಕುಳಿತು ತನಗೆ ಪ್ರಾಪ್ತವಾಗಿರುವ ದುಸ್ಥಿತಿಗಾಗಿ ದುಃಖಪಡುತ್ತಿದ್ದಳು. ಇದ್ದಕಿದ್ದಹಾಗೆಯೇ ನಿಷ್ಕಾರಣವಾಗಿ ಅಳುವುದಕ್ಕೆ ಪ್ರಾರಂಭಿಸಿದ ಆ ದಂಪತಿಗಳ ಚರ್ಯೆಯನ್ನು ನೋಡಿ ಆಶ್ಚರ್ಯಪಟ್ಟು ಅವರ ಸಮೀಪಕ್ಕೆ ಬಂದು ಅಳುವುದರ ಕಾರಣವನ್ನು ವಿಚಾರಿಸಿದಳು. ಇಂದಿರಾದೇವಿಯು ಆಕೆಯೊಡನೆ ಮೊದಲಿಂದಲೂ ನಡೆದ ವೃತ್ತಾಂತವೆಲ್ಲವನ್ನೂ ಸಮಗ್ರವಾಗಿ ತಿಳಿಯಿಸಿ ತೀರ್ಥಯಾತ್ರೆಗಳಿಂದ ಪಿಶಾಚಬಾಧೆಯನ್ನು ಹೋಗಲಾಡಿಸುವುದಕ್ಕೋಸುಗವಾಗಿ ಹೀಗೆ ತಾವು ಬಂದಿರುವುದಾಗಿಯೂ, ಅದರಿಂದ ಲಾಭವಾಗುವುದಕ್ಕೆ ಬದಲಾಗಿ ತನ್ನ ಪತಿಗೆ ಬಾಧೆಯು ಎರಡರಷ್ಟು ಹೆಚ್ಚಿರುವುದಾಗಿಯೂ ಹೇಳಿ ಬಹಳವಾಗಿ ಪೇಚಾಡಿಕೊಂಡಳು.

ಆ ವೃತ್ತಾಂತವನ್ನು ಕೇಳಿದ ಅನಸೂಯೆಯು ಅಧಿಕವಾಗಿ ಮರುಗಿ, ತನ್ನ ಪತಿಯ ಪ್ರಭಾವವನ್ನು ಆಕೆಯೊಡನೆ ಹೇಳಿ, “ಅಮ್ಮಾ! ನೀವು ಎಷ್ಟುಮಾತ್ರವೂ ಭಯಪಡಬೇಡಿ. ನನ್ನ ಗಂಡನು ತನ್ನ ಮಂತ್ರಮಹಿಮೆಯಿಂದ ಆ ಪಿಶಾಚವನ್ನುಚ್ಚಾಟನೆ ಮಾಡುವನು. ಆತನಿಗಿದೇನೂ ಅಸಾಧ್ಯವಾದ ಕಾರ್ಯವಲ್ಲ. ನಿಮ್ಮ ಸತ್ಕರ್ಮವು ಫಲಿಸುವ ಕಾಲವೊದಗಿತು. ದುಷ್ಕರ್ಮವು ದೂರವಾಗುವ ಹೊತ್ತು ಸಮೀಪಿಸಿತು. ಆದುದರಿಂದಲೇ ನೀವು ನಮ್ಮ ಮನೆಗೆ ಬಂದಿರಿ. ಸಮಸ್ತ ದುಃಖನಿವಾರಣೆಯನ್ನು ಮಾಡಿಕೊಂಡು ಸುಖವಾಗಿ ನಿಮ್ಮಮನೆಗೆ ಹೋಗುವಿರಂತೆ. ಯಾವ ಚಿಂತೆಯನ್ನೂ ಮಾಡದೆ ಧೈರ್ಯವಾಗಿರಿ” ಎಂದಾದಂಪತಿಗಳಿಗೆ ಧೈರ್ಯವನ್ನು ಹೇಳಿ ನಂಬಿಸಿದಳು. ಇಂದಿರಾದೇವಿಯು ನಗುತ್ತ “ತಾಯಿ! ನಿಮ್ಮ ಗಂಡನು ಮಹಾಮಂತ್ರಜ್ಞನೇ ಇರಬಹುದು, ಆತನು ಅನೇಕ ಪಿಶಾಚಿಗಳನ್ನು ಬಿಡಿಸಿಯೂ ಇರಬಹುದು. ಆದರೆ ನಮ್ಮನ್ನು ಪೀಡಿಸುತ್ತಿರುವ ಪಿಶಾಚವು ಸಾಮಾನ್ಯವಾದದಲ್ಲ. ಯಾರ ಮಂತ್ರ ತಂತ್ರಗಳೂ ಅದರ ಮುಂದೆ ನಿಲ್ಲುವುದಿಲ್ಲ. ಮಂತ್ರಚಿಕಿತ್ಸೆ ಮಾಡಿಸಿದ ದಿನವಂತೂ ನಮಗೆ ಅದು ಬಾಧೆಯನ್ನು ಹೆಚ್ಚಾಗಿಯೇ ಇಡುವುದು” ಎಂದು ಹೇಳಲು ಅನಸೂಯಾದೇವಿಯು ಪಕ್ಕನೆ ನಕ್ಕು

"ಸಾಧ್ವೀಮಣಿಯೇ! ನಮ್ಮವರ ಮಂತ್ರವೈದ್ಯವು ನೀವು ಮಾಡಿಸಿದ ವೈದ್ಯಗಳಂಥದಲ್ಲ, ನಿರ್ಭಯರಾಗಿರಿ" ಎಂದು ಸಂಶಯವನ್ನು ನಿವಾರಿಸಿ ಸಂತೈಸಿದಳು.

ಗ್ರಾಮಾಂತರಕ್ಕೆ ಹೋಗಿದ್ದ ಗೋಪಾಲಭಟ್ಟನಿಗೆ ಹೋದ ಕಾರ್ಯಗಳೆಲ್ಲವೂ ಮುಗಿಯಲು ಆತನು ಸ್ವಗ್ರಾಮಕ್ಕೆ ಹಿಂದಿರುಗಿ ಬರಬೇಕಾಯಿತು. ಬರುತ್ತ ಬರುತ್ತ ಕಾಳಿಕಾದೇವಿಯ ಪ್ರಸಾದ ಬಲದಿಂದ ತನ್ನ ಗ್ರಾಮದಲ್ಲಿ ಯಾವುದೋ ಒಂದು ಭೂತವು ಪ್ರವೇಶಿಸಿರುವುದೆಂದು ಮನಸ್ಸಿಗೆ ತೋರಿತು. ಆಗ ಆತನು ತನ್ನ ಮನಸ್ಸಿನಲ್ಲಿ "ಓಹೋ! ಆಶ್ಚರ್ಯವಾಗಿರುವುದಲ್ಲ, ನಮ್ಮ ಗ್ರಾಮದಲ್ಲಿ ಪಿಶಾಚಪ್ರವೇಶವು ಹೇಗುಂಟಾಯಿತು? ಏತಕ್ಕಾಯಿತು. ಆಗಲಿ! ನನ್ನ ಮಂತ್ರಬಲದಿಂದ ಅದನ್ನು ನಾಶಮಾಡುವೆನು" ಎಂದು ಬಗೆಯುತ್ತ ತನ್ನ ಮನೆಯ ಬಾಗಿಲಿಗೆ ಬರುತ್ತಲೇ ತಾನು ಬಗೆದಂತೆ ಪಿಶಾಚವು ತನ್ನಮನೆಯನ್ನೇ ಸೇರಿರುವುದೆಂದು ಮನಸ್ಸಿಗೆ ಹೊಳೆಯಿತು. ಆಗ ಗೋಪಾಲಭಟ್ಟನಿಗಾದ ಆಶ್ಚರ್ಯವಷ್ಟಿಷ್ಟಲ್ಲ ಆತನು ಮತ್ತೆ ತನ್ನಲ್ಲಿ "ಆಶ್ಚರ್ಯ! ಆಶ್ಚರ್ಯ! ಭಯಂಕರಗಳಾದ ಪಿಶಾಚಾದಿಗಳನ್ನು ಅಟ್ಟಸುಟ್ಟು ಬೂದಿಮಾಡುವುದರಲ್ಲಿ ಖ್ಯಾತಿಯನ್ನು ವಹಿಸಿರುವ ನನ್ನ ಮನೆಗೆ ಪಿಶಾಚಪ್ರವೇಶವೆ? ಆಹ! ಅದಕ್ಕೆ ಹೇಗೆ ಅಷ್ಟು ಧೈರ್ಯವು ಬಂತು? ನನ್ನ ವಿಚಾರವನ್ನು ಅದು ಅರಿಯದೆ ಇರಬಹುದು ಈ ದಿನ ತಿಳಿಸುವೆನು" ಎಂದು ನುಡಿಯುತ್ತ ಮನೆಯೊಳಕ್ಕೆ ಪ್ರವೇಶಿಸಿ ಬಂದು ನೆಲೆಗೊಂಡಿರುವ ಹೊಸಬರನ್ನು ಕಂಡು "ಸರಿ! ಸರಿ! ತಿಳಿಯಿತು ಇವರಾರೋ ದೇಶಾಂತರದಿಂದ ಬಂದಿಲ್ಲಿ ಇಳಿದಿರುವರು ಆ ಹೀನಪಿಶಾಚವು ಇವರಹಿಂದೆ ಬಂದಿರುವುದೆಂದು ತೋರುವುದು" ಎಂದಾಲೋಚಿಸಿ ಹೆಂಡತಿಯನ್ನು ಕರೆದು ಆಕೆಯಿಂದ ಅವರ ವೃತ್ತಾಂತವನ್ನು ತಿಳಿದುಕೊಂಡನು. ಬಳಿಕ ಆ ಗೃಹಿಣಿಯು ಪತಿಯಮುಂದೆ ಕೈಮುಗಿದುನಿಂದು "ಮಹಾತ್ಮಾ! ಎಡೆಬಿಡದೆ ರೋದಿಸುತ್ತಿರುವ ಈ ದಂಪತಿಗಳಿಗೆ ಪ್ರಾಪ್ತವಾಗಿರುವ ಭೂತಬಾಧೆಯು ನಿಮ್ಮಿಂದಲ್ಲದೆ ಮತ್ತಾರಿಂದಲೂ ನಿವೃತ್ತಿಯಾಗಲಾರದೆಂಬುದನ್ನು ನಾನು ಬಲ್ಲೆನು ಅನುಗ್ರಹಿಸಿ ಅವರ ಕಷ್ಟಗಳನ್ನು ತೊಲಗಿಸಿ ಕಾಪಾಡಿ ಅವರ ಊರಿಗೆ ಸುಖದಿಂದ ಹೋಗುವಂತೆ ಅನುಗ್ರಹಿಸಲು ಪ್ರಾರ್ಥಿಸುವೆನು ಈ ಕೆಲಸದಿಂದ ನಮಗೆ ಪುಣ್ಯಪ್ರಾಪ್ತಿಯಾಗುವುದು" ಎಂದು ಬಹುವಾಗಿ ಪ್ರಾರ್ಥಿಸಿದಳು ಅದಕ್ಕೆ ಆ ಮಾಂತ್ರಿಕನು ಸಮ್ಮತಿಸಿದನು.

ಈ ದಂಪತಿಗಳು ಆ ದಂಪತಿಗಳಿಗೆ ಎಷ್ಟು ಧೈರ್ಯವನ್ನು ಹೇಳುತ್ತಿದ್ದರೂ ಅವರು ಹೆದರಿಕೆಯನ್ನು ಬಿಡದೆ "ಅಯ್ಯೋ! ಇನ್ನೇನುಗತಿ? ಆ ಪುರುಷಭೂತವು ಬಂದುಬಿಡುವುದಲ್ಲ! ನಮ್ಮನ್ನು ಬಗೆಬಗೆಯಾಗಿ ಹಿಂಸಿಸುವುದಲ್ಲ!" ಎಂದು ಹೇಳಲಾಗದಷ್ಟು ಕಳವಳ ಪಡುತ್ತಿದ್ದರು. ಗೋಪಾಲಭ

ಟ್ಟನು ಸ್ನಾನವನ್ನುಮಾಡಿ ಹಿತ್ತಲಲ್ಲಿರುವ ತುಲಸಿಯ ಕಟ್ಟೆಯಮೇಲೆ ಕುಳಿತು ಜಪವನ್ನು ಆರಂಭಿಸುವುದಕ್ಕೆ ಮುಂಚೆ ಅಚ್ಯುತಶರ್ಮನನ್ನು ಕರೆದು ತಾನು ಬರೆದಿದ್ದ ತಾಳೆಯ ಓಲೆಯ ಚೀಟಿಯನ್ನು ಆತನ ಕೈಗೆ ಕೊಟ್ಟು "ಎಲೈ ವಿಪ್ರೋತ್ತಮ ! ಇದನ್ನು ತೆಗೆದುಕೊಂಡು ಬಾಗಿಲಬಳಿಗೆಹೋಗು ಅಲ್ಲಿ ಇಬ್ಬರು ಭಟರು ಕುಳಿತಿರುವರು ಅವರು ನಿನ್ನನ್ನು ಕಾಣುತ್ತಲೇ ಹೊರಟುಹೋಗುವುದಕ್ಕೆ ಯತ್ನಿಸುವರು ನೀನೂ ಅವರಹಿಂದೆ ಹೊರಟು ಹೋಗು ಅವರೊಡನೆ ನೀನು ಒಂದು ಮಾತನ್ನಾದರೂ ಆಡಕೂಡದು ಮಾತಾಡಿದಲ್ಲಿ ನಿನಗೆ ಕೇಡು ಸಂಭವಿಸುವುದು ನೀನು ಅವರನ್ನು ಹಿಂಬಾಲಿಸಿ ಹೋಗುವಾಗ ಇನ್ನೂ ಅನೇಕ ವೀರಭಟರು ಗೋಚರಿಸುವರು. ಅವರನ್ನು ಕಂಡು ನೀನು ಸ್ವಲ್ಪವೂ ಭಯಪಡಬೇಡ ಮೊದಲು ನೀನು ಯಾರಹಿಂದೆ ಹೋದೆಯೋ ಅವರನ್ನುಮಾತ್ರ ಬಿಡಬೇಡ ಹೀಗೆ ಹೋಗುವಾಗ ನಿನ್ನನ್ನು ಕರೆದುಕೊಂಡು ಹೋಗುತ್ತಿದ್ದ ಭಟರಿಬ್ಬರು ನಿನ್ನನ್ನು ಕರೆದು ನಿನಗೆ ಯಾವ ವ್ಯಕ್ತಿಯನ್ನು ತೋರಿಸುವರೋ ಆ ವ್ಯಕ್ತಿಗೆ ನಾನು ಬರೆದು ಈಗ ನಿನ್ನಕೈಗೆ ಕೊಟ್ಟಿರುವ ಚೀಟಿಯನ್ನು ಕೊಟ್ಟುಬಿಡು ಬಳಿಕ ಅಲ್ಲಿನಡೆವ ವಿಷಯಗಳು ನಿನಗೆ ತಿಳಿವುವು ಮೇಲೆ ನಿನ್ನನ್ನು ಕರೆದುಕೊಂಡುಹೋದ ಇಬ್ಬರು ಭಟರು ನಿನ್ನನ್ನು ಕರೆದುಕೊಂಡು ಬಂದು ಇಲ್ಲಿ ಬಿಡುವರು ನಿನಗೀಗ ಹೇಳುವ ಮುಖ್ಯ ವಿಷಯವೇನೆಂದರೆ ನೀನಿಲ್ಲಿಂದ ಹೊರಟುದು ಮೊದಲುಗೊಂಡು ಇಲ್ಲಿಗೆ ಬಂದು ಸೇರುವವರೆಗೂ ಮೌನಮುದ್ರೆಯನ್ನು ವಹಿಸಿರಬೇಕು ಈಪ್ರಕಾರವಾಗಿ ನೀನು ಮಾಡಿದೆಯಾದರೆ ನಿನಗೆ ಕ್ಷೇಮವಾಗುವುದು ಇನ್ನು ಇಲ್ಲಿ ನಿಲ್ಲದೆ ಹೊರಡು" ಎಂದಾಜ್ಞಾಪಿಸಿದನು.

ಅಚ್ಯುತಶರ್ಮನು ಆ ಚೀಟಿಯನ್ನು ತೆಗೆದುಕೊಂಡು ಬಾಗಿಲಬಳಿಗೆ ಬಂದನು ಮತ್ತಾರಿಗೂ ಕಾಣಿಸದೆ ಈತನಿಗೆಮಾತ್ರ ಕಾಣಿಸುವ ಇಬ್ಬರು ಭಟರು ಅಲ್ಲಿ ಸಿದ್ಧರಾಗಿದ್ದರು ವಿಪ್ರಯುವಕರನ್ನು ನೋಡುತ್ತಲೇ ಅವರು ಹೊರಡಲಾರಂಭಿಸಿದರು. ಆತನೂ ಗೋಪಾಲಭಟ್ಟಾರಕನು ಹೇಳಿದ ಮಾತುಗಳನ್ನು ಜ್ಞಾಪಕದಲ್ಲಿಟ್ಟುಕೊಂಡು ಮೌನವನ್ನು ಧರಿಸಿಯೇ ಅವರನ್ನು ಹಿಂಬಾಲಿಸಿದನು. ಅವರಿಬ್ಬರೂ ಎಷ್ಟು ದೂರದವರೆಗೆ ಈತನನ್ನು ಕರೆದುಕೊಂಡುಹೋದರೊ ತಿಳಿಯಲೇ ಇಲ್ಲ. ಆ ಮನುಷ್ಯರು ಒಳ್ಳೆಯ ದಾರಿಯಲ್ಲಿ ಹೊರಟು ಮುಂದೆ ನಡೆಯುತ್ತಿರಲು ಈತನು ಅವರನ್ನು ಅನುಸರಿಸಿ ಹೋಗುತ್ತಿರುವುದೇ ಅವನ ಮುಖ್ಯ ಧ್ಯೇಯವಾಗಿದ್ದಿತು.

ಹೀಗೆ ಸ್ವಲ್ಪ ದೂರದವರೆಗೆ ಹೋದಬಳಿಕ ದೇವಮಣಿ, ಕಂಠಾಭರಣಾದಿ ಒಳ್ಳೆಯ ಲಕ್ಷಣಗಳುಳ್ಳ ಉನ್ನತಾಶ್ವವನ್ನು ಹತ್ತಿ ಆಯುಧಗಳನ್ನು ಧರಿಸಿ ಕಡು

ಗಂಭೀರವಾದ ವರ್ಚಸ್ಸುಳ್ಳ ವೀರನೊಬ್ಬನು ಇದಿರಿಗೆ ಬಂದನು ಮುಂದೆನಡೆವ ಭಟರನ್ನನುಸರಿಸಿ ಅಚ್ಯುತಶರ್ಮನು ಒಂದು ಪಕ್ಕಕ್ಕೆ ತೊಲಗಿ ನಡೆಯುತ್ತಿದ್ದನು ಮತ್ತೆ ಸ್ವಲ್ಪದೂರ ಹೋಗಲು ಮೊದಲು ಕಾಣಿಸಿದ ವೀರನಂತೆಯೇ ಇರುವ ಮತ್ತೆ ಇಬ್ಬರು ಯೋಧರಿದಿರಾದರು ಅವರೂ ಅಶ್ವಾರೋಹಕರೇ ಆಗಿದ್ದರು. ಇದೇಕ್ರಮವಾಗಿ ಏಕೋತ್ತರವೃದ್ಧಿಯಾಗಿ ಸಾವಿರಾರುಮಂದಿ ಬರುತ್ತಿರಲು ನೋಡಿ ಬ್ರಾಹ್ಮಣಪುತ್ರನು ಆಶ್ಚರ್ಯಪಟ್ಟು ಆ ವೀರಸಮೂಹವು ಎಲ್ಲಿದ್ದುದೋ ಎಲ್ಲಿಗೆ ಹೋಗುತ್ತಿರುವುದೋ ತಿಳಿಯಲಾರದೆ ತಾನು ಭೂಲೋಕದಲ್ಲಿರುವನೋ ಮತ್ತೊಂದು ಲೋಕದಲ್ಲಿರುವನೋ ಎಂಬುದನ್ನು ಅರಿಯಲು ಶಕ್ತಿ ಇಲ್ಲದೆ ಸ್ವಾಧೀನವಿಲ್ಲದ ಮನಸ್ಸಿನಿಂದ ತನ್ನಷ್ಟಕ್ಕೆತಾನು ಹೋಗುತ್ತಿದ್ದನು. ಏನುಕಾರಣವೋ ಇಷ್ಟಾದರೂ ಆತನಿಗೆ ಸ್ವಲ್ಪವೂ ಭಯವುಂಟಾಗಲಿಲ್ಲ " ಎನ್ನೊಸ್ತೂ ಕನಸೋ ಕಲನೆಳವೋ " ಎಂದು ಭಾವಿಸಿದನು.

ಆತನನ್ನು ಕರೆದುಕೊಂಡುಬಂದ ಭಟರುಕೂಡ ಇದಿರಾಗಿ ಬರುತ್ತಿದ್ದ ಭಟರಿಗೆ ದಾರಿಬಿಟ್ಟು ಒಂದು ಪಕ್ಕಕ್ಕೆಸರಿದು ಹೋಗುತ್ತಿದ್ದರು ಗುಂಪುಗುಂಪಾಗಿ ಬರುತ್ತಿದ್ದ ಆ ವೀರಭಟರಲ್ಲಿ ಒಬ್ಬರೊಡನೆ ಮತ್ತೊಬ್ಬರು ಮಾತನಾಡದೆ ನಿಶ್ಶಬ್ದವಾಗಿ ಹೋಗುತ್ತಿದ್ದುದನ್ನು ಕಂಡು ಆ ವಿಪ್ರಕುಮಾರನು ಬೆರಗಾದನು ಹಾಗೆಯೇ ಮತ್ತಷ್ಟುದೂರ ನಡೆದಬಳಿಕ ಮೊದಲಿನಂತೆಯೇ ಏಕೋತ್ತರವೃದ್ಧಿಯಾಗಿ ಅಂದರೆ ೧-೨-೩-೪-೫ ಈಪ್ರಕಾರವಾಗಿ ಸಾವಿರಗಳವರೆಗೆ ಅತ್ಯುತ್ತಮಗಳಾದ ವಸ್ತ್ರಭೂಷಣಾದಿಗಳಿಂದ ಅಲಂಕೃತರಾದ ಯುವತೀಮಣಿಗಳು ಬರುತ್ತಿದ್ದ [illegible]ನೆ ಅವರನ್ನು ದಾಟಿಹೋದನು ಆಬಳಿಕ ಘನಪುಷ್ಪವಿಕಾರಗಳಾದ ದಿವ್ಯಾಭರಣಗಳನ್ನೂ ದಿವ್ಯಾಂಬರಗಳನ್ನೂ ಧರಿಸಿ ಮಘಮಘಿಸುವ ಚಂದನ ಪುಷ್ಪಮಾಲಿಕೆಗಳನ್ನಲಂಕರಿಸಿಕೊಂಡು, ಜಗನ್ಮೋಹಕವಾದ ಅಂಗ ಸೌಂದರ್ಯದಿಂದ ಕಣ್ಮನಗಳನ್ನು ಸೆಳೆಯುತ್ತಿರುವ ಮತ್ತು ಹದಿನಾರುವರುಷದ ವಯಸ್ಸಿನವಳಂತೆ ತೋರುವ ಒಬ್ಬ ರಮಣೀಮಣಿಯು ಜಾಜ್ವಲ್ಯಮಾನಳಾಗಿ ಪ್ರಕಾಶಿಸುತ್ತ ರೂಪರೇಖಾವಿಲಾಸಂಗಳಿಂದ ಕಂಗೊಳಿಸುವ ಯುವತಿಗಳು ಹೊರತ್ತಿರುವ ಒಂದು ಪಲ್ಲಕ್ಕಿಯಲ್ಲಿ ಕುಳಿತು ಬರುತ್ತಿದ್ದಳು ಇದುವರೆಗೂ ಲೇಶವಾದರೂ ಭಯಪಡದೆ ಬರುತ್ತಿದ್ದ ನಮ್ಮ ಶರ್ಮನು ಆಗ ಆಕೆಯ ತೇಜಸ್ಸನ್ನು ಕಂಡು ಕಣ್ಣುಗಳು ಕೋರೈಸುತ್ತಿರಲು ಗಡಗಡನೆ ನಡುಗಲಾರಂಭಿಸಿದನು. ಈತನನ್ನು ಕರೆದುಕೊಂಡುಬಂದ ವೀರರಿಬ್ಬರೂ ಆಕೆಯನ್ನು ಕಂಡು ಸಾಷ್ಟಾಂಗವಂದನೆಯನ್ನು ಮಾಡಿ ಬ್ರಾಹ್ಮಣಕುಮಾರನನ್ನು ನೋಡಿ ಆತನು ತಂದಿರುವ ಚೀಟಿಯನ್ನಾಕೆಗೆ ಕೊಡುವಂತೆ ಸನ್ನೆಮಾಡಿದರು ಶರ್ಮನು ತಾನು ತಂದಿದ್ದ ಓಲೆಯನ್ನಾ ಪಲ್ಲಕ್ಕಿಯಲ್ಲಿ ಹಾಕಿದನು.

ದಿವ್ಯಸುಂದರ ಸ್ವರೂಪಿಣಿಯಾದ ಆಕೆಯು ಆ ಚೀಟಿಯನ್ನು ಓದಿನೋಡಿಕೊಂಡು ಅದೊಂದು ಬಗೆಯ ಸನ್ನೆಯನ್ನು ಮಾಡಿದಳು. ಆಗಳೆ, ನಡೆಯುತ್ತಿದ್ದ ಸೈನ್ಯಗಳೆಲ್ಲವೂ ಎಲ್ಲಿದ್ದುವಲ್ಲಿ ಮುಂಬರಿವುದನ್ನು ಬಿಟ್ಟು ನಿಂತವು, ಅದಕ್ಕೆ ಮೊದಲು ನಿಶ್ಶಬ್ದದಿಂದಲ್ಲವೆ ಎಲ್ಲರೂ ಹೋಗುತ್ತಿದ್ದುದು? ಪಲ್ಲಕ್ಕಿಯಲ್ಲಿ ಕುಳಿತಿದ್ದ ಆ ಯುವತೀರತ್ನವು ಆಗ ಯಾವುದೋ ಒಂದು ಭಾಷೆಯಿಂದ ಯಾವುದನ್ನೋ ಹೇಳಿದಳು. ಆಭಾಷೆಯು ಆ ವಿಪ್ರಕುಮಾರನಿಗೆ ತಿಳಿಯಲಿಲ್ಲ. ಆಕೆ ಆವಿಧವಾಗಿ ಹೇಳುತ್ತಲೇ ಅವರಿಗೆದಿರಾಗಿ ಮೊಟ್ಟಮೊದಲು ಬಂದ ಕುದುರೆ ಸವಾರನು ಬಂದು ಅಲ್ಲಿ ನಿಂತುದನ್ನು ಅಚ್ಯುತಶರ್ಮನು ಕಂಡನು. ಅದು ಮೊದಲ್ಗೊಂಡು ಅವರ ಸಂಭಾಷಣೆಯು ಆತನಿಗೆ ತಿಳಿಯುತ್ತಿದ್ದಿತು.

ಅಚ್ಯುತಶರ್ಮನ ತನ್ನಲ್ಲಿ ಆದಿವ್ಯಸ್ವರೂಪಿಣಿಯು ಆಸೈನ್ಯಕ್ಕೆಲ್ಲ ಯಜಮಾನಳೆಂದೂ ಎಲ್ಲರೂ ಆಕೆಯ ಆಜ್ಞೆಗೆ ಬದ್ಧರಾಗಿ ವರ್ತಿಸುತ್ತಿರುವರೆಂದೂ ಆ ಮಹಾರಾಜ್ಞಿ ಯಾರೆಂಬುದು ಮಾತ್ರ ತಿಳಿಯದೆಂದೂ ಬಗೆಯುತ್ತಿದ್ದನು ಅಚ್ಯುತಶರ್ಮನು ಅವರ ಪ್ರಸಂಗವನ್ನು ಕೇಳುತ್ತ ನಿಂತಿದ್ದನು. ಆಕೆ, ಈ ಪ್ರಕಾರವಾಗಿ ಬಂದು ತನ್ನ ಮುಂದೆ ನಿಂತ ಆ ಪ್ರಥಮಭಟನನ್ನು ನೋಡಿ, ಯಾವುದೋ ಒಂದು ವಿಚಿತ್ರವಾದ ಮಾತನ್ನು ಹೇಳಿ "ಅವನು ಸೇನೆಯುಲ್ಲಿರುವನೇ?" ಎಂದು ಕೇಳಿದಳು ಆತನು ನಮಸ್ಕರಿಸಿ "ಜನನೀ! ಅವನು ಸೇನೆಯಲ್ಲಿಲ್ಲ. ಕೆಲವು ದಿನಗಳಿಂದ ಒಬ್ಬ ಬ್ರಾಹ್ಮಣ ಯುವತಿಯನ್ನು ಮೋಹಿಸಿ ಆ ಕಾಂತೆಯೊಡನೆ ಸುಖವನ್ನನುಭವಿಸುತ್ತ ಕ್ರಮವಾಗಿ ಒಂದಕ್ಕೆ ... ತ್ತಿದ್ದಾನೆ ಇಲ್ಲ. ನಾನು ನೂರು ನಾಲ್ಕುಸಲ ಆಕ್ಷೇಪಿಸಿದರೂ ನನ್ನ ಮಾತುಗಳನ್ನು ನಿರ್ಲಕ್ಷ್ಯವಾಗಿ ಬಗೆಯುತ್ತಿರುವನು." ಎಂದು ಹೇಳಿದನು. ಇಷ್ಟುಕಾಲದವರೆಗೆ ನೀನೀಮಾತನ್ನು ನನ್ನೊಡನೆ ಏಕೆ ಹೇಳಲಿಲ್ಲ" ಎಂದು ಕೇಳಿದಳು. "ತಾಯಿ! ಸಮಯವು ದೊರೆಯದಿದ್ದುದರಿಂದ ಹೇಳಲಿಲ್ಲ. ಅಪರಾಧವನ್ನು ಕ್ಷಮಿಸಬೇಕು" ಎಂದು ವಿನಯದಿಂದ ಆತನು ಹೇಳಿದನು. ಆಕೆಯು ತಲೆದೂಗಿ, ಸರಿ! ಆ ದುರ್ಮಾರ್ಗನನ್ನು ಹಿಡಿದುತಂದು ನನ್ನಮುಂದೆ ನಿಲ್ಲಿಸು, ಎಂದಾಜ್ಞಾಪಿಸಿದಳು. ಆ ಪುರುಷನು ಹಸಾದವೆಂದು ಓಡಿಹೋಗಿ ಉತ್ತರಕ್ಷಣದಲ್ಲಿಯೇ ಅಚ್ಯುತಶರ್ಮನನ್ನು ಬಾಧಿಸುತ್ತಿದ್ದ ಪುರುಷಪಿಶಾಚವನ್ನು ಹಿಂಗಟ್ಟುಮುರಿಕಟ್ಟಿ ಇಬ್ಬರು ಭಟರಿಂದ ಹಿಡಿಸಿಕೊಂಡು ಬಂದು ಆಕೆಯ ಮುಂದೆ ತಂದು ನಿಲ್ಲಿಸಿದನು.

ಪ್ರತಿದಿನವೂ ಅತಿಕ್ರೂರವಾಗಿ ಹೊಡೆದು ಬಾಧಿಸುತ್ತಿದ್ದ ಆ ಭೂತವನ್ನು ನೋಡುತ್ತಲೇ ಅಚ್ಯುತನು ಭಯದಿಂದ ಗಡಗಡನೆ ನಡುಗುತ್ತಿದ್ದನು. ಆಪಿಶಾಚಗಣಾಧಿಪತಿಯು ಅವನನ್ನು ಅತ್ಯುಗ್ರದೃಷ್ಟಿಯಿಂದ ಕಂಡು "ದುರಾತ್ಮಾ! ದುರಾಚಾರಾ! ನನ್ನ ಭಯವಿನಿಸಾದರೂ ಇಲ್ಲದೆ ಸ್ವೇಚ್ಛಾವಿಹಾರವನ್ನು ಮಾಡ

ಲಾರಂಭಿಸಿ, ಬ್ರಾಹ್ಮಣ ಯುವತಿಯನ್ನು ಮತ್ತು ಅವಳ ಗಂಡನನ್ನೂ ಬಾಧಿಸುತ್ತಿರುವೆಯಾ? ನಿನಗೆ ತಕ್ಕ ಶಿಕ್ಷೆಯನ್ನು ವಿಧಿಸುವೆನು, ಅನುಭವಿಸು" ಎಂದು ನುಡಿದು, ಅವನನ್ನು ಹಿಡಿದುತಂದ ಭಟರನ್ನು ನೋಡಿ, "ಎಲೈ ರಾವುತರೇ! ಪಾಪಶೀಲನಾದ ಈ ದುಷ್ಟನನ್ನು ತೆಗೆದುಕೊಂಡುಹೋಗಿ ಪ್ರತಿದಿನವೂ ಅಗ್ನಿಕುಂಡದಲ್ಲಿ ಒಂದು ಯಾಮದವರೆಗೆ ಹಾಕಿ ಸುಟ್ಟು ತೆಗೆಯುತ್ತ ಕಾರಾಗೃಹದಲ್ಲಿ ಬಂಧಿಸುತ್ತಿರಿ, ಎಂದು ಭಯಂಕರವಾದ ಅಪ್ಪಣೆಯನ್ನು ಕೊಟ್ಟಳು. ಭಟರು ಅವನನ್ನು ತೆಗೆದುಕೊಂಡು ಹೋದರು. ಅಚ್ಯುತಶರ್ಮನು ತನ್ನಲ್ಲಿ "ಅಬ್ಬಬ್ಬ! ದಿನದಿನದಲ್ಲಿಯೂ ಸುಡುವುದೇ! ಮೊದಲನೆಯ ದಿನದಲ್ಲಿ ಬೆಂಕಿಯಲ್ಲಿ ಹಾಕುತ್ತಲೇ ದಗ್ಧನಾಗಿಹೋಗದೆ ಅದೆಂತು ಜೀವಿಸಬಲ್ಲನು? ಇದೆಲ್ಲವೂ ಮಹಾಮಾಯೆಯಾಗಿರುವುದು. ಎಂದು ಭಾವಿಸುತ್ತಿರಲು ಹಿಂದೆ ಹೇಳಿದಂತೆ ಆಕೆಯು ಆ ಭೂತಗಳ ಗುಂಪಿನೊಡನೆ ಮತ್ತೆ ಹೊರಡಲಾರಂಭಿಸಿದಳು. ಒಂದೆರಡು ನಿಮಿಷಗಳಲ್ಲಿ ಅವರು ಹೇಗೆ ಹೋದರೋ! ಎಲ್ಲಿಗೆ ಹೋದರೋ! ಯಾರೂ ಅರಿಯರು. ಶರ್ಮನನ್ನು ಕರೆದುಕೊಂಡು ಬಂದ ಈರ್ವರು ಮಾತ್ರವೇ ಉಳಿದಿದ್ದರು.

ಹೀಗೆ ನಡೆಯತಕ್ಕುದೆಲ್ಲವೂ ನಡೆದಮೇಲೆ ಹಿಂಬಾಲಿಸಿ ಬರುವಂತೆ ಭಟರು ಶರ್ಮನಿಗೆ ಸನ್ನೆಮಾಡಲು ಆತನವರನ್ನು ಅನುಸರಿಸಿ ನಡೆದನು. ಅವರಾತನನ್ನು ಗೋಪಾಲಭಟ್ಟನ ಮನೆಯ ಬಳಿಯಲ್ಲಿ ಬಿಟ್ಟು ಅಂತರ್ಧಾನವಾದರು. ಆಗ ಆ ಶರ್ಮನ ಶರೀರದ ಪ್ರತಿಕೃತಿ ನೆಲಕ್ಕೆ ಬಿದ್ದುಹೋಯಿತು. ಈತನ ಬರುವಿಕೆಗಾಗಿ ಕಾದುಕೊಂಡಿದ್ದ ಭಟ್ಟನು ಬೇಗನೆ ಬಂದು ವಿಭೂತಿಯನ್ನು ಮಂತ್ರಿಸಿ ಆತನ ಮೇಲೆ ಚೆಲ್ಲಿ ತಾನು ಸಿದ್ಧಗೊಳಿಸಿದ್ದ ಯಂತ್ರವನ್ನಾತನಿಗೆ ಕಟ್ಟಿದನು. ಬಳಿಕ ಆತನಿಗೆ ಸ್ಮೃತಿ ಬಂದಿತು. ಒಡನೆಯೇ ಆತನನ್ನು ಕರೆದುಕೊಂಡು ಹೋಗಿ ಸ್ನಾನಮಾಡಿಸಿ, "ಅಯ್ಯಾ! ನಿನ್ನ ಪೀಡೆಯು ಕಳೆಯಿತು. ಭೋಜನವನ್ನು ಮಾಡಿ ನಿನ್ನ ಹೆಂಡತಿಯೊಡನೆ ಮಲಗಿ ನಿರ್ಭಯನಾಗಿ ಸುಖನಿದ್ರೆಯನ್ನು ಮಾಡು" ಎಂದಾ ಗೋಪಾಲಭಟ್ಟನು ಹೇಳಿದನು. ಅಚ್ಯುತಶರ್ಮನು ತಾನು ಹೊರಟುದುಮೊದಲು ಹಿಂದಿರುಗಿ ಬರುವವರೆಗೂ ಎಷ್ಟೋ ಕಾಲವಾದಂತೆ ಭಾವಿಸಿ ಭಟ್ಟರು ಹೇಳಿದಂತೆ ಭೋಜನವನ್ನು ಮಾಡಿ ಹೆಂಡತಿಯೊಡನೆ ಸ್ವಲ್ಪಹೊತ್ತು ಮಲಗಿದ್ದು ಆಕೆಯೊಡನೆ ತಾನು ನೋಡಿದ ಆಶ್ಚರ್ಯವೃತ್ತಾಂತವನ್ನು ಸಾಂಗವಾಗಿ ಹೇಳಿ "ಪ್ರಿಯೆ! ನಾವು ಬಂದು ಬಹಳ ದಿನಗಳಾದುವು. ಭಟ್ಟರ ಕೃಪೆಯಿಂದ ಕಷ್ಟವು ಪರಿಹಾರವಾಯಿತು. ಇದಂತಿರಲಿ, ನಾನಿಲ್ಲಿಂದ ಆ ಭಟರಬಿಂದೆ ಹೊರಟು ಬಹಳ ಹೊತ್ತಾಯಿತೆಂದು ತೋರುವುದು. ನಾನು ಹೋಗಿ ಬರುವುದಕ್ಕೆ ಎಷ್ಟುಹೊತ್ತು ಹಿಡಿದಿರಬಹುದು?" ಎಂದು ಕೇಳಲು

ಇಂದಿರಾದೇವಿಯು ನಕ್ಕು "ನಾಥ! ನೀವು ಹೋಗಿಬರುವುದಕ್ಕೆ ಹತ್ತುನಿಮಿಷಕ್ಕಿಂತಲೂ ಹೆಚ್ಚಾಗಲಿಲ್ಲ. ನಿಮ್ಮ ಮನಸ್ಸಿಗೆ ಬಹಳ ಹೊತ್ತಾಗಿರುವಂತೆ ತೋರಬಹುದು" ಎಂದಳು. ಶರ್ಮನು ಆಶ್ಚರ್ಯಪಟ್ಟು ಇದೆಲ್ಲವೂ ಗೋಪಾಲಭಟ್ಟರ ಮಹಿಮೆಯಾಗಿರುವುದೆಂದು ತಿಳಿದು ಆತನನ್ನು ಶ್ಲಾಘಿಸಿದನು.

ಆದಿನದ ರಾತ್ರಿ ಯಾವುದೊಂದು ಕೊರತೆಯೂ ಇಲ್ಲದೆ ಶರ್ಮನೂ ಆತನ ಪತ್ನಿಯೂ ಸುಖವಾಗಿ ನಿದ್ರಿಸಿದರು. ಬೆಳಗಾಗುತ್ತಲೇ ಸ್ನಾನಾದಿ ಕೃತ್ಯಗಳನ್ನು ಮುಗಿಸಿಕೊಂಡಿರುವ ಶರ್ಮನನ್ನು ಸ್ನಾನದೇವತಾರಾಧನ ಜಪಾದಿ ಕರ್ಮಗಳನ್ನು ನೆರವೇರಿಸಿಕೊಂಡು ಬಂದ ಭಟ್ಟಾರಕನು ಕಂಡು "ಎಲೈ ಬ್ರಾಹ್ಮಣಕುಮಾರನೇ! ಹಿಂದಿನದಿನದ ರಾತ್ರಿ ನೀನಾರನ್ನು ಕಂಡೆ?" ಎಂದು ಕೇಳಲು ಆತನು ನಡೆದ ವಿದ್ಯಮಾನವನ್ನು ವಿಸ್ತರಿಸಿ ಹೇಳಿದನು. ಆಗ ಭಟ್ಟನಿಂತೆಂದನು:-

ಎಲೈ ಬ್ರಾಹ್ಮಣಕುಮಾರನೇ! ಕೇಳು ನೀನುಕಂಡ ಆ ತೇಜೋವತಿಯಾದ ಯುವತೀರತ್ನವು ಆ ಪಾವನಸ್ವರೂಪಿಣಿಯಾದ ಮಹಾಕಾಳಿಯು ನಾನು ಆಕೆಯನ್ನು ಉಪಾಸಿಸುವ ಭಕ್ತನು ನೀನುಕಂಡ ಆ ಸೈನ್ಯವೆಲ್ಲವೂ ಆಕೆಯ ಪರಿವಾರವು ನಿನ್ನ ಕುಟುಂಬಿನಿಯಲ್ಲಿ ಆವೇಶಿಸಿ ನಿನ್ನನ್ನು ಬಾಧಿಸಿದ ಭೂತವು ಆಕೆಯ ಸೇನೆಯಲ್ಲಿ ಪುರುಷಭೂತಗಳಲ್ಲೊಂದೆಂದು ತಿಳಿ ನಾನು ನನ್ನ ಮಂತ್ರಶಕ್ತಿಯಿಂದ ಭಟರನ್ನು ಕಲ್ಪಿಸಿ ಒಂದು ಚೀಟಿಯನ್ನು ಬರೆದು ನಿನ್ನವಶಕ್ಕೆ ಕೊಟ್ಟು ಆಮಹಾತಾಯಿಯ ಬಳಿಗೆ ಕಳಹಿಸಿಕೊಟ್ಟೆನು. ಆಕೆಯು ನನ್ನ ಉದ್ದೇಶವನ್ನರಿತು ಆಭೂತಕ್ಕೆ ತಕ್ಕ ಶಿಕ್ಷೆಯನ್ನು ಕೊಟ್ಟಳು. ಇನ್ನು ನೀನು ನಿನ್ನ ಗ್ರಾಮಕ್ಕೆ ಹೋಗಿ "ದಕ್ಷಿಣಕಾಳಿಕಾಲಯ" ಎಂಬ ಹೆಸರಿನಿಂದ ಒಂದು ದೇವಾಲಯವನ್ನು ಕಟ್ಟಿಸಿ ಆಕೆಯನ್ನು ಸೇವಿಸುತ್ತ ಸಕಲಸೌಖ್ಯಗಳನ್ನನುಭವಿಸಿಕೊಂಡು ನೆಮ್ಮದಿಯಾಗಿರು" ಎಂದು ನುಡಿದು ಒಂದು ಕಾಳಿಕಾ ಮಂತ್ರವನ್ನುಪದೇಶಿಸಿ ಅಚ್ಯುತಶರ್ಮನು ಯಥಾಶಕ್ತಿಯಾಗಿ ಬಹುಮಾನವನ್ನು ಕೊಡುವುದಕ್ಕೆ ಬರಲು ಅದನ್ನು ತೆಗೆದುಕೊಳಲೊಲ್ಲದೆ ಆತನನ್ನು ತನ್ನ ಮನೆಯಲ್ಲಿ ಎರಡುಮೂರು ದಿನಗಳು ನಿಲ್ಲಿಸಿಕೊಂಡಿದ್ದು ಔತಣವನ್ನು ಮಾಡಿ ತಾನೇ ಆತನಿಗೊಂದು ಬಹುಮಾನವನ್ನು ಕೊಟ್ಟು ಕಳುಹಿಸಿದನು.

ಅಚ್ಯುತಶರ್ಮನು ಅತ್ಯಂತ ಸಂತೋಷದಿಂದ ಪ್ರಯಾಣ ಮಾಡಿ ತನ್ನ ಗ್ರಾಮವನ್ನು ಸೇರಿ ಕಾಳಿಕಾಲಯವನ್ನು ಕಟ್ಟಿಸಿ ದೇವಿಯನ್ನು ಪೂಜಿಸುತ್ತ ಹೆಂಡತಿಯೊಡನೆ ಸಕಲ ಸೌಖ್ಯಗಳನ್ನು ಅನುಭವಿಸುತ್ತಿದ್ದನು. ಬಹುಕಾಲಕ್ಕೆ ಕ್ರಮಕ್ರಮವಾಗಿ ಆತನ ವಂಶವು ನಷ್ಟವಾಯಿತು. ಗ್ರಾಮವೂ ಕೂಡ ಪಾಳಾಗಿಹೋಗಿ ಈ ಸ್ಥಿತಿಗೆ ಬಂದಿರುವುದು. ಆದುದರಿಂದ ಇಲ್ಲಿನ ಜನರು ಈ ಗುಡಿಯಲ್ಲಿ ಸ್ಥಾಪಿಸಲ್ಪಟ್ಟಿರುವ ಶಕ್ತಿಯ ಪೂಜೆಯನ್ನು ಬಿಟ್ಟುಬಿಟ್ಟರು.

ಅದರಿಂದ ದೇವಾಲಯವು ಹಾಳುಬಿದ್ದಿರುವುದು. ಅದೇ ಈ ದೇವಾಲಯವು. ಈ ಗಣಿ ಗುಡಿಗೆ ಈದಶೆಯು ಪ್ರಾಪ್ತವಾಗುತ್ತಿರುವುದು'' ಎಂದು ಹೇಳಿದನು. ಅತ್ಯದ್ಭುತವಾದ ಈ ಚರಿತ್ರೆಯನ್ನು ಕೇಳಿ ಸತ್ಯಶೀಲನು ಆಶ್ಚರ್ಯಪಟ್ಟನು.

ಇಂತು ಒಂಭತ್ತನೆಯ ಕಥೆ ಮುಗಿದುದು.



## —: ಹತ್ತನೆಯ ದಿನದ ಕಥೆ. :—

ನಮಸ್ತೇ ಜಗದಾಧಾರ ನಮಸ್ತೇ ವಿಶ್ವಭಾವನ |
ನಮೋನಮೋ ಹೃಷೀಕೇಶ ನಮೋಭಕ್ತಾರ್ತಿಭಂಜನ ||

ಗುರುಶಿಷ್ಯರಾದಿನವೆಲ್ಲವನ್ನು ಅಲ್ಲಿಯೇ ಕಳೆದು ಬೆಳಗಿನಜಾವಕ್ಕೆ ಎದ್ದು ಸ್ನಾನಾಧಿವಿಧಿಗಳನ್ನು ತೀರಿಸಿಕೊಂಡು ಸಮುದ್ರತೀರವ ಮಾರ್ಗವನ್ನೆ ಹಿಡಿದು ಹೋಗುತ್ತ ಮಧ್ಯಾಹ್ನಕಾಲಕ್ಕೆ ಕಡಲ ದಡದಲ್ಲಿದ್ದ ಒಂದು ಚಿಕ್ಕ ಹಳ್ಳಿಯನ್ನು ಸೇರಿ ಅಲ್ಲಿ ತಂಗುವುದಕ್ಕೆ ಅನುಕೂಲವಾಗಿ ತೋರಿದುದರಿಂದ ಊರಿನ ಸಮೀಪದಲ್ಲಿದ್ದ ಒಂದು ಕಲ್ಲುಮಂಟಪವನ್ನು ಕಂಡು ಅಲ್ಲಿ ನಿಂತರು. ಆ ಮಂಟಪವು ಅತಿ ವಿಚಿತ್ರವಾಗಿ ಕಟ್ಟಲ್ಪಟ್ಟು ಅಂದವಾಗಿದ್ದುದಲ್ಲದೆ ಅದರ ಮಧ್ಯದಲ್ಲಿ ಒಂದು ಉನ್ನತಪ್ರದೇಶದಲ್ಲಿ ಅತ್ಯಂತ ವಿಸ್ಮಯವನ್ನುಂಟುಮಾಡುತ್ತ ಸಜೀವದಂತೆ ಕಾಣಲ್ಪಡುತ್ತಿರುವ ಕಲ್ಲಿನ ಕುದುರೆಯೊಂದು ನಿರ್ಮಿಸಲ್ಪಟ್ಟಿದ್ದಿತು. ಸತ್ಯಶೀಲನದನ್ನು ನೋಡಿ ಮೊಟ್ಟಮೊದಲು ಸಜೀವಾಶ್ವವೆಂದೇ ತಿಳಿದನು. ಬಳಿಕ ಅದನ್ನು ವಿಮರ್ಶಿಸಿ ನೋಡಿ ಅದು ಕದಲದೆ ಇದ್ದುದರಿಂದ ಕಲ್ಲಿನ ಕುದುರೆಯೆಂದು ನಿಶ್ಚಯಿಸಿ ಆಶ್ಚರ್ಯಮಗ್ನನಾದನು. ಆಗಲೆ ಅದರ ವಿಷಯವಾಗಿ ಯೋಗೀಂದ್ರನನ್ನು ಕೇಳಿ ತಿಳಿದುಕೊಳ್ಳುವುದಕ್ಕೆ ಸಮಯವಲ್ಲದಿದ್ದುದರಿಂದ ಆಗ ಸುಮ್ಮನಿದ್ದು, ಹಳ್ಳಿಯೊಳಕ್ಕೆ ಹೋಗಿ ಸಾಮಗ್ರಿಯನ್ನು ಕೊಂಡುತಂದು ಅಡಿಗೆಮಾಡಿ ಭೋಜನಾನಂತರದಲ್ಲಿ ವಿಶ್ರಮಿಸಿಕೊಂಡಿದ್ದ ಗುರುವಿನ ಬಳಿಗೆಹೋಗಿ ಸೇವೆಯನ್ನು ಮಾಡುತ್ತ "ಸ್ವಾಮಿ! ಇದೊಂದು ಚಿಕ್ಕಹಳ್ಳಿಯುಲ್ಲವೆ? ಇಲ್ಲಿ ಯಾವ ದೇವಾಲಯವೂ ಇಲ್ಲ. ಆದರೆ ಮಂಟಪವು ಅತಿವಿಚಿತ್ರವಾಗಿ ಕಟ್ಟಲ್ಪಟ್ಟಿರುವುದು. ಅದರ ನಡುವೆ ಒಂದು ವಿಚಿತ್ರವಾದ ಕುದುರೆಯು ನಿಲ್ಲಿಸಲ್ಪಟ್ಟಿರುವುದು. ಇದಕ್ಕೆ ತಕ್ಕ ಕಾರಣವೇನಾದರೂ ಇರಬಹುದೆಂದು ತೋರುವುದು. ಈ ಕುದುರೆಯನ್ನು ಇಲ್ಲಿ ಸ್ಥಾಪಿಸುವುದಕ್ಕೆ ಕಾರಣವೇನೆಂಬುದನ್ನು ದಯಮಾಡಿ ಹೇಳಬೇಕೆಂದು ಪ್ರಾರ್ಥಿಸಲು ಗುರುವು ಆ ಕಥೆಯನ್ನು ಹೇಳುವುದಕ್ಕೆ ಪ್ರಾರಂಭಿಸಿದನು.

## ವಿಜಯವರ್ಮನೆಂಬ ರಾಜನ ಕಥೆ.

ವತ್ಸ ! ಸತ್ಯಶೀಲ ! ಸಾವಧಾನದಿಂದ ಕೇಳು. ಇದೊಂದದ್ಭುತವಾದ ವೃತ್ತಾಂತವು. ವಿಜಯನಗರವೆಂಬ ಪಟ್ಟಣವೊಂದು ಸಕಲಸಂಪತ್ಸಮೃದ್ಧಿಯಿಂದ ಕಂಗೊಳಿಸುತ್ತಿದ್ದಿತು. ಅದನ್ನು ವಿಜಯವರ್ಮನೆಂಬ ರಾಜನು ಪಾಲಿಸುತ್ತಿದ್ದನು. ಈತನು ಪ್ರಜಾರಂಜಕನಾಗಿ ರಾಜಶಬ್ದಕ್ಕರ್ಹನಾಗಿ ವಿದ್ವಾಂಸರಿಗಾಶ್ರಯಪಾತ್ರನಾಗಿ ಜಾರಚೋರಾದ್ಯುಪದ್ರವಗಳಾವುವೂ ಇಲ್ಲದಂತೆ ಧರ್ಮದಿಂದ ರಾಜ್ಯಭಾರಮಾಡುತ್ತಿದ್ದನು. ಆತನ ಹೆಂಡತಿಯು ಮೋಹಾವತಿ, ಮಂತ್ರಿ ವಿಶ್ವನಾಥಶರ್ಮನು. ಆ ಮಹೀಪತಿಯೊಂದು ದಿನದಲ್ಲಿ ಸಕಲ ಸಾಮಂತ ಪುರೋಹಿತ ದಂಡನಾಯಕ ದೌವಾರಿಕ ಪರಿವಾರ ಬಂಧುಜನ ಮಿತ್ರ ಸಂದೋಹದೊಡನೆ ಒಡ್ಡೋಲಗದಲ್ಲಿರುವ ಸಮಯದಲ್ಲಿ ಸೇವಕನೊಬ್ಬನೈತಂದು "ಸ್ವಾಮಿ ! ಯಾರೋ ಹನ್ನೆರಡುಮಂದಿ ಯುವಕರು ಬಂದು ಬಾಗಿಲಬಳಿ ನಿಮ್ಮ ದರ್ಶನಾರ್ಥವಾಗಿ ನಿಂತಿರುವರು. ತಮ್ಮ ಆಗಮನವನ್ನು ಸ್ವಾಮಿಯವರಿಗೆ ತಿಳಿಸಬೇಕೆಂದು ನನ್ನನ್ನು ಕಳುಹಿಸಿದರು. ಅವರು ರಾಜಕುಮಾರರಂತೆ, ಅವರೆಲ್ಲ ಒಂದೊಂದುಕಣ್ಣು ಉಳ್ಳವರಾಗಿರುವರು. ಎಲ್ಲರಿಗೂ ಬಲಗಣ್ಣು ಮಾತ್ರವೇ ಇಲ್ಲ. ಈ ಆಶ್ಚರ್ಯವೇನೋ ತಿಳಿಯದು. ಆದರೆ ಎಲ್ಲರೂ ಅಂಗಸೌಷ್ಠವವುಳ್ಳವರು. ಅವರನ್ನು ಸನ್ನಿಧಿಗೆ ಬರಮಾಡಲು ಅಪ್ಪಣೆಯೇ?" ಎಂದು ಕೇಳಿದನು.

ರಾಜಪುಂಗವನು ಆ ಸೇವಕನ ನುಡಿಗಳನ್ನು ಕೇಳಿ ಆಶ್ಚರ್ಯಪಟ್ಟು ಅವರನ್ನು ಒಳಕ್ಕೆ ಕರೆದುಕೊಂಡು ಬರುವಂತೆ ಆಜ್ಞಾಪಿಸಿದನು. ಅವನು ಹೋಗಿ ಅವರೆಲ್ಲರನ್ನು ಒಳಕ್ಕೆ ಪ್ರವೇಶಗೊಳಿಸಿದನು. ಅವರು ಅರಸನಮುಂದೆ ಬಂದು ನಿಂತು, ಉಚಿತರೀತಿಯಿಂದ ನಮಸ್ಕರಿಸಿದರು. ರಾಜನವರಿಗೆ ತಕ್ಕ ಮನ್ನಣೆಯನ್ನು ಮಾಡಿ ಉಚಿತಾಸನಗಳಲ್ಲಿ ಕುಳ್ಳಿರಿಸಿದನು. ಸೇವಕನು ಹೇಳಿದಂತೆಯೇ ಏಕಾಕ್ಷಿಗಳಾಗಿದ್ದರೂ ಮಹಾತೇಜಸ್ವಿಗಳಾಗಿಯೂ, ಸೌಂದರ್ಯಶಾಲಿಗಳಾಗಿಯೂ ಇದ್ದ ಅವರನ್ನು ಕಂಡು "ಅಯ್ಯೋ ! ಪಾಪ ! ಕಣ್ಣೊಂದಿದ್ದರೆ ಮನ್ಮಥನಂತಿರುತ್ತಿದ್ದರಲ್ಲಾ ! ಯಾವ ಕರ್ಮವನ್ನಿವರು ಪೂರ್ವಜನ್ಮದಲ್ಲಿ ಮಾಡಿದ್ದರೋ !" ಎಂದು ಬಹಳವಾಗಿ ಆಶ್ಚರ್ಯಪಟ್ಟು ಮರುಗಿದನು.

ಬಳಿಕ ಆ ರಾಜನವರನ್ನು ಕಂಡು, "ಅಯ್ಯಾ ! ರಾಜಕುಮಾರರೇ ! ನೀವು ಯಾರು ? ಎಲ್ಲಿಂದ ಬಂದಿರಿ ? ಎಲ್ಲಿಗೆ ಹೋಗುವಿರಿ ? ನಿಮಗೆಲ್ಲರಿಗೂ ಒಂದೇವಿಧವಾಗಿ ಬಲಗಣ್ಣುಗಳು ಮಾತ್ರ ಕುರುಡಾಗಿರುವುದಕ್ಕೇನು ಕಾರಣ ? " ಎಂದು ಕೇಳಿದನು. ಆಗ ಆ ಹನ್ನೆರಡು ಮಂದಿಯಲ್ಲಿ ಒಬ್ಬನು ತಾನೇ ಎಲ್ಲರ ಮಾತನಾಡತೊಡಗಿ ತನ್ನ ಚರಿತ್ರೆಯನ್ನು ಮುಂದೆ ಹೇಳುವ ಪ್ರಕಾರವಾಗಿ ಹೇಳಲಾರಂಭಿಸಿದನು.

ಭೂವಲ್ಲಭ! ಲಾಲಿಸು. ನಾನು ನನ್ನ ಕಥೆಯನ್ನು ಮೊದಲು ಹೇಳುತ್ತೇನೆ ಕೇಳಿದಮೇಲೆ ನಮ್ಮೆಲ್ಲರ ಚರಿತ್ರೆಯೂ ಇಂಥದೇ ಎಂದು ನೀನು ತಿಳಿದುಕೊಳ್ಳ ಬಹುದು. ನಾವು ಬೇರೆಬೇರೆ ದೇಶಗಳ ರಾಜಪುತ್ರರೇ ಹೊರತು ಒಂದು ಸ್ಥಲ ದವರೂ ಒಬ್ಬತಾಯಿ ಗರ್ಭದಲ್ಲಿ ಹುಟ್ಟಿದ ಅಣತಮ್ಮಂದಿರಲ್ಲ. ಇಂತಹ ದುರ್ದಶೆಯು ಪ್ರಾಪ್ತವಾದ ತರುವಾಯವೇ ನಾವು ಮಿತ್ರರಾಗಿ ಒಂದುಕಡೆ ಯಲ್ಲಿ ಸೇರಿದೆವು. ನನ್ನ ಕಥೆಯನ್ನು ಕೊನೆಯುವರೆಗೂ ಕೇಳಿದ ಬಳಿಕ ಸರ್ವವೂ ನಿನಗೆ ವೇದ್ಯವಾಗುವುದು.

ರಾಜಾಗ್ರಣಿಯೇ ! ನಾನು ಜ್ಯೋತಿಷ್ಮತೀ ನಗರವನ್ನಾಳ್ವ ಚಿತ್ರಭಾನು ರಾಯನ ಏಕಪುತ್ರನು. ನನ್ನ ಪೆಸರು ಉಗ್ರಸೇನನು. ಒಬ್ಬನೇ ಮಗನೆಂದು ನನ್ನ ಮಾತಾಪಿತೃಗಳು ನನ್ನನ್ನು ಬಹುಪ್ರೀತಿಯಿಂದ ಸಲಹಿದರು. ನಾನೂ ಕ್ರಮವಾಗಿ ಸಕಲವಿದ್ಯೆಗಳನ್ನೂ ಕಲಿತು, ರಾಜರಿಗಿರಬೇಕಾದ ಸಮಸ್ತ ಲಕ್ಷಣ ಗಳಿಂದ ಶೋಭಿಸುತ್ತ ಯೌವನವಂತನಾಗಿದ್ದುದನ್ನು ನನ್ನ ತಂದೆಯು ಕಂಡು ನನ್ನನ್ನು ಯೌವರಾಜ್ಯಾಭಿಷಿಕ್ತನನ್ನಾಗಿ ಮಾಡುವುದಕ್ಕೆ ಪ್ರಯತ್ನಿಸುತ್ತಿದ್ದನು. ಆ ಸಮಯದಲ್ಲಿ ಯೋಗಿಯಂತಹ ಮಾನವನೊಬ್ಬನು, ವಿಲಾಸಾರ್ಥವಾಗಿ ನಾನು ನನ್ನ ಉದ್ಯಾನವನದಲ್ಲಿ ವಿಹಾರಮಾಡುತ್ತ ಏಕಾಕಿಯಾಗಿರಲು ನನ್ನ ಬಳಿಗೆ ಮಾಯಾತುರಂಗಾರೂಢನಾಗಿ ಬಂದಿಳಿದು ನನ್ನನ್ನು ನೋಡಿ ಆಶೀರ್ವ ದಿಸಿ “ ಎಲೈ ರಾಜಕುಮಾರ ! ನಿನಗೆ ಮಹಾಭಾಗ್ಯವೂ ಮಹತ್ಸಂತೋಷವೂ ಉಂಟಾಗುವುದು ” ಎಂದು ನುಡಿದನು. ಆತನನ್ನು ನೋಡಿ ಆತನ ಮಾತುಗ ಳನ್ನು ಕೇಳಿ ಪರಮಾಶ್ಚರ್ಯಯುಕ್ತನಾಗಿ ಅವರನ್ನು ಕುರಿತು “ ಅಯ್ಯಾ ! ನೀವಾರು ? ಎಲ್ಲಿಂದ ಬಂದಿರಿ ? ನನಗೆ ಮಹಾಭಾಗ್ಯವುಂಟಾಗುವುದೆಂದು ನೀವು ಹೇಳಿದಿರಲ್ಲವೆ ? ಅದು ಹೇಗೆ ? ” ಎಂದು ಕೇಳಿದೆನು. ಆತನು ನನ್ನನ್ನು ನಿರುಕಿಸಿ “ ಹೇಗೆಂಬೆಯೋ ? ಇದೆ ನೋಡು ನಾನು ಹತ್ತಿಬಂದ ಈ ಕುದುರೆ ಯನ್ನು ಇದರ ದೆಸೆಯಿಂದ ನಿನಗೆ ನಾನು ಹೇಳಿದ ಉನ್ನತಸ್ಥಿತಿಯು ಪ್ರಾಪ್ತ ವಾಗುವುದು ಇದನ್ನು ನಿನಗೆ ಕೊಡುವುದಕ್ಕಂದೇ ತಂದಿರುವೆನು ಇದನ್ನು ಬಳಿ ಯಲ್ಲಿಟ್ಟುಕೊಳ್ಳುವುದಕ್ಕೆ ನೀನೇ ತಕ್ಕವನು ಇದು ನೋಡುವುದಕ್ಕೆ ನಿರ್ಜೀವವಾ ದಂತೆ ಕಂಡುಬರುವುದು ಆದರೆ ಇದನ್ನು ಹತ್ತಿದಾಗ ಇದರ ಪ್ರಭಾವವು ನಿನಗೆ ಗೋಚರವಾಗುವುದು ಇದನ್ನು ನೀನು ತೆಗೆದುಕೊ ನಾನು ಹೋಗುವೆನು ” ಎಂದು ಹೇಳಿ ಮತ್ತಾವ ಮಾತನ್ನೂ ಆಡದೆ ಸಾವಧಾನವಾಗಿ ಆತನ ಮಾತುಗ ಳನ್ನು ಕೇಳುತ್ತಿದ್ದ ನನಗಾ ಕುದುರೆಯನ್ನು ಕೊಟ್ಟು ಅಂತರಿಕ್ಷಕ್ಕೆ ಹಾರಿ ಹೊರಟುಹೋದನು.

ಧರಣೀರಮಣಾ ! ಆಗ ನನಗುಂಟಾದ ಆಶ್ಚರ್ಯವನ್ನು ಹೇಳಲಿಕ್ಕಾ

ಗದು ಆಗ ನನ್ನಲ್ಲಿ ನಾನು ಹೀಗಾಲೋಚಿಸಿದೆನು "ಹೇಗೆ? ಪ್ರಾಣವೇ ಇಲ್ಲದಿರುವ ಈ ಕುದುರೆಯಲ್ಲಿ ಇಂತಹ ಮಹಾಮಹಿಮೆಯುಂಟೆ? ನೋಡುವುದಕ್ಕಿದು ಮರದ ಕುದುರೆಯಾಗಿರುವುದಲ್ಲ! ಆತನಾರಿರಬಹುದು? ನಾನು ಪ್ರಾರ್ಥಿಸಿದರೂ ನನಗೆ ತನ್ನ ಚರಿತ್ರವನ್ನು ಹೇಳದೆ ಇದನ್ನು ನನಗೇತಕ್ಕೆ ಕೊಟ್ಟುಹೋದನು? ನನ್ನಮೇಲೆ ಆತನಿಗೆ ಅಂತಹ ಕಾರಣವಿಲ್ಲದ ಕರುಣವೇತಕ್ಕೆ ಉಂಟಾಯಿತು? ಆತನೊಬ್ಬ ಸಿದ್ಧಪುರುಷನಾಗಿರಬಹುದೆ? ಅಲ್ಲದಿದ್ದರೆ ಆತನಿಗೆ ಆಕಾಶಗಮನಶಕ್ತಿಯು ಹೇಗೆತಾನೆ ಉಂಟಾಗುತ್ತಿದ್ದಿತು? ಒಂದು ವೇಳೆ ನನಗೆ ಯಾವುದಾದರೂ ದೊಡ್ಡ ಪದವಿಯುಂಟಾಗುವುದು ನಿಜವಾಗಿರುವುದೆ? ದೈವ ಸಂಕಲ್ಪವು ಹೇಗಿರುವುದೋ? ಯಾರುಬಲ್ಲರು?"

ಹೀಗೆ ಹಲವುಬಗೆಯಿಂದ ಆಲೋಚಿಸತೊಡಗಿ "ಇದರಲ್ಲೇನು ಮೋಸವುಂಟು? ಏನು ಮುಳುಗಿಹೋದುದು? ಇದರ ಶಕ್ತಿಯು ಎಂಥದೋ ತಿಳಿದುಕೊಳ್ಳುವೆನು" ಎಂಬ ದುರ್ಬುದ್ಧಿಯಂಕುರಿಸಿ ಶಿಲ್ಪನೈಪುಣ್ಯವೊಂದಿಷ್ಟಾದರೂ ಇಲ್ಲದೆ ಮೊದ್ದುಮೊದ್ದಾಗಿರುವ ದಾರುಮಯವಾದ ಆ ಕುದುರೆಯನ್ನು ಮುಟ್ಟಿ ನೋಡಿದೆನು ಅದು ಬರಿಯ ಮರವೇ! ಅತ್ತಿತ್ತ ಅಲುಗಾಡಲೂ ಇಲ್ಲ ನನಗೆ ನಗೆ ಬಂತು "ಎಲ! ವಂಚಕನೇ! ಮಾಯಾಮಯನೇ! ಈ ಮರದ ಕುದುರೆಯನ್ನು ತಂದು ಇಲ್ಲಿ ಹಾಕಿಹೋದೆಯೇಕೆ? ನಿನ್ನನ್ನು ಯಾರು ಕೇಳಿದರು?" ಎಂದಾಲೋಚಿಸುತ್ತ ಅಷ್ಟಕ್ಕೆಯೇ ಸುಮ್ಮನಿರದೆ "ಹತ್ತಿನೋಡುವೆನು ಇದಕ್ಕೆ ಯಾವುದೋ ಶಕ್ತಿ ಇರುವುದೆಂದಾತನು ಹೇಳಿದುದನ್ನು ಪರೀಕ್ಷಿಸಿನೋಡುವೆನು" ಎಂದು ಬಗೆದು ವಿಧಿಪ್ರೇರಣೆಯಿಂದ ತಟ್ಟನೆ ಹಾರಿ ಅದರಮೇಲೆ ಕುಳಿತುಕೊಂಡೆನು.

ಪ್ರಭುವೇ! ಆ ಆಶ್ಚರ್ಯವನ್ನು ನಾನೇನೆಂದು ಹೇಳಲಿ? ಮರದರೂಪದಿಂದಿದ್ದ ಆ ಹೆಣ್ಣುಕುದುರೆಯು ತತ್ಕ್ಷಣದಲ್ಲಿ ಚಲಿಸಿ ಅದಕ್ಕೆ ಮೊದಲಿಲ್ಲದ ರೆಕ್ಕೆಗಳನ್ನು ಅಗಲಿಸಿ ಕೆನೆದು ಚೆಕ್ಕನೆ ಆಕಾಶಕ್ಕೆಹಾರಿ ಮನೋವೇಗದಿಂದ ಹೋಗಲಾರಂಭಿಸಿತು. ಆಗ ನಾನೆಷ್ಟು ದೂರದಲ್ಲಿ ಆಕಾಶದಲ್ಲಿ ಹೋಗುತ್ತಿದ್ದೆನೋ ತಿಳಿಯದಲ್ಲದೆ ನೆಲದಮೇಲಿರುವ ಮಹಾಪರ್ವತಗಳೂ ಸಮುದ್ರಗಳೂ ಕಾಡುಗಳೂ ಪಟ್ಟಣಗಳೂ ನನ್ನ ಕಣ್ಣುಗಳಿಗೆ ಗೋಚರಿಸಲಿಲ್ಲ ಆಗ ನನಗೆ ಮಹಾಭಯವುಂಟಾಯಿತು. "ಅಯ್ಯೋ! ದೈವವೇ! ದೊಡ್ಡದಾದ ವಿಪತ್ಸಮುದ್ರದಲ್ಲಿ ನಾನು ಸಿಕ್ಕಿಕೊಂಡೆನಲ್ಲ! ಈ ಕುದುರೆಯು ನನ್ನನ್ನೆಲ್ಲಿಗೆ ತೆಗೆದುಕೊಂಡು ಹೋಗುವುದೋ ಕಾಣೆನಲ್ಲಾ! ಮರದ ಕುದುರೆಯೆಂದು ನಾನು ಬಗೆದಿದ್ದೆನಲ್ಲಾ! ಮೋಸಹೋದೆನಲ್ಲಾ! ಹಾ! ಪರಮೇಶ್ವರಾ! ಏನುಮಾಡಲಿ?" ಎಂದು ನುಡಿಯುತ್ತ ಶರೀರವು ನಡುಗುತ್ತಿರಲು ಕೆಳಕ್ಕೆ ಬೀಳುವೆನೋ

ಏನೋ ಎಂಬ ಭಯದಿಂದ ಅದರ ಕುತ್ತಿಗೆಯನ್ನು ಗಟ್ಟಿಯಾಗಿ ಹಿಡಿದುಕೊಂಡು ಅದರಮೇಲೆ ಬೋರಲಾಗಿ ಮಲಗಿದ್ದೆನು.

ಅದು ಮನೋವೇಗದಿಂದ ಎಷ್ಟು ದೂರದವರೆಗೆ ಎಲ್ಲಿಗೆ ಹೋಯಿತೋ ನಮ್ಮ ಪಟ್ಟಣವಲ್ಲಿಗೆ ಯಾವ ದಿಕ್ಕಿನಲ್ಲಿದ್ದಿತೋ ತಿಳಿಯಲಿಲ್ಲ ಆ ಕುದುರೆಯು ಆ ದಿನದ ಸಾಯಂಕಾಲಕ್ಕೆ ಮಹೋನ್ನತಗಳಾದ ನಾಲ್ಕು ದುರ್ಗಮ ಪರ್ವತಗಳ ನಡುವೆ ಇದ್ದ ಒಂದು ದಿವ್ಯಭವನದ ಬಳಿಯಲ್ಲಿ ನಾನು ಭೂಮಿಯಮೇಲೆ ಇಳಿವುದಕ್ಕೆ ಅನುಕೂಲವಾದ ಸ್ಥಳದಲ್ಲಿ ನಿಂತಿತು ಆ ಮಂದಿರದ ಸುತ್ತಲೂ ವಿಶಾಲವಾದ ಬಯಲೂ ಮನೋಹರಗಳಾದ ಉದ್ಯಾನವನಗಳೂ ಶೋಭಿಸುತ್ತಿದ್ದುವು ನಾನು ಆ ಕುದುರೆಯಿಂದಿಳಿದೆನು ಆಗ ಭೂಮಿಯು ನನ್ನ ಕಣ್ಣಿಗೆ ಗೋಚರಿಸಿದುದಕ್ಕೂ ನಾನು ಆ ಕುದುರೆಯ ಅಧೀನದಿಂದ ತಪ್ಪಿಸಿಕೊಂಡುದಕ್ಕೂ ಸ್ವಲ್ಪ ಸಂತೋಷವನ್ನು ತಾಳಿದೆನು ಆದರೆ ಆಗ ನಾನಿರುವುದು ಯಾವ ದೇಶಸಂಬಂಧವು ನನಗೆ ಗೊತ್ತಾಗಲಿಲ್ಲ. ಅತ್ಯುನ್ನತಗಳಾದ ಆ ಬೆಟ್ಟಗಳನ್ನು ದಾಟಿ ಆಚೆಗೆ ಹೋಗುವುದಕ್ಕೂ ಆಚೆ ಇರುವವರು ಅಲ್ಲಿಗೆ ಬರುವುದಕ್ಕೂ ಸಾಧ್ಯವಾಗದಿರುವಂತೆ ತೋರಿದುದರಿಂದ ನನ್ನ ಆ ಅಲ್ಪಸಂತೋಷವೂ ಅದೃಶ್ಯವಾಗಿ ಅತಿ ದುಃಖವೂ ಭಯವೂ ಸಂಭವಿಸಿತು ಮುಂದೆ ಏನುಮಾಡುವುದಕ್ಕೂ ತೋರಲಿಲ್ಲ ಒಂದಿನಿಸುಹೊತ್ತು ಸ್ತಬ್ಧನಾಗಿದ್ದು ವಿಪತ್ಸಮುದ್ರದಿಂದ ನನ್ನನ್ನು ದಾಟಿಸೆಂದು ಭಗವಂತನನ್ನು ಪ್ರಾರ್ಥಿಸುತ್ತ ದಿಕ್ಕುದಿಕ್ಕುಗಳನ್ನೂ ನೋಡುತ್ತ ನಿಂತಿದ್ದೆನು. ಆ ಪ್ರದೇಶವನ್ನೂ ಆ ಸುಂದರಮಂದಿರವನ್ನೂ ನೋಡಿ ಅದು ದೇವಭೂಮಿಯೆಂದೂ ಆ ಮಂದಿರವು ದೇವಮಂದಿರವೆಂದೂ ಭಾವಿಸಿಕೊಂಡೆನು. ಅದರ ಸೊಬಗನ್ನೂ ವಿಶೇಷಗಳನ್ನೂ ಬಣ್ಣಿಸಿ ಹೇಳಲಾರಂಭ ಮಾಡಿದರೆ ಒಂದು ಸಂವತ್ಸರವೇ ಆಗುವುದು. ಅಂತಹ ದಿವ್ಯಭವನವು ಪ್ರಪಂಚದಲ್ಲಿ ಎಲ್ಲಿಯೂ ಇಲ್ಲವೆಂಬುದನ್ನು ಮಾತ್ರ ದೃಢವಾಗಿ ಹೇಳಬಲ್ಲೆನು. ಅದು ಅಂತಹ ಸುಂದರಮಂದಿರವಾದರೂ ಸಕಲ ಸಂಪದ್ಭರಿತವಾಗಿದ್ದರೂ ಜನಸಂಚಾರವೇ ಇಲ್ಲದಿರುವುದೂ ನನಗೆ ಅತ್ಯಾಶ್ಚರ್ಯವನ್ನುಂಟುಮಾಡಿತು ಆ ಮನೆಯ ಎಲ್ಲ ಬಾಗಿಲುಗಳೂ ತೆರೆಯಲ್ಪಟ್ಟೇ ಇದ್ದುವು ಆನಂದಸಂದಾಯಕವಾಗಿದ್ದರೂ ದುಃಖವನ್ನುಂಟುಮಾಡುತ್ತಿರುವ ಆ ಸ್ಥಳದಲ್ಲಿ ನಾನು ಒಂಟಿಯಾಗಿ ಸೇರಿದುದಕ್ಕೆ ಅಧಿಕವಾಗಿ ಸಂಕಟಪಡುತ್ತ, ನನ್ನನ್ನು ಆ ಸ್ಥಳಕ್ಕೆ ತಂದ ಆ ಹಾಳು ಕುದುರೆಯನ್ನು ಬಯ್ಯುತ್ತ ಅದರಕಡೆಗೆ ನೋಡಲು ಅದು ಅಲ್ಲಿ ಗೋಚರಿಸಲಿಲ್ಲ ನನಗೆ ಮತ್ತಷ್ಟು ಆಶ್ಚರ್ಯವೂ ದುಃಖವೂ ಉಂಟಾಯಿತು. ಹೀಗೆ ಒಂದಕ್ಕಿಂತಲೂ ಒಂದು ಅತಿಶಯವಾದ ವಿಸ್ಮಯವನ್ನುಂಟು ಮಾಡುತ್ತಿದ್ದಬಗ್ಗೆ ಚಿಂತಿಸುತ್ತ ಕರ್ತವ್ಯವನ್ನಾಲೋಚಿಸಿ ಧೈರ್ಯವನ್ನು ವಹಿಸಿ ದೇವರಮೇಲೆ ಭಾರವನ್ನಿಟ್ಟು ಆ ಮನೆಯ

ವಿಚಾರವನ್ನು ಸಮಗ್ರವಾಗಿ ತಿಳಿಯಬೇಕೆಂಬ ಆಸೆಯಿಂದ ಮೆಲ್ಲಗೆ ಹೋಗಿ ಒಳಕ್ಕೆ ಪ್ರವೇಶಿಸಿದೆನು ಯಾರಾದರೂ ಇರಬಹುದೆಂದು ಭಾವಿಸಿ ಆ ಮನೆಯಲ್ಲಿ ಅಲ್ಲಿಂದಿಲ್ಲಿಗೆ ಇಲ್ಲಿಂದಲ್ಲಿಗೆ ಓಡಿಯಾಡಿದೆನು ಯಾರೂ ಕಾಣಿಸಲಿಲ್ಲ ಎಲ್ಲ ಹಜಾರಗಳಲ್ಲಿಯೂ ತೊಟ್ಟಿಗಳಲ್ಲಿಯೂ ಅಮೌಲ್ಯಗಳಾದ ರತ್ನಕಂಬಳಿಗಳು ಹಾಸಲ್ಪಟ್ಟಿದ್ದುವು ಅಲ್ಲಲ್ಲಿ ಮನೋಜ್ಞಗಳಾದ ಪಲ್ಲಂಗು (Sofa) ಗಳನ್ನು ಹಾಕಿದ್ದರು. ಕೆಲವು ಕೊಟ್ಟಡಿಗಳಲ್ಲಿ ಚಿನ್ನ, ಬೆಳ್ಳಿ, ವಜ್ರ, ವೈಡೂರ್ಯ, ಗೋಮೇಧಿಕ, ಪುಷ್ಯರಾಗ ಮೊದಲಾದ ರತ್ನಗಳೂ, ಧನರಾಶಿಗಳೂ ಯಥೇಷ್ಟವಾಗಿದ್ದುವು. ಹೀಗೆ ಸರ್ವಸಂಪತ್ಸಮೃದ್ಧಿಯಿಂದ ಕಂಗೊಳಿಸುತ್ತಿದ್ದ ಆ ನಿಶಾಂತವು ನಿರ್ಮಾನುಷ್ಯವಾಗಿದ್ದುದಕ್ಕೆ ಕಾರಣವನ್ನು ಮಾತ್ರ ಊಹಿಸಲಸದಳವಾಗಿದ್ದಿತು. ಇದು ಪ್ರಾಯಿಕವಾಗಿ ಒಂದು ಮಾಯಾಭವನವಾಗಿರಬಹುದೆಂದು ನನ್ನಲ್ಲಿ ನಾನಾಲೋಚಿಕೊಂಡೆನು ಒಂಟಿಯಾಗಿ ಆ ನಿರ್ಜನಪ್ರದೇಶದಲ್ಲಿ ಇರುವುದಕ್ಕೆ ಭಯಪಡುತ್ತಿರಲು ಸೂರ್ಯನಸ್ತಮಿಸಿದನು. ಆಗಳಾ ಮಂದಿರದಲ್ಲಿ ದೀಪಗಳು ಉರಿಯಲಾರಂಭಿಸಿ ಹಟ್ಟಹಗಲಿನಂದದಿಂದ ಶೋಭಿಸಿತು. ಆರೀತಿಯನ್ನು ಪರಿಕಿಸಲು ನಾನಾವುದೋ ಒಂದು ಮಹಾಸಮುದ್ರದಲ್ಲಿ ಸಿಕ್ಕಿಕೊಂಡಂತೆ ತೋರಿತು. ಹಾಗೆ ಅತ್ಯಂತ ಸುಂದರವಾಗಿದ್ದರೂ ಅತಿಭಯಂಕರವಾದ ಆ ಸ್ಥಲದಲ್ಲಿ ಸರ್ವಶಕ್ತನಾದ ಭಗವಂತನನ್ನುಳಿದು ಮತ್ತೊಬ್ಬ ರಕ್ಷಕನು ಇಲ್ಲವೆಂದು ತಿಳಿದು ಆತನನ್ನೆ ಧ್ಯಾನಿಸುತ್ತ ನನಗೆ ಪ್ರಾಪ್ತವಾಗಿರುವ ದುಸ್ಥಿತಿಗೆ ಬೆದರಿ ಉಯ್ಯಾಲೆಯಂತೆ ತೂಗುತ್ತಿರುವ ಮನಸ್ಸುಳ್ಳವನಾಗಿ ಮುಂದೆ ಯಾವ ಕೆಲಸವನ್ನು ಮಾಡುವುದಕ್ಕೂ ತೋರದೆ ಆ ಮನೆಯಲ್ಲಿದ್ದ ಒಂದು ಮೃದುವಾದ ಮೆತ್ತೆಯನ್ನು ಹಾಕಿರುವ ಮಂಚದಮೇಲೆ ಕುಳಿತು ಗಟ್ಟಿಯಾಗಿ “ ಓ ತಂದೆಯೇ ! ಈಗ ನಡೆಯುತ್ತಿರುವ ಕಾರ್ಯವೆಲ್ಲವೂ ಮಹಾಮಾಯೆಯಾಗಿರುವುದು. ದೇವದೇವ ! ಪರಮೇಶ ! ನೀನೇ ದಿಕ್ಕಲ್ಲದೆ ಬೇರೆ ಯಾರೂ ಇಲ್ಲ ಈ ವಿಪತ್ತಿನಿಂದ ಪಾರುಮಾಡಿ ನನ್ನನ್ನು ಕಾಪಾಡು ” ಎಂದು ಅರಚಿಕೊಂಡೆನು.

ಹೀಗೆ ನಾನು ಅರಚಿಕೊಂಡ ಒಡನೆಯೇ “ ಘಲ್ ಘಲ್ ” ಎಂದು ಅಂದುಗೆಗಳ ಶಬ್ದವು ಕೇಳಬಂದಿತು ಇದೇನೆಂದು ತಲೆಯನ್ನೆತ್ತಿ ನೋಡಲು ಗಹಗಹಿಸಿ ನಗುತ್ತ ಜಗನ್ಮೋಹನಸ್ವರೂಪಿಣಿಯಾದ ಯುವತಿಯೊಬ್ಬಳು ನನ್ನ ಕಡೆಗೆ ನಡೆದುಬರುತ್ತಿರುವುದನ್ನು ಕಂಡೆನು. ಆ ಸುಂದರೀರತ್ನವನ್ನು ನೋಡುತ್ತಲೇ ಆಶ್ಚರ್ಯವೂ ಭಯವೂ ನನ್ನಲ್ಲಿ ಅತಿಶಯಿಸಿತು ಆಗ ನಾನು ಸತ್ತಿದ್ದೆನೋ ಬದುಕಿದ್ದೆನೋ ತಿಳಿದುಕೊಳ್ಳಲಾಗದಷ್ಟು ಬುದ್ಧಿವೈಕಲ್ಯಸ್ಥಿತಿಯನ್ನು ಪಡೆದು ಮಾತನಾಡುವುದಕ್ಕೆ ಕೂಡ ಬಾಯಿಬಾರದೆ ಮರವಟ್ಟಿದ್ದೆನು. ಆ ಪೆಣ್ಮಣಿ ನನ್ನೆಡೆಗೆಬಂದು ಚಿರಪರಿಚಿತಳಂತೆಯೂ, ಬಹುಕಾಲ ಬಾಳಿದ ಪ್ರಿಯಪ

ತ್ರಿಯಂತೆಯೂ ನನ್ನಮೇಲೆ ತನ್ನ ಕೋಮಲವಾದ ಕೈಯನ್ನಿಟ್ಟು ಬೆನ್ನನ್ನುತಟ್ಟಿ ನನ್ನ ಭಯವನ್ನು ಹೋಗಲಾಡಿಸುವಳಾಗಿ " ರಾಜನಂದನ ! ಏಕೆ ಭಯಪಡುತ್ತಿರುವೆ ? ಮನಸ್ಸನ್ನು ದಿಟ್ಟಪಡಿಸಿಕೊಂಡಿರು ಇಲ್ಲಿ ನೀನು ಯಾವ ಉಪದ್ರವವನ್ನಾಗಲಿ ಹೊಂದುವುದಿಲ್ಲ ನಿನಗೆ ಸಂತೋಷವೂ ಸೌಖ್ಯವೂ ಉಂಟಾಗುವುದು ಹಿಂದೆಯೆಂದೂ ನೀನರಿಯದಿರುವ ಆನಂದವನ್ನಿಲ್ಲಿ ಪಡೆವೆ ನೀನು ನನ್ನನ್ನು ನಿನ್ನ ಪ್ರಿಯಳನ್ನಾಗಿ ಸ್ವೀಕರಿಸಿ ನನ್ನಲ್ಲಿಸೇರಿ ಸಮಸ್ತ ಭೋಗಗಳನ್ನು ನಿನ್ನ ಮನಸ್ಸು ಬಂದಂತೆ ಅನುಭವಿಸು ಆಬಳಿಕ ನಿನಗೆ ನನ್ನ ಚರಿತ್ರೆಯನ್ನು ಹೇಳುವೆನು " ಎಂದು ಮೃದುಮಧುರಗಳಾದ ಮಾತುಗಳನ್ನು ನುಡಿದು, ತನ್ನ ಒಂದು ಬಾಹುವನ್ನು ನನ್ನ ಬಾಹುವಿನಮೇಲಿಟ್ಟು ನನ್ನಬಳಿಯಲ್ಲಿ ಕುಳಿತು ನನ್ನನ್ನು ಚುಂಬಿಸಿದಳು.

ಆಗ ನನಗೆ ಉಂಟಾದಭಯ ಅಷ್ಟಿಷ್ಟಲ್ಲ ಅಂತಪ್ಪ ಸೌಂದರ್ಯವತಿಯೂ ಯುವತಿಯೂ ಆದ ಕಾಂತೆಯು ಏಕಾಂತಸ್ಥಲದಲ್ಲಿ ತಾನಾಗಿ ಬಳಿಗೆ ಬಂದು, ಆಲಿಂಗನ ಚುಂಬನಾದಿಗಳನ್ನು ಮಾಡಿದಾಗ ಇನ್ನೊಬ್ಬನಾಗಿದ್ದರೆ ಪರಮಾನಂದವನ್ನು ಪಡೆದು ಸ್ವಚ್ಛಂದವಾಗಿ ಸುಖಾನುಭವವನ್ನು ಮಾಡುತ್ತಿದ್ದನು. ರಾಜಾಗ್ರಣಿಯೆ ನನಗಾದರೋ ಆನಂದಕ್ಕೆ ಪ್ರತಿಯಾಗಿ ಭೀತಿಯೇ ಹೃದಯದಲ್ಲಿ ಹೊಕ್ಕು ನನ್ನ ಶರೀರವನ್ನು ನಡುಗಿಸಿತು ಏಕೆಂದರೆ ಯಾವುದೋ ಒಂದು ಭೂತವಾರೀತಿಯಾಗಿ ಬಂದು ನನ್ನನ್ನು ಹಿಡಿದುಕೊಂಡಿರುವುದೆಂದೂ, ಅದು ನನ್ನನ್ನು ಬಿಡದೆ ಹಿಂಸಿಸಿ ಕೊಲ್ಲುವುದಕ್ಕೆಯೇ ಸಿದ್ಧವಾಗಿರುವುದೆಂದೂ ಭಾವಿಸಿ ನಿಶ್ಚೇಷ್ಟಿತನಾದೆನು. ಆ ಕಾಂತಾಮಣಿಯು ನಾನು ಭೀತನಾಗಿರುವಿಕೆಯನ್ನು ತಿಳಿದು, ಒಳ್ಳೆಯ ಮಾತುಗಳಿಂದ ಧೈರ್ಯವನ್ನುಂಟು ಮಾಡುತ್ತ ಕೈಯನ್ನು ಹಿಡಿದು, ನನ್ನನ್ನು ಮತ್ತೊಂದು ಕೋಣೆಯೊಳಕ್ಕೆ ಕರೆದುಕೊಂಡು ಹೋದಳು. ನಿರ್ಜನವಾಗಿದ್ದ ಆ ಸ್ಥಳದಲ್ಲಿ ಕೆಲವರು ಪರಿಚಾರಿಕೆಯರು ಆ ಲಲನೆಯ ಕಣ್ಸನ್ನೆಯಿಂದ ಬಂದು ಪರಿಮಳೋದಕದಲ್ಲಿ ಸ್ನಾನವನ್ನು ಮಾಡಿಸಿದರು. ಕೆಲವರು ದಿವ್ಯಾಂಬರಗಳನ್ನುಡಿಸಿದರು ಕೆಲರು ದಿವ್ಯಭೂಷಣಗಳಿಂದ ಅಲಂಕರಿಸಿದರು ನಾನು ಅವರ ಕೈಯ ಬೊಂಬೆಯಾಗಿ ಅವರಾಡಿಸಿದಹಾಗೆಲ್ಲ ಆಡುತ್ತಿದ್ದೆನು. ಬಳಿಕ ಆ ನವಮೋಹನಾಂಗಿ ಬಂದು ನನ್ನನ್ನು ಕರೆದುಕೊಂಡು ಹೋಗಿ ಮತ್ತೊಂದು ಕೊಟ್ಟಡಿಯಲ್ಲಿ ಸೇರಿಸಿದಳು. ಅಲ್ಲಿ ನನಗಾಗಿ ಒಂದು ಚಿನ್ನದ ಪೀಠವನ್ನು ಹಾಕಿ ಹೊನ್ನಿನ ಬಾಳೆಯ ಎಲೆಯಲ್ಲಿ ಸಮಸ್ತ ದಿವ್ಯಪದಾರ್ಥಗಳನ್ನು ಬಡಿಸಿದ್ದರು. ಆ ಕಾಂತೆಯಾಗ " ಓ ನನ್ನ ಮನಃಪ್ರಿಯನೇ ! ಈ ಪೀಠದಮೇಲೆ ಕುಳಿತು ಭೋಜನವನ್ನು ಮಾಡು ಬಹಳವಾಗಿ ಬಳಲಿರುವಂತೆ ತೋರುತ್ತಿರುವೆ " ಎಂದು ಹೇಳಿದಳು ಯಾವುದು ಹೇಗಿದ್ದರೂ ನನಗೆ ಹೆಚ್ಚಾಗಿ ಹಸಿ

ವಾಗುತ್ತಿದ್ದುದರಿಂದ ಮನಸ್ಸನ್ನು ಸ್ವಲ್ಪ ಸಮಾಧಾನಪಡಿಸಿಕೊಂಡು ಭುಜಿಸುವುದಕ್ಕೆ ಪ್ರಾರಂಭಿಸಿದೆನು ಏನು ಹೇಳಲಿ ? ಅಂತಹ ರುಚಿಯುಳ್ಳ ಪದಾರ್ಥಗಳನ್ನು ಹಿಂದೆ ಎಂದೂ ನೋಡಿ ತಿಂದು ಅರಿಯೆನು ಆದರೂ ಮನಸ್ಸಿನಲ್ಲಿ ನೆಲೆಗೊಂಡ ಹೆದರಿಕೆಯಿಂದ ಅವೆಲ್ಲವೂ ನನ್ನ ಬುದ್ಧಿಗೆ ವಿಷಪ್ರಾಯಗಳಾಗಿಯೇ ತೋರಿದುವು ಹೇಗೆಯೋ ಊಟಮಾಡಿ ಮುಗಿಸಿಬಿಟ್ಟೆನು ಆ ಸುಂದರೀಮಣಿಯು ನನ್ನ ಭೋಜನವು ಮುಗಿವಪರ್ಯಂತರವೂ ಬಳಿಯಲ್ಲಿ ಕುಳಿತು ಯಾವ ಯಾವ ಸಂಭಾಷಣೆಯೋ ನನ್ನೊಡನೆ ಮಾಡುತ್ತಿದ್ದಳು. ಆದರೆ ನಾನು ಊಗುಟ್ಟುತ್ತ ತಲೆಯನ್ನಲ್ಲಾಡಿಸುತ್ತ ಇದ್ದೆನೇ ಹೊರತು ಪ್ರತ್ಯುತ್ತರವನ್ನು ಕೊಡಲಿಲ್ಲ ಭೋಜನಾನಂತರದಲ್ಲಿ ಹಸ್ತಪಾದಗಳನ್ನು ತೊಳೆದುಕೊಂಡೆನು. ಬಳಿಕ ಆ ರಮಣೀಮಣಿಯು ಪರಿಚಾರಿಕೆಯರಿಗೆ ಏನೋ ಹೇಳಿ ಮಜ್ಜನಭೋಜನಾದಿಗಳಿಗೆ ಹೊರಟುಹೋಗಲಾಗಿ ಅವರು ಸಕಲವಿಧಾಲಂಕಾರಗಳಿಂದ ಕೂಡಿದ ಮತ್ತೊಂದು ಕೊಟ್ಟಡಿಯೊಳಕ್ಕೆ ನನ್ನನ್ನು ಕರೆದುಕೊಂಡು ಹೋಗಿ ಅಲ್ಲಿ ಸಿದ್ಧಪಡಿಸಿದ್ದ ಮೃದುವಾದ ಹಂಸತೂಲಿಕಾತಲ್ಪದಲ್ಲಿ ಕುಳ್ಳಿರಿಸಿ “ ಪ್ರಭುವೇ ! ನಮ್ಮ ಒಡೆತಿಯು ಈಗಲೇ ಬರುವಳು ಸಿಟ್ಟುಗೊಳ್ಳದೆ ಸ್ವಲ್ಪಕಾಲವಿಲ್ಲಿ ಸಮಾಧಾನದಿಂದಿರಿ ” ಎಂದು ನುಡಿದು ಹೊರಟುಹೋದರು.

ಸತ್ಯಶೀಲನೇ ! ಆ ರಾಜಪುತ್ರನು ವಿಜಯವರ್ಮನೊಡನೆ ಆತ್ಮಕಥೆಯನ್ನು ಹೀಗೆ ಹೇಳುತ್ತ ಮತ್ತಿಂತೆಂದನು. “ರಾಜಪುಂಗವ ! ಈ ಪರಿಯಾಗಿ ಪರಿಚಾರಿಕೆಯರ ಓಡಾಟ, ಉಪಚಾರೋಕ್ತಿಗಳು, ಆ ಸುಂದರೀಮಣಿಯ ಸಂಭಾಷಣೆ ಮೊದಲಾದುವನ್ನು ನೋಡಿ, ಅದು ಸುಳ್ಳೋ ನಿಜವೋ ತಿಳಿದುಕೊಳ್ಳಲಾರದೆ ತಲ್ಲಣಿಸುತ್ತಿರಲು ಲಾವಣ್ಯನಿಧಿಯಾದ ಆ ಪದ್ಮಮಣಿಯು ಸ್ನಾನಭೋಜನಾದಿಗಳನ್ನು ಮುಗಿಸಿಕೊಂಡು ಅಸಮಾನವಾದ ಅಲಂಕಾರದಿಂದ ಶೋಭಿಸುತ್ತ ನನ್ನಬಳಿಗೆ ಬಂದು ಕಿರುನಗೆ ಸೂಸುತ್ತ “ಪ್ರಾಣೇಶ್ವರಾ ! ನಾನು ಬರುವುದಕ್ಕೆ ತಡವಾಯಿತೇ! ನನ್ನಮೇಲೆ ಕೋಪವೇ? ಅಪರಾಧವನ್ನು ಕ್ಷಮಿಸು” ಎಂದು ಬಂದು ನನ್ನ ಹಾಸಿಗೆಯಮೇಲೆ ಕುಳಿತು ಬಿಗಿದಪ್ಪಿ ಚುಂಬಿಸಿ ಕಾಮಕ್ರೀಡಾ ಕುತೂಹಲವತಿಶಯಿಸುತ್ತಿರಲು, ನನ್ನ ಭಯವು ತೀರುವಂತೆ ಸರಸವಾಗಿ ಮಾತನಾಡುತ್ತ ಆ ರಾತ್ರಿಯೆಲ್ಲವು ನನ್ನೊಡನೆ ಕೂಡಿದ್ದಳು. ಹೆಚ್ಚಿನ ಮಾತೇನು ? ರಾಜಾಗ್ರಣಿ ! ಆ ಕೋಮಲಾಂಗಿಯಿಂದ ನಾನು ಸಕಲ ಸುಖಗಳನ್ನೂ ಅನುಭವಿಸಿದೆನು. ಬೆಳಗಾದ ಬಳಿಕ ನನಗೆ ಸಕಲೋಪಚಾರಗಳೂ ನಡೆಯಿಸಲ್ಪಟ್ಟಿತು. ಆ ಸುಂದರಿ ಒಂದು ನಿಮಿಷವಾದರೂ ಎಡೆಬಿಡದೆ ನನ್ನ ಬಳಿಯಲ್ಲಿಯೇ ಇದ್ದು ಆಹಾರ ವಿಹಾರ ಶಯ್ಯಾದಿಗಳಲ್ಲಿ ನನ್ನನ್ನು ಸಂತೋಷಪಡಿಸುತಿದ್ದಳು. ಕ್ರಮಕ್ರಮವಾಗಿ ನನ್ನ ಭಯವು ತೊಲಗಿಹೋದುದರಿಂದ ಆ

ಲೀಲಾವತಿಯನ್ನು ಅಗಲಿರುವಿಕೆಯು ನನಗೂ ದುಸ್ಸಹವಾಗಿ ಏರ್ಪಟ್ಟಿದ್ದರಿಂದ ಒಂದು ಕ್ಷಣವಾದರೂ ಅವಳನ್ನು ಬಿಟ್ಟಿರದೆ ನಿರಂತರವೂ ಸಮಸ್ತ ಭೋಗಗಳನ್ನೂ ಅನುಭವಿಸುತ್ತ ಪರಮಾನಂದವನ್ನು ಪಡೆದಿದ್ದೆನು.

ಹೀಗೆ ಮೂವತ್ತು ದಿನಗಳು ಕಳೆದುವು. ಅನ್ಯೋನ್ಯವಾಗಿ ಅನುರಾಗಲತೆಯು ಹಬ್ಬಿ ಹರಡಿತು. ಬಳಿಕ ನಾವಿಬ್ಬರೂ ಒಂದುದಿನ ವಿನೋದವಾಗಿ ಮಾತನಾಡುತ್ತ ಕುಳಿತಿದ್ದೆವು. ಆಗ ನಾನು ನನ್ನ ಪ್ರಿಯೆಯನ್ನು ನೋಡಿ, "ಎಲೌ ಮುದ್ದುಗುರಿವ ಎನ್ನ ಮುಗುದೆಯೇ! ತ್ರಿಲೋಕಸುಂದರಿಯಾದ ನಿನಗೂ ನಿನ್ನ ಮೂಲವಾಗಿ ಈಸುಂದರಮಂದಿರಕ್ಕೂ ಇಲ್ಲಿರುವ ಎಲ್ಲಭಾಗ್ಯಕ್ಕೂ ನಾನೇ ನಾಯಕನಾಗಿರುವೆನು. ಯಾವ ಕೊರತೆಯೂ ಇಲ್ಲ ಆದರೆ ನೀನು ಯಾವಳೋ ನಿನ್ನ ಚರಿತ್ರೆಯೆಂತಹುದೋ ಅದು ಈವರೆಗೆ ನನಗೆ ತಿಳಿದಿರುವುದಿಲ್ಲ. ಅದನ್ನು ನನಗೆ ವಿವರವಾಗಿ ತಿಳಿಯಿಸಿ ಸಂತಸಗೊಳಿಸಬೇಕೆಂದು ಕೋರುತ್ತಿರುವೆನು.'' ಎಂದು ಕೇಳಿದೆನು.

ಈ ನುಡಿಯು ನನ್ನ ಮುಖದಿಂದ ಹೊರಡುತ್ತಲೇ ಆ ಮೋಹನಾಂಗಿಯ ಮುಖವು ವಿವರ್ಣವಾಯಿತು. ಅದಕ್ಕೆ ಮೊದಲು ನನ್ನಮೇಲೆ ಅಧಿಕಾನುರಾಗವನ್ನು ನೆಲೆಗೊಳಿಸಿದ್ದ ಆ ಲತಾಂಗಿಯು ನನ್ನನ್ನು ಅತ್ಯುಗ್ರದೃಷ್ಟಿಯಿಂದ ನಿರುಕಿಸಿ ವಿಕಟಹಾಸವನ್ನುಮಾಡಿ "ಭಟರೇ! ಬನ್ನಿಬನ್ನಿ, ಬೇಗಬನ್ನಿ ಎಂದು ಗಟ್ಟಿಯಾಗಿ ಕರೆದು ಕೈ ಚಪ್ಪಾಳೆಯನ್ನು ಹೊಡೆದಳು. ಅವಳು ಹಾಗೆ ನಡಿಯುತ್ತಲೇ ಎಲ್ಲಿಂದಲೋ ಇಬ್ಬರು ಭಯಂಕರರೂಪವುಳ್ಳ ಪುರುಷರು ಖಡ್ಗಹಸ್ತರಾಗಿ ಓಡಿಬಂದು ಮುಂದೆ ನಿಂತರು. ಆ ರಮಣಿಯುವರೊಡನೆ "ಎಲೈ ಭಟರೇ! ಮೊದಲೇ ನಾನು ಹೇಳಿದ್ದರೂ ನನ್ನ ನುಡಿಗಳನ್ನು ಲೆಕ್ಕಿಸದೆ ನಾನಾಗಿ ನನ್ನ ಚರಿತ್ರವನ್ನು ತಿಳಿಸುವವರೆಗೂ ತಡೆದಿರಲಾರದೆ ತ್ವರೆಪಟ್ಟು ನನ್ನ ಚಂತ್ರವನ್ನು ಕೇಳಿದ ಈ ಬುದ್ಧಿಹೀನನನ್ನು ಈಗಲೇ ತೆಗೆದುಕೊಂಡುಹೋಗಿ ನಾನು ಏರ್ಪಡಿಸಿರುವಮೇರಿಗೆ ಮಾಡಬೇಕಾದ ಶಿಕ್ಷೆಯನ್ನು ನಡೆಯಿಸಿ ಇವನನ್ನು ಸಮುದ್ರತೀರದ ಕಲ್ಲುಮಂಟಪದಲ್ಲಿ ಬಿಟ್ಟುಬನ್ನಿ'' ಎಂದು ಅತ್ಯುಗ್ರವಾಗಿ ಆಜ್ಞಾಪಿಸಿದಳು.

ನಾನು ಆ ನುಡಿಗಳನ್ನು ಕೇಳಿ ಭಯಭ್ರಾಂತನಾಗಿ ಅವಳನ್ನು ಅಗಲಿರಲು ಇಷ್ಟವಿಲ್ಲದೆ ದೈನ್ಯದಿಂದ ಯಾವುವನ್ನೋ ಹೇಳಬೇಕೆಂದು ಪ್ರಯತ್ನಿಸಿದೆನು. ಅವಳು ನನ್ನನ್ನು ಮಾತನಾಡಗೊಳಿಸದೆ "ಛೀ! ಛೀ! ಬಾಯಿಯನ್ನು ಮುಚ್ಚು ನೀನು ನನ್ನೊಡನಿರುವುದಕ್ಕೆ ತಕ್ಕವನಲ್ಲ. ನೀಚನಾಗಿರುವೆ. ನೀನು ಮಾಡಿದ ಅಪಚಾರದ ಫಲವನ್ನನುಭವಿಸು. ಇನ್ನು ಏನಾದರೂ ಮಾತನಾಡಿದೆಯಾದರೆ ಪ್ರಾಣಗಳನ್ನು ತೆಗೆಯಿಸುವೆನು.'' ಎಂದು ಭಯಪಡಿಸಲು ಮೂಗು ಹಿಡಿದವನಂತೆ ಸುಮ್ಮನಿದ್ದೆನು. ಬಳಿಕ ಆ ಭಟರೀರ್ವರೂ ನನ್ನ ಎರಡುತೋಳ್ಗಳನ್ನು

ಹಿಡಿದುಕೊಂಡು ಆ ಮಂದಿರದ ಹೊರಕ್ಕೆ ಎಳೆದುತಂದು ಹಾಗೆಯೇ ಫಕ್ಕನೆ ಮೇಲಕ್ಕೆಹಾರಿ ಒಂದು ನಿಮಿಷದಲ್ಲಿಯೇ ಸಮುದ್ರತೀರಕ್ಕೆ ತಂದು ಒಂದು ಬಗೆ ಯಾವ ಕಾಡಿಗೆಯನೊಂದಿಷ್ಟು ನನ್ನ ಬಲಗಣ್ಣಿಗೆ ಸವರಿ ಅಲ್ಲಿದ್ದ ಒಂದು ಕಲ್ಲು ಮಂಟಪದಲ್ಲಿ ನನ್ನನ್ನು ಬಿಟ್ಟು ಹಾರಿಹೋದರು.

ಅವರು ಹೊರಟುಹೋದ ಬಳಿಕ ಕಣ್ಣುಗಳನ್ನು ತೆರೆದು ನೋಡಲಾಗಿ ಅವರು ಅಂಜನವನ್ನು ಸವರಿದ ನನ್ನ ಬಲಗಣ್ಣು ಕುರುಡಾಗಿರುವುದನ್ನು ತಿಳಿದುಕೊಂಡು ನನ್ನಲ್ಲಿ ನಾನು “ಅಕಟಾ! ಇದು ಸ್ವಯಂಕೃತಾಪರಾಧದಿಂದ ಉಂಟಾದ ಫಲ ವಲ್ಲವೆ? ಅಂಧನಾಗಿ ಜೀವಾವಧಿ ಇರಬೇಕಾಯಿತಲ್ಲ! ಹಾ! ದೈವವೇ! ನಿರ್ಮಾ ನುಷ್ಯವಾದ ಈ ಕಡಲಿನ ದಡದಲ್ಲಿ ತೊಳಲುತ್ತ ಅಳಬೇಕಾಯಿತಲ್ಲ! ಸಮೀಪ ದಲ್ಲಿ ಎಲ್ಲಿನೋಡಿದರೂ ಒಂದು ಹಳ್ಳಿಯಾದರೂ ಇರ ವಂತೆ ಕಾಣೆನಲ್ಲಾ! ಏನು ಮಾಡಲಿ? ಅವಳ ವೃತ್ತಾಂತವೆಂತಿದ್ದರೇನು? ಅವಳನ್ನು ನಾನೇಕೆ ನಿನ್ನ ವೃತ್ತಾಂ ತವೇನೆಂದು ಕೇಳಬೇಕಾಗಿದ್ದಿತು. ಪ್ರಾಪ್ತವಾಗಿದ್ದ ಅರ್ಥವನ್ನು ಕಳೆದು ಕೊಂಡೆನಲ್ಲಾ! ದೈವವು ವಿಮುಖನಾದರೆ ಯಾರು ಏನನ್ನು ತಾನೆ ಮಾಡಲಾ ಪರು! ಯಾರಿಂದ ಏನಾಗುವುದು? ಮಾನವನು ಪಂಡಿತನಾಗಲಿ ಶೂರನಾಗಲಿ ಪ್ರಜ್ಞಾಶಾಲಿಯಾಗಲಿ ದೈವವು ವಿಮುಖನಾದರೆ ಅವನ ಪ್ರಯತ್ನಗಳೆಲ್ಲವೂ ನಿಷ್ಪ್ರಯೋಜನಗಳಾಗುತ್ತವೆಯಲ್ಲವೆ? (ಕಿಂಕರೋತಿ ನರಃಪ್ರಾಜ್ಞಃ ಶೂರೋ ಪ್ಯಥಪಂಡಿತಃ | ದೈವಂ ಯಸ್ಯಫಲಾನ್ವೇಷಿ ಕರೋತಿ ವಿಫಲಾಃ ಕ್ರಿಯಾಃ ||) ಮತ್ತು ದೈವವು ಪ್ರಾಣಿಗಳಿಗೆ ಪ್ರತಿಕೂಲನಾದರೆ, ತಂದೆ ತಾಯಿಗಳಾಗಲಿ ಅಣ್ಣತಮ್ಮಂದಿರಾಗಲಿ ಹೆಂಡತಿಯಾಗಲಿ ಯಾರೂ ಸಹಾಯಕರಾಗುವುದಿಲ್ಲವ ಲ್ಲವೆ? (ದೈವೇ ವಿಮುಖತಾಂ ಯಾತೇ ನಕೋಽಪ್ಯಸ್ತಿ ಸಹಾಯವಾನ್ ಪಿತಾ ಭ್ರಾತಾ ತಥಾ ಭಾರ್ಯಾ ವಾಥ ಸಹೋದರಃ ||) ಅಯ್ಯೋ! ಮೂವತ್ತು ದಿನ ಗಳಿಂದಲೂ ಇದ್ದಂತೆ ಈಗಲೂ ಸುಮ್ಮನೆ ಇರಲಾರದೆ ಹೋದೆನು. ಹಾಗಾ ದುದು ಹೀಗಾಗುವುದಕ್ಕೇ ಇರಬಹುದು. ಆ ಮಾತನ್ನು ಕೇಳದೆ ಇದ್ದಿದ್ದರೆ ನಿರುಪಮಾನ ಭೋಗಗಳನ್ನನುಭವಿಸುತ್ತ, ಆ ರಮಣೀತಿಲಕವನ್ನು ಕೂಡಿ ಆನಂ ದಿಸುತ್ತಿದ್ದೆನಲ್ಲವೆ?” ಎಂದು ಹಲುಬಿ ನನ್ನ ಅವಿವೇಕಕ್ಕಾಗಿ ನಾನೆ ಪಶ್ಚಾತ್ತಾ ಪವನ್ನು ಹೊಂದುತ್ತ ಮುಂದಿನ ಕರ್ತವ್ಯವನ್ನರಿಯದೆ ಭಗವಂತನನ್ನು ಸ್ಮರಿ ಸುತ್ತ “ತೇನವಿನಾತೃಣಮಪಿನಚಲತಿ ಎಂಬಂತೆ ದೈವಸಂಕಲ್ಪದಂತೆ ನಡೆವುದ ಲ್ಲದೆ ನಮ್ಮ ಯತ್ನವೇನೂ ಇಲ್ಲ” ಎಂದು ಬಗೆದು ಆ ಕಲ್ಲುಮಂಟಪದಲ್ಲಿ ಕುಳಿ ತಿದ್ದೆನು.

ಬಳಿಕ ಒಂದಿಷ್ಟುಹೊತ್ತಿಗೆ ಇಗೋ ಇಲ್ಲಿ ಕುಳಿತಿರುವ ಹನ್ನೊಂದು ಮಂದಿಯು ಒಂದಾಗಿ ನನ್ನಬಳಿಗೆ ಬಂದರು ಇವರೆಲ್ಲರೂ ಏಕಾಕ್ಷಿಗಳಾಗಿಯೇ

ಇದ್ದುದಲ್ಲದೆ ಎಲ್ಲರಿಗೂ ಬಲಗಣ್ಣುಗಳೆ ಅಡಗಿಹೋಗಿರುವುದನ್ನು ನೋಡಿದರೆ ನನಗೆ ಪರಮಾಶ್ಚರ್ಯವಾಯಿತು. ತಮ್ಮಂತೆಯೇ ದಕ್ಷಿಣನೇತ್ರ ಹೀನನಾಗಿರುವ ನನ್ನನ್ನು ನೋಡಿ ಇವರು ಗಹಗಹಿಸಿ ನಕ್ಕು ತಾವು ತದ್ವಿಷಯವನ್ನೆಲ್ಲ ಅರಿತವರಂತೆ "ಎಲೈ ಮಿತ್ರನೇ! ನೀನು ಹನ್ನೆರಡನೆಯವನಾಗಿ ಬಂದೆಯಾ? ಬಾಬಾ! ನಮ್ಮೊಡನೆ ನೀನೂ ಸೇರು. ನಿನ್ನ ವಿಷಯವನ್ನಾಗಲೀ ಕ್ಷೇಮವನ್ನಾಗಲಿ ನಾವು ವಿಚಾರಿಸಬೇಕಾಗಿರುವುದಿಲ್ಲ. ಏಕೆಂದರೆ ನಾವೂ ಕ್ರಮಕ್ರಮವಾಗಿ ನೀನು ಹೋಗಿದ್ದ ಸ್ಥಲಕ್ಕೆಯೇ ಹೋಗಿ ಆ ಮಾಯಾಸುಂದರಿಯಲ್ಲಿ ಸಮಸ್ತ ಭೋಗಗಳನ್ನೂ ಅನುಭವಿಸುತ್ತಿದ್ದವರೇ. ಪಾಗ್ದೋಷದಿಂದೀ ನಮಗೂ ನಿನಗೆ ಸಂಭವಿಸಿದ ಗತಿಯೇ ಸಂಭವಿಸಿತು. ನೀನು ನಮಗಿಂತಲೂ ಬುದ್ಧಿವಂತನೇನೂ ಅಲ್ಲ. ಆದುದರಿಂದಲೇ ನಮ್ಮ ದಶೆಯನ್ನು ನೀನೂ ಅನುಭವಿಸಿದೆ" ಎಂದು ಹೇಳಿ ನನ್ನ ಚರಿತ್ರವನ್ನು ಕಡೆವರೆಗೆ ಕೇಳಿ ತಿಳಿದುಕೊಂಡು ತಮ್ಮ ಚರಿತ್ರೆಯನ್ನು ಒಕ್ಕಣಿಸಿದರು. ಕೊನೆಗೆ ಎಲ್ಲರಕಥೆಗಳೂ ಒಂದಾಗಿಯೇ ಪರ್ಯವಸಾನವಾದುವು.

ಬಳಿಕ ನಾನಿವರೊಡನೆ ಸ್ನೇಹವನ್ನು ಮಾಡಿ "ಸಖರೇ! ನೀವು ಇಷ್ಟು ಕಾಲದವರೆಗೆ ಈ ಸ್ಥಲದಲ್ಲಿರುವದಕ್ಕೆ ಕಾರಣವೇನು? ಇಲ್ಲಿ, ಈ ನಿರ್ಜನ ಪ್ರದೇಶದಲ್ಲಿ ಹೇಗೆ ಜೀವಿಸುತ್ತಿದ್ದಿರಿ" ಎಂದು ಕೇಳಿದೆನು. ನನ್ನ ಮಾತುಗಳನ್ನು ಕೇಳಿ, ಅವರಲ್ಲಿ ಮೊದಲನೆಯವನು "ಅಯ್ಯಾ! ಬಹುದೂರದವರೆಗೆ ಈ ಪ್ರಾಂತ್ಯದಲ್ಲೆಲ್ಲಿಯೂ ಯಾವ ಹಳ್ಳಿಯೂ ಇಲ್ಲದಿರುವುದರಿಂದಲೂ, ಯಾವ ದಿಕ್ಕಿಗೆ ಹೋಗುವುದಕ್ಕೂ ಪರ್ವತಪಂಙ್ತಿಗಳಡ್ಡವಾಗಿರುವುದರಿಂದಲೂ ಹೋಗಲಾರದೆ ಅಡವಿಗಳಲ್ಲಿರುವ ಹಣ್ಣುಕಾಯಿಗಳನ್ನೂ ಗೆಡ್ಡೆಗೆಣಸುಗಳನ್ನೂ ತಿಂದು ಕಾಲಯಾಪನ ಮಾಡುತ್ತಿದ್ದೆನು. ಬಳಿಕ ಈ ಹತ್ತುಮಂದಿಯೂ ನನ್ನೊಡನೆ ಬಂದು ಸೇರಲು ಪರಸ್ಪರವಾಗಿ ಮೈತ್ರಿಯನ್ನು ಹೊಂದಿ ಯಾವುದಾದರೊಂದು ಹಡಗು ಕಾಣುವವರೆಗೂ ಇಲ್ಲಿಯೇ ಇರುವುತೆ ಎಲ್ಲರೂ ನಿಷ್ಕರ್ಷಿಸಿಕೊಂಡು ಇಲ್ಲಿಯೇ ಇರುತ್ತೇವೆ" ಎಂದು ಹೇಳಿದನು. ಬಳಿಕ ನಾವು ಹನ್ನೆರಡು ಮಂದಿಯೂ, ಸಮೀಪಾರಣ್ಯಗಳಿಗೆ ಹೋಗಿ ಕಾಯಿಕಸರುಗಳನ್ನು ತಂದುಕೊಂಡು ತಿಂದು ಬುಗ್ಗೆಗಳ ನೀರನ್ನು ಕುಡಿಯುತ್ತ ನಾನಲ್ಲಿಗೆ ಬಂದು ಸೇರಿದ ಬಳಿಕ ಐವತ್ತೈದು ದಿನಗಳಾ ಮಂಟಪದಲ್ಲಿ ವಾಸಮಾಡುತ್ತಿದ್ದೆವು.

ಹೀಗಿರುತ್ತಿರಲು ಒಂದುದಿನ ಸಮುದ್ರದಲ್ಲಿ ಒಂದು ಹಡಗು ದಾರಿತಪ್ಪಿ ನಾವಿರುವಕಡೆಗೆ ಸಮೀಪವಾಗಿ ಬಂದು ನಿರ್ಮಾನುಷ್ಯವಾದ ಆಸ್ಥಳದಲ್ಲಿ ನಾವಿದ್ದುದನ್ನು ನೋಡಿ ನಮ್ಮನ್ನು ತವ್ಮಂತೆಯೇ ಹಡಗಿನಲ್ಲಿ ವಿಪತ್ತನ್ನು ಪಡೆದವರನ್ನಾಗಿ ಬಗೆದು ಮರುಗಿ ಒಂದು ದೋಣಿಯನ್ನು ದಡಕ್ಕೆ ತಂದು ನಮ್ಮನ್ನು

ಕರೆದುಕೊಂಡು ಹೋಗಿ ತಮ್ಮನು ಹಡಗಿನಮೇಲೆ ಹತ್ತಿಸಿಕೊಂಡು ನಮ್ಮ ಚರಿತ್ರೆಯನ್ನು ಕೇಳಿ ಇವರಾಶ್ಚರ್ಯವನ್ನು ತಾಳಿ "ಅಹುದಹುದು! ಈ ಬೆಟ್ಟಗಳಲ್ಲಿ ಮಹಾಭೂತಗಳು ಇವೆಯೆಂದೂ ವಿಚಿತ್ರಗಳಾದ ಕಾರ್ಯಗಳನ್ನು ಮಾಡುತ್ತಿರುವುವೆಂದೂ ಅನೇಕರು ಹೇಳಿದುದನ್ನು ಕೇಳಿರುವೆವು. ಅಂತಹ ಭೂತವಾವುದೋ ನಿಮ್ಮನ್ನು ತಂದು ಇಂತಹ ಕಷ್ಟಕ್ಕೆ ಗುರಿಮಾಡಿರುವುದು" ಎಂದು ನುಡಿದು ಅಷ್ಟರಲ್ಲಿ ಅನುಕೂಲಮಾರುತವು ಬೀಸಿದುದರಿಂದ ಹಡಗನ್ನು ತಿರುಗಿಸಿ ನಿರಪಾಯವಾಗಿ ತೆಗೆದುಕೊಂಡು ಬಂದು ಒಂದುಕಡೆ ಇಳಿಸಿ, ನಮ್ಮನ್ನು ಕಂಡು, "ಎಲೈ ಮಿತ್ರರೇ! ಇಲ್ಲಿಗೆ ಸ್ವಲ್ಪ ದೂರದಲ್ಲಿ ಒ ದು ದೊಡ್ಡ ಪಟ್ಟಣವಿರುವುದು. ನೀವಲ್ಲಿಗೆ ಹೋದರೆ ನಿಮ್ಮನಿಮ್ಮ ದೇಶಗಳಿಗೆ ಮಾರ್ಗಗಳನ್ನು ತಿಳಿದುಕೊಂಡು ಹೋಗಬಹುದು. ದಯವಿರಲಿ! ಸ್ನೇಹಿತರನ್ನು ಮರೆಯಬೇಡಿ" ಎಂದು ಹೇಳಿ ನಮ್ಮನ್ನು ಬಿಳ್ಕೊಂಡು ಹಡಗಿನ ಹಾಯಿಗಳನ್ನು ಬಿಚ್ಚಿ ಬಾರಿಬಾರಿಗೂ ನಮಸ್ಕಾರಗಳನ್ನು ಮಾಡುತ್ತ "ಆಪಟ್ಟಣಕ್ಕೆ ದಾರಿಯದೇ" ಎಂದು ಪಟ್ಟಣದ ದಾರಿಯನ್ನು ನಿರ್ದೇಶಿಸುತ್ತ ಆ ಹಡಗಿನವರು ಹೊರಟುಹೋದರು.

ರಾಜಪುಂಗವ! ನಾವೆಷ್ಟು ದೂರದಿಂದ ಪ್ರಯಾಣವಾಗಿಬಂದೆವೋ ಹೇಳಲಾರೆವು. ನಾವು ಹಡಗಿನಿಂದ ಇಳಿದು ಇಲ್ಲಿಗೆ ಬರುವುದಕ್ಕೆ ಮೂರುತಿಂಗಳ ಕಾಲವು ಹಿಡಿಯಿತು. ಸಮುದ್ರತೀರದಿಂದ ಹೊರಟುದುಮೊದಲು ಅಲ್ಲಲ್ಲಿ ಇದಿರಾಗಿ ಬಂದ ದಾರಿಗರನ್ನು ಕೇಳುತ್ತ ಈ ಸ್ಥಿತಿಯಿಂದಲಾದರೂ ಬದುಕಿಬಂದೆವು. ನಿಮ್ಮ ಸನ್ನಿಧಿಯನ್ನು ಸಂತೋಷದಿಂದ ಸೇರಿದೆವು. ನೀವು ನಮ್ಮನ್ನು ಕೃಪಾಪೂರ್ವಕವಾಗಿ ಕಂಡು ಕೇಳಿದುದರಿಂದ ನಮ್ಮೆಲ್ಲರ ಚರಿತ್ರೆಯನ್ನು ನಿಮಗೆ ಬಿನ್ನವಿಸಿವೆನು. ಇಲ್ಲಿಂದ ನಮ್ಮ ಪಟ್ಟಣಗಳಿಗೆ ಹೋಗುವ ದಾರಿಯನ್ನು ತಿಳಿಸಿ ಸಹಾಯಮಾಡಬೇಕೆಂದು ಪ್ರಾರ್ಥಿಸುತ್ತೇವೆ" ಎಂದು ಉಗ್ರಸೇನನು ತನ್ನ ಕಥೆಯನ್ನು ಮುಗಿಸಿದನು ಉಳಿದವರು ಕ್ರಮವಾಗಿ ತಮ್ಮತಮ್ಮ ಹೆಸರು, ದೇಶ ಇವುಗಳನ್ನುಮಾತ್ರವೇ ಹೇಳಿ, "ನೃಪಶಾರ್ದೂಲ! ಉಗ್ರಸೇನನು ಹೇಳಿದ ಕಥೆಗೂ ನಮ್ಮ ಕಥೆಗೂ ಸ್ವಲ್ಪವಾದರೂ ವ್ಯತ್ಯಾಸವಿಲ್ಲ. ಎಲ್ಲರ ಚರಿತ್ರವೂ ಒಂದೇ, ಎಂದು ಬಿನ್ನವಿಸಿ ಅವರವರ ಗ್ರಾಮಗಳನ್ನು ತಿಳಿಸಿದರು. ಆ ವಿಜಯವರ್ಮನೂ ಸಭ್ಯರೂ ಅದ್ಭುತಗಳಾದ ಆ ರಾಜಪುತ್ರರ ಚರಿತ್ರೆಗಳನ್ನು ಕೇಳಿ ಆಶ್ಚರ್ಯಮಗ್ನರಾದರು. ಬಳಿಕ ಎಲ್ಲ ರಾಜಪುತ್ರರಿಗೂ ಔತಣ, ಬಹುಮಾನಗಳು ನಡೆದುವು. ಅವರು ರಾಜನ ಅಪ್ಪಣೆಯಂತೆ ಸಚಿವಾಗ್ರಣಿಯಿಂದ ನಡೆಯಿಸಲ್ಪಟ್ಟ ಮಜ್ಜನ ಭೋಜನಾದ್ಯುಪಚಾರಗಳನ್ನು ಅಂಗೀಕರಿಸಿ ವಸ್ತ್ರಭೂಷಣಾದಿಗಳನ್ನು ಕೈಕೊಂಡು ಆನಂದಪಟ್ಟರು. ಬಳಿಕ ರಾಜನು, ಅಯ್ಯಾ! ನೀವೆಲ್ಲರೂ ಬಗೆಬಗೆಯ ಕಷ್ಟಗಳನ್ನನುಭವಿಸಿ ಬಹಳವಾಗಿ ಬಳಲಿರುವಿರಿ.

ಆದುದರಿಂದ ನಿಮ್ಮ ಬಳಲಿಕೆಯು ತೀರುವವರೆಗೂ ಇಲ್ಲಿಯೇ ಇರಿ. ನಮ್ಮ ಸಚಿವಾಗ್ರಣಿಯು ನಿಮಗೆ ಉಚಿತವಾದ ರೀತಿಯಲ್ಲಿ ಆಹಾರಾದಿಗಳನ್ನೇರ್ಪಡಿಸುವನು. ಕೆಲವು ತಿಂಗಳವರೆಗೆ ವಿಶ್ರಾಂತಿಸುಖವನ್ನನುಭವಿಸಿರಿ. ಬಳಿಕ ನಿಮ್ಮ ನಿಮ್ಮ ಪಟ್ಟಣಗಳಿಗೆ ನಿಮ್ಮನ್ನು ಸೇರಿಸುವೆನು" ಎಂದು ಹೇಳಿ ಎಲ್ಲರಿಗೂ ಅಪ್ಪಣೆಯನ್ನು ಕೊಟ್ಟು ತಾನು ಓಲಗದ ಚಾವಡಿಯಿಂದ ಎದ್ದು ಹೊರಟುಹೋದನು.

ಎಂದೀಪರಿಯಾಗಿ ಚಿದಾನಂದಮುನಿಯು ನುಡಿದು, "ವತ್ಸ! ಸತ್ಯಶೀಲ! ಇದು ದೊಡ್ಡಕಥೆ. ಇನ್ನೂ ಹೇಳಬೇಕಾಗಿರುವುದು. ಹೊತ್ತಾಯಿತು, ಶ್ರಮವು ಹೆಚ್ಚಿತು. ಆದುದರಿಂದ ಇದನ್ನಿಲ್ಲಿಗೆ ನಿಲ್ಲಿಸುವೆನು. ಮುಂದಿನ ಇಳಿದಾಣದಲ್ಲಿ ನೀನು ಕೇಳಿದರೆ ಉಳಿದಿರುವ ಕಥಾಭಾಗವನ್ನು ಹೇಳುವೆನು ಎಂದು ಹೇಳಿ ಸುಮ್ಮನಾದನು. ಸತ್ಯಶೀಲನು ಹಾಗೆಯೇ ಆಗಲೆಂದು ಹೇಳಿದನು. ಅವರು ಆದಿನವೆಲ್ಲ ಅಲ್ಲಿಯೇ ಇದ್ದು ಅರುಣೋದಯದಲ್ಲೆದ್ದು ಸ್ನಾನಾದಿಗಳನ್ನು ಮುಗಿಸಿಕೊಂಡು ಹೊರಟು ಆರುತಾಸಿನವರೆಗೆ ನಡೆದು ಅಡವಿಯನ್ನೆಲ್ಲ ಕಳೆದು ಒಂದು ನದಿಯ ಕರೆಯಲ್ಲಿ ನಿಂತು ಸ್ನಾನಮಾಡಿ ನಡೆದುಬಂದ ಬಳಲಿಕೆಯನ್ನು ತೀರಿಸಿಕೊಂಡು ಆಹ್ನಿಕಕ್ರಿಯೆಗಳನ್ನು ನಿರ್ವರ್ತಿಸಿ ಕಾಡಿನಲ್ಲಿದ್ದ ಹಣ್ಣುಹಂಪಲುಗಳಿಂದ ಕ್ಷುತ್ತನ್ನು ಕಳೆದುಕೊಂಡು ಒಂದು ಬಂಡೆಯಮೇಲೆ ಸುಖವಾಗಿ ವಿಶ್ರಮಿಕೊಂಡರು.

ಇಂತು ಹತ್ತನೆಯ ದಿನದ ಕಥೆ ಮುಗಿದುದು.



## —: ಹನ್ನೊಂದನೆಯ ದಿನದ ಕಥೆ. :—

ಭವದುಃಖನಿರಾಸಾಯ ಸಾಧುಲೋಕೈಕ ಬಂಧವೇ |
ಚರಾಚರ ನಿವಾಸಾಯ ಶ್ರೀನಿವಾಸಾಯತೇ ನಮಃ ||

## ಹೇಮವಲ್ಲಿಯ ಕಥೆ.

ಚಿದಂಬರಮುನಿಯು ಬಂಡೆಯಮೇಲೆ ಸುಖವಾಗಿ ವಿಶ್ರಮಿಸಿಕೊಂಡಿರಲು ಸತ್ಯಶೀಲನು ಮೆಲ್ಲಗೆ ಸಮೀಪಕ್ಕೆ ಬಂದು "ಗುರುವರ್ಯ! ನಿನ್ನೆಯದಿನ ಪ್ರಾರಂಭಿಸಿದ ಕಥೆಯು ಇನ್ನೂ ಮುಗಿಯಲಿಲ್ಲವೆಂದೂ ನಾಳೆ ನೀನು ಕೇಳಿದರೆ ಹೇಳುವೆನೆಂದೂ ಅಪ್ಪಣೆಕೊಡಿಸಿದ್ದಿರಲ್ಲವೆ ? ಸ್ವಾಮಿ! ಬಹುವಿನೋದವನ್ನುಂಟುಮಾಡುವ ನಿನ್ನೆಯ ಕಥೆಯನ್ನು ಕೇಳಿದದು ಮೊದಲು, ನನ್ನ ಮನಸ್ಸೇ ಚಲಿತವಾಗಿದೆ. ತತ್ಕಥೆಯೇ ಬಾರಿಬಾರಿಗೂ ಮನಃಪಥದಲ್ಲಿ ಎಡೆಬಿಡದೆ ತಿರುಗಾಡತೊಡಗಿದೆ. ದಯವಿಟ್ಟು ಆ ಕಥೆಯ ಶೇಷವನ್ನು ಹೇಳಿ ಮುಗಿಸಬೇಕೆಂದು ಪ್ರಾರ್ಥಿಸುತ್ತೇನೆ ಎಂದು ಕೇಳಲು ಯೋಗಿಪುಂಗವನಿಂತೆಂದನು.

ವತ್ಸ ! ಸತ್ಯಶೀಲ ! ಲಾಲಿಸು. ವಿಜಯವರ್ಮನು ರಾಜಕುಮಾರೋಕ್ತ ಸ್ವಚರಿತ್ರವನ್ನು ಕೇಳಿದುದು ಮೊದಲು ಆ ವಿನೋದಕರವಾದ ವಿಷಯವನ್ನು ತಿಳಿದುಕೊಳ್ಳಬೇಕೆಂಬ ಇಚ್ಛೆಯುಳ್ಳವನಾಗಿ ತ್ವರೆಪಡುತ್ತ ತದ್ವಿಷಯವನ್ನು ಆಮೂಲಾಗ್ರವಾಗಿ ತಿಳಿವುದಕ್ಕೆ ಅನೇಕವಿಧಗಳಾದ ಉಪಾಯಗಳನ್ನು ಅನ್ವೇಷಿಸಲಾರಂಭಿಸಿದನು. ಆದರೆ ಒಂದುಪಾಯವೂ ಸಾಗಲಿಲ್ಲ. ಬಳಿಕ ಆತನು ತನ್ನಲ್ಲಿ ಧೈರ್ಯಸಾಹಸಗಳನ್ನು ಬಿಟ್ಟರೆ ಬೇರೆ ಸಾಧನಗಳಿಂದ ಆ ರಾಜಕುಮಾರರು ಹೇಳಿದ ವೃತ್ತಾಂತದ ನೆಲೆಯನ್ನು ತಿಳಿಯಲು ಶಕ್ಯವಲ್ಲವೆಂದು ಬಗೆದು ಒಂದುದಿನದ ಅರ್ಧರಾತ್ರೆ ಸಮಯದಲ್ಲಿ ಯಾರ ಸಂಗಡಲೂ ಹೇಳದೆ ಒಂದು ಜವೋಪೇತವಾದ ಕುದುರೆಯನ್ನು ಹತ್ತಿ ಖಡ್ಗಹಸ್ತನಾಗಿ ರಾಜಕುಮಾರರು ಹೇಳಿದುದರಿಂದ ತಾನು ತಿಳಿದುಕೊಂಡ ಕುರುಹುಗಳನ್ನೂ ಆದಿಕ್ಕನ್ನೂ ನೆನಪು ಮಾಡಿಕೊಳ್ಳುತ್ತ ಪಟ್ಟಣವನ್ನು ಬಿಟ್ಟು ಪ್ರಯಾಣವಾಡಿದನು.

ಆ ರಾಜನು ಹಾಗೆ ಹೋಗಿಹೋಗಿ ಮಹಾರಣ್ಯವೊಂದನ್ನು ಪ್ರವೇಶಿಸುವಷ್ಟರಲ್ಲಿ ಹೊತ್ತುಹುಟ್ಟಿತು. ತಾನೆಷ್ಟುದೂರದವರೆಗೆ ಬಂದಿರುವುದನ್ನೂ ತಿಳಿದುಕೊಳ್ಳಲಾರದೆ ಕಾಡಿನಲ್ಲಿರುವ ಮರಗಳ ಸಂದುಗಳಲ್ಲಿ ಪ್ರವೇಶಿಸಿ ಮಧ್ಯಾಹ್ನದವರೆಗೆ ಪ್ರಯಾಣಮಾಡಿ ಗಿರಿಪ್ರವಾಹವೊಂದು ಹರಿಯುತ್ತಿರಲು ಅಲ್ಲಿ ಕುದುರೆಯನ್ನಿಳಿದು ಅದಕ್ಕೆ ನೀರುಕುಡಿಸಿ ಮೇಯುವುದಕ್ಕೆ ಬಿಟ್ಟು ತಾನು ಕಾಲ್ಯೋಚಿತ ಕೃತ್ಯಗಳನ್ನು ಮುಗಿಸಿ, ತಂತಿದ್ದ ಭಕ್ಷ್ಯಗಳಲ್ಲಿ ಕೆಲವನ್ನು ತಿಂದು ಆ ನದಿಯ ಮಧುರವಾದ ನೀರನ್ನು ಕುಡಿದು, ತೀರದಲ್ಲಿ ಕುಳಿತು ಅಪರಿಚಿತವಾಗಿಯೂ ನೇರವಾದ ದಾರಿಯಿಲ್ಲದೆ ವಕ್ರವಕ್ರವಾಗಿಯೂ ಇರುವ ಮಾರ್ಗದಲ್ಲಿ ಗಮ್ಯಸ್ಥಾನವಾದ ದಿಕ್ಕಿನಲ್ಲಿರುವುದನ್ನೂ ಅರಿಯದೆ ಬಂದ ಪರಿಯನ್ನು ಆಲೋಚಿಸುತ್ತ ತನ್ನಲ್ಲಿ "ಬರಬಾರದು, ಬಂದುಬಿಟ್ಟುದಾಯಿತು. ಉದ್ದೇಶಿಸಿದ ಕಾರ್ಯದಲ್ಲಿ ಜಯವನ್ನು ಪಡೆಯದೆ ಹಿಂದಿರುಗುವುದು ಪುರುಷಲಕ್ಷಣವಲ್ಲ. ನೀಚರು ಮುಂದೆ ವಿಘ್ನವಾಗುವುದೆಂಬ ಭಯದಿಂದ ಯಾವ ಕಾರ್ಯವನ್ನೂ ಪ್ರಯತ್ನಿಸುವುದೇ ಇಲ್ಲ. ಮಧ್ಯಮತರಗತಿಯವರು ತಮ್ಮ ಕಾರ್ಯಕ್ಕೆ ವಿಘ್ನಗಳು ಪ್ರಾಪ್ತವಾದರೆ ಒಡನೆಯೇ ಬಿಟ್ಟುಬಿಡುವರು. ಉತ್ತಮತರಗತಿಯವರಾದರೋ ಎಷ್ಟುವಿಘ್ನಗಳು ಬಂದರೂ ಹೆದರದೆ ಆರಂಭಿಸಿದ ಕಾರ್ಯವನ್ನು ಕೊನೆಮುಟ್ಟಿಸುವರು. ಆದುದರಿಂದ ನಾನು ಉತ್ತಮತರಗತಿಯವರ ಮಾರ್ಗವನ್ನೇ ಅವಲಂಬಿಸುವೆನು. ಆದು ಪ್ರಯತ್ನಗಳು ಮನುಷ್ಯನವು, ಫಳನೆಯದಲ್ಲವೆ ಭಗವದ್ಯತ್ನವು? ಭಗವಂತನ ಸಂಕಲ್ಪವು ಹೇಗಿರುವುದೋ ನೋಡುವೆನು" ಎಂದು ನಿರ್ಧರಿಸಿ ಮತ್ತೆ ವಾರುವವನ್ನೇರಿ ಮೂಗಿಗೆ ನೇರವಾಗಿರುವ ದಾರಿಯಿಂದ ನಡೆದುನಡೆದು ಸಂಜೆಯವರೆಗೆ ಪ್ರಯಾಣಮಾಡಿದ ಬಳಿಕ ಬೆಟ್ಟದ ಕಿಬ್ಬಿಯಲ್ಲಿರುವ ಒಂದು ತಪೋವನವನ್ನು ಕಂಡನು.

ಆ ಘೋರಾರಣ್ಯದಲ್ಲಿ ಆ ಆಶ್ರಮವು ಗೋಚರಿಸಿದ ಬಗ್ಗೆ ಆ ವಿಜಯವರ್ಮನು ಬಹಳವಾಗಿ ಸಂತೋಷಿಸಿ ಸಮೀಪದ ಒಂದು ಮೈದಾನದಲ್ಲಿ ಕುದುರೆಯನ್ನು ಕಟ್ಟಿಹಾಕಿ ಪಾದಚಾರಿಯಾಗಿ ಆ ತಪೋವನವನ್ನು ಪ್ರವೇಶಿಸಿ ಆಶ್ರಮದಲ್ಲಿ ಒಬ್ಬ ತಪಸ್ವಿಯು ನಿಶ್ಚಲಚಿತ್ತದಿಂದ ತಪಸ್ಸುಮಾಡುತ್ತಿದ್ದುದನ್ನು ನೋಡಿ ಭಯಭಕ್ತಿವಿನಯಗಳುಕ್ಕುತ್ತಿರಲು ಆತನಿಗೆ ನಮಸ್ಕೃತಿಯನ್ನು ಮಾಡಿ ಕೈಮುಗಿದು ನಿಲ್ಲಲು ಅಷ್ಟರಲ್ಲಿ ಸಮಾಧಿಯಿಂದ ವಿಮುಖನಾದ ಆ ಮುನಿಯು ಸಕಲ ರಾಜಲಕ್ಷಣಗಳಿಂದ ಶೋಭಿಸುತ್ತಿರುವ ಆ ನರಶ್ರೇಷ್ಠನನ್ನು ನೋಡಿ ಆಶ್ಚರ್ಯಪಟ್ಟು ಕುಳಿತುಕೊಳ್ಳೆಂದು ಕಣ್ಣುಸನ್ನೆಮಾಡಿದನು. ಆ ಸನ್ನೆಯನ್ನರಿತು ಮಾಳವನಾಥನು ಸಮೀಪದಲ್ಲಿ ಒದಗಿ ಕುಳಿತುಕೊಂಡನು. ಮುನೀಂದ್ರನು ಸ್ವಲ್ಪಹೊತ್ತಿಗೆ ತನ್ನ ನಿಷ್ಠೆಯನ್ನು ಸಾಕುಮಾಡಿ ಅರಸನನ್ನು ಕಂಡು ಆತನ ಪೂರ್ವೋತ್ತರ ಚರಿತ್ರವನ್ನು ಆತನ ಮುಖದಿಂದರಿತುಕೊಳ್ಳಬೇಕೆಂದು ಬಯಸಿದನು. ಆಗ ವಿಜಯನಗರಾಧಿಪನು, ತನ್ನ ಬಳಿಗೆ ಏಕನೇತ್ರರಾದ ರಾಜಪುತ್ರರು ಬಂದು ತಮ್ಮತಮ್ಮ ಚರಿತ್ರೆಯನ್ನು ಹೇಳಿದುದು ಮೊದಲ್ಗೊಂಡು, ಅವರು ಹೇಳಿದ ವರ್ತಮಾನದ ನಿಜಸ್ಥಿತಿಯನ್ನು ತಿಳಿದುಕೊಳ್ಳುವುದಕ್ಕಾಗಿ ತಾನು ಪ್ರಯಾಣಮಾಡಿ ಆಶ್ರಮಕ್ಕೆ ಬರುವರೆಗೂ ನಡೆದ ಸಮಸ್ತವನ್ನೂ ವಿಶದವಾಗಿ ಹೇಳಿ, ತಾನು ಪ್ರಯತ್ನಿಸಿದ ಕಾರ್ಯವು ನೆರವೇರುವ ಉಪಾಯವನ್ನು ತಿಳಿಸಬೇಕೆಂದು ಆತನನ್ನು ಪ್ರಾರ್ಥಿಸಿದನು.

ಈ ವೃತ್ತಾಂತವನ್ನು ಕೇಳಿದ ತಪಸ್ವಿಯು ಅತ್ಯಾಶ್ಚರ್ಯಪಟ್ಟು ತಲೆದೂಗಿ ಅರಸನೊಡನಿಂತೆಂದನು. "ನೀನು ಕೇಳುವ ವಿಷಯವತ್ಯದ್ಭುತವಾದುದು. ಇವರ ವಿಷಯವಾಗಿ ನಿನಗೆ ಸಹಾಯವನ್ನು ಮಾಡುವ ಶಕ್ತಿಯು ನನಗಿಲ್ಲ. ಆದರೂ ಇಷ್ಟುಪ್ರಯಾಸದಿಂದ ಪ್ರಯಾಣಮಾಡಿ ಬಂದ ನಿನ್ನನ್ನು ಸುಮ್ಮನೆ ಹೋಗೆಂದು ಕಳುಹುವುದು ನನ್ನ ಧರ್ಮವಲ್ಲ. ಆದುದರಿಂದ ಒಂದು ಉಪಾಯವನ್ನು ನಿನಗೆ ಹೇಳುವೆನು. ಇಲ್ಲಿಗೆ ಮೂರುಗಾವುದ ದೂರದಲ್ಲಿ ನನ್ನ ಗುರುಗಳು ತಪಸ್ಸುಮಾಡುತ್ತಿರುವರು. ಅವರಿರುವ ಸ್ಥಲಕ್ಕೆ ಹೋಗುವುದಕ್ಕೆ ನಿನಗೆ ದಾರಿಯನ್ನು ಹೇಳುವೆನು ಆ ಮಹಾತ್ಮರಬಳಿಗೆ ಹೋಗಿ ನಿನ್ನ ವೃತ್ತಾಂತವನ್ನವರಿಗೆ ತಿಳಿಯಿಸಿ ನನ್ನಬಳಿಗೆ ಬಂದುದನ್ನೂ ಮಾತನಾಡಿದುದನ್ನೂ ನಾನು ನಿನ್ನನ್ನು ಅವರಬಳಿಗೆ ಕಳುಹಿಸಿದುದನ್ನೂ ಸಮಗ್ರವಾಗಿ ಹೇಳು. ಆ ತಪೋಧನೋತ್ತಮನು ಅನನ್ಯ ಮಹಾಮಹಿಮನು ಸುಪ್ರಸನ್ನನು ನಿನ್ನಲ್ಲಿ ಕರುಣಿಸಿದರೆ ಎಂತಹ ಕಾರ್ಯವನ್ನಾದರೂ ನೆರವೇರಿಸಿಕೊಡಬಲ್ಲನು ಆತನ ಅನುಗ್ರಹಕ್ಕೆ ನೀನು ಪಾತ್ರನಾದರೆ ಸುಲಭವಾಗಿ ನಿನ್ನ ಕಾರ್ಯಗಳೆಲ್ಲವೂ ಈಡೇರುವುವು ಇಷ್ಟು ಮಾತ್ರವೇ ನಾನು ನಿನಗೆ ಮಾಡುವ ಉಪಕಾರವು" ಎಂದು ಹೇಳಿ ಅಲ್ಲಿಗೆ ಹೋಗುವ ಮಾರ್ಗವನ್ನೂ ಕೆಲವು ಕುರುಹುಗಳನ್ನೂ ತಿಳಿಯಿಸಿ ಬೀಳ್ಕೊಟ್ಟನು.

ವಿಜಯಾನಂದನು ಆತನಿಗೆ ನಮಸ್ಕಾರವನ್ನು ಮಾಡಿ ಅಪ್ಪಣೆಯನ್ನು ಪಡೆದು ಕುದುರೆಯನ್ನು ಹತ್ತಿ ಆ ಮಹರ್ಷಿಯು ಹೇಳಿದ ಗುರುತುಗಳನ್ನು ಕಂಡುಹಿಡಿಯುತ್ತ ನಡೆದುನಡೆದು ಮಾರನೆಯದಿನ ಸಾಯಂಕಾಲದಹೊತ್ತಿಗೆ ಆ ಮುನೀಶ್ವರನ ಆಶ್ರಮವನ್ನು ಸೇರಿ ಆತನ ದರ್ಶನವನ್ನು ಮಾಡಿಕೊಂಡು ತನ್ನ ವರ್ತಮಾನವನ್ನು ಆಮೂಲಾಗ್ರವಾಗಿ ಹೇಳಿ "ಮಹಾತ್ಮಾ! ನಿಮ್ಮ ಶಿಷ್ಯರಾದ ಸದಾನಂದಮುನಿಗಳು ಕಳುಹಲು ನಿಮ್ಮ ಸನ್ನಿಧಾನಕ್ಕೆ ಬಂದಿರುವೆನು ನನ್ನಲ್ಲಿ ಕೃಪೆಮಾಡಿ ನನ್ನನ್ನು ಫಲಿತ ಮನೋರಥನನ್ನಾಗಿ ಮಾಡಿರಿ" ಎಂದು ವಿನಯದಿಂದ ಪ್ರಾರ್ಥಿಸಿದನು.

ಆ ಮುನಿಶ್ರೇಷ್ಠನು ರಾಜನಂದನನಲ್ಲಿ ಅನುಗ್ರಹವನ್ನು ಮಾಡಿ ಉಚಿತೋಪಚಾರಗಳಿಂದ ಆತನನ್ನು ಬಹೂಕರಿಸಿ ಕುಳಿತುಕೊಳ್ಳುವಂತೆ ಹೇಳಿ ವಿಚಿತ್ರವಾದ ತದ್ವೃತ್ತಾಂತವನ್ನು ಜ್ಞಾನದೃಷ್ಟಿಯಿಂದ ತಿಳಿದುಕೊಂಡು ಆತನೊಡನಿಂತೆಂದನು.

"ಓ ರಾಜನ್ಯಕುಲಲಲಾಮ! ಯಾವ ವಿಷಯವನ್ನು ತಿಳಿದುಕೊಳ್ಳುವುದಕ್ಕಾಗಿ ನೀನು ಬಂದಿರುವೆಯೋ! ಅದು ಸಾಮಾನ್ಯವಾದ ವಿಷಯವಲ್ಲ ಸಾಮಾನ್ಯವಾಗಿ ತಿಳಿವುದೂ ಅಲ್ಲ ಬಹಳ ಗೋಪ್ಯವಾದುದು ಆ ವಿಚಾರವನ್ನು ನಾನು ಹೇಳಕೂಡದು ಆದರೆ ತಿಳಿವುದಕ್ಕೆ ಅನುಕೂಲವಾದ ಸದುಪಾಯಗಳನ್ನು ನಿನಗೆ ತಿಳಿಯಪಡಿಸುವೆನು ಮರೆಯದೆ ನಾನು ಹೇಳುವ ಉಪದೇಶದಂತೆ ನೀನು ವರ್ತಿಸಿದರೆ ಎಲ್ಲ ವಿಷಯಗಳನ್ನೂ ನೀನು ಸುಲಭವಾಗಿ ತಿಳಿಯಬಲ್ಲೆ ಅಷ್ಟೇ ಅಲ್ಲ ಆ ಸುಂದರಾಂಗಿಯೂ ಅವಳ ಸಮುತ್ಪನ್ನ ಸಂಪತ್ತೂ ನಿನಗೆ ಲಭಿಸುವುವು" ಎಂದು ಹೇಳಿ ಕೆಲವು ರಹಸ್ಯಗಳನ್ನು ತಿಳಿಸಿ ವಿಭೂತಿಯ ಒಂದು ಉಂಡೆಯನ್ನಾತನಕೈಗೆ ಕೊಟ್ಟು ಒಂದು ಮೊಳದ ಉದ್ದವುಳ್ಳ ಒಂದು ದಪ್ಪವಾದ ಕೋಲನ್ನು ಕೊಟ್ಟು ಅವುಗಳ ಮಹಿಮೆಯನ್ನೂ ಅವುಗಳನ್ನುಪಯೋಗಿಸಬೇಕಾದ ವಿಧಾನವನ್ನೂ ಸಮಯವನ್ನೂ ಚೆನ್ನಾಗಿ ಉಪದೇಶಿಸಿ "ಅಯ್ಯಾ! ನಿನಗೆ ಶುಭವಾಗುವುದು ಹೋಗು ಕಣ್ಗಳನ್ನು ಮುಚ್ಚಿಕೊಂಡು ಎರಡು ನಿಮಿಷಗಳಿದ್ದು ತೆರೆದುನೋಡಿದರೆ ಆ ಸುಂದರಿಯ ಮನೆಯಮುಂದೆ ನೀನಿರುವೆ ಜಾಗರೂಕನಾಗಿ ವರ್ತಿಸು ನಾನು ಹೇಳಿದ ರೀತಿಯನ್ನು ತಪ್ಪಿನಡೆದರೆ ಪ್ರಾಣಾಪಾಯವುಂಟಾಗುವುದು ಎಚ್ಚರಿಕೆಯಿರಲಿ" ಎಂದು ಹೇಳಿದನು.

ರಾಜನು ಆ ಮುನಿಯ ಮಾತುಗಳನ್ನು ಚೆನ್ನಾಗಿ ಮನನಮಾಡಿಕೊಂಡು ಅಪ್ಪಣೆಯನ್ನು ಪಡೆದು ಕುದುರೆಯನ್ನು ಹತ್ತಿ ಕಣ್ಗಳನ್ನು ಎರಡು ನಿಮಿಷದವರೆಗೆ ಮುಚ್ಚಿಕೊಂಡಿದ್ದು ಬಳಿಕ ತೆರೆದುನೋಡಲು ರಾಜಪುತ್ರರು ಹಿಂದೆ ಯಾವ ಭವನವನ್ನು ತನ್ನೊಡನೆ ಬಣ್ಣಿಸಿ ಹೇಳಿದ್ದರೋ ಆ ಭವನದಮುಂದೆ ತಾನು ತನ್ನ

ಕುದುರೆಯೊಡನೆ ನಿಂತಿದ್ದನು ಅದು ಪರ್ವತಚತುಷ್ಟಯದ ನಡುವೆ ಇದ್ದುದನ್ನು ಕಂಡನು ತನ್ನಲ್ಲಿ ಮುನಿಯಪ್ರಭಾವವನ್ನು ಸ್ಮರಿಸಿ ಆಶ್ಚರ್ಯಮಗ್ನನಾದನು. ಆತನನ್ನು ಮೂರುನಾಲ್ಕು ನಿಮಿಷಗಳವರೆಗೆ ಕೊಂಡಾಡಿ ಆತನ ಉಪದೇಶ ವಚನಗಳನ್ನು ಅಡಿಗಡಿಗೆ ಸ್ಮರಿಸುತ್ತಿದ್ದನು. ಎಲ್ಲವಿಧಗಳಲ್ಲಿಯೂ ತಾನು ಹಿಂದೆ ಕೇಳಿದ್ದುದಕ್ಕಿಂತಲೂ ಅತಿಶಯವೈಭವೋಪೇತವಾದ ಆ ಮಂದಿರದ ಸೊಬಗನ್ನು ಬಹಳವಾಗಿ ಮೆಚ್ಚಿಕೊಳ್ಳುತ್ತ ಕುದುರೆಯನ್ನು ಬಾಗಿಲಲ್ಲಿ ನಿಲ್ಲಿಸಿ ನಿರ್ಜನ ಪ್ರದೇಶವಾದ ಅಲ್ಲಿದ್ದ ಒಂದು ಪೀಠದಮೇಲೆ ಕುಳಿತುಕೊಂಡು ಸುತ್ತುಮುತ್ತಲು ಕಾಣಬರುತ್ತಿದ್ದ ಅದ್ಭುತ ದೃಶ್ಯಗಳನ್ನು ಮನಸಾರೆ ಬಣ್ಣಿಸುತ್ತಿದ್ದನು. ಆಗ ಆತನು ಆ ಸುಂದರಮಂದಿರದಲ್ಲಿದ್ದ ಧನರಾಶಿಗಳನ್ನೂ ರತ್ನರಾಶಿಗಳನ್ನೂ ಕಂಡುದರಿಂದ ಆತನಿಗುಂಟಾದ ಆಶ್ಚರ್ಯವನ್ನು ಭ್ರಾಂತಿಯನ್ನೂ ಮಾತುಗಳಿಂದ ಬಣ್ಣಿಸುವುದಕ್ಕೆ ಸಾಧ್ಯವಾಗದು. ಸತ್ಯಶೀಲನೇ! ಆಗ “ಇಂಥ ಭಾಗ್ಯಯುಕ್ತವಾದ ರಮಣೀಯವಾದ ಮಂದಿರವು ಭೂಲೋಕದಲ್ಲಿ ಎಲ್ಲಿಯಾದರೂ ಇರುವುದೇ? ಇಂತಿರುವ ಮನೆಯನ್ನು ನಿರ್ಮಿಸುವ ಶಕ್ತಿಯು ಮನುಷ್ಯರಿಗಿರುವುದೇ?” ಎಂಬ ಬಗೆಬಗೆಯ ಭಾವನೆಗಳು ಪುಂಖಪುಂಖವಾಗಿ ಆತನಲ್ಲಿಹುಟ್ಟಿ ನಿರ್ವಿಣ್ಣನನ್ನಾಗಿ ಮಾಡಿತು.

ಆ ಸಮಯದಲ್ಲಿ ರಾಜಪುತ್ರನು ಹೇಳಿದ್ದಂತೆಯೇ ತ್ರಿಲೋಕಸುಂದರಿಯಾದ ಕೋಮಲಾಂಗಿಯೊಬ್ಬಳು ಬಂದು ತನ್ನ ಪದ್ಧತಿಯಂತೆ ಬರಮಾಡಿಕೊಂಡವನಾಗದೆ ಅಕಸ್ಮಾತ್ತಾಗಿ ಒಬ್ಬ ಪುರುಷನು ಚಿರಪರಿಚಿತನಂತೆ ಬಂದು ಕುಳಿತುಕೊಂಡಿರುವುದನ್ನು ನೋಡಿ “ಎಲೈ ಪುರುಷೋತ್ತಮ! ನೀನಾರು? ಎಲ್ಲಿಂದ ಬಂದೆ? ಮಾನವರಿಗೆ ಅಗಮ್ಯವಾದ ಈ ಸ್ಥಲಕ್ಕೆ ಹೇಗೆ ಬಂದೆ? ಯಾವ ಕಾರ್ಯಕ್ಕೋಸ್ಕರವಾಗಿ ಬಂದೆ?” ಎಂದು ಕೇಳಿದಳು ಅವಳು ಹಿಂದೆ ತನ್ನ ಮಾಯಾಬಲದಿಂದ ಬರಮಾಡಿಕೊಂಡ ರಾಜಪುತ್ರರಬಳಿಗೆ ಬಂದು ಅವರನ್ನು ಆಲಿಂಗಿಸಿ ಚುಂಬಿಸಿದಂತೆ ಈ ರಾಜಕುಮಾರನಲ್ಲಿ ಮಾಡದೆ ಸ್ವಲ್ಪ ದೂರದಲ್ಲಿಯೇ ನಿಂತು ಮಾತನಾಡಿದಳು. ವಿಜಯವರ್ಮನಾ ಲೀಲಾವತಿಯನ್ನು ನೋಡಿ ದೇವಕಾಂತೆಯೋ ಏನೋ ಎಂದು ಭ್ರಮಿಸಿ ಮುನೀಂದ್ರನ ಉಪದೇಶವನ್ನು ಸ್ಮರಿಸಿ ನಿಶ್ಚಲವಾದ ಮನಸ್ಸಿನಿಂದ ಧೈರ್ಯವನ್ನು ಬಿಡದೆ “ಎಲೌ ಚಂದ್ರಮುಖೀ! ನನ್ನ ವೃತ್ತಾಂತವನ್ನು ಆಮೇಲೆ ಹೇಳುವೆನು ಮೊದಲು ನಿನ್ನ ಸಮಾಚಾರವನ್ನು ನುಡಿ ಈ ಮಹೋನ್ನತ ಪರ್ವತಗಳ ನಡುವೆ ನಿರ್ಮಾನುಷ್ಯವಾದೀ ಸ್ಥಲದಲ್ಲಿ ಈ ದಿವ್ಯಮಂದಿರವಿರುವುದೂ ಇದರಲ್ಲಿ ನೀನು ಒಬ್ಬಳುಮಾತ್ರ ವಾಸಮಾಡುತ್ತಿರುವುದೂ ನನ್ನ ಬುದ್ಧಿಗೆ ಬಹು ಚಿತ್ರವಾಗಿ ತೋರುತ್ತಿರುವುದು. ಹೀಗಿರುವುದಕ್ಕೆ ಕಾರಣವೇನು? ನೀನಾರು? ನಿನ್ನ ಹೆಸರೇನು? ನಿನ್ನ ತಾಯಿತಂದೆಗಳಾರು? ನಿನ್ನ ಎಲ್ಲಸಮಾಚಾರವನ್ನು ತಿಳಿಸು” ಎಂದು ಕೇಳಿದನು.

ವಿಜಯವರ್ಮನೀಪ್ರಕಾರವಾಗಿ ಕೇಳುತ್ತಲೇ ಆ ರಮಣೀರತ್ನವು ಉಗ್ರ ಮೂರ್ತಿಯಾಗಿ ಕೋಪದಿಂದ ಮುಖದಲ್ಲಿ ಬೆವರು ಹುಟ್ಟುತ್ತಿರಲು ಕ್ರೂರದೃಷ್ಟಿ ಗಳಿಂದ ಆತನನ್ನು ನೋಡಿ "ಎಲಾ ಭ್ರಷ್ಟ ! ದುಷ್ಟ ! ನೀನೇ ನನ್ನ ಚರಿತ್ರೆ ವನ್ನು ಕೇಳುವವನು ? ಇದಕ್ಕಾಗಿಯೇ ಇಲ್ಲಿಗೆ ಬಂದೆಯೋ ? ಆಗಲಿ ನಿನ್ನ ಕೊಬ್ಬ ನ್ನೀಗಲೇ ಕರಗಿಸುವೆನು ನೀಚನೆ ! ನನ್ನ ಚರಿತ್ರೆಯಿಂದ ನಿನಗಾಗುವ ಪ್ರಯೋಜ ನವೇನು ? ಏತಕ್ಕೆ ಹೀಗೆ ಕೇಳಿದೆ ? " ಎಂದು ಭಯಂಕರವಾಗಿ ನುಡಿದು ಚಪ್ಪ ಳೆತಟ್ಟಿ ಕರೆಯಲಾಗಿ ಅತಿಭಯಂಕರಾಕಾರವುಳ್ಳವರೂ ದೃಢತರ ದೀರ್ಘಕಾ ಯರೂ ಆದ ಇಬ್ಬರು ಭಟರು ಕರಾಳಕರವಾಳಗಳನ್ನು ಧರಿಸಿ ತಟ್ಟನೆಬಂದು ಆಕೆಯ ಸಮಕ್ಷದಲ್ಲಿ ನಿಂತರು ಅವರೆಲ್ಲಿಂದ ಬಂದರೆಂಬುದು ರಾಜನಿಗೆ ತಿಳಿಯ ಲಿಲ್ಲ ಆ ಸುಂದರಿ ಅವರನ್ನು ನೋಡಿ "ಎಲೈ ಭಟರೇ ! ನೀವು ಇಲ್ಲಿ ಕುಳಿತು ಕೊಂಡಿರುವ ದುಷ್ಟನನ್ನು ತೆಗೆದುಕೊಂಡು ಹೋಗಿ ತಲೆಯನ್ನು ಕಡಿದುಬಿಡಿ ಇವನು ಯೋಗ್ಯನು ನೀಚನು ಪರಮದಾರುಣನು ಮಹಾಗರ್ವಯುಕ್ತನು ಬೇಗನೆ ಹಿಡಿದುಕೊಂಡುಹೋಗಿ " ಎಂದಾಜ್ಞೆ ಮಾಡಿದಳು.

ಭಟರಿರ್ವರೂ ಆ ರಾಜನನ್ನು ಉಗ್ರದೃಷ್ಟಿಯಿಂದ ನೋಡುತ್ತ ಹಿಡಿಯ ಲಿಕ್ಕೆಂದು ಸಮೀಪಿಸುವಷ್ಟರಲ್ಲಿ ಆತನು ಸ್ವಲ್ಪವಾದರೂ ಭಯಪಡದೆ ಎರಡ ನೆಯ ಮುನಿಯು ತನಗೆ ಕೊಟ್ಟಿದ್ದ ದಂಡವನ್ನು ಬೀಸಿ ಅವರಿಬ್ಬರಮೇಲೆ ಹಾಕಿ ದನು. ಮಂತ್ರಪೂತವಾದ ಆ ಯಷ್ಟಿಯು ಕಾಲದಂಡಕ್ಕೆ ಸಮಾನವಾಗಿ ಗಿರ್ರನೆ ತಿರುಗುತ್ತ ಬಲಿಷ್ಠರಾದ ಆ ಇಬ್ಬರು ಭಟರನ್ನು ಒಂದು ಕ್ಷಣದಲ್ಲಿ ಬೀಳ ಹೊಡೆಯಲು ಅವರು ಒದೆದಾಡುತ್ತ ಪ್ರಾಣಗಳನ್ನು ಬಿಟ್ಟರು. ಆ ಅದ್ಭುತ ಕೃತ್ಯವನ್ನು ಕಂಡು ಆ ಯುವತಿಯು ಆಗ್ರಹದಿಂದ ಕೈಗಳನ್ನು ತಟ್ಟಲಾಗಿ ಮೊದಲಿನವರಿಗಿಂತಲೂ ಅಧಿಕ ಬಲವಂತರಾದ ನೂರುಮಂದಿ ಖಡ್ಗಹಸ್ತರಾಗಿ ಬಂದು ಅವಳ ಆಜ್ಞೆಯಂತೆ ರಾಜನನ್ನು ಕೊಲ್ಲುವುದಕ್ಕೆ ಬಂದರು. ಆತನು ಮತ್ತೆ ಆಪ್ರಚಂಡ ದಂಡಪ್ರಯೋಗವನ್ನು ಮಾಡಲಾಗಿ ಅದು ಅವರನ್ನು ಕೂಡ ಒಂದು ನಿಮಿಷದಲ್ಲಿ ಯಮನಮನೆಗೆ ಅತಿಥಿಗಳನ್ನಾಗಿ ಮಾಡಿತು. ಹೀಗೆ ಅವಳ ಆಜ್ಞೆಯಮೇರೆಗೆ ಬಾರಿಬಾರಿಗೂ ಇಮ್ಮಡಿಯಾಗಿ ಬಂದ ಭಟರುಗಳೆಲ್ಲರೂ ರಾಜೇಂದ್ರನ ದಂಡಪ್ರಹಾರದಿಂದ ನುಚ್ಚುನುರಿಯಾದರು.

ಈ ಪ್ರಕಾರವಾಗಿ ಅನೇಕರು ಆ ರಾಜನು ಹಾಕಿದ ದಂಡದ ಪೆಸೆಯಿಂದ ಮಡಿದುಹೋದುದನ್ನಾ ಲತಾಂಗಿ ಕಂಡು, ಬೆಗಡುಕೊಂಡಳು. ಮೈ ನಡುಗ ತೊಡಗಿತು. ತನಗೆತಾನೆ ಕಂಬನಿ ಸುರಿಯಲಾರಂಭಿಸಿತು. "ಓಹೋ! ಈತ ನನ್ನು ಸಾಮಾನ್ಯ ಮಾನವನನ್ನಾಗಿ ಬಗೆದೆನು. ಅಲ್ಲ! ಅಲ್ಲ!! ಮಹಾಪ್ರಭಾವ ಸಂಪನ್ನನು. ಇವನನ್ನು ಗೆಲ್ಲುವುದು ಅಸಾಧ್ಯವಾಗಿರುವುದು" ಎಂದು ಭಾವಿಸಿ

ತಟ್ಟನೆ ಒಳಕ್ಕೆ ಹೋಗಿ ಒಂದು ಪಾತ್ರೆಯಲ್ಲಿ ಒಂದಿಷ್ಟು ನೀರನ್ನು ತೆಗೆದುಕೊಂಡು ಬಂದು ಯಾವ ಮಂತ್ರವನ್ನೋ ಉಚ್ಚರಿಸಿ ನರಪತಿಯ ಮೇಲೆ ಪ್ರೋಕ್ಷಿಸಿದಳು. ಮತ್ತು ಎಲಾ! ಪಾಪಾತ್ಮನೇ! ನಿನಗೆ ಮನುಷ್ಯರೂಪವು ಹೋಗಿ ನಾಯಿಯ ರೂಪವು ಪ್ರಾಪ್ತವಾಗಲಿ" ಎಂದು ಅತ್ಯುಗ್ರವಾಗಿ ನುಡಿದಳು.

ಅವಳು ನೀರನ್ನು ತರುವುದಕ್ಕೆ ಒಳಕ್ಕೆ ಹೋಗುತ್ತಲೇ ಈದುಷ್ಟೆ ಮತ್ತೇನನ್ನೋ ಬಗೆದು ನನಗೆ ಕೇಡುಮಾಡುವಳೆಂದು ಬಗೆದು ಮುನಿಯು ಉಪದೇಶಿಸಿದ್ದ ಮಂತ್ರವನ್ನು ಪುನಶ್ಚರಣೆಮಾಡುತ್ತ ಕುಳಿತಿದ್ದ ಆ ವಿಜಯಸುಂದರನು, ಆ ಯುವತೀತಿಲಕವು ತನ್ನಮೇಲೆ ನೀರುಚೆಲ್ಲಿ ಹೇಳಿದ ಮಾತುಗಳನ್ನು ಕೇಳಿ ಗಹಗಹಿಸಿ ನಕ್ಕನು. ಅವಳು ತನ್ನ ಮಂತ್ರಶಕ್ತಿಯಿಂದ ಸಂಕಲ್ಪಿಸಿದಂತೆ ಆತನು ರೂಪಾಂತರವನ್ನು ಪಡೆಯದೆ ನಗುತ್ತಿದುದನ್ನು ನೋಡಿ ಅಧಿಕವಾದ ಭಯವನ್ನು ಹೊಂದಿ, "ಆಹಾ! ಇದೇನಚ್ಚರಿ? ಅಸದೃಶವಾದ ನನ್ನ ಪ್ರಜ್ಞೆಯು ಈ ಬಣಗುಮಾನವನಲ್ಲಿ ವ್ಯರ್ಥವಾಯಿತಲ್ಲ" ಎಂದು ಸ್ತಬ್ಧಳಾಗಿ ಆಲೋಚಿಸುತ್ತಿರಲು ರಾಜನು ಮುನಿದತ್ತವಾಗಿದ್ದ ವಿಭೂತಿಯ ಉಂಡೆಯಲ್ಲಿ ಸ್ವಲ್ಪವನ್ನು ತೆಗೆದುಕೊಂಡು "ಎಲೌ ಯುವತೀ! ಗುರುದತ್ತವಾದ ನನ್ನ ಪ್ರಜ್ಞೆಯನ್ನು ನೋಡು" ಎಂದು ನುಡಿದು ಅವಳಮೇಲೆ ಎರಚಿದನು. ಅಷ್ಟರಲ್ಲಿ ಕಾಲು ಮೊದಲ್ಗೊಂಡು ನಡುವಿನವರೆಗೆ ಶಿಲೆಯಾಗಿ ಪೂರ್ವಾಂಗವು ಮಾತ್ರ ಮನುಷ್ಯಾಕಾರವಾಗಿ ಮಾರ್ಪಟ್ಟಿತು. ರಾಜನನ್ನು ಹೇಗಾದರೂ ವಂಚಿಸಬೇಕೆಂದು ಆ ಅಬಲೆಯು ಆತನಿಗೆ ಎಷ್ಟೋ ಒಳ್ಳೆಯ ಮಾತುಗಳನ್ನು ಹೇಳಿ ಬಗೆಬಗೆಯ ಆಶೆಗಳನ್ನು ತೋರಿಸಿದಳು. ಚತುರನಾದ ರಾಜನು ಆ ಪ್ರಲೋಭನಗಳಿಗೆ ಒಳಪಡಲಿಲ್ಲ. ಉತ್ತರಕಾಯದ ಶಿಲಾತ್ವವನ್ನು ಹೋಗಲಾಡಿಸೆಂದು ಅವಳು ಬಹಳವಾಗಿ ಬೇಡಿಕೊಂಡಳು. ಆದರೇನು? ಯಾವುದಕ್ಕೂ ಆತನು ಪ್ರತ್ಯುತ್ತರವನ್ನು ಹೇಳಲೇ ಇಲ್ಲ. ಕಡೆಗೆ ಅವಳು ನಿರಾಶೆಯನ್ನು ಮಾಡಿಕೊಂಡು ರಾಜನಿಗೆ ತಿಳಿಯದ ಮಂತ್ರವನ್ನು ಉಚ್ಚರಿಸಿ ಯಾವುದೋ ಒಂದು ಹೆಸರಿನಿಂದ ಯಾವನೋ ಒಬ್ಬನನ್ನು ಕರೆದಳು. ಕೂಡಲೇ ಯೋಗಿಯಂತಹ ಪುರುಷನೊಬ್ಬನಲ್ಲಿಗೆ ಬಂದನು. ಅವನನ್ನು ನೋಡುತ್ತಲೇ ರಾಜನು ಅವನಮೇಲೆ ವಿಭೂತಿಯನ್ನು ಚೆಲ್ಲಿದನು. ಅವನೂ ಆ ಯುವತಿಯಹಾಗೆಯೇ ಅಧೋಭಾಗವು ಶಿಲಾಮಯವಾಗಿ ಮಾರ್ಪಟ್ಟು ನಿಂತನು.

ಬಳಿಕ ಆ ರಾಜಶೇಖರನು ಆ ವನಿತಾಮಣಿಯನ್ನು ಕಂಡು "ಎಲೌ ಸುಂದರಾಂಗಿಯೇ! ನಿನ್ನ ಗರ್ವವು ಅಡಗಿತೇ? ಈಗಲಾದರೂ ನಿನ್ನ ವೃತ್ತಾಂತವನ್ನು ಹೇಳುವೆಯಾ? ನಿರಪರಾಧಿಗಳಾದ ರಾಜಪುತ್ರರನ್ನು ತಂದು ಪ್ರೀತಿಯನ್ನು ತೋರಿಸಿ, ಅವರನ್ನು ವಶಪಡಿಸಿಕೊಂಡು ಕೊನೆಗೆ ನೇತ್ರಗಳನ್ನು ಹೋಗ

ಲಂಪಡಿಸಿ ಬಗೆಬಗೆಯ ವ್ಯಥೆಗಳನ್ನಿಟ್ಟು ನಿನ್ನ ಪಾಪ ಫಲವು ಈ ಪರಿಯಾಗಿ ಏರ್ಪಟ್ಟಿತು. ನಿನ್ನ ದುಷ್ಕಾರ್ಯಪಾರವನ್ನು ಕೇಳಿ ನಿನಗೆ ತಕ್ಕ ಶಿಕ್ಷೆಯನ್ನು ಮಾಡಿ, ಇನ್ನು ಮುಂದೆ ಯಾವ ರಾಜಸಂವಸನಿಗೂ ನಿನ್ನ ದೆಸೆಯಿಂದ ಪ್ರಾಪ್ತವಾಗುತ್ತಿದ್ದ ಉಪದ್ರವವುಂಟಾಗದಿರಲೆಂದು ಬಗೆದು ಹಾಗೆ ಮಾಡುವುದಕ್ಕಾಗಿ ಅನೇಕ ಕಷ್ಟಗಳನ್ನು ಪಟ್ಟು ಇಲ್ಲಿಗೆ ಬಂದೆನು. ಈಗಲಾದರೂ ನಿನ್ನ ವೃತ್ತಾಂತವನ್ನು ಸಾಂಗವಾಗಿ ಹೇಳದಿದ್ದರೆ ನಿನ್ನನ್ನು ಸಂಪೂರ್ಣನಾದ ಶಿಲಾವಿಗ್ರಹವನ್ನು ಮಾಡಿ ಬಿಡುವೆನು. ತಿಳಿಯಿತೆ? ಏನು? ನಿನ್ನ ಅಭಿಪ್ರಾಯವನ್ನು ತಿಳಿಯಿಸು" ಎಂದು ಕೇಳಿದನು. ಆ ಲಲನಾಮಣಿಯು [illegible] ತನ್ನ ಅಪರಾಧವನ್ನು ಒಪ್ಪಿ "ಅಹಾ! ನಾನು [illegible] ಅಪರಾಧಗಳೆಲ್ಲವೂ [illegible] ನಾನು ಒಪ್ಪಿಕೊಳ್ಳುವೆನು. [illegible] ಅವುಗಳನ್ನು ಕ್ಷಮಿಸಬೇಕೆಂದು ಬೇಡಿಕೊಳ್ಳುವೆನು. ಇನ್ನು ನನ್ನ ವೃತ್ತಾಂತವನ್ನರಿಯಬೇಕಲ್ಲವೆ? ಇದೇ ಅಲ್ಲವೆ ನಿನಗೆ ಬೇಕಾದುದು? ಅವನೀಗ ನನ್ನಂತೆಯೇ ಅರ್ಧದೇಹದ ಶಿಲಾತ್ವವನ್ನು ಪಡೆದಿರುವ ಈ ವ್ಯಕ್ತಿಯನ್ನು ಕೇಳು, ಈತನು ನನ್ನ ತಂದೆಯಲ್ಲದೆ ಬೇರೆಯಲ್ಲ" ಎಂದು ಹೇಳಲು ನೃಪಾಲನಾತನ ಕಡೆಗೆ ತಿರುಗಿ "ಅಯ್ಯಾ ನೀವು ನಿಮ್ಮ ನಿಜವಾದ ರೂಪಗಳಿಂದ ಸುಖವಾಗಿರಬೇಕೆಂಬ ಆಸೆಯಿದ್ದರೆ ವಾಸ್ತವವಾದ ನಿಮ್ಮ ಚರಿತ್ರೆಯನ್ನು ಹೇಳಿರಿ" ಎಂದು ಕೇಳಲು, ಆ ಯೋಗಿರೂಪನು ಇಂತೆಂದನು.

"ಎಲೈ ಪುರುಷೋತ್ತಮ! ನಾವು ಯಕ್ಷರು ಕುಬೇರನಜಾತಿಗೆ ಸೇರಿದವರು. ನನ್ನ ಹೆಸರು [illegible]ವರ್ಧನನು: ನನ್ನ ಹೆಂಡತಿಯು [illegible] ಈ ಸುಂದರಿ ನನ್ನ ಏಕಪುತ್ರಿಕೆಯು ಇವಳ ಹೆಸರು ವಸಂತಸೇನೆ ಯಕ್ಷರಾದ ನಾವು ದೇವಯೋನಿಯಾದುದರಿಂದ ನಮಗೆ ಕಾಮರೂಪಧಾರಣ ಸಾಮರ್ಥ್ಯವುಂಟು ನಮಗೆ ಅನೇಕ ಮಾಯೆಗಳು ಗೊತ್ತುಂಟು ನಾವು ಅಘಟಿತವಾದ ಯಾವ ಕೆಲಸವನ್ನಾದರೂ ಮಾಡಬಲ್ಲೆವು ಇದು ನಮ್ಮ ವಂಶಕ್ರಮವು ಈ ನನ್ನ ಕುಮಾರಿಯಲ್ಲಿ ನನಗೆ ಪ್ರೀತ್ಯಾಧಿಕ್ಯವು ನೆಲೆಗೊಂಡಿರುವುದು. ಆದುದರಿಂದ ಇವಳ ಇಷ್ಟಕ್ಕೆ ನಾನೆಂದೂ ವ್ಯತಿರೇಕವನ್ನು ಮಾಡಲಾರೆನು ಇವಳೊಂದುದಿನ ಭೂಲೋಕದಲ್ಲಿ ವಿಹರಿಸಬೇಕೆಂದಿಚ್ಛಿಸಿ ಹಿಮನಗದ ಬಳಿಯಲ್ಲಿರುವ ಅರಣ್ಯದಲ್ಲಿ ವಿಹರಿಸುತ್ತಿದ್ದಳು ನಿರಂತರವೂ ಇವಳನ್ನು ರಕ್ಷಿಸುವುದಕ್ಕಾಗಿ ನಾನು ಇವಳೊಡನೆಯೇ ಇರುತ್ತಿದ್ದ ವಾಡಿಕೆಯಿಂದ ಹಿಂಬಾಲಿಸಿ ಹೊರಟು ಒಂದು ರಮ್ಯಪ್ರದೇಶದಲ್ಲಿ ಕುಳಿತಿದ್ದೆನು. ಆಗ ಈ ತರುಣಿಯು ಅಲ್ಲಲ್ಲಿ ತಿರುಗಾಡುತ್ತಿದ್ದು ಒಂದುಕಡೆ ತಪಸ್ಸುಮಾಡುತ್ತಿದ್ದ ಒಬ್ಬ ತಪಸ್ವಿಯಬಳಿಗೆ ಹೋದಳು ಆಗ ಆ ತಪಸ್ವಿಯು ತಾನಾಗಿ ತನ್ನಬಳಿಗೆ ಬಂದ ಸುಂದರಿಯನ್ನು ಕಂಡು ಕಂತುಬಾಣಸಂತಪ್ತನಾಗಿ

ನಿಜಾಭಿಮತವನ್ನು ತಿಳಿಸಿದನು ಆದರೆ ಆವಳು ಒಪ್ಪಲಿಲ್ಲ "ನಾವು ಯಕ್ಷರು ಮನುಷ್ಯರೊಡನೆ ಸಂಪರ್ಕವನ್ನು ಮಾಡುವರಲ್ಲ ನೀನು ನನ್ನನ್ನು ಹೀಗೆ ಕೇಳಿದುದು ಯುಕ್ತವಲ್ಲ" ಎಂದಳು. ಮುನಿಯು ಅವಳಾಡಿವ ಆ ತಿರಸ್ಕಾರೋಕ್ತಿಗೆ ಹಿಮ್ಮೆಟ್ಟದೆ ಬಗೆಬಗೆಯಿಂದ ಮತ್ತೆಮತ್ತೆ ಪ್ರಾರ್ಥಿಸಿದನು. ಅವರತ್ತ ಸಂಭಾಷಿಸುತ್ತ ಹೊತ್ತು ಕಳೆಯುತ್ತಿರಲು ನಾನಿತ್ತ ಆತ್ಮಜಾತೆಯು ಬಹಳಹೊತ್ತು ಬಾರದೆ ತಡೆದ ಕಾರಣವನ್ನರಿಯದೆ ಅವರಿಬ್ಬರು ಮಾತನಾಡುತ್ತಿದ್ದ ಸ್ಥಲಕ್ಕೆ ಬೇಗನೆ ಹೋದೆನು ತಾನು ಮೋಹಿಸಿದ ಸತಿಗೆ ನಾನು ಜನಕನೆಂದಾತನು ತಿಳಿದು ನನ್ನೊಡನೆ "ಎಲೈ ಯಕ್ಷೇಶ್ವರ! ನಾನು ನಿನ್ನ ತನುಜಾತೆಯನ್ನು ಸ್ವೀಕರಿಸುವುದಕ್ಕೆ ಅಪೇಕ್ಷಿಸಿರುವೆನು ಆದರೆ ಈಕೆ ಇನ್ನೂ ಸಮ್ಮತಿಸಲಿಲ್ಲ ಎಷ್ಟೋ ಬೇಡಿಕೊಂಡೆನು ಆಗದೆಂದಳು. ಆದುದರಿಂದ ನೀನು ಬೋಧಿಸಿ ಈಕೆಯನ್ನು ನನ್ನ ಅಧೀನಕ್ಕೆ ಕೊಡಬೇಕು" ಎಂದು ನುಡಿದನು. ಅವನ ಮಾತುಗಳಿಗೆ ನನಗೆ ನಗೆಯುಂಟಾಯಿತು ನನ್ನ ಮಗಳಂತೆಯೇ ನಾನೂ ನುಡಿದು "ದುರಾಶೆಯನಿದನ್ನು ಬಿಡುವುದೊಳ್ಳಿತು" ಎಂದೆನು. ಬಳಿಕ ಮಹಾತಪಃಪ್ರಭಾವ ಸಂಪನ್ನನಾದ ಆತನಿಗೆ ನಮ್ಮಮೇಲಿ ಅಧಿಕವಾದ ಆಗ್ರಹವುಂಟಾಯಿತು ಮೊದಲು ನನ್ನ ಮಗಳನ್ನು ಉಗ್ರದೃಷ್ಟಿಯಿಂದ ನೋಡಿ "ಎಲೆ ದುಷ್ಟಾತ್ಮಳೇ! ನಿನ್ನನ್ನು ಕಾಮಿಸಿ ಎಷ್ಟು ಬೇಡಿಕೊಂಡರೂ ನನ್ನ ಅಭೀಷ್ಟವನ್ನು ನೆರೆವೇರಿಸದೆಹೋದೆ ನಿನ್ನನ್ನು ಒಲ್ಲೆನೆಂದು ನುಡಿದೆ ನಿನಗೆ ತಕ್ಕಶಿಕ್ಷೆಯನ್ನು ಮಾಡುವೆನು ನಾನು ಯಕ್ಷಕನ್ಯೆಯಾದುದರಿಂದ ಮನುಷ್ಯನನ್ನು ಪ್ರೀತಿಸಲೊಲ್ಲೆನೆಂದಲ್ಲವೆ ನೀನು ಹೇಳಿದುದು? ಇದುಮೊದಲು ನೀನು ಅಮಾನುಷಪ್ರದೇಶದಲ್ಲಿ ಭವನವೊಂದನ್ನೇರ್ಪಡಿಸಿಕೊಂಡು ಅಲ್ಲಿದ್ದು ತಿಂಗಳಿಗೊಬ್ಬನಂತೆ ಮನುಷ್ಯನೊಡನೆ ಸೇರುತ್ತ ವರ್ತಿಸುತ್ತಿರು ಎಂದಾದರೂ ಯಾವ ಮಾನವನೊಡನಾದರೂ ನಿನ್ನ ಚರಿತ್ರೆಯನ್ನು ಹೇಳಿದೆಯಾದರೆ ಆಗಲೆ ನಿನಗೆ ಮಾನವತ್ವವು ಪ್ರಾಪ್ತವಾಗುವುದಲ್ಲದೆ ಅವನಿಗೆ ಹೆಂಡತಿಯಾಗುವೆ ನೀನು ಲಾವಣ್ಯವತಿಯಾದುದರಿಂದ ನಿನ್ನಲ್ಲಿ ಕರುಣವನ್ನುತೋರಿ ಹೀನಮಾನವರ ವಶವಾಗದಂತೆಯೂ ಸೌಂದರ್ಯವಂತರಾಗಿರುವ ರಾಜಕುಮಾರರೊಡನೆ ಸಾಂಗತ್ಯವುಂಟಾಗುವಂತೆಯೂ ಅನುಗ್ರಹಿಸಿರುವೆನು ಇನ್ನು ಹೊರಡು ಇನ್ನೊಂದು ಮಾತನ್ನು ಕೇಳು ನಿನಗೆ ತಿಂಗಳಿಗೊಬ್ಬನಂತೆ ರಾಜಕುಮಾರರನ್ನು ತೆಗೆದುಕೊಂಡುಬಂದು ಒಪ್ಪಿಸುವ ಕೆಲಸವು ನಿನ್ನ ತಂದೆಯಿಂದ ನಡೆಯುತ್ತಿರುವಂತೆ ನಿರ್ಣಯಿಸಿರುವೆನು ನನ್ನ ಮಾತುಗಳಲ್ಲಿ ಯಾವುದೊಂದೂ ವ್ಯರ್ಥವಾಗಲಾರದು" ಎಂದು ಶಪಿಸಿ ನನ್ನನ್ನು ನೋಡಿ "ಎಲಾ! ನನ್ನ ಇಷ್ಟಾರ್ಥವನ್ನು ನೆರೆವೇರಿಸುವುದಕ್ಕೆ ಪ್ರಯತ್ನಪಡದೆ ನಿರಾಕರಿಸಿದೆ ಆದುದರಿಂದ ನಿನ್ನ ರೂಪವನ್ನು ತೊರೆದು ಯೋಗಿಯಂತಪ್ಪ ರೂಪನ್ನು ಪಡೆದು

ಮಾಯಾತುರಂಗದ ಮೂಲಕವಾಗಿ ಸುಂದರರಾದ ರಾಜಪುತ್ರರನ್ನು ತಿಂಗಳಿ
ಗೊಬ್ಬನಮೇರೆಗೆ ತಂದುಕೊಡುವ ಭಾರವು ನಿನ್ನದಾಗಿರಲಿ ಮೂವತ್ತು ದಿನಗಳು
ಕಳೆಯುತ್ತಲೇ ನಿನ್ನ ಮಗಳನ್ನು ನಿಮ್ಮ ಚರಿತ್ರೆಯನ್ನು ಹೇಳಬೇಕೆಂದು ಕೇಳು
ವರು ಆ ಕ್ಷಣದಲ್ಲಿಯೇ ಈ ತರುಣಿಯು ಅವರನ್ನು ಬಿಡುತ್ತ ಇರತಕ್ಕುದು
ಈ ಪ್ರಕಾರವಾಗಿ ಬಿಡದಿದ್ದರೆ ಇವಳು ಶಿಲೆಯಾಗಿ ಹೋಗುವಳು ಇದಲ್ಲದೆ
ಯಾವಾಗ ನೀನು ನಿಮ್ಮ ವೃತ್ತಾಂತವನ್ನು ಮತ್ತೊಬ್ಬನೊಡನೆ ಹೇಳುವೆಯೋ
ಅದುಮೊದಲು ಹತ್ತು ದಿನಗಳಿಗೆ ನೀನು ಸುಂದರವಾದ ಶಿಲಾತುರಂಗವಾಗುವೆ
ಇದಕ್ಕೆ ಅನೇಕ ಕಾರಣಗಳುಂಟಾಗುವುವು. ಒಂದುವೇಳೆ ನಿನ್ನ ಪುತ್ರಿಕೆಯು
ಕ್ಷೇಮಕ್ಕೋಸುಗವಾಗಿ ನೀನು ನಿಮ್ಮ ಚರಿತ್ರೆಯನ್ನು ಹೇಳಿಯೇತೀರಬೇಕಾದ
ಕಾರ್ಯವು ಘಟಿಸುವುದು ಹಾಗೆ ಹೇಳಿದ ಹತ್ತನೆಯದಿನ ಕಲ್ಲಿನ ಹೆಣ್ಣುಕು
ದುರೆ ಆಗುವುದು ತಪ್ಪಲಾರದು ” ಎಂದು ಶಾಪವಿತ್ತು ತಪೋನಿಷ್ಠೆಯನ್ನವಲಂ
ಬಿಸಿದನು ಬಳಿಕ ನಾವು ನಮಗೆ ಪ್ರಾಪ್ತವಾದ ದುರ್ದಶೆಗಾಗಿ ದುಃಖಪಡುತ್ತ
ಈ ಬೆಟ್ಟಗಳನಡುವೆ ಮಾಯಾಮಂದಿರವನ್ನು ಕಲ್ಪಿಸಿಕೊಂಡು ಅದರಲ್ಲಿ ಸಕಲ
ಸಂಪತ್ತನ್ನೂ ಅಶೇಷ ಸೌಕರ್ಯಗಳನ್ನೂ ಪರಿಜನಗಳನ್ನೂ ಏರ್ಪಡಿಸಿಕೊಂಡು
ಅದರಲ್ಲಿ ನನ್ನ ಕುಮಾರಿ ವಾಸಮಾಡುವಂತೆ ಸಜ್ಜುಗೊಳಿಸಿದೆನು ಇದೇ ಆ
ಮಾಯಾಮಂದಿರವು ಈತನೂಜೆಯು ಇಲ್ಲಿ ಸೇರಿ ನನ್ನನ್ನು ಸ್ಮರಿಸಿದಾಗ ಬಂದು
ಇವಳಪೇಕ್ಷಿಸುವ ಕಾರ್ಯಗಳನ್ನು ನೆರವೇರಿಸುತ್ತಿರುವಂತೆ ನಿಯಮಿಸಿ ತಾನು
ತನ್ನ ಮನಸ್ಸುಬಂದಂತೆ ವರ್ತಿಸುತ್ತಿರುವಳು ಮುನಿಯ ಶಾಪವನ್ನು ಸ್ಮರಿಸಿ
ನಾನು ನನಗೆ ಸಂಭವಿಸಿದ ಇಂತಹ ಯೋಗಿರೂಪದಿಂದ ಮಾಯಾತುರಂಗ
ವನ್ನು ಕಲ್ಪಿಸಿಕೊಂಡು ಭೂಲೋಕದಲ್ಲೆಲ್ಲ ತಿರುಗುತ್ತ ನನ್ನ ಮಗಳಿಗೆ ಅರ್ಹ
ರಾದ ರಾಜಕುಮಾರರನ್ನು ಹುಡುಕಿ ಉಪಾಯದಿಂದ ಅವರನ್ನಿಲ್ಲಿಗೆ ಬರಮಾಡಿ
ಕೊಳ್ಳುತ್ತಲಿರುವೆನು ಬಂದ ರಾಜಪುತ್ರರೊಡನೆ ಕೂಡಿ ಈ ಮುಗ್ಧೆಯು ಒಂದು
ತಿಂಗಳ ಕಾಲವು ಕಳೆದಬಳಿಕ ಅವರು “ ನಿನ್ನ ಚರಿತ್ರೆಯನ್ನು ತಿಳಿಸು ” ಎಂದು
ಕೇಳುವರು ಕೇಳುತ್ತಲೇ ನಮ್ಮ ನಿಯಮನದಂತೆ ರಾಜನಂದನರನ್ನು ಬೆಟ್ಟಗಳಿ
ಗಾಚೆ ಬಿಟ್ಟು ಒಂದುಬಗೆಯ ಅಂಜನದಿಂದ ಅವರ ಬಲಗಣ್ಣನ್ನು ಹೋಗಲಾ
ಡಿಸಿ ಬರುವಹಾಗೆ ಈಕೆಯು ಭಟರಿಗಾಜ್ಞಾಪಿಸುತ್ತಿರುವಳು ಮನುಷ್ಯರಾಗಿದ್ದು
ನನ್ನ ಈ ಕುಮಾರಿಯೊಡನೆ ಭೋಗಿಸಿದುದಕ್ಕಾಗಿ ಅಂತಪ್ಪ ಶಿಕ್ಷೆಯನ್ನು ವಿಧಿಸು
ತ್ತಿರುವುದು ನಮ್ಮ ನಿಯಮವು. ಆದ್ದರಿಂದ ಹೀಗೆ ಮಾಡುತ್ತಿಷ್ಟೆ ಪ್ರ
ಅಯ್ಯಾ! ನೀನು ಯಾರೋ ನಮಗೆ ತಿಳಿಯದು ಪದ್ಧತಿಯಮೇರೆಗೆ ಮಾಯಾ
ತುರಂಗದಿಂದ ನಾವಿಲ್ಲಿಗೆ ನಿನ್ನನ್ನು ಬರಮಾಡಿಕೊಳ್ಳಲಿಲ್ಲ ನೀನಾಗಿ ನನ್ನ ಕುಮಾ
ರಿಯನ್ನು ಈ ಉನ್ನತಗಳಾದ ಬೆಟ್ಟಗಳನ್ನು ದಾಟಿ ದುರ್ಗಮವಾದ ಈ ದೇವ

ನಿಜಾಭಿಮತವನ್ನು ತಿಳಿಸಿದನು ಆದರೆ ಅವಳು ಒಪ್ಪಲಿಲ್ಲ “ ನಾವು ಯಕ್ಷರು ಮನುಷ್ಯರೊಡನೆ ಸಂಪರ್ಕವನ್ನು ಮಾಡುವರಲ್ಲ ನೀನು ನನ್ನನ್ನು ಹೀಗೆ ಕೇಳಿದುದು ಯುಕ್ತವಲ್ಲ ” ಎಂದಳು. ಮುನಿಯು ಅವಳಾಡಿದ ಆ ತಿರಸ್ಕಾರೋಕ್ತಿಗೆ ಹಿಮ್ಮೆಟ್ಟದೆ ಬಗೆಬಗೆಯಿಂದ ಮತ್ತೆಮತ್ತೆ ಪ್ರಾರ್ಥಿಸಿದನು. ಅವರತ್ತ ಸಂಭಾಷಿಸುತ್ತ ಹೊತ್ತು ಕಳೆಯುತ್ತಿರಲು ನಾನಿತ್ತ ಆತ್ಮಜಾತೆಯು ಬಹಳಹೊತ್ತು ಬಾರದೆ ತಡೆದ ಕಾರಣವನ್ನರಿಯದೆ ಅವರಿಬ್ಬರು ಮಾತನಾಡುತ್ತಿದ್ದ ಸ್ಥಲಕ್ಕೆ ಬೇಗನೆ ಹೋದೆನು ತಾನು ಮೋಹಿಸಿದ ಸತಿಗೆ ನಾನು ಜನಕನೆಂದಾತನು ತಿಳಿದು ನನ್ನೊಡನೆ “ ಎಲೈ ಯಕ್ಷೇಶ್ವರ ! ನಾನು ನಿನ್ನ ತನುಜಾತೆಯನ್ನು ಸ್ವೀಕರಿಸುವುದಕ್ಕೆ ಅಪೇಕ್ಷಿಸಿರುವೆನು ಆದರೆ ಈಕೆ ಇನ್ನೂ ಸಮ್ಮತಿಸಲಿಲ್ಲ ಎಷ್ಟೋ ಬೇಡಿಕೊಂಡೆನು ಆಗದೆಂದಳು. ಆದುದರಿಂದ ನೀನು ಬೋಧಿಸಿ ಈಕೆಯನ್ನು ನನ್ನ ಅಧೀನಕ್ಕೆ ಕೊಡಬೇಕು ” ಎಂದು ನುಡಿದನು. ಅವನ ಮಾತುಗಳಿಗೆ ನನಗೆ ನಗೆಯುಂಟಾಯಿತು ನನ್ನ ಮಗಳಂತೆಯೇ ನಾನೂ ನುಡಿದು “ ದುರಾಶೆಯನಿದನ್ನು ಬಿಡುವುದೊಳ್ಳಿತು ” ಎಂದೆನು. ಬಳಿಕ ಮಹಾತಪಃಪ್ರಭಾವ ಸಂಪನ್ನನಾದ ಆತನಿಗೆ ನಮ್ಮಮೇಲೆ ಅಧಿಕವಾದ ಆಗ್ರಹವುಂಟಾಯಿತು ಮೊದಲು ನನ್ನ ಮಗಳನ್ನು ಉಗ್ರದೃಷ್ಟಿಯಿಂದ ನೋಡಿ “ ಎಲೆ ದುಷ್ಟಾತ್ಮಳೇ ! ನಿನ್ನನ್ನು ಕಾಮಿಸಿ ಎಷ್ಟು ಬೇಡಿಕೊಂಡರೂ ನನ್ನ ಅಭೀಷ್ಟವನ್ನು ನೆರೆವೇರಿಸದೆಹೋದೆ ನಿನ್ನನ್ನು ಒಲ್ಲೆನೆಂದು ನುಡಿದೆ ನಿನಗೆ ತಕ್ಕಶಿಕ್ಷೆಯನ್ನು ಮಾಡುವೆನು ನಾನು ಯಕ್ಷಕನ್ಯೆಯಾದುದರಿಂದ ಮನುಷ್ಯನನ್ನು ಪ್ರೀತಿಸಲೊಲ್ಲೆನೆಂದಲ್ಲವೆ ನೀನು ಹೇಳಿದುದು ? ಇದುಮೊದಲು ನೀನು ಅಮಾನುಷಪ್ರದೇಶದಲ್ಲಿ ಭವನವೊಂದನ್ನೇರ್ಪಡಿಸಿಕೊಂಡು ಅಲ್ಲಿದ್ದು ತಿಂಗಳಿಗೊಬ್ಬನಂತೆ ಮನುಷ್ಯನೊಡನೆ ಸೇರುತ್ತ ವರ್ತಿಸುತ್ತಿರು ಎಂದಾದರೂ ಯಾವ ಮಾನವನೊಡನಾದರೂ ನಿನ್ನ ಚರಿತ್ರೆಯನ್ನು ಹೇಳಿದೆಯಾದರೆ ಆಗಲೆ ನಿನಗೆ ಮಾನವತ್ವವು ಪ್ರಾಪ್ತವಾಗುವುದಲ್ಲದೆ ಅವನಿಗೆ ಹೆಂಡತಿಯಾಗುವೆ ನೀನು ಲಾವಣ್ಯವತಿಯಾದುದರಿಂದ ನಿನ್ನಲ್ಲಿ ಕರುಣವನ್ನುತೋರಿ ಹೀನಮಾನವರ ವಶವಾಗದಂತೆಯೂ ಸೌಂದರ್ಯವಂತರಾಗಿರುವ ರಾಜಕುಮಾರರೊಡನೆ ಸಾಂಗತ್ಯವುಂಟಾಗುವಂತೆಯೂ ಅನುಗ್ರಹಿಸಿರುವೆನು ಇನ್ನು ಹೊರಡು ಇನ್ನೊಂದು ಮಾತನ್ನು ಕೇಳು ನಿನಗೆ ತಿಂಗಳಿಗೊಬ್ಬನಂತೆ ರಾಜಕುಮಾರರನ್ನು ತೆಗೆದುಕೊಂಡುಬಂದು ಒಪ್ಪಿಸುವ ಕೆಲಸವು ನಿನ್ನ ತಂದೆಯಿಂದ ನಡೆಯುತ್ತಿರುವಂತೆ ನಿರ್ಣಯಿಸಿರುವೆನು ನನ್ನ ಮಾತುಗಳಲ್ಲಿ ಯಾವುದೊಂದೂ ವ್ಯರ್ಥವಾಗಲಾರದು ” ಎಂದು ಶಪಿಸಿ ನನ್ನನ್ನು ನೋಡಿ “ ಎಲಾ ! ನನ್ನ ಇಷ್ಟಾರ್ಥವನ್ನು ನೆರೆವೇರಿಸುವುದಕ್ಕೆ ಪ್ರಯತ್ನಪಡದೆ ನಿರಾಕರಿಸಿದೆ ಆದುದರಿಂದ ನಿನ್ನ ರೂಪವನ್ನು ತೊರೆದು ಯೋಗಿಯಂತಪ್ಪ ರೂಪನ್ನು ಪಡೆದು

ಮಾಯಾತುರಂಗದ ಮೂಲಕವಾಗಿ ಸುಂದರರಾದ ರಾಜಪುತ್ರರನ್ನು ತಿಂಗಳಿಗೊಬ್ಬನಮೇರೆಗೆ ತಂದುಕೊಡುವ ಭಾರವು ನಿನ್ನದಾಗಿರಲಿ ಮೂವತ್ತು ದಿನಗಳು ಕಳೆಯುತ್ತಲೇ ನಿನ್ನ ಮಗಳನ್ನು ನಿಮ್ಮ ಚರಿತ್ರೆಯನ್ನು ಹೇಳಬೇಕೆಂದು ಕೇಳುವರು ಆ ಕ್ಷಣದಲ್ಲಿಯೇ ಈ ತರುಣಿಯು ಅವರನ್ನು ಬಿಡುತ್ತ ಇರತಕ್ಕುದು ಈ ಪ್ರಕಾರವಾಗಿ ಬಿಡದಿದ್ದರೆ ಇವಳು ಶಿಲೆಯಾಗಿ ಹೋಗುವಳು ಇದಲ್ಲದೆ ಯಾವಾಗ ನೀನು ನಿಮ್ಮ ವೃತ್ತಾಂತವನ್ನು ಮತ್ತೊಬ್ಬನೊಡನೆ ಹೇಳುವೆಯೋ ಅದುಮೊದಲು ಹತ್ತು ದಿನಗಳಿಗೆ ನೀನು ಸುಂದರವಾದ ಶಿಲಾತುರಂಗವಾಗುವೆ ಇದಕ್ಕೆ ಅನೇಕ ಕಾರಣಗಳುಂಟಾಗುವುವು. ಒಂದುವೇಳೆ ನಿನ್ನ ಪುತ್ರಿಕೆಯ ಕ್ಷೇಮಕ್ಕೋಸುಗವಾಗಿ ನೀನು ನಿಮ್ಮ ಚರಿತ್ರೆಯನ್ನು ಹೇಳಿಯೇತೀರಬೇಕಾದ ಕಾರ್ಯವು ಘಟಿಸಿಸುವುದು ಹಾಗೆ ಹೇಳಿದ ಹತ್ತನೆಯದಿನ ಕಲ್ಲಿನ ಹೆಣ್ಣುಕುದುರೆ ಆಗುವುದು ತಪ್ಪಲಾರದು ” ಎಂದು ಶಾಪವಿತ್ತು ತಪೋನಿಷ್ಠೆಯನ್ನವಲಂಬಿಸಿದನು ಬಳಿಕ ನಾವು ನಮಗೆ ಪ್ರಾಪ್ತವಾದ ದುರ್ದಶೆಗಾಗಿ ದುಃಖಪಡುತ್ತ ಈ ಬೆಟ್ಟಗಳನಡುವೆ ಮಾಯಾಮಂದಿರವನ್ನು ಕಲ್ಪಿಸಿಕೊಂಡು ಅದರಲ್ಲಿ ಸಕಲ ಸಂಪತ್ತನ್ನೂ ಅಶೇಷ ಸೌಕರ್ಯಗಳನ್ನೂ ಪರಿಜನಗಳನ್ನೂ ಏರ್ಪಡಿಸಿಕೊಂಡು ಅದರಲ್ಲಿ ನನ್ನ ಕುಮಾರಿ ವಾಸಮಾಡುವಂತೆ ಸಜ್ಜುಗೊಳಿಸಿದೆನು ಇದೇ ಆ ಮಾಯಾಮಂದಿರವು ಈತನೂಜೆಯು ಇಲ್ಲಿ ಸೇರಿ ನನ್ನನ್ನು ಸ್ಮರಿಸಿದಾಗ ಬಂದು ಇವಳಪೇಕ್ಷಿಸುವ ಕಾರ್ಯಗಳನ್ನು ನೆರವೇರಿಸುತ್ತಿರುವಂತೆ ನಿಯಮಿಸಿ ತಾನು ತನ್ನ ಮನಸ್ಸುಬಂದಂತೆ ವರ್ತಿಸುತ್ತಿರುವಳು ಮುನಿಯ ಶಾಪವನ್ನು ಸ್ಮರಿಸಿ ನಾನು ನನಗೆ ಸಂಭವಿಸಿದ ಇಂತಹ ಯೋಗಿರೂಪದಿಂದ ಮಾಯಾತುರಂಗವನ್ನು ಕಲ್ಪಿಸಿಕೊಂಡು ಭೂಲೋಕದಲ್ಲೆಲ್ಲ ತಿರುಗುತ್ತ ನನ್ನ ಮಗಳಿಗೆ ಅರ್ಹರಾದ ರಾಜಕುಮಾರರನ್ನು ಹುಡುಕಿ ಉಪಾಯದಿಂದ ಅವರನ್ನಿಲ್ಲಿಗೆ ಬರಮಾಡಿಕೊಳ್ಳುತ್ತಲಿರುವೆನು ಬಂದ ರಾಜಪುತ್ರರೊಡನೆ ಕೂಡಿ ಈ ಮುಗ್ಧೆಯು ಒಂದು ತಿಂಗಳ ಕಾಲವು ಕಳೆದಬಳಿಕ ಅವರು “ ನಿನ್ನ ಚರಿತ್ರೆಯನ್ನು ತಿಳಿಸು ” ಎಂದು ಕೇಳುವರು ಕೇಳುತ್ತಲೇ ನಮ್ಮ ನಿಯಮನದಂತೆ ರಾಜನಂದನರನ್ನು ಬೆಟ್ಟಗಳಿಗಾಚೆ ಬಿಟ್ಟು ಒಂದುಬಗೆಯ ಅಂಜನದಿಂದ ಅವರ ಬಲಗಣ್ಣನ್ನು ಹೋಗಲಾಡಿಸಿ ಬರುವಹಾಗೆ ಈಕೆಯು ಭಟರಿಗಾಜ್ಞಾಪಿಸುತ್ತಿರುವಳು ಮನುಷ್ಯರಾಗಿದ್ದು ನನ್ನ ಈ ಕುಮಾರಿಯೊಡನೆ ಭೋಗಿಸಿದುದಕ್ಕಾಗಿ ಅಂತಪ್ಪ ಶಿಕ್ಷೆಯನ್ನು ವಿಧಿಸುತ್ತಿರುವುದು ನಮ್ಮ ನಿಯಮವು. ಆದ್ದರಿಂದ ಹೀಗೆ ಮಾಡುತ್ತಿದ್ದೇವೆ ಅಯ್ಯಾ ! ನೀನು ಯಾರೋ ನಮಗೆ ತಿಳಿಯದು ಪದ್ಧತಿಯಮೇರೆಗೆ ಮಾಯಾತುರಂಗದಿಂದ ನಾವಿಲ್ಲಿಗೆ ನಿನ್ನನ್ನು ಬರಮಾಡಿಕೊಳ್ಳಲಿಲ್ಲ ನೀನಾಗಿ ನನ್ನ ಕುಮಾರಿಯನ್ನು ಈ ಉನ್ನತಗಳಾದ ಬೆಟ್ಟಗಳನ್ನು ದಾಟಿ ದುರ್ಗಮವಾದ ಈ ದೇವ

ತಾಭೂಮಿಗೆ ಬಂದಿರುವುದನ್ನು ಕುರಿತು ಆಲೋಚಿಸಿದರೆ ನೀನು ಯಾವನೋ ಒಬ್ಬ ಮಹಾನುಭಾವನೆಂದು ತೋರುವುದು ದ್ವಾತ್ರಿಂಶಲ್ಲಕ್ಷಣೋಪೇತವಾದ ನಿನ್ನ ಮೂರ್ತಿಯು ನಿನ್ನ ಕ್ಷತ್ರಿಯತ್ವವನ್ನು ಸೂಚಿಸುತ್ತಿರುವುದು. ನಮ್ಮ ದುಷ್ಟತ್ವವನ್ನು ತೃಣೀಕರಿಸಿ ನಮ್ಮ ಸೊಕ್ಕನ್ನು ಮುರಿದಿರುವುದನ್ನು ಕುರಿತಾಲೋಚಿಸಿದೆ ನಿನ್ನ ಮಹಾಮಹಿಮೆಯು ವ್ಯಕ್ತವಾಗುವುದು. ರಾಜವರ್ಯ ! ವಿಧಿಯಿಲ್ಲದೆ ನಾನು ನನ್ನ ಮಗಳ ಕ್ಷೇಮವನ್ನು ಬಯಸಿ ನಾನು ಪೆಣ್ಗುದುರೆಯಾಗುವುದಕ್ಕೊಪ್ಪಿ ಹೇಳಬಾರದ ನಮ್ಮ ಸ್ವತತ್ತ್ವಂತವನ್ನು ನಿನಗೆ ತಿಳಿಯಿಸಿದೆನು ಇನ್ನು ಈ ನನ್ನ ಪ್ರಿಯಪುತ್ರಿಯ ಶಿಲಾತ್ವವನ್ನು ಹೋಗಗೊಳಿಸಿ ಇವಳನ್ನು ನಿನ್ನ ಪ್ರಿಯಜಾಯೆಯನ್ನಾಗಿ ಸ್ವೀಕರಿಸು ಅನೇಕ ರಾಜರೊಡನೆ ಭೋಗಿಸಿದವಳನ್ನು ಭಾರ್ಯೆಯನ್ನಾಗಿ ಪರಿಗ್ರಹಿಸುವುದು ಹೇಗೆಂದು ಸಂದೇಹಿಸಬೇಡ ದೇವಯೋನಿಗಳಾದುದರಿಂದ ನಮಗೆ ವ್ಯಭಿಚಾರದೋಷವುಂಟಾಗುವುದಿಲ್ಲ ಮತ್ತು ಇನ್ನುಮೇಲೆ ಇವಳು ಮಾನವತ್ವವನ್ನು ಪಡೆವಳು ಆದುದರಿಂದ ಜನ್ಮವೇ ಬೇರೆಯಾಗುವುದು. ಇವಳನ್ನಂಗೀಕರಿಸುವುದು ನಿಷಿದ್ಧವೆಂದಾಗಲಿ ಧರ್ಮವಿರುದ್ಧವೆಂದಾಗಲಿ ಭಾವಿಸಬೇಡ ತ್ರಿಲೋಕಸುಂದರಿಯಾದ ಇವಳಿಗೂ ಇಲ್ಲಿರುವ ಸಮಸ್ತ ಸಂಪತ್ತಿಗೂ ಎಲ್ಲಕ್ಕೂ ನೀನೇ ಒಡೆಯನು ನನಗೆ ಯಥಾಪ್ರಕಾರವಾದ ರೂಪವನ್ನುಂಟು ಮಾಡಿ ನಿನ್ನ ಹಿಂದೆ ಕರೆದುಕೊಂಡುಹೋಗಿ ನಿನ್ನ ಇಷ್ಟಬಂದಕಡೆಯಲ್ಲಿ ಹತ್ತು ದಿನಗಳ ಒಳಗಾಗಿ ಒಂದು ಮಂಟಪವನ್ನು ಕಟ್ಟಿಸಿ ಅಲ್ಲಿ ನನ್ನನ್ನಿರಿಸು ಇತ್ತನೆ ಮಾಡಿದ ನನಗೆ ಶಿಲಾತುರಂಗತ್ವವು ಪ್ರಾಪ್ತವಾಗುವುದು ಮುನಿಯ ಶಾಪವು ವ್ಯರ್ಥವಾಗುವುದಲ್ಲ ಕಲ್ಲಿನ ಕುದುರೆಯರೂಪದಿಂದ ನಾನು ಆ ಮಂಟಪದಲ್ಲಿಯೇ ನಿಲ್ಲುವೆನು ಪ್ರಾಚೀನಕರ್ಮವು ಬಿಟ್ಟುಬಿಡುವುದೇ ? ರಾಜಾಗ್ರಣಿ ! “ ಅವಶ್ಯಮನುಭೋಕ್ತವ್ಯಂ ಕೃತಂಕರ್ಮಶುಭಾಶುಭಂ | ನಾಭುಕ್ತಂಕ್ಷೀಯತೇ ಕರ್ಮ ಕಲ್ಪಕೋಟಿಶತೈರಪಿ ॥ ” ಎಂಬಂತೆ ಶುಭವಾದುದಾಗಲಿ, ಅಶುಭವಾದುದಾಗಲಿ ಮಾಡಿದ ಕರ್ಮವನ್ನು ಅವಶ್ಯವಾಗಿ ಅನುಭವಿಸಲೇಬೇಕು ಅನುಭವಿಸದಿದ್ದರೆ ಆ ಕರ್ಮವು ನೂರಾರುಕೋಟಿ ಕಲ್ಪಗಳಾದರೂ ನಾಶವಾಗುವುದಿಲ್ಲ ” ಎಂದು ಹೇಳಿದನು.

ವಿಜಯವರ್ಮನೀ ಕಥೆಯನ್ನೆಲ್ಲ ಕೇಳಿ ಆತ್ಯಾಶ್ಚರ್ಯಪಟ್ಟು ವಿರಹವೆಯು ಸಾರಿ ಆ ಯಕ್ಷನಮೇಲೆ ವಿಭೂತಿಯನ್ನು ಚೆಲ್ಲಿ ಯೋಗಿರೂಪವನ್ನು ಮಾರ್ಪಡಿಸಿ ನಿಜಚರಿತ್ರೆಯನ್ನವರಿಗೆ ವಿಸ್ತರಿಸಿ ಹೇಳಿದನು ಬಳಿಕ ಯಕ್ಷನು ತನ್ನ ಮಾಯಾಶಕ್ತಿಯಿಂದ ಅಲ್ಲಿದ್ದ ಸುವರ್ಣರತ್ನಾದಿ ಸಮಸ್ತೈಶ್ವರ್ಯವನ್ನೂ ಕುಮಾರಿಯನ್ನೂ ರಾಜನನ್ನೂ ಆತನ ಕುದುರೆಯನ್ನೂ ಕ್ಷಣಾರ್ಧದಲ್ಲಿ ತೆಗೆದುಕೊಂಡು ಹೋಗಿ ಆತನ ಪಟ್ಟಣದಲ್ಲಿ ಬಿಟ್ಟನು. ತಮ್ಮ ರಾಜನಲ್ಲಿಗೆ ಹೋದುದನ್ನೂ

ಅರಿಯದೆ ಬಗೆಬಗೆಯಿಂದ ಗೋಳಾಡುತ್ತಿದ್ದ ಸಚಿವಾದ್ಯಧಿಕಾರಿಗಳು ಆತನು ಬಂದುದನ್ನು ಕಂಡು ಸಂತುಷ್ಟಾಂತರಂಗರಾದರು. ವಿಜಯವರ್ಮನು ಒಡ್ಡೋಲಗವನ್ನು ರಚಿಸಿ ತಾನು ಒಬ್ಬರಿಗೂ ತಿಳಿಯದಂತೆ ಹೊರಟುದು ಮೊದಲಾಗಿ ನಡೆದ ವೃತ್ತಾಂತವೆಲ್ಲವನ್ನೂ ಹೇಳಿ ಹೇಮವಲ್ಲಿಯನ್ನಂತಃಪುರಕ್ಕೆ ಕಳುಹಿಸಿ ತನ್ನ ಮಾವನು ನುಡಿದಂತೆ ಒಂದು ಪ್ರದೇಶದಲ್ಲಿ ಕಲ್ಲಿನ ಮಂಟಪವೊಂದನ್ನು ಕಟ್ಟಿಸಿ ಹತ್ತನೆಯದಿನ ಆತನನ್ನು ಆ ಮಂಟಪದಲ್ಲಿ ಪ್ರವೇಶಗೊಳಿಸಿದನು. ಆ ದಿನವೇ ಆತನು ಕಲ್ಲಿನ ಕುದುರೆಯಾದನು. ರಾಜನಾಬಳಿಕ ಹನ್ನೆರಡುಮಂದಿ ರಾಜಪುತ್ರರಿಗೆ ತಕ್ಕ ಮರ್ಯಾದೆಯನ್ನು ಮಾಡಿ ಮುನಿ ತನಗಿತ್ತ ಮಂತ್ರ ವಿಭೂತಿಗಳಿಂದ ಅವರ ಬಲಗಣ್ಣುಗಳೆಲ್ಲ ಮತ್ತೆ ಬರುವಂತೆ ಅನುಗ್ರಹಿಸಿ ಅವರವರ ದೇಶಗಳಿಗೆ ಉಚಿತಪರಿವಾರದೊಡನೆ ಕಳುಹಿಸಿದನು. ಸತ್ಯಶೀಲನೇ ! ಕೇಳಿದೆಯಾ ?

ಹೀಗೆ ವಿಜಯವರ್ಮನು ತಾನು ಮೊದಲು ಭಾವಿಸಿದಂತೆ ಧೈರ್ಯಸಾಹಸಗಳಿಂದ ಅಸಾಧ್ಯವಾದ ಕಾರ್ಯವನ್ನು ಸಾಧಿಸಿದನು. "ಉದ್ಯಮಂ ಸಾಹಸಂ ಧೈರ್ಯಂ ಬುದ್ಧಿಶ್ಶಕ್ತಿಃ ಪರಾಕ್ರಮಃ | ಷಡೇತೇ ಯತ್ರವರ್ತಂತೇ ತತ್ರದೇವ ಸಹಾಯಕೃತ್" ಎಂಬ ನೀತಿಯಂತೆ ಉದ್ಯೋಗವೂ ಸಾಹಸವೂ ಧೈರ್ಯವೂ, ಬುದ್ಧಿಯೂ, ಶಕ್ತಿಯೂ, ಪರಾಕ್ರಮವೂ ಯಾವನಲ್ಲಿ ಇರುವುವೋ ಅವನಿಗೆ ದೈವವು ಸಹಾಯವಾಗುವುದು.

ಬಳಿಕ ಆರಾಯನು ಹೇಮವಲ್ಲಿಯೊಡನೆ ಸರ್ವಸೌಖ್ಯಗಳನ್ನನುಭವಿಸುತ್ತ ಚಿರಕಾಲ ರಾಜ್ಯಭಾರವನ್ನು ಮಾಡಿದನು. ಇದು ನಡೆದು ಬಹುಕಾಲವಾದರೂ ಆಗ ಕಟ್ಟಿಸಿದ ಕಲ್ಲಿನಮಂಟಪವೂ, ಕಲ್ಲುಕುದುರೆಯೂ ಈಗಲೂ ಹಾಗೆಯೆ ಇರುವುದು" ಎಂದು ಯೋಗಾನಂದನಾದ ಚಿದಾನಂದಮುನಿಯು ಹೇಳಲು ಗುಣಾಕರನಾದ ಸತ್ಯಶೀಲನು ಕೇಳಿ ಅತ್ಯಾಶ್ಚರ್ಯಭರಿತನಾಗಿ, " ಮಹಾತ್ಮಾ ತಾವು ಇದುವರೆಗೆ ಹೇಳಿದ ಅನೇಕ ವೃತ್ತಾಂತಗಳಿಗಿಂತಲೂ ಇದು ಹೆಚ್ಚಾದ ಆಶ್ಚರ್ಯವನ್ನುಂಟುಮಾಡತಕ್ಕುದು" ಎಂದು ನುಡಿದು ತ್ರಿಕಾಲವೇದಿಯಾದ ಆ ಮುನಿಯ ಮಹಾಮಹಿಮೆಯನ್ನು ಸ್ಮರಿಸುತ್ತ ಮಲಗಿದನು ಆ ಮುನೀಂದ್ರನೂ ನಿದ್ರಿಸಿದನು.

ಇಂತು ಹನ್ನೊಂದನೆಯ ದಿನದ ಕಥೆ ಮುಗಿದುದು.



*

## —: ಹನ್ನೆರಡನೆಯ ದಿನದ ಕಥೆ. :—

ಧರಾಧರ ಸದಾಧಾರ ಧಾರಾಧರ ಕಳೇವರ |
ಧೀರಾದರ ಚಿದಾಕಾರ ದಾಮೋದರ ನಮೋಸ್ತುತೇ ||

ಚಿದಾನಂದ ಸತ್ಯಶೀಲರು ಹನ್ನೊಂದನೆಯದಿನದ ರಾತ್ರಿ ಆ ಅಡವಿಯಲ್ಲಿ ಒಂದು ನದಿಯ ಕರೆಯಲ್ಲಿ ಮಲಗಿ ನಿದ್ರಿಸಿದರಷ್ಟೆ ? ಅರುಣೋದಯ ವೇಳೆಗೆ ಎದ್ದು ಸ್ನಾನಾದ್ಯನುಷ್ಠಾನಗಳನ್ನು ಮುಗಿಸಿಕೊಂಡು ಪ್ರಯಾಣವಾಗಿ ಮಧ್ಯಾಹ್ನದವರೆಗೆ ನಡೆದು ಒಂದು ಹಳ್ಳಿಯನ್ನು ಸೇರಿ ಒಂದು ಮರದಡಿಯಲ್ಲಿ ತಂಗಿದರು. ಸತ್ಯಶೀಲನು ಆ ಹಳ್ಳಿಯೊಳಕ್ಕೆ ಹೋಗಿ ತಮಗೆ ಬೇಕಾದ ಪದಾರ್ಥಗಳನ್ನು ಕೊಂಡು ಬರುತ್ತ ಗ್ರಾಮದ ನಡುವೆ ಒಂದು ಬಾವಿಯಮೇಲೆ ಚಪ್ಪಡಿಯನ್ನು ಹಾಕಿ ಮುಚ್ಚಿ ಅದರಮೇಲೆ ಒಂದು ಯಂತ್ರವನ್ನು ಕೊರೆದಿರುವುದನ್ನು ಕಂಡು ಅದರ ಕಾರಣವನ್ನರಿಯದೆ ಸಾವಕಾಶವಾಗುವುದೆಂದು ಮತ್ತೆ ಯಾರನ್ನೂ ಕೇಳದೆಯೇ ಬಂದು ಅಡಿಗೆಯನ್ನುಮಾಡಿ ತನ್ನ ಗುರುವೂ ತಾನೂ ಭುಜಿಸಿ ಬಳಿಕ ವಿಶ್ರಾನ್ತಿಯನ್ನು ಪಡೆದು ಕುಳಿತಿದ್ದ ಗುರುವಿನ ಸಮೀಪಕ್ಕೆ ಬಂದು ತಾನು ನೋಡಿಬಂದ ಬಾವಿಯನ್ನು ಕುರಿತು "ಮಹಾತ್ಮಾ! ಸಿಕ್ಕಿದುದನ್ನೆಲ್ಲವನ್ನೂ ಕೇಳಿ ಮನಶ್ಶಾಂತಿಯನ್ನು ಕೆಡಿಸುತ್ತಿರುವ ಈ ಶಿಷ್ಯನ ಅಪರಾಧವನ್ನು ಕ್ಷಮಿಸಬೇಕೆಂದು ಬೇಡುತ್ತೇನೆ. ಈ ದಿನದಲ್ಲಿ ಭೋಜನ ಸಾಮಗ್ರಿಯನ್ನು ತರುವುದಕ್ಕೆ ಹಳ್ಳಿಯೊಳಕ್ಕೆ ಹೋಗಿದ್ದು ಬರುವಾಗ ಆ ಹಳ್ಳಿಯನಡುವೆ ಒಂದು ಭಾವಿಯನ್ನು ಕಂಡೆನು. ಅದರಮೇಲೆ ದೊಡ್ಡಬಂಡೆಯನ್ನು ಹಾಕಿ ಮುಚ್ಚಿದ್ದರು. ಆ ಬಂಡೆಯಮೇಲೆ ಒಂದು ಯಂತ್ರವನ್ನು ಬರೆದಿತ್ತು. ಸ್ವಾಮೀ! ಅಲ್ಲಿ ಯಾರನ್ನಾದರೂ ಕೇಳಬೇಕೆಂದು ಬಗೆದೆನು. ಆದರೆ ಬಹಳ ಹೊತ್ತಾದೀತೆಂದು ಹೆದರಿ ಬಂದು ಬಿಟ್ಟೆನು. ತದ್ವಿಚಾರವನ್ನು ತಿಳಿಸಿ ಮನಸ್ಸನ್ನು ಸಂತೋಷಪಡಿಸಬೇಕೆಂದು ಬೇಡುತ್ತೇನೆ" ಎಂದು ಪ್ರಾರ್ಥಿಸಿದೆನು. ಆಗ ಯೋಗಿಪುಂಗವನು ಈಷತ್ಕಾಲವಕ್ಷಿಗಳನ್ನು ಮುಚ್ಚಿ ದಿವ್ಯದೃಷ್ಟಿಯಿಂದ ತದ್ವಿಚಾರವನ್ನರಿತು ಶಿಷ್ಯನೊಡನಿಂತೆಂದನು.

## ಪ್ರಜೆಗಳನ್ನು ಕಾಡಿಸುತ್ತಿದ್ದ ಒಂದು ಮಹಾಭೂತದ ಕಥೆ.

"ವತ್ಸ! ಸತ್ಯಶೀಲ! ಕೇಳು ಒಂದು ಶತಮಾನದ ಕೆಳಗೆ ಈ ಹಳ್ಳಿಯು ಬಹಳ ಉಚ್ಛ್ರಯಸ್ಥಿತಿಯಲ್ಲಿದ್ದಿತು ಇಲ್ಲಿ ಬ್ರಾಹ್ಮಣರ ಮನೆಗಳೇ ಒಂದುಸಾವಿರವಿದ್ದಿತು ಇತರರೂ ಅವರವರ ಕುಲೋಚಿತವೃತ್ತಿಯಿಂದ ಜೀವಿಸುತ್ತ ಸಾವಿರಾರು ಮಂದಿ ಸುಖವಾಗಿರುತ್ತಿದ್ದರು. ಹೀಗಿರುತ್ತಿರಲು "ಬಾಂದರವಾಡಿ" ಎಂಬ ಒಂದು ಗ್ರಾಮದಲ್ಲಿ ಜನರನ್ನು ಬಾಧಿಸುತ್ತಿದ್ದ ಒಂದು ಮಹಾಭೂತವು

ಒಬ್ಬಾನೊಬ್ಬ ಮಾಂತ್ರಿಕನಿಂದ ಉಚ್ಚಾಟನೆ ಮಾಡಲ್ಪಟ್ಟು ಅದಕ್ಕೆ ಹನ್ನೆರಡು ಗಾವುದದ ದೂರದಲ್ಲಿದ್ದ ಈ ಗ್ರಾಮಕ್ಕೆ ಬಂದುಸೇರಿ ಒಂದು ದೊಡ್ಡ ಆಲದ ಮರದಮೇಲೆ ವಾಸಿಸುತ್ತ ಹಗಲನ್ನು ಹೇಗೋ ಕಳೆದು ರಾತ್ರಿಯಾಗುತ್ತಲೇ ಸಂಚಾರಕ್ಕೆ ಪ್ರಾರಂಭ ಮಾಡುತ್ತಿದ್ದಿತು. ಗ್ರಾಮದಲ್ಲಿ ಸಂಚರಿಸುತ್ತ ಮನೆಗಳ ಮುಂದಿನ ವಸಾರೆಗಳಲ್ಲಿ ಮಲಗಿರುವವರನ್ನೂ ಹೊರಗೆ ತಿರುಗಾಡುವವರನ್ನೂ ಕೊಲ್ಲುತ್ತಿದ್ದಿತು ಅದರ ಭಯಂಕರಾಕಾರವನ್ನು ಕಾಣುತ್ತಲೇ ಎಷ್ಟೋ ಮಂದಿ ಮೃತ್ಯುವಶರಾಗುತ್ತಿದ್ದರು ಗ್ರಾಮಸ್ಥರು ಬಾಗಿಲು ಕಂಡಿಗಳಲ್ಲಿ ಆ ಭೂತ ಆಕೃತಿಯನ್ನು ಕಂಡು ಎಷ್ಟೋಸಾರಿ ಜ್ವರಾದಿಗಳಿಂದ ಪೀಡಿತರಾಗಿರುತ್ತಿದ್ದರು. ಅನೇಕ ಮಾಂತ್ರಿಕರನ್ನು ಕರೆಯಿಸಿ ಈ ಭೂತೋಪದ್ರವವನ್ನು ವಾರಿಸಬೇಕೆಂದು ಕೇಳಿಕೊಂಡು ಎಷ್ಟೋ ಮಂತ್ರತಂತ್ರಗಳನ್ನು ಮಾಡಿಸಿದರು ಆದರೂ ಅದರಿಂದ ಅದರ ಬಾಧೆಯು ತೊಲಗುವುದಕ್ಕೆ ಪ್ರತಿಯಾಗಿ ಹೆಚ್ಚುತ್ತಿದ್ದಿತು. ಆದುದರಿಂದ ಚಿಕಿತ್ಸೆಗಳನ್ನು ಮಾಡಿಸುವುದನ್ನುಳಿದು ಗ್ರಾಮದ ಜನರು ಮತ್ತೆಲ್ಲಿಯಾದರೂ ದೂರವಾಗಿ ಹೋಗಿ ನಿವಾಸಸ್ಥಲಗಳನ್ನು ಏರ್ಪಡಿಸಿಕೊಳ್ಳಬೇಕೆಂದು ಆಲೋಚಿಸುತ್ತಿದ್ದರು ಪ್ರಯತ್ನಗಳನ್ನೂ ಮಾಡುತ್ತಿದ್ದರು ಸಾಯಂಕಾಲವಾಗುತ್ತಲೇ ಬಾಗಿಲುಗಳನ್ನು ಮುಚ್ಚಿ ಭದ್ರಪಡಿಸಿ ರಾತ್ರಿಯೆಲ್ಲ ನಿದ್ದೆಯಿಲ್ಲವೆ ಕಳವಳಗೊಂಡು "ದೇವರೇ! ಯಾವಾಗ ಬೆಳಗಾಗುವುದಪ್ಪಾ?" ಎಂದು ಗಳಿಗೆಗಳನ್ನು ಎಣಿಸುತ್ತಿದ್ದರು. ಒಂದೂರಿನಿಂದ ಮತ್ತೊಂದೂರಿಗೆ ಮನೆಯ ಪದಾರ್ಥಗಳನ್ನು ಸಾಗಿಸಬೇಕಾದರೆ ಬಲುತೊಂದರೆಗಳನ್ನು ಪಡಬೇಕಾಗುವುದೆಂದು ಒಮ್ಮೊಮ್ಮೆ ಆಲೋಚಿಸುತ್ತ ಆ ಪೂರನ್ನು ಬಿಡಲಾರದೆ ಕೆಲವರು ದುಃಖಿಸುತ್ತಿದ್ದರು ಹೀಗಿರುತ್ತಿರಲು ಗ್ರಾಮದವರ ಭಾಗ್ಯದೇವತೆಯಂತೆ ಒಬ್ಬ ಸನ್ಯಾಸಿಯು ಆ ಗ್ರಾಮಕ್ಕೆ ಪಾದಚಾರಿಯಾಗಿ ಬಂದನು ಯತಿಯಾದವನು ಪಲ್ಲಕ್ಕಿ, ಗಾಡಿ, ಕುದುರೆ ಮೊದಲಾದವುಗಳಮೇಲೆ ಬರಬಾರದೆಂದು ಧರ್ಮಶಾಸ್ತ್ರವು ಸಾರುತ್ತಿರುವುದರಿಂದ ಆತನು ಆ ನಿಯಮವನ್ನಂಗೀಕರಿಸಿದ್ದನು. ಆ ದಿನ ಆತನು ಒಬ್ಬ ಬ್ರಾಹ್ಮಣನ ಮನೆಯ ವಸಾರೆಯಲ್ಲಿ ಒಂದು ಜಗುಲಿಯಮೇಲೆ ಮಲಗಿದನು ಪದ್ಧತಿಯಂತೆ ಬಾಗಿಲನ್ನು ಭದ್ರಪಡಿಸುವುದಕ್ಕೆಬಂದ ಆ ಮನೆಯ ಒಡೆಯನು ವಸಾರೆಯ ಜಗುಲಿಯಮೇಲೆ ಮಲಗಿದ್ದ ಆ ಸನ್ಯಾಸಿಯನ್ನು ಕಂಡು "ಅಯ್ಯೋ! ಪಾಪ! ಈ ಗ್ರಾಮದಲ್ಲಿ ನಡೆಯುತ್ತಿರುವ ಮಹಾಭೂತೋಪದ್ರವವೀತನಿಗೆ ತಿಳಿಯದಾಗಿಎಹುದು ಪರದೇಶಿ ಅನ್ಯಾಯವಾಗಿ ಪ್ರಾಣಗಳನ್ನು ಹೋಗಲಾಡಿಸಿಕೊಳ್ಳುವನಲ್ಲ!" ಎಂದು ಬಹಳವಾಗಿ ಮರುಗಿ ಆ ಸನ್ಯಾಸಿಯ ಬಳಿಗೆ ಬಂದು "ಸ್ವಾಮಿ! ಈ ಗ್ರಾಮದಲ್ಲಿ ಮಹಾಭೂತವೊಂದು ರಾತ್ರಿಯ ವೇಳೆಗಳಲ್ಲಿ ಸಂಚಾರಮಾಡುತ್ತ ಬಾಗಿಲಬಳಿ ಮಲಗಿರುವವರನ್ನೂ ಬೀದಿಗಳಲ್ಲಿ

ತಿರುಗುತ್ತಿರುವವರನ್ನೂ ಕೊಲ್ಲುತ್ತಿರುವುದು ಅದಕ್ಕೆ ಹೆದರಿ ನಾವು ಸೂರ್ಯೋದಯವಾಗುವವರೆಗೂ ಹೊರಕ್ಕೆ ಬಾರದೆ ಬಾಗಿಲುಗಳನ್ನು ಭದ್ರಪಡಿಸಿಕೊಂಡಿರುವೆವು ನೀವು ಹೊಸಬರು ಈ ಗ್ರಾಮದ ವಿಚಾರವು ನಿಮಗೆ ತಿಳಿಯದಿರಬಹುದು ಆದುದರಿಂದ ನಿರ್ಭಯವಾಗಿ ಮಲಗಿದಿರೆಂದು ಭಾವಿಸುತ್ತೇನೆ ಇಲ್ಲಿದ್ದರೆ ಪ್ರಾಣಾಪಾಯವು ಸಂಭವಿಸುವುದು ಒಳಕ್ಕೆಬಂದು ಮಲಗಿರಿ ಸೂರ್ಯೋದಯವಾದಬಳಿಕ ನಿಮ್ಮ ಇಷ್ಟದಂತೆ ಎಲ್ಲಿಗಾದರೂ ಹೋಗಬಹುದು ” ಎಂದು ಒತ್ತಿಯೊತ್ತಿ ಹೇಳಿದನು ಆದರೆ ಆ ಗೃಹಸ್ಥನ ಮಾತುಗಳನ್ನು ಆ ಸನ್ಯಾಸಿಯು ಒಪ್ಪಲಿಲ್ಲ.

“ ಅಯ್ಯಾ ! ಗೃಹಸ್ಥನೇ ! ನಿಮಗೆ ಪ್ರಾಣದಮೇಲೆ ಆಸೆಯಿರಬೇಕಾದುದು ಯುಕ್ತವೇಸರಿ ನನಗಾದರೋ ಆ ಆಸೆಯಿಲ್ಲ ನಾನು ಸರ್ವಸಂಗಪರ್ಜಿತನು ಸಕಲ ಪಾಪಾಸ್ಪದವಾದ ಈ ಶರೀರದಮೇಲೆ ಸ್ವಲ್ಪವಾದರೂ ಅಭಿಮಾನವಿಲ್ಲದವನು ಅದಂತಿರಲಿ “ ಜಾತಸ್ಯಹಿಧ್ರುವೋಮೃತ್ಯುಃ ಧ್ರುವಂಜನ್ಮಮೃತಸ್ಯಚ ” ಎಂಬಂತೆ ಹುಟ್ಟಿದವನಿಗೆ ಸಾವೂ, ಸತ್ತವನಿಗೆ ಹುಟ್ಟೂ ಸ್ವಾಭಾವಿಕವಾದುದು ಆದರೂ ಸನ್ಯಾಸಿಯಾದವನು “ ನಾಭಿನಂದೇತಮರಣಂ ನಾಭಿನಂದೇತಜೀವಿತಂ | ಕಾಲಮೇವಪ್ರತೀಕ್ಷೇತ ನಿರ್ದೇಶಂಭೃತಕೋಯಥಾ ‖ ” ಎಂಬ ಮನುವಚನದಂತೆ ಮರಣವನ್ನಾಗಲಿ ಜೀವಿತವನ್ನಾಗಲಿ ನಾನಾಗಿ ಅಪೇಕ್ಷಿಸುವುದಿಲ್ಲ ಆದರೆ ಸ್ವಕರ್ಮಕ್ಕೆ ಅಧೀನವಾಗಿರುವ ಮರಣಕಾಲವನ್ನು ನಿರೀಕ್ಷಿಸುತ್ತಿರುವೆನು ತಾನೇ ಪ್ರಾಣತ್ಯಾಗವನ್ನು ಮಾಡಿಕೊಂಡರೆ ಆತ್ಮಹತ್ಯಾದೋಷವು ಪ್ರಾಪ್ತವಾಗುವುದು ಅದಾಗಬಾರದು ಇತರ ಕಾರಣಗಳಿಂದ ದೇಹತ್ಯಾಗವಾಗುವುದಾದರೆ ಹಾಗಾಗುವಿಕೆಯು ಕರ್ಮಯುಕ್ತವಾಗುವುದು ಅದನ್ನೇ ನಾನು ಕೋರುತಿದ್ದುದು ನೀನು ಹೇಳಿದಂತೆಯೇ ನಡೆವುದಾದರೆ ಸಾವಿಗೆ ನಾನಂಜುವನಲ್ಲ ಬ್ರಾಹ್ಮಣೋತ್ತಮ ! ನನ್ನ ವಿಷಯದಲ್ಲಿ ಚಿಂತೆಯನ್ನು ತೊರೆದು ಮನೆಯೊಳಕ್ಕೆ ಹೋಗಿ ಬಾಗಿಲನ್ನು ಭದ್ರಪಡಿಸಿಕೊಂಡು ಮಲಗು ” ಎಂದು ಹೇಳಿದನು ಆ ಸನ್ಯಾಸಿಯನ್ನು ಆ ಮನೆಯವರೆಲ್ಲರೂ ಬಹಳವಾಗಿ ಬೇಡಿಕೊಂಡರು ಆದರೂ ಆತನು ಕೇಳಲಿಲ್ಲ ಮನೆಯ ಯಜಮಾನನು “ ಅಕಟಾ ! ನಾವೇನು ಮಾಡುವುದು ? ಎಷ್ಟು ಹೇಳಿದರೂ ಈತನು ಕೇಳಲಿಲ್ಲ ಈತನೀ ದಿನದಲ್ಲಿ ಆ ಭೂತಕ್ಕೆ ಬಲಿಯಾಗಬೇಕಾದ ವಿಧಿಯಿರುವುದೋ ಏನೋ ಎಂದು ನುಡಿಯುತ್ತ ನಿರಾಶರಾಗಿ ಮನೆಯೊಳಕ್ಕೆ ಹೋಗಿ ಬಾಗಿಲನ್ನು ಭದ್ರಪಡಿಸಿಕೊಂಡರು.

ಅರ್ಧರಾತ್ರಿಯಾಯಿತು ಆಗ ಆ ಭೂತವು ತಾಳೆಯಮರದಷ್ಟು ಉದ್ದವಾಗಿರುವ ಭಯಂಕರವಾದ ಆಕೃತಿಯಿಂದ ವರ್ತುಲವಾಗಿಯೂ ಗಾತ್ರವಾಗಿಯೂ ಇರುವ ಕಣ್ಣುಗುಡ್ಡೆಗಳಿಂದ ಉರಿಗಳನ್ನುಗುಳುತ್ತ ತಲೆಯಮೇಲೆ ತನಿ

ಗೆಂಡಗಳಿಂದೊಪ್ಪುವ ಒಂದು ಕುಂಪಟೆಯನ್ನೂ ಕೈಯಲ್ಲಿ ಭೀಷಣವಾದ ಒಂದು ಕತ್ತಿಯನ್ನು ಧರಿಸಿ ಬೀದಿಯಲ್ಲಿ ಬರುತ್ತಿದ್ದಿತು ಪದ್ಧತಿಯಂತೆ ಅದು ಬರುತ್ತಿರುವಾಗ ಮಾಡುವ ಒಂದುಬಗೆಯಾದ ಭಯಂಕರ ಧ್ವನಿಯು ಪ್ರಾರಂಭವಾಯಿತು ಆ ಧ್ವನಿಯು ಕಿವಿಯಲ್ಲಿ ಬೀಳುತ್ತಲೆ ಆ ಮನೆಯಾತನು “ ಅಗೋ ! ಭೂತವು ಬರುತ್ತಿರುವುದು ಕೆಲವು ನಿಮಿಷಗಳಲ್ಲಿಯೇ ಅದು ಸನ್ಯಾಸಿಯನ್ನು ಕೊಲ್ಲುವುದು ” ಎಂದು ಬಗೆದು ತನ್ನಲ್ಲಿ ಮರುಗುತ್ತ ಸದ್ದುಮಾಡದೆ ದುಪ್ಪಟಿಯಿಂದ ತಲೆಯತುಂಬ ಮುಸುಕು ಹಾಕಿಕೊಂಡು ಮಲಗಿದ್ದನು.

ಆ ಭೂತವು ಕೂಗಿಕೊಳ್ಳುತ್ತ ಬಂದುಬಂದು ಆ ಮನೆಯ ಜಗುಲಿಯ ಮೇಲೆ ಮಲಗಿರುವ ಸನ್ಯಾಸಿಯನ್ನು ನೋಡಿ ! ಅಟ್ಟಹಾಸವನ್ನು ಮಾಡುತ್ತ “ ಆಹ ! ಇವನಾವನೋ ಹೆದರದೆ ಮಲಗಿರುವನಲ್ಲ ! ಇವನ ಆಯುಷ್ಯವು ತೀರಿದೆ ” ಎಂದು ನುಡಿಯುತ್ತ ಕೊಲ್ಲುವುದಕ್ಕೆ ಸಮೀಪಕ್ಕೆ ಬರಲಾರಂಭಿಸಿತು ಅದು ಬರುವುದಕ್ಕಿಂತ ಮೊದಲಿನಿಂದಲೂ ನಿದ್ರಿಸದೆ ಕಣ್ಣುಗಳನ್ನು ತೆರೆದು ಕೊಂಡೇ ಮಲಗಿದ್ದ ಆ ಸನ್ಯಾಸಿಯು ಅದರ ಆಗಮನವನ್ನು ನಿರೀಕ್ಷಿಸುತ್ತಿದ್ದು ಅದು ಸಮೀಪಕ್ಕೆ ಬರುತ್ತಲೇ ಎದ್ದು ಕುಳಿತುಕೊಂಡನು ಅದೇನು ಕಾರಣವೋ ಭೂತವಾತನ ಮುಖವನ್ನು ನೋಡುತ್ತಲೇ ಅದಕ್ಕೆ ಶಿರೋವೇದನೆಯಾರಂಭವಾಯಿತು ಮನಸ್ಸಿನಲ್ಲಿ ಭಯವು ಸಂಭವಿಸಿತು ಕಳವಳವಧಿಕವಾಯಿತು ಬಳಿಕ ಅದು ಆತನಮುಂದೆ ನಿಂತು ಮಾತನಾಡಲಾರದೆ ನಡುಗುತ್ತಿರಲು ಸನ್ಯಾಸಿಯು ಕಂಡು “ ಎಲೆ ದುಷ್ಟಗ್ರಹವೇ ! ಇದುವರೆಗೆ ಬಹುಜನರನ್ನು ಸಂಹರಿಸಿರುವೆಯಂತೆ ಆದೇಪ್ರಕಾರವಾಗಿ ಈಗಲೂ ನನ್ನನ್ನು ಕೊಲ್ಲುವುದಕ್ಕೆ ಬಂದೆಯಾ ? ಒಳ್ಳೆಯದು ಬಾ ! ಬಾ !! ನಿನ್ನ ಶಕ್ತಿಯು ಎಂಥದೋ ತೋರಿಸು ” ಎಂದು ನುಡಿದು ತನ್ನಬಳಿಯಿದ್ದ ಕೈಚೀಲದಲ್ಲಿ ಕೈಯಿಟ್ಟು ಒಂದು ಚಿಟಿಕೆಯಷ್ಟು ವಿಭೂತಿಯನ್ನು ತೆಗೆದು ಅದರಮೇಲೆ ಚೆಲ್ಲಿದನು. ಆ ವಿಭೂತಿಯು ಅದರ ಮೈಮೇಲೆ ಬೀಳುತ್ತಲೇ ಮೈಯೆಲ್ಲವೂ ಉರಿಯಲಾರಂಭಿಸಿ ತಾಪವು ಹೆಚ್ಚಿ ತಲೆಯಮೇಲಿದ್ದ ಅಗ್ನಿಷ್ಟಿಕೆಯನ್ನೂ ಕೈಯಕತ್ತಿಯನ್ನೂ ನೆಲಕ್ಕೆ ಹಾಕಿ ಆತನು ಮಹಾತ್ಮನೆಂದರಿತು ಆತನ ಪಾದಗಳಮೇಲೆ ಬಿದ್ದು “ ಮಹಾತ್ಮಾ ! ನಾನು ಮಹಾಪಾಪಿಯು ನನ್ನ ದುಷ್ಪ್ರವರ್ತನವನ್ನು ಮನ್ನಿಸಿ ಕರುಣದಿಂದ ಕಾಪಾಡಬೇಕೆಂದು ಪ್ರಾರ್ಥಿಸಿಕೊಂಡಿತು. ಅದು ಮಾಡುತ್ತಿದ್ದ ಕ್ರೂರಕರ್ಮವನ್ನು ಬಗೆದು ಆತ ನಾಗ್ರಹೋದಗ್ರನಾಗಿ “ ದುಷ್ಟಭೂತವೇ ! ಕರುಣಿಸಿ ಕಾಪಾಡಬೇಕೆಂಬೆಯಾ ? ಕ್ರೂರಪ್ರಾಣಿಗಳಲ್ಲಿ ಕರುಣವನ್ನು ತೋರಿಸಬಹುದೆ ? ಸಾವಿರಾರು ಹಸುಗಳನ್ನು ಕೊಲ್ಲುತ್ತಿರುವ ಹುಲಿಯನ್ನು ಹಾಗೆಯೇ ಬಿಟ್ಟರೆ ಕೆಲವುಕಾಲಕ್ಕೆ ಪ್ರಪಂಚದಲ್ಲಿ ಹಸುಗಳೇ ಇಲ್ಲದೆ ಹೋಗಬಹುದಲ್ಲವೆ ? ಹಾಗೆಂದಿಗು ಆಗದು ರಕ್ಷಿಸು

ವುದಕ್ಕೆ ಬದಲಾಗಿ ಶಿಕ್ಷಿಸುವೆನು!'' ಎಂದುಗ್ರವಾಗಿ ನುಡಿದು ತಾನು ಮಲಗಿದ್ದ ಮನೆಗಿದಿರಾಗಿದ್ದ ಒಂದು ಬಾವಿಯಬಳಿಗೆ ಅವನ್ನು ಕರೆದುಕೊಂಡು ಹೋಗಿ "ಬಾ! ಈ ಬಾವಿಯೊಳಕ್ಕೆ ಹೋಗು'' ಎಂದಪ್ಪಣೆ ಮಾಡಿದನು ಅದು ಮರುಮಾತಾಡದೆ ಆ ಕೂಪದೊಳಕ್ಕೆ ಇಳಿಯಿತು ಬಳಿಕ ಆತನು "ಎಲೆ ಭೂತವೆ! ನೀನಿಲ್ಲಿಯೇ ನಿಂತಿರು ಇನ್ನು ಎಂದಿಗಾಗಲಿ ಮೇಲಕ್ಕೆ ಬರಬೇಡ ನಿನ್ನ ದುಷ್ಕೃತ್ಯಕ್ಕೆ ತಕ್ಕಶಿಕ್ಷೆಯು ಇದೇ'' ಎಂದು ಹೇಳಿ ಸ್ವಲ್ಪ ವಿಭೂತಿಯನ್ನು ಚೆಲ್ಲಿದನು ಆ ಭೂತವಾಕೂಪದಲ್ಲಿ ನಿಂತಿತು.

ಅಷ್ಟರಲ್ಲಿ ಬೆಳಗಾಯಿತು. ಮನೆಯ ಒಡೆಯನು ಎಚ್ಚತ್ತು ಆ ಸಂನ್ಯಾಸಿಯು ಸತ್ತಿರಬಹುದೆಂದು ಭಾವಿಸಿ ಬಾಗಿಲನ್ನು ತೆರೆದುನೋಡಲು, ಆತನು ತನ್ನ ಆಲೋಚನೆಯುಂತಲ್ಲದೆ ಸಜೀವನಾಗಿಯೂ ಪದ್ಮಾಸನದಲ್ಲಿ ಕುಳಿತು ಭಗವಚ್ಚಿಂತನೆಯಲ್ಲಿ ನಿರತನಾಗಿಯೂ ಇದ್ದುದನ್ನು ಕಂಡು ಆತ್ಯಾಶ್ಚರ್ಯವೂ ಆನಂದವೂ ಮೀರಿಮಿರುತ್ತಿರಲು ತನ್ನ ಮನಸ್ಸಿನಲ್ಲಿ "ಈ ಸಂನ್ಯಾಸಿಯು ಸಾಮಾನ್ಯನಲ್ಲ. ಮಹಾಮಹಿಮಾ ಸಂಪನ್ನನು. ಈ ಗ್ರಾಮಕ್ಕೆ ಇನ್ನು ಈ ಭೂತಬಾಧೆಯುಂಟಾಗುವಹಾಗಿಲ್ಲ.'' ಎಂದಾಲೋಚಿಸಿ ಸಮಿಾಪಕ್ಕೆ ಬಂದು ಸಾಷ್ಟಾಂಗ ಪ್ರಣಾಮಗಳನ್ನು ರಚಿಸಿ, "ಸ್ವಾಮಿಾ ತಾವು ಸಾಮಾನ್ಯರೆಂದು ಭಾವಿಸಿ ನಿನ್ನೆಯು ರಾತ್ರಿ ಯೇನನ್ನೋ ಮಾತನಾಡಿದೆನು. ನನ್ನ ಅಪರಾಧಗಳನ್ನು ಕ್ಷಮಿಸಬೇಕು. ತಮ್ಮ ಶಕ್ತಿಯು ಈಗ ನನ್ನ ಮನದಟ್ಟಿತು. ಅವಿವೇಕತೆಯಿಂದ ನಾನು ಅತಿಕ್ರಮಿಸಿ ಮಾತನಾಡಿದ್ದರೆ ಅದನ್ನು ತಾವು ಮನಸ್ಸಿನಲ್ಲಿಡಬಾರದು.'' ಎಂದು ಮತ್ತೆಮತ್ತೆ ನಮಸ್ಕರಿಸಿದನು. ಅಷ್ಟರಲ್ಲಿ ಊರಿನವರೆಲ್ಲರೂ ಎಚ್ಚತ್ತು ಏನೋ! ಗಲಭೆಯಾಗುತ್ತಿರುವುದೆಂದು ಈ ಬ್ರಾಹ್ಮಣನಮನೆಗೆ ಬಂದು ನಡೆದ ಸಮಾಚಾರವನ್ನೆಲ್ಲ ಆತನ ಮುಖದಿಂದ ಕೇಳಿ ಪರಮಾನಂದ ಭರಿತರಾದರು. ಆ ಸಂನ್ಯಾಸಿಗೈಎಲ್ಲರೂ ಅಡ್ಡಬಿದ್ದು ನಮಸ್ಕರಿಸಿದರು. ಆತನಿಗೆ ಇವರ ಸ್ತೋತ್ರನಮಸ್ಕಾರಾದಿಗಳೇನು ಬೇಕಾಗಿರುವುದು? ಆತನದೆಲ್ಲವನ್ನೂ ಲಕ್ಷ್ಯಕ್ಕೆತಾರದೆ ಅವರೆಲ್ಲರನ್ನೂ ಮನ್ನಿಸಿ ಅವರಿಗೆ ಹಿಂದಿನ ರಾತ್ರಿ ನಡೆದ ಸಂಗತಿಯೆಲ್ಲವನ್ನೂ ಹೇಳಿ ಭೂತವು ಪ್ರವೇಶಿಸಿದ ಆ ಭಾವಿಯಮೇಲೆ ಅದಕ್ಕೆ ತಕ್ಕ ಒಂದು ದೊಡ್ಡ ಚಪ್ಪಡಿಯನ್ನು ಗ್ರಾಮಸ್ಥರಿಂದ ತರಿಸಿ ಹಾಕಿಸಿ ಅದರಮೇಲೆ ಒಂದು ಬೀಜಾಕ್ಷರ ಸಮನ್ವಿತವಾದ ಯಂತ್ರವನ್ನು ಸ್ಥಾಪಿಸಿ ಆಭೂತವಲ್ಲಿಯೇ ಅಡಗಿರುವಂತೆ ಮಹಾಮಂತ್ರಗಳಿಂದ ಸ್ತಂಭನವನ್ನು ಮಾಡಿ, ಗ್ರಾಮಸ್ಥರನ್ನು ಕಂಡು "ಎಲೈ ಮಹಾಶಯರೇ! ನೀವಿನ್ನು ಈ ಭೂತದ ದೆಸೆಯಿಂದ ಎಂದೂ ಭಯಪಡಬೇಕಾಗಿಲ್ಲ. ಇದು ಈಚೆಗೆ ಬಾರದಂತೆಯೂ ಎಲ್ಲಿಯೂ ಸಂಚರಿಸದಂತೆಯೂ ದಿಗ್ಬಂಧನವನ್ನು ಮಾಡಿರುವೆನು. ಆದರೆ ಈ ಮುಚ್ಚಿರುವ ಚಪ್ಪಡಿಯನ್ನು ಯಾರೂ

ಎಂದಿಗೂ ತೆಗೆಯಬಾರದು. ಭಯವನ್ನು ತೊರೆದು ಸುಖವಾಗಿ ಬಾಳಿ'' ಎಂದು ಹೇಳಿ ಎಷ್ಟೋ ಉಪಚರಿಸಬೇಕೆಂದಿದ್ದ ಆ ಗ್ರಾಮಸ್ಥರನ್ನು ವಂಚಿಸಿ ಎಲ್ಲಿಗೋ ಹೊರಟುಹೋದನು. ವತ್ಸ! ಸತ್ಯಶೀಲ! ನೀನು ನೋಡಿದಂತೆ ಹೇಳಿದುದು ಆ ಬಾವಿಯನ್ನೆ. ಆ ಸನ್ಯಾಸಿಯು ಉದ್ಧರಿಸಿದ ಯಂತ್ರವೂ ಅದೇ. ಭೂತವು ಆ ಬಾವಿಯಲ್ಲಿ ಈಗ್ಗೂ ಇರುವುದು. ಆದರೆ ಮುನಿಯ ಆಜ್ಞೆಯಂತೆ ಹೊರಕ್ಕೆ ಬರುವುದಿಲ್ಲ. ಯಾರನ್ನೂ ಬಾಧಿಸುವುದೂ ಇಲ್ಲ. ಶಿಷ್ಯಾಗ್ರಣೀ! ಈ ಸಂನ್ಯಾಸಿಯಂತಪ್ಪ ಪರೋಪಕಾರಶೀಲರಿರುವುದು ಅಪರೂಪವು. ಇಂಥವರ ಧ್ಯೇಯವು "ಸಂತೋಷಂಜನಯೇತ್ಪ್ರಾಜ್ಞಸ್ತದೇವೇಶ್ವರಪೂಜನಂ'' ಎಂಬುದೇ. ಅಂದರೆ ಪ್ರಾಜ್ಞನಾದವನು ಎಲ್ಲರಿಗೂ ಸಂತೋಷವನ್ನುಂಟುಮಾಡುತ್ತಿರಬೇಕು ಈಶ್ವರಪೂಜೆಯೆಂದರೆ ಅದೇ. ಇಂಥವರು ತಾವು ಉಪಕಾರವನ್ನು ಕೈಲಾದಮಟ್ಟಿಗೆ ಮಾಡುವರೇ ಹೊರತು ಅವರ ಉಪಕಾರವನ್ನು ತಾವು ಅಪೇಕ್ಷಿಸುವುದಿಲ್ಲ. ಸಂನ್ಯಾಸಿಯು ಗ್ರಾಮಸ್ಥರ ಉಪಚಾರಕ್ಕೆ ಆಶೆಪಡದೆ ಅವರನ್ನು ವಂಚಿಸಿಹೋದುದು ಅದರಿಂದಲೇ "ಪರೋಪಕಾರಾಯ ಫಲಂತಿವೃಕ್ಷಾಃ ಪರೋಪಕಾರಾಯ ವಹಂತಿನದ್ಯಃ | ಪರೋಪಕಾರಾಯ ದುಹಂತಿಗಾವಃ . ಪರೋಪಕಾರಾಯಸತಾಂ ವಿಭೂತಯಃ'' ವೃಕ್ಷಗಳು ಪರೋಪಕಾರಕ್ಕೆ ಹಣ್ಣುಗಳನ್ನು ಕೊಡುತ್ತವೆ. ನದಿಗಳು ಪರೋಪಕಾರಕ್ಕಾಗಿಯೇ ಹರಿಯುತ್ತವೆ. ಹಸುಗಳು ಪರೋಪಕಾರಕ್ಕೆ ಹಾಲನ್ನು ಕೊಡುತ್ತವೆ. ಸತ್ಪುರುಷರ ಸಂಪತ್ತುಗಳೂ ಪರೋಪಕಾರಕ್ಕೆಯೇ ಇರುತ್ತವೆ'' ಎಂದು ಹೇಳುತ್ತಿರುವಾಗ ಪರೋಪಕಾರವಿಲ್ಲದ ಮಾನವನು ಅವುಗಳಿಗಿಂತಲೂ ಹೀನನಾದವನಲ್ಲವೆ?'' ಎಂದು ಚಿದಾನಂದಮುನಿಯು ಹೇಳಿದ ಕಥಾಭಾಗವನ್ನು ಕೇಳಿ ಸತ್ಯಶೀಲನು ಸಂತೋಷಾಂಕುರಿತ ಸ್ವಾಂತನಾದನು.

ಆ ದಿನವೆಲ್ಲ ಗುರುಶಿಷ್ಯರಲ್ಲಿಯೇ ಇದ್ದು ರಾತ್ರಿ ಅನೇಕ ತತ್ವವಿಚಾರಗಳನ್ನು ಕುರಿತು ಮಾತನಾಡುತ್ತ ಎರಡು ಯಾಮುಗಳನ್ನು ಕಳೆದು ಬಳಿಕ ನಿದ್ರಿಸಿ ಉಷಃಕಾಲಕ್ಕೆ ಎದ್ದು ಸ್ನಾನಾದಿಗಳನ್ನು ನೆರವೇರಿಸಿಕೊಂಡು ಮುಂದಕ್ಕೆ ಪ್ರಯಾಣಮಾಡಿದರು.

ಇಂತು ಹನ್ನೆರಡನೆಯ ಕಥೆ ಮುಗಿದುದು.



*

## —: ಹದಿಮೂರನೆಯ ಕಥೆ :—

ಧನದತ್ತುಚೇಲಮುನಯೇ ಧನದಸಖಸಖಾಯವಿಶ್ವಜನಕಾಯ |
ಭವಜನಿತರುಜಾಭಿಷಜೇ ಭವಮುಖವಿನುತಾಯನತಿಮಿಮಾಂ ಕಲಯೇ ||

ಹದಿಮೂರನೆಯ ಪ್ರಾತಃಕಾಲದಲ್ಲಿ ನಿತ್ಯಕರ್ಮಗಳನ್ನು ಮುಗಿಸಿಕೊಂಡು ಪ್ರಯಾಣಮಾಡಿದ ಗುರುಶಿಷ್ಯರು ನಡೆದುನಡೆದು ಮಧ್ಯಾಹ್ನದಮೇಲೆ ಮೂರು ತಾಸಿನ ಹೊತ್ತಿನಲ್ಲಿ ಅಮರಪುರವೆಂಬ ಒಂದು ಪಟ್ಟಣವನ್ನು ಸೇರಿ, ಆಪಟ್ಟಣದಹೊರಗೆ ಪಥಿಕರಿಗಾಗಿ ಧರ್ಮಾತ್ಮರು ಕಟ್ಟಿಸಿದ್ದ ಒಂದು ಧರ್ಮಶಾಲೆಯಲ್ಲಿಳಿದುಕೊಂಡರು. ಆವೇಳೆಯುವರೆಗೂ ಅವರು ಭೋಜನವಿಲ್ಲದೆ ದಾರಿಯನ್ನು ನಡೆದುದರಿಂದ ವಿಶೇಷವಾಗಿ ಬಳಲಿದ್ದರು. ಗುರುಭಕ್ತಿಯುಕ್ತನಾದ ಸತ್ಯಶೀಲನು ಬೇಗನೆ ಪಾಕಸಾಮುಗ್ರಿಯನ್ನು ತಂದು ಅಡಿಗೆ ಮಾಡಿದನು. ಇಬ್ಬರಿಗೂ ಊಟವಾಯಿತು. ಮಾರ್ಗಾಯಾಸವಧಿಕವಾಗಿದ್ದುದರಿಂದ ಆ ಧರ್ಮಶಾಲೆಯ ಬಾಗಿಲಬಳಿ ಇದ್ದ ಒಂದು ಜಗುಲಿಯಮೇಲೆ ಆ ಚಿದಾನಂದಮುನಿಯು ವಿಶ್ರಮಿಸಿಕೊಂಡನು. ಸತ್ಯಶೀಲನು ಮುಸರೆಗಳನ್ನೆಲ್ಲ ಚೆನ್ನಾಗಿ ತೊಳೆದು ಅಡಿಗೆಮಾಡಿದ ಸ್ಥಲನನ್ನು ಶುದ್ಧಿಗೊಳಿಸಿ ಎಲ್ಲ ಕೆಲಸಗಳೂ ಸಂಪೂರ್ಣವಾಗಿ ಮುಗಿದ ಬಳಿಕ, ಗುರುವಿನ ಬಳಿಗೆಬಂದು ಉಪಚಾರೋಕ್ತಿಗಳನ್ನಾಡುತ್ತ ಕುಳಿತುಕೊಂಡು ಇಂತೆಂದನು.

“ಮಹಾತ್ಮಾ! ಈ ಪಟ್ಟಣದ ಹೆಬ್ಬಾಗಿಲಿನ ಇದಿರಿಗೆ ಅತ್ಯುನ್ನತವಾಗಿಯೂ ವಿಶಾಲವಾಗಿಯೂ ಇರುವ ಒಂದಾಲದಮರವಿರುವುದು. ಅದರ ದೊಡ್ಡಕೊಂಬುಗಳಲ್ಲಿ ನಾಲ್ಕಕ್ಕೆಮಾತ್ರ ಕಬ್ಬಿಣದ ನೆಲವುಗಳನ್ನು ನೇತುಹಾಕಲ್ಪಟ್ಟಿರುವುವು. ಅವುಗಳಲ್ಲಿ ಮನುಷ್ಯರ ಅಸ್ಥಿಪಂಜರಗಳು ನಾಲ್ಕು ಮಾತ್ರ ಇರುವುವು. ಯಾರನ್ನೋ ಯಾವ ಕಾರಣದಿಂದಲೋ ಅತಪ್ಪ ಕ್ರೂರಶಿಕ್ಷೆಗೆ ಗುರಿಮಾಡಿರುವರೆಂದೂ ಕಾಲವು ಕಳೆದಹಾಗೆಲ್ಲ ಮಾಂಸಚರ್ಮಾದಿಗಳು ನಾಶವಾಗಿ ಮೂಳೆಗಳುಮಾತ್ರ ಹಾಗೆಯೇ ನಿಂತಿರುವುದೆಂದೂ ನಾನು ಊಹಿಸಿಕೊಂಡೆನು. ಅವು ಹಾಗಿರುವುದಕ್ಕೆ ಕಾರಣವೇನೆಂಬುದನ್ನು ದಯಮಾಡಿ ಹೇಳಬೇಕೆಂದು ಬೇಡುತ್ತೇನೆ.” ಎಂದು ಕೇಳಲು ಆ ವಿಷಯವನ್ನು ಯೋಗದೃಷ್ಟಿಯಿಂದ ತಿಳಿದುಕೊಂಡು ಚಿದಾನಂದಮುನಿಯಿಂತೆಂದನು.

## ಚೋರಚತುಷ್ಟಯದ ಕಥೆ.

“ವತ್ಸ! ಸತ್ಯಶೀಲ! ನೀನು ಬಹು ಮೇಧಾವಂತನು. ಆದುದರಿಂದ ಸರಿಯಾಗಿಯೇ ಊಹಿಸಿರುವೆ. ಆ ಕಥೆಯನ್ನು ಒಕ್ಕಣಿಸುವೆನು ಕೇಳು. ಈಗ ಈ ಪಟ್ಟಣವನ್ನಾಳುತ್ತಿರುವ ಗುಪ್ತಸೇನನಿಗೆ ಹಿಂದೆ ಮೂರನೆಯ ತಲೆಯುವನು

ವೃಷಸೇನನೆಂಬವನು ಬಹು ಧರ್ಮದಿಂದ ರಾಜ್ಯಭಾರ ಮಾಡುತ್ತಿದ್ದನು. ಆ ಕಾಲದಲ್ಲಿ ಮಹಾಚತುರರೂ, ಮಾಯಾವಂತರೂ, ಸಮಯಾನುಸಾರವಾಗಿ ತಂತ್ರಗಳನ್ನು ಬಲ್ಲವರೂ ಆದ ನಾಲ್ವರು ಕಳ್ಳರು ಅಡವಿಯಲ್ಲಿ ಒಂದು ನೆಲೆಯನ್ನು ಮಾಡಿಕೊಂಡು ಆಗಾಗ ಪಟ್ಟಣದಲ್ಲಿಯೂ ಸುತ್ತುಮುತ್ತಲಿನ ಗ್ರಾಮಗಳಲ್ಲಿಯೂ ಪ್ರವೇಶಿಸಿ ಅಸಂಖ್ಯಾತವಾದ ಧನಕನಕವಸ್ತ್ರಾದಿಗಳನ್ನು ಕದ್ದುಕೊಂಡು ಹೋಗುತ್ತಿರುವುದಲ್ಲದೆ ತಮ್ಮನ್ನು ಅಡ್ಡವಿಸುತ್ತಿದ್ದವರನ್ನೆಲ್ಲ ಅತಿ ಕ್ರೌರ್ಯದಿಂದ ವಧಿಸುತ್ತ ಸ್ವೇಚ್ಛೆಯಾಗಿ ವರ್ತಿಸುತ್ತಿದ್ದರು. ಅದರ ದೆಸೆಯಿಂದ ಪ್ರಜೆಗಳಿಗುಂಟಾಗುತ್ತಿದ್ದ ಬಾಧೆಯನ್ನು ಅಷ್ಟಿಷ್ಟೆಂದು ಹೇಳಲಾಗುತ್ತಿರಲಿಲ್ಲ. ಅವರು ಆ ಚೋರರ ದೆಸೆಯಿಂದ ತಮಗುಂಟಾಗುತ್ತಿದ್ದ ಬಾಧೆಯನ್ನು ಸೈರಿಸಲಾರದೆ ರಾಜಸನ್ನಿಧಿಗೆ ಹೋಗಿ ತಮ್ಮ ಕಷ್ಟಗಳನ್ನು ಬಿನ್ನೈಸಿ ಮೊರೆಯಿಟ್ಟರು. ಪ್ರಜಾಕ್ಷೇಮವನ್ನು ತನ್ನ ಕ್ಷೇಮವೆಂದು ಭಾವಿಸುತ್ತಿದ್ದ ಆ ವೃಷಸೇನನು ತನ್ನ ಪ್ರಜೆಗಳ ತೊಂದರೆಗಳನ್ನು ಪರಿಹಾರಮಾಡಬೇಕೆಂದು ಪ್ರಯತ್ನಪಟ್ಟು ಕಳ್ಳರನ್ನು ಹಿಡಿವುದಕ್ಕಾಗಿ ತನ್ನಿಂದಾಗಬಹುದಾದ ಎಲ್ಲ ಕಾರ್ಯಗಳನ್ನೂ ಮಾಡಿದನು. ಆದರೆ ಆತನ ಪ್ರಯತ್ನಗಳೆಲ್ಲವೂ ವ್ಯರ್ಥವಾದುವು. ಆ ಚೋರರು ಯಾರಮನೆಗೆ ಯಾವಾಗ ಬಂದು ಅವರ ಆಸ್ತಿಯನ್ನು ಕದಿಯುವರೋ ಎಂದು ಪ್ರಜೆಗಳು ತಳಮಳಗೊಳ್ಳುತ್ತಿದ್ದರು. ಯಾರ ಪ್ರಾಣಗಳನ್ನು ತೆಗೆವರೋ ಎಂದು ಹೆದರಿ ಗಡಗಡನೆ ನಡುಗುತ್ತಿದ್ದರು.

ಧರಾವಲ್ಲಭನು ತಾನಾ ಕಳ್ಳರನ್ನು ಹಿಡಿವುದಕ್ಕಾಗಿ ಮಾಡಿದ ಪ್ರಯತ್ನಗಳೆಲ್ಲವೂ ನಿಷ್ಫಲಗಳಾದುವನ್ನು ಬಗೆದು ಚಿಂತಾಕ್ರಾಂತನಾಗಿ "ರಾಷ್ಟ್ರೋಪದ್ರವಕಾರಿಗಳಾದ ಆ ಕಳ್ಳರನ್ನು ಹಿಡಿದುಕೊಟ್ಟವನಿಗೆ ನನ್ನ ರಾಜ್ಯದಲ್ಲಿ ಅರ್ಧಭಾಗವನ್ನು ಕೊಡುವುದಲ್ಲದೆ ನನ್ನ ಏಕಪುತ್ರಿಯಾದ ಸುಲಕ್ಷಣೆಯನ್ನು ಅವನಿಗೆ ವಿವಾಹಮಾಡಿಕೊಡುವೆನು" ಎಂದು ಪಟ್ಟಣದಲ್ಲಿಯೂ ಸುತ್ತಲೂ ಇರುವ ಗ್ರಾಮಗಳಲ್ಲಿಯೂ ಡಂಗುರವನ್ನು ಹೊಯಿಸಿದನು.

ಕ್ಷತ್ರಿಯಕುಲಸಂಭವನೂ ಧೈರ್ಯಶೌರ್ಯೌದಾರ್ಯ ಸೌಜನ್ಯಾದಿ ಗುಣಸಂಪನ್ನನೂ ಆದ ಶತ್ರುಂಜಯನೆಂಬ ಕುಮಾರನು ರಾಜಪುತ್ರಿಯಾದ ಸುಲಕ್ಷಣೆಯನ್ನು ಮದುವೆಮಾಡಿಕೊಳ್ಳಬೇಕೆಂದು ಬಯಸಿ ರಾಜಸಭೆಗೆ ಬಂದು "ವೃಷಸೇನಮಹಾರಾಜನೇ! ಅಪ್ಪಣೆಯಾದರೆ ನಾನು ಕಳ್ಳರನ್ನು ಹಿಡಿದುತರುವೆನು" ಎಂದು ನುಡಿಯಲು ಆ ದೊರೆಯು ಆನಂದಗೊಂಡು "ಆಹ! ನನ್ನ ಭಾಗ್ಯವೇ ಭಾಗ್ಯ! ಡಂಗುರವನ್ನು ಹೊಯಿಸಿದಬಳಿಕ ನನಗೊಂದಾಲೋಚನೆಯು ಹುಟ್ಟಿತು. ಕುಲಹೀನನಾದವನು ಕಳ್ಳನನ್ನು ಹಿಡಿದುಕೊಟ್ಟರೆ ರಾಜ್ಯಾರ್ಧವನ್ನು ಕೊಡುವುದು ಹಾಗಿರಲಿ ನನ್ನ ಏಕಪುತ್ರಿಯನ್ನು ಕೊಟ್ಟು ಮದುವೆಯನ್ನು ಮಾಡಬೇ

ಕಾಗಿ ಬಂದಿದ್ದರೆ ಮನಸ್ಸು ದುಃಖಕ್ಕೆ ಒಳಗಾಗಬೇಕಾಗಿದ್ದಿತಲ್ಲವೆ? ಭಾಪು! ಭಾಪು!! ಈ ಕಳ್ಳರನ್ನು ಹಿಡಿದುಕೊಡುತ್ತೇನೆಂದು ರಾಜಕುಮಾರನೇ ಬಂದಿರುವನು ಇವನ ಅಂಗಸೌಷ್ಠವವೂ ಆಕಾರವೂ ಮನೋಜ್ಞವಾಗಿರುವುದು "ಯತ್ರಾಕೃತಿಸ್ತತ್ರಗುಣಾಃ" ಎಂಬಂತೆ ಧೈರ್ಯಶೌರ್ಯಾದಿ ಸದ್ಗುಣಗಳೂ ಈ ಕುಮಾರನಲ್ಲಿರುವಂತೆ ತೋರುವುದು ಆ ಕಳ್ಳರ ನೆಲೆಯು ಪ್ರಾಯಿಕವಾಗಿ ಇವನಿಗೆ ತಿಳಿದಿರುವುದೋ ಹೇಗೋ!" ಎಂದು ತನ್ನ ಮನಸ್ಸಿನಲ್ಲಿ ಬಗೆದು ಅನುಜ್ಞೆಯನ್ನು ಕೊಟ್ಟನು.

ರಾಜಕುಮಾರನು ಹೊರಟು ತನ್ನಮುಂದಣ ಕರ್ತವ್ಯವೇನೆಂಬುದನ್ನಾಲೋಚಿಸುತ್ತ ಊರನಡುವಣ ಒಂದು ಧರ್ಮಶಾಲೆಯ ಜಗುಲಿಯಮೇಲೆ ಕುಳಿತುಕೊಂಡನು. "ಆಹ! ಇದೇಕೆ ನನಗೆ ಮತಿಭ್ರಾಂತಿಯುಂಟಾಯಿತು? ಆ ಕಳ್ಳರಾರೋ, ಎಲ್ಲಿರುವರೋ ಯಾವ ಯಾವ ಸಮಯಗಳಲ್ಲಿ ಎಲ್ಲೆಲ್ಲಿ ಸಂಚಾರ ಮಾಡುವರೋ ಎಂಬುದನ್ನರಿಯದ ನಾನು ರಾಜನಮುಂದೆ ಏತಕ್ಕೆ ನುಡಿದೆನು? ಅವರು ಅತಿಸಮರ್ಥರೆಂಬುದು ಅವರು ಮಾಡುತ್ತಿರುವ ಕಾರ್ಯಗಳಿಂದಲೇ ತಿಳಿಯುತ್ತಿರುವುದಲ್ಲ! ಇದಲ್ಲದೆ ರಾಜನು ಬಹಳವಾಗಿ ಧನವ್ಯಯವನ್ನು ಮಾಡಿ ತಾನೂ ಕಷ್ಟಪಟ್ಟು ಹುಡುಕಿ ಹುಡುಕಿಸಿರುವನಲ್ಲ! ಆದರೂ ಅವರ ಸುಳಿವೇ ತಿಳಿದಿಲ್ಲವಲ್ಲ! ಈಗ ನಾನವರನ್ನು ಕಂಡುಹಿಡಿವುದು ಹೇಗೆ? ಮೋಸಹೋದೆನು. ಅವಮಾನಪಡಬೇಕಾದ ಕಾಲವು ತಟಸ್ಥಿಸಿತು. ಆ ಕನ್ಯೆಯಮೇಲಣ ವ್ಯಾಮೋಹವು ನನ್ನನ್ನೀಸ್ಥಿತಿಗೆ ತಂದಿತು. ಏನು ಮಾಡಲಿ? ದುರಾಶೆಯಿಂದ ಅಂತಹ ಮಾಯಾವಿಗಳನ್ನು ಹಿಡಿವುದಕ್ಕೆ ಅರಸಿನಿಂದ ತಾಂಬೂಲವನ್ನು ತೆಗೆದುಕೊಂಡೆನು. ಯಾವ ಉಪಾಯವನ್ನು ಮಾಡಲಿ? ಇದು ಶಕ್ತಿಗೆ ಮೀರಿದ ಕಾರ್ಯವಾಗಿರುವುದು. ಬುದ್ಧಿಪೂರ್ವಕವಾಗಿ ತಂದುಕೊಂಡ ಕಷ್ಟವು. ದೈವಸಂಕಲ್ಪದಿಂದ ನನ್ನ ಪ್ರಯತ್ನವು ಫಲಿಸಿದರೆ ಫಲಿಸಬಹುದಲ್ಲದೆ ಮನುಷ್ಯಯತ್ನದಿಂದ ಸಾಧ್ಯವಲ್ಲವೆಂದು ತೋರುವುದು. ಆದರೂ ಪ್ರಯತ್ನಮಾಡಿ ನೋಡುವೆನು" ಎಂದು ತನ್ನಲ್ಲಿ ಚಿಂತಿಸಿ, ಒಂದುದಿನದ ರಾತ್ರಿಕಾಲದಲ್ಲಿ ನಾನಿದನ್ನೀಗ ಮಾಡಬೇಕು. ಎಂದು ಯಾವ ನಿರ್ಣಯವನ್ನಾಗಲಿ ಮಾಡಿಕೊಳ್ಳದೆ ಪಟ್ಟಣದಿಂದ ಹೊರಟು, ಆ ರಾತ್ರಿಯು ಗಾಢಾಂಧಕಾರ ಬಂಧುರವಾಗಿದ್ದರೂ ಲಕ್ಷ್ಯವಿಡದೆ ಒಂದುದಿಕ್ಕಿನ ದಾರಿಯಲ್ಲಿ ಸ್ವಲ್ಪದೂರದವರೆಗೆ ನಡೆದು, ಅಲ್ಲಿ ಒಂದು ಚಾವಡಿ ಯಿರುವುದನ್ನು ಕಂಡು ಅದರಲ್ಲಿದ್ದ ಒಂದು ಜಗುಲಿಯಮೇಲೆ ಕುಳಿತು ಆಲೋಚಿಸುತ್ತಿದ್ದನು. ಕಗ್ಗತ್ತಲೆ ನಿರ್ಜನಪ್ರದೇಶ. ಅರ್ಧರಾತ್ರಿಯಾಯಿತು. ಆದರೂ ಅವನಲ್ಲಿಂದೆ ಏಳಲಿಲ್ಲ ನಿಶ್ಶಬ್ದವಾಗಿ ಕುಳಿತಿದ್ದನು ಆ ಸಮಯದಲ್ಲಿ ಅಲ್ಲಿಗೆ ಅಕಸ್ಮಾತ್ತಾಗಿ ಯಾರೋ ಮನುಷ್ಯರು ನಡೆದುಬರುವ ಶಬ್ದವಾತನಿಗೆ

ಸಾಧಾರಣವಾಗಿ ಕೇಳಿಸಿತು ಯಾರು ಬರುವರೋ ನೋಡೋಣವೆಂದು ಒಂದು ಕಂಬದ ಮರೆಯಲ್ಲಿ ಅಡಗಿಕೊಂಡನು ಒಂದೆರಡು ನಿಮಿಷಗಳಲ್ಲಿ ಆ ಶಬ್ದವು ಬರ ಬರುತ್ತ ಸ್ವಲ್ಪ ಹೆಚ್ಚಾಗಿ ಕೇಳಿಸುತ್ತಬಂತು ಮನುಷ್ಯರಾರೋ ತಾನಿರುವ ಚಾವ ಡಿಯ ಕಡೆಗೆಯೇ ಬರುತ್ತಿರುವಂತೆ ತೋರಲು ಅವರು “ ಶತ್ರುಗಳು ಅಥವಾ ಮಿತ್ರರು ” ಎಂಬುದು ತಿಳಿವತನಕ ತಾನವರ ದೃಷ್ಟಿಗೆ ಗೋಚರನಾಗಬಾರ ದೆಂದು ಬಗೆದು ತಟ್ಟನೆ ಆ ಚಾವಡಿಯಿಂದಿಳಿದು ಪಕ್ಕದಲ್ಲಿದ್ದ ಹಳ್ಳವೊಂದರಲ್ಲಿ ಸದ್ದುಮಾಡದೆ ಅಲುಗಾಡದೆ ಮಲಗಿದ್ದನು.

ಆಗ ನಾಲ್ಕುಮಂದಿ ಮೂಟೆಗಳನ್ನು ಹೊತ್ತುಕೊಂಡು ಮೆಲ್ಲಗೆ ಮಾತನಾ ಡುತ್ತ ಅಲ್ಲಿಗೆ ಬಂದು ಬಳಲಿಕೆಯನ್ನು ಕಳೆದುಕೊಳ್ಳುವುದಕ್ಕಾಗಿ ಮೂಟೆಗಳನ್ನು ಕೆಳಕ್ಕೆ ಇಳಿಸಿ ಜಗುಲಿಯಮೇಲೆ ಕುಳಿತುಕೊಂಡು ಒಬ್ಬರೊಡನೊಬ್ಬರು “ ಈ ದಿನ ನಾವು ಹಳ್ಳಿಯಹೊತ್ತಿನಲ್ಲಿ ಹೊರಟೆವು ಕಾವಲುಗಾರರೆಷ್ಟುಮಂದಿ ಕಾವ ಲಿದ್ದರೂ ಅವರೆಚ್ಚರವನ್ನು ಪಡೆಯದಂತೆ ಮಂಕುಬೂದಿಯನ್ನು ಚೆಲ್ಲಿ ಅರಮನೆ ಯನ್ನು ಹೊಕ್ಕು ಇಷ್ಟು ಸುಲಭವಾಗಿ ಸ್ವತ್ತುಗಳನ್ನು ಕದ್ದುಕೊಂಡು ಬಂದೆ ವಲ್ಲ ! ಅರಮನೆಯಲ್ಲಿ ಕದಿಯುವುದೆಂದರೆ ಆಶ್ಚರ್ಯವಲ್ಲವೆ ? ಇಷ್ಟು ಚತುರ ರಾದ ನಮ್ಮನ್ನು ಹಿಡಿವುದಕ್ಕಾಗಿ ರಾಜನು ಎಷ್ಟೋ ಪ್ರಯತ್ನಗಳನ್ನು ಮಾಡಿ ತುದಿಗೆ ನಿರಾಶನಾಗುತ್ತಿರಲು, ಯಾವನೋ ಒಬ್ಬ ರಾಜಪುತ್ರನಂತೆ ನಮ್ಮನ್ನು ಹಿಡಿದುಕೊಡುವಂತೆ ಪ್ರತಿಜ್ಞೆ ಮಾಡಿರುವನಂತೆ ನಮ್ಮಿಂದ ಮರಣವುಂಟಾಗು ವಂತೆ ಅವನ ಹಣೆಯಲ್ಲಿ ಬ್ರಹ್ಮನು ಬರೆದಿರಬಹುದೋ ಏನೋ ! ಹಾಗಿಲ್ಲದಿ ದ್ದಲ್ಲಿ ಇಂತಹ ದುಷ್ಕರ ಕಾರ್ಯಕ್ಕೆ ಪ್ರಯತ್ನಿಸಿ ಅರಸಿನಿಂದ ತಾಂಬೂಲವನ್ನು ಪಡೆಯುತ್ತಿದ್ದನೆ ? ” ಎಂದು ಮಾತಾಡಿಕೊಳ್ಳುತ್ತ ಸ್ವಲ್ಪಹೊತ್ತು ಅಲ್ಲಿಯೇ ಕುಳಿತುಕೊಂಡಿದ್ದು ಮೂಟೆಗಳನ್ನು ಹೊತ್ತುಕೊಂಡು ಹೊರಡಲು ಯತ್ನಿಸಿದರು.

ಹಳ್ಳದಲ್ಲಿ ಅಡಗಿಕೊಂಡಿದ್ದ ಶತ್ರುಂಜಯನು ಅವರ ಪ್ರಸಂಗದಿಂದ ತಾನಾರನ್ನು ಹುಡುಕಿಕೊಂಡು ಬಂದನೋ ಆ ಕಳ್ಳರು ಇವರೇ ಎಂದೂ ಅವರಾ ರಾತ್ರಿಯಲ್ಲಿ ಅರಮನೆಯಲ್ಲಿ ಕದ್ದಪದಾರ್ಥಗಳನ್ನು ಈಗ ತೆಗೆದುಕೊಂಡು ಹೋಗು ತ್ತಿರುವರೆಂದೂ ಭಾವಿಸಿ ಹೇಗಾದರೂ ಇವರ ನೆಲೆಯನ್ನು ತಿಳಿದುಕೊಳ್ಳಬೇ ಕೆಂದು ಬಗೆದು ಅವರ ಕಣ್ಣಿಗೆ ಬೀಳದಂತೆ ಆ ಹಳ್ಳದಲ್ಲಿಯೇ ಅಡಗಿದ್ದು ಅವರು ಸ್ವಲ್ಪ ದೂರದವರೆಗೆ ಹೊರಟುಹೋದಬಳಿಕ ಎದ್ದು ಸದ್ದಿಲ್ಲದಂತೆ ಅವರಹಿಂ ದೆಯೇ ಮೆಲ್ಲಮೆಲ್ಲನೆ ಹೋಗಲಾರಂಭಿಸಿದನು.

ಆ ಚೋರಾಗ್ರೇಸರರು ಸ್ವಲ್ಪದೂರ ಹೋಗಿ ಆ ಕಾಡಿನಲ್ಲಿ ಸೀಳುದಾರಿ ಯಿಂದ ಹೊರಟು ಸ್ವಲ್ಪ ವಿಶಾಲವಾಗಿಯೂ ಗಿಡಗಳಿಂದುದುರಿದ ಹಣ್ಣೆಲೆಗಳು ದಟ್ಟವಾಗಿ ಹರಡಿರುವುದರಿಂದ ಭೂಮಿಯು ಗೋಚರಿಸದಿರುವುದಾಗಿಯೂ ಇರುವ ಒಂದು ಪ್ರದೇಶವನ್ನು ಸೇರಿ ಮೂಟೆಗಳನ್ನಲ್ಲಿ ಇಳಿಸಿದರು ಅದು ನಿರ್ಜ

ನವಾದ ಅರಣ್ಯಪ್ರದೇಶವಾದುದರಿಂದ ಅವರಲ್ಲೊಬ್ಬನು ನಿರ್ಭಯವಾಗಿ ಚಕ್ಕ ಮುಕ್ಕಿಯನ್ನು ಹೊಡೆದು ಬೆಂಕಿಯನ್ನು ಹೊತ್ತಿಸಿ ಒಣಗಿದೆಲೆಗಳನ್ನು ಉರಿಸಿ ಬೆಳಕನ್ನುಂಟುಮಾಡಿದನು ಮತ್ತೊಬ್ಬನಾ ಬೆಳಕಿನಲ್ಲಿ ಕೆಳಗೆ ಬಿದ್ದಿದ್ದ ಹಣ್ಣೆಲೆಗಳನ್ನು ಅತ್ತಿತ್ತ ತಳ್ಳಲು ಅಲ್ಲಿ ಒಂದು ಯಂತ್ರದ ಬಾಗಿಲಿದ್ದಿತು ಇಬ್ಬರದನ್ನು ಮೇಲಕ್ಕೆತ್ತಿದರು ಅದರ ಕೆಳಗೆ ಸೋಪಾನಮಾರ್ಗವಿದ್ದುದರಿಂದ ಆ ಚೋರರು ತಾವುತಂದ ಧನದ ಮೂಟೆಗಳೊಡನೆ ಅದರಲ್ಲಿ ಪ್ರವೇಶಿಸಿ ಆ ಬಾಗಿಲನ್ನು ಮುಚ್ಚಿಕೊಂಡರು.

ಆ ಕಳ್ಳರನ್ನು ಹಿಂಬಾಲಿಸಿಹೋದ ಶತ್ರುಂಜಯನೆಂಬ ರಾಜಕುಮಾರನು ಅವರಿಗೆ ಗೋಚರಿಸಿ ಮರಗಳ ಮರೆಯಲ್ಲಿದ್ದು ಅವರ ನೆಲೆಯನ್ನೂ ಅವರ ಕೆಲಸಗಳನ್ನೂ ಚೆನ್ನಾಗಿ ತಿಳಿದು “ಸರಿ! ಇನ್ನು ನನ್ನ ಮನೋರಥವು ಫಲಿಸಿದಂತೆಯೇ ಅಲ್ಲವೆ? ರಾಜಪುತ್ರಿಯು ತಪ್ಪದೆ ನನಗೆ ಹೆಂಡತಿಯಾಗುವಳು ಈ ದುಷ್ಟರಾದ ಚೋರಾಗ್ರಣಿಗಳನ್ನು ಸುಲಭವಾಗಿ ಹಿಡಿವೆನು ಆದರೆ ಈಬಗ್ಗೆ ನನಗೆ ಸಹಾಯವು ಬೇಕಾಗುವುದು ಇದು ರಾಜನಿಂದಲ್ಲದೆ ಮತ್ತೊಬ್ಬರಿಂದಾಗದು ಹೋಗಿ ತಕ್ಕಸನ್ನಾಹವನ್ನು ಮಾಡಿಕೊಂಡು ಬರುವೆನು ಎಂದು ನಿಶ್ಚಯಿಸಿ ಬೆಳಗಾಗುವಷ್ಟರಲ್ಲಿ ಪಟ್ಟಣಕ್ಕೆ ಹಿಂದಿರುಗಿಬಂದು ಸಮಯವನ್ನು ತಿಳಿದು ರಾಜನನ್ನು ಕಂಡು ತನ್ನ ಅಭಿಪ್ರಾಯವನ್ನಾತನಿಗೆ ಹೀಗೆ ತಿಳಿಯಹೇಳಿದನು.

“ಪ್ರಭುವೇ! ಕೆಲವೀರಭಟರನ್ನು ನನ್ನ ಸಹಾಯಕ್ಕಾಗಿ ಕಳುಹಿಸು ನಾನವರೊಡನೆ ಹೋಗಿ ಆ ಕಳ್ಳರನ್ನು ಹಿಡಿದುತರುವೆನು ಅವರು ಹಗಲುಹೊತ್ತಿನಲ್ಲೆಲ್ಲ ನೆಲಮಾಳಿಗೆಯಲ್ಲಿ ಅಡಗಿದ್ದು ರಾತ್ರಿಯಕಾಲದಲ್ಲಿ ಹೊರಕ್ಕೆ ಬಂದು ಕಳ್ಳತನವನ್ನು ಮಾಡಿಕೊಂಡುಹೋಗಿ ತಾವುಕದ್ದ ಧನಕನಕ ವಸ್ತ್ರಾದಿಗಳನ್ನು ಅಲ್ಲಿಟ್ಟುಕೊಂಡು ಒಬ್ಬರಿಗೆ ಸಿಕ್ಕದಂತೆ ಅಲ್ಲಿ ಅಡಗಿರುವರೆಂದು ಕೆಲವು ಸಂದರ್ಭಗಳಿಂದ ಊಹಿಸಿರುವೆನು ಈಗಲೆ ತಕ್ಕಸಹಾಯದೊಡನೆ ಹೋದರೆ ಅವರು ಸುಲಭವಾಗಿ ಸಿಕ್ಕುವರು” ಎಂದು ಹೇಳಿದನು.

ಆ ರಾಜಕುಮಾರನ ಮಾತುಗಳಲ್ಲಿ ಅರಸನಿಗೆ ನಂಬಿಕೆಯುಂಟಾಗಲಿಲ್ಲ ಆದರೂ ಆತನು ಅಷ್ಟು ದೃಢವಾಗಿ ಆ ಕಳ್ಳರ ಮಾತನ್ನು ಒತ್ತಿಹೇಳಿದುದರಿಂದ ಬಲವಂತರಾದ ಐವತ್ತುಮಂದಿ ಭಟರನ್ನು ಶಾಯುಧರನ್ನಾಗಿ ಬರಮಾಡಿ ಆತನಿಗೆ ಸಹಾಯಕರಾಗಿರುವಂತೆ ಆಜ್ಞೆಮಾಡಿದನು ತಾನು ಹಿಂದೆ ಹೋಗಿಬಂದ ಕುರುಹುಗಳನ್ನನುಸರಿಸಿ ಆ ಶತ್ರುಂಜಯನು ವೀರಭಟರೊಡನೆ ಹೋಗಿ ಆ ಯಂತ್ರಕವಾಟವನ್ನು ಎತ್ತಿ ಒಳಕ್ಕೆ ಪ್ರವೇಶಿಸಿದನು ಹಿಂದಿನರಾತ್ರಿ ಆ ಕಳ್ಳರು ಕಳ್ಳತನಕ್ಕೆ ಹೋಗಿಬಂದು ಬಳಲಿ ಇದ್ದುದರಿಂದ ನಿರ್ಭಯರಾಗಿ ಮಲಗಿ ಗಾಢನಿದ್ರಾಪರವಶರಾಗಿದ್ದರು. ಆದುದರಿಂದ ಅವರನ್ನು ಹಿಡಿವುದು ಆ ರಾಜಭಟ

ರಿಗೆ ಬಹು ಸುಲಭವಾಗಿತ್ತು ಒಬ್ಬೊಬ್ಬ ಚೋರನನ್ನು ಹತ್ತುಹತ್ತುಮಂದಿ ಹಿಡಿದು ಹಗ್ಗಗಳಿಂದ ಬಂಧಿಸಿದರು ಕೆಲವರು ಅಲ್ಲಿದ್ದ ಚಿನ್ನ, ಬೆಳ್ಳಿ, ರತ್ನಗಳು ಅಮೂಲ್ಯಗಳಾದ ವಸ್ತ್ರಗಳು ಮೊದಲಾದುವನ್ನು ಸಾಧ್ಯವಾದಷ್ಟುಮಟ್ಟಿಗೆ ಮೂಟೆಗಳನ್ನು ಕಟ್ಟಿ ಹೊತ್ತುಕೊಂಡರು. ಶತ್ರುಂಜಯನು ಕಳ್ಳರನ್ನು ಹಿಡಿದು ಕೊಂಡು ಮೂಟೆಗಳನ್ನೆತ್ತಿಸಿಕೊಂಡು ಆ ನೆಲಮಾಳಿಗೆಯಿಂದ ಹೊರಟು ಮೇಲ ಕ್ಕೆಬಂದು ಆ ತಂತ್ರಕವಾಟವನ್ನು ಯಥಾಪ್ರಕಾರವಾಗಿ ಮುಚ್ಚಿ ಭದ್ರಪಡಿಸಿ ವೃಷಸೇನ ನರಪತಿಯಬಳಿಗೆ ಬಂದು ಚೋರರನ್ನೂ ಹೊತ್ತುತಂದ ದ್ರವ್ಯವನ್ನೂ ಸಮರ್ಪಿಸಿದನು. ಆ ಕಳ್ಳರು ಅಕಸ್ಮಾತ್ತಾಗಿ ಹಿಡಿಯಲ್ಪಟ್ಟುದರಿಂದ ಏನು ಮಾಡುವುದಕ್ಕೂ ಸಾಧ್ಯವಿಲ್ಲದೆ ರಾಜಪುತ್ರನು ಹೇಗೋ ತಮ್ಮ ಮರ್ಮವನ್ನ ರಿತು ತಮ್ಮನ್ನು ಹಿಡಿದನೆಂದು ಬಗೆದು ಸದ್ದುಮಾಡದೆ ನಿಶ್ಚೇಷ್ಟರಾಗಿದ್ದರು.

ವತ್ಸ ! ಸತ್ಯಶೀಲ ! ದುಷ್ಟಕಾರ್ಯಪ್ರವರ್ತಕರಾಗಿದ್ದವರಿಗೆ ಎಷ್ಟುಕಾ ಲದವರೆಗೆ ಸಂತೋಷದಿಂದಿರಲು ಸಾಧ್ಯವಾದೀತು ರಾವಣ ಕುಂಭಕರ್ಣರೂ ಶಿಶುಪಾಲದಂತವಕ್ರಾದಿಗಳೂ ಇದಕ್ಕೆ ಸಾಕ್ಷಿಯಲ್ಲವೆ ?

ಬಳಿಕ ವೃಷಸೇನ ರಾಜನು ಶತ್ರುಂಜಯನನ್ನು ಮೆಚ್ಚಿಕೊಂಡು ದುಷ್ಟಾ ಗ್ರೇಸರರಾದ ಆ ಚೋರಚತುಷ್ಟಯವನ್ನು ನಾಲ್ಕು ಅಯೋಮಯ ಶಿಕ್ಯಗಳ ಲ್ಲಿಟ್ಟು ಬಂಧಿಸಿ ಕಳ್ಳರಿಗೆಲ್ಲ ಎಚ್ಚರಿಕೆಯಾಗಿರುವಂತೆ ಆ ಪುರದ್ವಾರದ ಮುಂದಣ ವಟವೃಕ್ಷದ ಶಾಖೆಗಳಿಗವುಗಳನ್ನು ನೇತುಹಾಕಿಸಿದನು ಗಾಳಿ ಮೊದಲಾದವುಗ ಳಿಂದ ಕೆಳಕ್ಕೆ ಬೀಳದಂತೆ ಆ ನೆಲವುಗಳನ್ನು ಕಬ್ಬಿಣದ ತಂತಿಗಳಿಂದ ಭದ್ರವಾಗಿ ಬಿಗಿಸಿದನು ಹೀಗೆ ಕಳ್ಳರನ್ನು ಸಜೀವವಾಗಿ ನೆಲವುಗಳಲ್ಲಿರುವಂತೆ ಸ್ಥಿರವಾಗಿ ಯೇರ್ಪಡಿಸಿ ರಾಜಕುಮಾರನ ಸಹಾಯದಿಂದ ಆ ಕಳ್ಳರ ಆಸ್ತಿಪಾಸ್ತಿಗಳನ್ನೆಲ್ಲ ತನ್ನ ಸೇವಕರಮೂಲಕ ತರಿಸಿ ತನ್ನ ಕೋಶಕ್ಕೆ ಸೇರಿಸಿದ್ದು ನಾಲ್ಕೈದು ದಿನಗ ಳವರೆಗೆ ಚೆನ್ನಾಗಿ ವಿಚಾರಿಸಿ ಯಾರುಯಾರು ಒಡವೆಗಳನ್ನು ಕಳೆದುಕೊಂಡಿ ದ್ದರೋ ಅವರವರನ್ನು ಕರೆಯಿಸಿ ಆಯಾ ಒಡವೆಗಳನ್ನವರವರಿಗೆ ಕೊಟ್ಟು, ಮಾತು ತಪ್ಪದೆ ನಿಜತನೂಜೆ ಲಕ್ಷಣೆಯನ್ನು ಶತ್ರುಂಜಯನಿಗೆ ಕೊಟ್ಟು ಬಹು ವಿಜೃಂಭಣೆಯಿಂದ ವಿವಾಹಮಾಡಿ ತಾನು ಪುರುಷಸಂತಾನವಿಲ್ಲದವನಾದುದ ರಿಂದ ಎಲ್ಲರಾಜ್ಯವನ್ನೂ ಆತನಿಗೆಯೇ ಕೊಟ್ಟು ಪಟ್ಟಾಭಿಷೇಕ ಮಾಡಿದನು ಆ ಶತ್ರುಂಜಯನ ಮೊಮ್ಮಗನೇ ಈಗ ಈ ಪಟ್ಟಣಕ್ಕೆ ಅಧಿಪತಿಯಾಗಿರುವನು.

ಶಿಷ್ಯವರ್ಯ ! ಅನ್ನಪಾನಗಳಿಲ್ಲದೆ ಕಬ್ಬಿಣದ ನೆಲವುಗಳಲ್ಲಿದ್ದು ತಪಿಸಿತಪಿಸಿ ಕೃಶಿಸಿ ಆ ಕಳ್ಳರು ಪ್ರಾಣಗಳನ್ನು ಬಿಟ್ಟರು ಕಾಗೆಗಳೂ ಹದ್ದುಗಳೂ ಅವರ ಶರೀರಗಳನ್ನು ಕುಕ್ಕಿಕುಕ್ಕಿ ಮಾಂಸವನ್ನು ತಿಂದುದರಿಂದ ಅವರ ಶಲ್ಯಗಳು ಮಾತ್ರ ಹಾಗೆಯೇ ಉಳಿದಿರುವುವು ನೀನು ಕಂಡ ಅಸ್ಥಿಪಂಜರಗಳು ಅವೇ

ಹೊತ್ತಾಯಿತು ಮಲಗುವ ನಾಳೆಯದಿನ ತ್ವರೆಯಾಗಿ ಪ್ರಯಾಣಮಾಡುವ ” ಎಂದು ತತ್ಕಥೆಯನ್ನು ಮುಗಿಸಿದನು ಇಬ್ಬರೂ ಮಲಗಿ ನಿದ್ರಿಸಿದರು

ಇಂತು ಹದಿಮೂರನೆಯ ದಿನದ ಕಥೆ ಮುಗಿದುದು.



## —: ಹದಿನಾಲ್ಕನೆಯ ದಿನದ ಕಥೆ. :—

ಸತ್ಯರೂಪಾಯಸತ್ಯಾಯ ಸತ್ಯಾಯೋಷಿತ್ಪ್ರಿಯಾಯಚ |
ಸ್ತುತ್ಯಾಯನಿತ್ಯಕಲ್ಯಾಣ ವಿಧಾತ್ರೇವಿಧವೇನಮಃ ||

ಚಿದಾನಂದಮುನಿಯೂ ಆತನ ಅಂತೇವಾಸಿಯಾದ ಸತ್ಯಶೀಲನೂ ಅರುಣೋದಯಕ್ಕೆ ಎದ್ದು ಕಾಲ್ಯೋಚಿತ ಕೃತ್ಯಗಳನ್ನು ನೆರವೇರಿಸಿ ಪ್ರಯಾಣ ಮಾಡಿದರು ಆ ದಿನದ ದಾರಿಯು ಬಹು ದುರ್ಗಮವಾಗಿದ್ದಿತು ಸೀಳುದಾರಿಯಾಗಿದ್ದುದರಿಂದ ಮುಳ್ಳು ಕಲ್ಲು ಮೊದಲಾದುವು ದಾರಿಗಡ್ಡಲಾಗಿಬಿದ್ದು ನಡಿಗೆಗೆ ಬಲು ತೊಂದರೆಯಾಗಿದ್ದಿತು ನಡುನಡುವೆ ಸತ್ಯಶೀಲನ ಸಂಭಾಷಣೆ ಆದುದರಿಂದ ದಾರಿ ಸರಿಯಾಗಿ ಸಾಗಲಿಲ್ಲ ಆದರೂ ಅವರಿಬ್ಬರೂ ಆ ಕಾಡ ದಾರಿಯನ್ನು ಹೇಗೋ ಹಾಗೆ ದಾಟಿ ನಡುಗಾಡಿಗೆ ಬಂದರು ಅಲ್ಲಿ ಒಂದು ವಿಶಾಲವಾದ ಬಯಲೂ ಆ ಬಯಲಿನಲ್ಲಿ ಮಾನುಷರಚಿತವಲ್ಲವೆಂದು ಸಾರುವಂತಿದ್ದ ಒಂದು ಸುಂದರ ಮಂದಿರವೂ ಅವರ ಕಣ್ಗಳಿಗೆ ಗೋಚರಿಸಿತು ಅದು ನಿರ್ಜನಪ್ರದೇಶವಾಗಿದ್ದುದರಿಂದ ಸತ್ಯಶೀಲನಿಗೆ ಪರಮಾಶ್ಚರ್ಯವಾಯಿತು ಅವರಿಬ್ಬರೂ ಆ ಮಂದಿರದಬಳಿ ನಿಂತು ಒಂದೆರಡು ಗಳಿಗೆಯವರೆಗೆ ಆ ಮನೆಯ ಸೌಂದರ್ಯವನ್ನು ನೋಡಿ ನಲಿಯುತ್ತಿದ್ದು ಬಳಿಕ ಮುಂದಕ್ಕೆ ಹೊರಟರು ಸತ್ಯಶೀಲನು ಸುಮ್ಮನಿರುವನೆ ? ಅವನು ಗುರುಗಳನ್ನು ಕಂಡು “ ಸ್ವಾಮಿಾ ! ಏತಕ್ಕೆಯೋ ದಾರಿಯು ಬೇಗನೆ ಕಳೆಯಲಾಗದಿರುವುದು ಯಾವುದಾದರೊಂದು ವಿಚಾರವನ್ನು ಹೇಳುತ್ತ ನಡೆದರೆ ದಾರಿಯನ್ನು ನಡೆದ ಬಳಲಿಕೆ ತೋರುವುದಿಲ್ಲ ನನ್ನ ಮನಸ್ಸು ಆ ಅರಣ್ಯಮಧ್ಯದ ಮನೆಯಲ್ಲಿಯೇ ಲೀನವಾಗಿರುವುದು ಆ ಮನೆಯನ್ನು ದುರ್ಗಮವಾದ ಈ ಘೋರಾರಣ್ಯದ ನಡುವೆ ಯಾರು ಏತಕ್ಕೆ ಕಟ್ಟಿದರು ? ಮನೆಯನ್ನು ನೋಡಿದರೆ ಮಾನವರಿಂದ ನಿರ್ಮಿತವಾದುದೆಂದು ತೋರುವುದಿಲ್ಲ ಅನೇಕಕೋಟಿ ರೂಪಾಯಿಗಳನ್ನು ವೆಚ್ಚಮಾಡಿದರೂ ತತ್ಸೌಂದರ್ಯವು ಮಾನವರಿಂದ ನೇರ್ಪಡಿಸುವುದಕ್ಕೆ ಸಾಧ್ಯವಿಲ್ಲ ಇಂತಹ ಮನೆಯಲ್ಲಿ ಯಾವ ಪ್ರಾಣಿಯೂ ವಾಸವಾಗಿಲ್ಲವಲ್ಲ ! ಏಕೆ ? ಅದರ ಕಥೆಯನ್ನು ದಯವಿಟ್ಟು ಹೇಳಬೇಕು ಶಿಷ್ಯನು ಕೊಡುತ್ತಿರುವ ತೊಂದರೆಯನ್ನು ಕ್ಷಮಿಸಬೇಕು ” ಎಂದು ಕೇಳಿದನು.

ಮುನಿಪುಂಗವನಾ ಶಿಷ್ಯನ ಮಾತನ್ನು ಕೇಳಿ ದಾರಿಯನ್ನು ನಡೆಯುತ್ತ ಆ ಮನೆಯ ನಿರ್ಮಾಣಕ್ಕೆ ಹೇತುಭೂತವಾದ ವೃತ್ತಾಂತವನ್ನು ಹೇಳಲಾರಂಭಿಸಿದನು.

## ಒಬ್ಬ ಯಕ್ಷ ಸುಂದರಿಯಕಥೆ.

" ಸತ್ಯಶೀಲನೇ ! ಅವಧರಿಸು ಈ ಅರಣ್ಯಕ್ಕೆ ಆಚೆಯಕಡೆ ಒಂದು ಪಟ್ಟಣವಿದ್ದಿತು ಅದರ ಹೆಸರು ಮಣಿಪುರ ಅದನ್ನು ಸ್ಥೂಲಭದ್ರನೆಂಬ ಅರಸನು ಆಳುತ್ತಿದ್ದನು. ಆತನಿಗೆ ಚಿತ್ರಸೇನ, ಗುಪ್ತಸೇನ, ಸ್ಥೂಲಸೇನ, ಲಘುಸೇನ, ವಿಶಾಲಸೇನ, ವಿಷಮಸೇನ, ಚಂದ್ರಸೇನ ಎಂಬ ಏಳ್ವರು ಮಕ್ಕಳಿದ್ದರು. ಅವರಲ್ಲಿ ಕನಿಷ್ಠನಾದ ಚಂದ್ರಸೇನನು ಬಹುಸುಂದರನು ವಿದ್ಯಾಬುದ್ಧಿಗಳಲ್ಲಿ ಬೃಹಸ್ಪತಿಗೆ ಸಮಾನನು ಯೌವನವಂತನು ಇವನು ಒಂದಾನೊಂದು ದಿನ ಬೇಟೆಗಾಗಿ ಅಣ್ಣಂದಿರೊಡನೆ ಹೊರಟು ಅರಣ್ಯವನ್ನು ಪ್ರವೇಶಿಸಿದನು ಬೇಟೆಯನ್ನಾಡುವಾಗ ಆ ಏಳುಮಂದಿಯೂ ಬೇರ್ಪಟ್ಟು ಅವರವರ ಪರಿವಾರದೊಡನೆ ಬೇರೆ ಬೇರೆ ದಿಕ್ಕುಗಳಿಗೆ ಹೊರಟುಹೋದರು ಅವರವರ ಕಣ್ಣಿಗೆಬಿದ್ದ ಮೃಗಗಳನ್ನು ಅವರವರಟ್ಟಿಕೊಂಡು ಹೋಗಿ ಕೊಲ್ಲುತ್ತ ಸ್ವೇಚ್ಛೆಯಾಗಿ ಬೇಟೆಯಾಡತೊಡಗಿದರು. ಅವರು ಬೇರ್ಪಡುವುದಕ್ಕೆ ಮುಂಚೆ ಎಲ್ಲರೂ ಸಾಯುಂಕಾಲ ೫ ತಾಸಿಗೆ ಈ ಸ್ಥಳದಲ್ಲಿ ಒಟ್ಟುಗೂಡಬೇಕೆಂದು ನಿರ್ಧರಿಸಿ ಮೊದಲಿನ ಉಡುಪುಗಳನ್ನೆಲ್ಲ ಬಿಚ್ಚಿಟ್ಟು ಬೇಟೆಯ ಉಡುಪನ್ನು ಧರಿಸಿ ನಾಯಿಗಳನ್ನು ಹಿಂದಿಟ್ಟುಕೊಂಡು ಬೇಟೆಯ ಸಾಮಗ್ರಿಗಳನ್ನು ತೆಗೆದುಕೊಂಡು ತಮ್ಮತಮ್ಮ ದಾರಿಯನ್ನು ಹಿಡಿದಿದ್ದರು ಚಂದ್ರಸೇನನು ಉತ್ತರದಿಕ್ಕಿನ ಕಾಡಿಗೆ ಹೋದನು ಎಲ್ಲರೂ ಒಂದೆರಡು ತಾಸಿನವರೆಗೆ ಚೆನ್ನಾಗಿ ಬೇಟೆಯಾಡಿದರು ಚಂದ್ರಸೇನನು ಒಂದು ಹರಿಣಿಯನ್ನು ಕಂಡು ಬಾಣದಿಂದ ಹೊಡೆದನು ಅದು ಅದಕ್ಕೆ ತಪ್ಪಿಸಿಕೊಂಡು ಓಡಿತು ರಾಜಕುಮಾರನದನ್ನಟ್ಟಿಕೊಂಡು ಓಡಿದನು ಜಿಂಕೆಯಾದರೋ ಅತಿವೇಗದಿಂದ ಓಡಿಯೋಡಿ ಅಲ್ಲಿಗೆ ಸ್ವಲ್ಪ ದೂರದಲ್ಲಿದ್ದ ಒಂದು ಬೆಟ್ಟದ ಗುಹೆಯನ್ನು ಸೇರಿತು ರಾಜಪುತ್ರನದನ್ನು ಬಿಡುವನೇ ? ಅವನೂ ಅದನ್ನು ಹಿಂಬಾಲಿಸಿ ಆ ಗುಹೆಯನ್ನು ಹೊಕ್ಕನು ಆದರೇನು ? ಅಲ್ಲಿ ಆ ಎರಳೆಯು ಅವನ ದೃಷ್ಟಿಪಥಕ್ಕೆ ಬೀಳಲಿಲ್ಲ ಆ ಗುಹೆಯು ಅಂಧಕಾರಬಂಧುರವಾಗಿದ್ದುದರಿಂದ ಕಿರುಗಣ್ಣು ಮಾಡಿಕೊಂಡು ಸ್ವಲ್ಪ ಕಾಲದವರೆಗೆ ನಿರುಕಿಸಿದನು. ಹಾಗೆ ನೋಡುತ್ತಿರುವಷ್ಟರಲ್ಲಿ ಆ ಗುಹೆಯಲ್ಲಿ ಸ್ವಲ್ಪಸ್ವಲ್ಪವಾಗಿ ಹರಡುತ್ತ ಕಡೆಗೆ ಪ್ರಭಾವಿಶೇಷವು ಗುಹೆಯಲ್ಲೆಲ್ಲ ವ್ಯಾಪಿಸಿ ಹಟ್ಟಹಗಲಿನಂತಾಯಿತು ಆಗ ಚೆನ್ನಾಗಿ ಹುಡುಕಿನೋಡಿದನು ಎಲ್ಲಿಯೂ ಆ ಜಿಂಕೆಯು ಗೋಚರಿಸಲೇ ಇಲ್ಲ ಮತ್ತಷ್ಟು ದೂರದವರೆಗೆ ಹೋಗಿ

ಆ ಬೆಳಕು ಎಲ್ಲಿಂದ ಬಂದಿತೋ ತಿಳಿದುಕೊಳ್ಳಬೇಕೆಂಬ ಆಸೆಯು ಅವನ ಹೃದಯದಲ್ಲಿ ಮೂಡಿತು ಮುಂದಕ್ಕೆ ಹೋದನು ಮೂರುನಾಲ್ಕು ಮಾರಿನಷ್ಟು ಹೋಗುತ್ತಲೇ ಅಲ್ಲಿ ಒಂದು ಹಾಸುಗಲ್ಲಿನಮೇಲೆ ಯೌವನವತಿಯೂ ಲಾವಣ್ಯವತಿಯೂ ಆದ ರಮಣಿಯೊಬ್ಬಳು ಕೆನ್ನೆಯಮೇಲೆ ಕೈಯನ್ನಿಟ್ಟುಕೊಂಡು ಕುಳಿತಿದ್ದುದನ್ನು ಕಂಡು ಬೆಚ್ಚಿಬಿದ್ದು ಹಿಂದಕ್ಕೆ ಹಜ್ಜೆಯನ್ನಿಟ್ಟನು ಹೀಗೆ ಭಯಪಟ್ಟು ಹಿಂದಕ್ಕೆಸರಿದ ಅವನನ್ನು ಕಂಡು “ ರಾಜಕುಮಾರಾ ! ಏತಕ್ಕೆ ಹೆದರುತ್ತಿರುವೆ ? ನಿನ್ನ ಹೆದರಿಕೆಗೆ ಕಾರಣಭೂತವಾದ ವಿಷಯವಾವುದೂ ಇಲ್ಲಿಲ್ಲವಲ್ಲ ! ರಾಜಕುಮಾರರು ಧೈರ್ಯಧನರು ಪರರನ್ನು ವಿಪತ್ತಿನಿಂದ ಪಾರುಮಾಡತಕ್ಕವರು ಕ್ಷತ್ರಿಯವಂಶೋತ್ಪನ್ನನಾದವನಿಗೆ ಭಯವೆಂದರೇನು ? ಇನ್ನು ಭಯವನ್ನು ಬಿಡು ನನ್ನನ್ನು ಕಂಡು ಹೆದರುವುದಕ್ಕೆ ನಾನು ಪಿಶಾಚಿಯಲ್ಲ ರಕ್ಕಸಿಯಲ್ಲ ನನ್ನ ವಿಚಾರವನ್ನು ಹೇಳುವೆನು ಕೇಳು ನಾನೊಬ್ಬ ಯಕ್ಷಕನ್ಯೆಯು ನನ್ನ ಹೆಸರು ಚಂದ್ರಿಕೆ ನೀನು ಈ ಬೆಟ್ಟದತಪ್ಪಲುಗಳಲ್ಲಿ ಬೇಟೆಯಾಡುತ್ತಿರುವಾಗ ನಿನ್ನನ್ನು ನೋಡಿ ಮೋಹಪರವಶಳಾಗಿ ನಿನ್ನನ್ನು ಇಲ್ಲಿಗೆ ಬರಮಾಡಿಕೊಳ್ಳುವುದಕ್ಕೋಸ್ಕರ ನನ್ನ ಸಖಿಯನ್ನು ಕಳುಹಿಸಿಕೊಟ್ಟೆನು ಅವಳು ಒಂದು ಹೆಣ್ಣುಜಿಂಕೆಯ ಆಕೃತಿಯನ್ನುತಾಳಿ ನಿನ್ನ ಬಾಣಗಳಿಗೆ ಗುರಿಯಾಗದೆ ತಪ್ಪಿಸಿಕೊಂಡು ಇಲ್ಲಿಗೆ ನೀನು ಬರುವಂತೆ ಮಾಡಿದಳು ಇದು ವಿಚಾರವು ಮಹಾತ್ಮಾ ! ಕೃಪೆಯಿಂದ ನನ್ನ ವಿಜ್ಞಾಪನೆಯನ್ನಂಗೀಕರಿಸಿ ನನ್ನನ್ನು ನಿನ್ನ ಪ್ರಿಯಳನ್ನಾಗಿ ಪರಿಗ್ರಹಿಸಿ ನನ್ನ ಮನೋರಥವನ್ನು ನೆರವೇರಿಸು ” ಎಂದು ತನ್ನ ವರ್ತಮಾನವನ್ನು ತಿಳಿಸಿದಳು.

ಸತ್ಯಶೀಲನೆ ! ಮಾನವಕೋಟಿಗೆ ಆ ಬ್ರಹ್ಮನು ಕಾಂತೆ, ಕನಕ ಎರಬೀಯೆರಡರಲ್ಲಿ ಮೋಹವನ್ನಿಟ್ಟಿರುವನು ಆ ಎರಡಕ್ಕೂ ಸಿಕ್ಕದ ಮಾನವನನ್ನು ಸಾಕ್ಷಾತ್ಪರಮೇಶ್ವರನೆಂದೇ ತಿಳಿಯಬೇಕು. ಕಾಂತಾಕನಕಗಳಲ್ಲಿ ಕಾಂತೆಯೇ ಹೆಚ್ಚು ಮೋಹಕಾರಿಣಿಯಾದ ವಸ್ತು “ ಕಾಂತೆಯಮೇಲಾಸೆ ಕನಕದಮೇಲಾಸೆ ಇಲ್ಲದವನು ಧರೆಯೊಳಿಲ್ಲದವನು ” ಎಂದೊಬ್ಬ ಕವಿಯು ಹೇಳಿರುವನು ಇದು ಸತ್ಯವು ಮತ್ತೊಬ್ಬ ಕವಿಯು “ ಅನ್ಯತ್ರಭೀಷ್ಮಾದ್ಗಾಂಗೇಯಾ ದನ್ಯತ್ರಚಹನೂಮತಃ | ಹರಿಣೀಖುರಮಾತ್ರೇಣ ಚರ್ಮಣಾಮೋಹಿತಂಜಗತ್ || ” “ ಭೀಷ್ಮಾಚಾರ್ಯನೂ ಆಂಜನೇಯನೂ ಹೊರತು ಉಳಿದವರೆಲ್ಲರೂ ಜಿಂಕೆಯ ಗೊರಸಿನಷ್ಟು ಚರ್ಮದಿಂದ ಮೋಹಿತರಾಗಿರುತ್ತಾರೆ ” ಎಂದು ಹೇಳಿರುವನು.

ಶಿಷ್ಯಾಗ್ರಣೀ ! ಆ ಯಕ್ಷಕನ್ಯೆಯು ನಿಜವೃತ್ತಾಂತವನ್ನು ಆ ರಾಜಪುತ್ರನಿಗೆ ಹೇಳಿ ಒಡನೆಯೇ ಎದ್ದುಬಂದು ಮೋಹಾತಿರೇಕದಿಂದ ಅವನನ್ನು ಬಿಗಿದಪ್ಪಿ ಗಲ್ಲವನ್ನು ಚುಂಬಿಸಿದಳು. ಏನು ಹೇಳಲಿ ? ಭಯಗ್ರಸ್ತನಾಗಿದ್ದ ರಾಜಪು

ತ್ರನು ಭಯವನ್ನು ಬಿಟ್ಟು ಅತಿಮೋಹದಿಂದ ತಾನೂ ಅವಳನ್ನು ಗಾಢಾಲಿಂಗನ ಚುಂಬನಾದಿಗಳಿಂದ ಉಲ್ಲಾಸಗೊಳಿಸಿ ಪರವಶನಾದನು. ಮುಂದೆ ಬರುವ ವಿಪತ್ತನ್ನರಿಯದೆ ಅವಳನ್ನು ತನ್ನ ಭಾಗ್ಯದೇವಂತೆ ಕಂಡನು, ಪ್ರಪಂಚದಲ್ಲಿ,

" ಕೋರ್ಥಾನ್ಪ್ರಾಪ್ಯನಗರ್ವಿತೋ ವಿಷಯಿಣಃ ಕಸ್ಯಾಪದೋನಾಗತಾಃ|
ಸ್ತ್ರೀಭಿಃ ಕಸ್ಯನಖಂಡಿತಂ ಭುವಿಮನಃ ಕೋನಾಮರಾಜ್ಞಾಂ ಪ್ರಿಯಃ ||
ಕಃಕಾಲಸ್ಯನಗೋಚರಾಂತರಗತಃ ಕೋರ್ಥೀಗತೋಗೌರವಂ |
ಕೋವಾದುರ್ಜನವಾಗುರಾಸು ಪತಿತಃ ಕ್ಷೇಮೇಣಯಾತಃ ಪುಮಾ್ ||"

ಸಂಪತ್ತನ್ನು ಪಡೆದು ಅಹಂಕರಿಸದ ಮನುಷ್ಯನಾರು? ವಿಷಯಾಸಕ್ತನಾದ ಯಾವ ಪುರುಷನಿಗೆ ತಾನೆ ವಿಪತ್ತು ಪ್ರಾಪ್ತವಾಗಲಿಲ್ಲ? ಸ್ತ್ರೀಯರಿಂದ ಯಾವನ ಮನಸ್ಸು ಖಂಡಿಸಲ್ಪಡಲಿಲ್ಲ? ರಾಜನಿಗೆ ಪ್ರಿಯನಾದವನಾರು? ಯಮನ ಕಣ್ಣಿಗೆ ಬೀಳದ ಮಾನವನಾರು? ಯಾವ ಯಾಚಕನಿಗೆ ಗೌರವವು ದೊರಕಿರುವುದು? ದುಷ್ಟಜನರೆಂಬ ಬಲೆಯಲ್ಲಿ ಬಿದ್ದು ಕ್ಷೇಮದಿಂದ ಬಂದ ನರನಾವನು? ಇಲ್ಲವಷ್ಟೆ? ಆರಾಜಕುಮಾರನು ಅಣ್ಣತಮ್ಮಂದಿರನ್ನು ಮರೆತೇ ಮರೆತನು. ಮಾತಾಪಿತೃಗಳನ್ನು ತೊರೆದು ಮೃಗಯಾವ್ಯಾಜದಿಂದ ಕಾಡಿಗೆ ಬಂದ ಜ್ಞಾಪಕವೇ ಅವನಿಗಿಲ್ಲವಾಯಿತು. ಬಳಿಕ ಆ ಯಕ್ಷಿಣಿಯು ಅವನನ್ನು ಗುಹೆಯೊಳಭಾಗಕ್ಕೆ ಕರೆದುಕೊಂಡುಹೋಗಿ ಸಕಲೋಪಚಾರಗಳನ್ನು ಮಾಡಿ ಅವನೊಡನೆ ಬೆರೆತು ಅವನನ್ನು ಲೀಲಾವಿನೋದಗಳಲ್ಲಿ ಮುಳುಗಿಸಿ ತೇಲಿಸುತ್ತಿದ್ದಳು.

ಇತ್ತ ಚಂದ್ರಸೇನನ ಅಣ್ಣಂದಿರು ತಮ್ಮ ಸಂಕೇತದಪ್ರಕಾರ ಆ ದಿನದ ಸಾಯಂಕಾಲ ಐದು ತಾಸುಗಳವೇಳೆಗೆ ಸಂಕೇತಸ್ಥಾನವನ್ನು ಸೇರಿದರು ಪರಿವಾರವೆಲ್ಲವೂ ಸಿದ್ಧವಾಯಿತು ಬೇಟೆಯಾಡಿ ಅವರವರುತಂದ ಮೃಗಾದಿಗಳನ್ನು ಅಲ್ಲಿ ಹರಡಿ ತಾವು ಬೇಟೆಯಾಡಿದರೀತಿ ಮೊದಲಾದುವನ್ನು ಪರಸ್ಪರವಾಗಿ ಹೇಳಿಕೊಳ್ಳುತ್ತ ಒಂದು ತಾಸಿನವರೆಗೆ ಕಾಲವನ್ನು ಕಳೆದರು. ಅಷ್ಟಾದರೂ ಚಂದ್ರಸೇನನು ಬಾರದಿದ್ದುದನ್ನು ನೋಡಿ ಎಲ್ಲರೂ ಚಿಂತಾಕ್ರಾಂತರಾದರು ದಿಕ್ಕುದಿಕ್ಕುಗಳಲ್ಲಿಯೂ ದೃಷ್ಟಿಯನ್ನು ಪ್ರಸರಿಸುತ್ತ ಕೆಲವರನ್ನು ಹುಡುಕುವುದಕ್ಕೆ ಕಳುಹಿಸಿದರು ಸಿಕ್ಕುವುದು ಸಾಧ್ಯವೇ? ಹುಡುಕುವುದಕ್ಕೆ ಹೋದವರು ಯಾವ ಕುರುಹನ್ನೂ ಕಾಣದೆ ಮರಳಿಬಂದು ಚಿತ್ರಸೇನಾದಿಗಳಿಗೆ ಇದ್ದ ಸಂಗತಿಯನ್ನು ಬಿನ್ನವಿಸಿದರು ಅವರೇನುತಾನೆ ಮಾಡಿಯಾರು? ಯಾವುದೋ ಒಂದು ದುಷ್ಟಮೃಗದಿಂದ ಅವನು ಪಂಚತ್ವವನ್ನು ಪಡೆದಿರಬಹುದೆಂದು ಭಾವಿಸಿ ಪಟ್ಟಣಕ್ಕೆ ತೆರಳಿ ತಂದೆತಾಯಿಗಳಿಗೆ ತದ್ವೃತ್ತಾಂತವನ್ನು ಹೇಳಿದರು.

ಚಂದ್ರಸೇನನು ಚಂದ್ರಿಕೆಯೊಡನೆ ಬಹುಕಾಲದವರೆಗೆ ಸಕಲ ಭೋಗಗಳನ್ನೂ ಅನುಭವಿಸುತ್ತ ಬೆಟ್ಟದ ಗುಹೆಯಲ್ಲಿಯೇ ಇದ್ದು ಒಂದುದಿನವೇಕಾಂತ

ದಲ್ಲಿ ಕುಳಿತು ಇಬ್ಬರೂ ವಿನೋದವಾಗಿ ಮಾತನಾಡುತ್ತಿದ್ದಾಗ ಅವಳನ್ನು ನೋಡಿ "ಪ್ರಿಯೆ! ಚಂದ್ರಿಕೆ! ನೀನು ಯಕ್ಷಕಾಂತೆಯಾದುದರಿಂದ ಈ ಗುಹೆಯ ವಾಸವು ನಿನಗೆ ಕಷ್ಟವಾಗಿ ತೋರದಿರುವುದು ಯುಕ್ತವೇಸರಿ ಆದರೆ ಮಾನವನಾದ ನನಗೆ ಬಹುಕಷ್ಟವಾಗಿ ತೋರುತ್ತಿರುವುದು ಬೆಟ್ಟಗಳಿಗಾಚೆ ಮೈದಾನದ ಪ್ರದೇಶದಲ್ಲಿ ನಾವಿಬ್ಬರೂ ವಾಸಮಾಡುವುದಕ್ಕೆ ಒಂದು ಸುಂದರಮಂದಿರವಿದ್ದರೆ ಚೆನ್ನಾಗಿರುವುದೆಂದು ನನ್ನ ಆಶಯವು ನನ್ನ ಇಷ್ಟದಂತೆ ಅಂತಹ ಮಹಾ ಭವನವೊಂದನ್ನಂದವಾಗಿ ನಿರ್ಮಿಸಲು ನಿನ್ನಿಂದಾಗದೆಂದು ಭಾವಿಸುವೆನು ಏತಕ್ಕೆಂದರೆ ಹಾಗೆ ಸೃಷ್ಟಿಸುವಶಕ್ತಿ ನಿನಗಿದ್ದಲ್ಲಿ ಹೀಗೆ ವಕ್ರವಕ್ರವಾಗಿ ಕಲ್ಲುಗುಂಡುಗಳಿಂದ ವ್ಯಾಪ್ತವಾಗಿ ವೃಕ್ಷಲತಾದಿಗಳ ಸಮೂಹದಿಂದ ಆವೃತವಾಗಿರುವ ಈ ಗುಹೆಯಲ್ಲಿ ವಾಸಮಾಡುತ್ತಿದ್ದೆಯಾ?" ಎಂದು ನುಡಿದನು. ಆಗ ಯಕ್ಷಸುಂದರಿಯು ಆ ಮಾತಿನದೆಸೆಯಿಂದ ತನಗುಂಟಾದ ಅಸಮಾಧಾನವನ್ನು ತೋರ್ಪಡಿಸುತ್ತ "ಹಾ! ಏನೆಂದೆ? ಒಂದು ಮಂದಿರವನ್ನೇರ್ಪಡಿಸುವ ಶಕ್ತಿಯು ನನಗೆ ಇಲ್ಲವೆ? ಇಂಥದೇ ನಿನ್ನ ಅಭಿಪ್ರಾಯವು? ಚೆನ್ನಾಯಿತು ಮನಸ್ಸಿಗೆ ಬಂದಿತೆಂದರೆ ಈ ಬೆಟ್ಟವನ್ನು ಸಮುದ್ರದ ಆಚೆಯತೀರಕ್ಕೆ ಒಂದೇ ನಿಮಿಷದಲ್ಲಿ ಸೇರಿಸಬಲ್ಲೆನು ಇದಕ್ಕೆ ಸಂದೇಹವು ಬೇಡ ಇದೆ! ನನ್ನ ಮಹಿಮೆಯನ್ನು ನೋಡು" ಎಂದು ನುಡಿದು ನಾವು ಈ ಅಟವಿಯಲ್ಲಿ ಕಂಡುಬಂದ ದಿವ್ಯೋಪವನರಮ್ಯಮಾದ ಭವನವನ್ನು ಕಲ್ಪಿಸಿ ತಾನು ತನ್ನ ಪ್ರಿಯನೊಡನೆ ಒಂದಾಮಂದಿರದಲ್ಲಿ ಸೇರಿ ಸುಖವಾಗಿರುತ್ತ ಒಂದು ನಿಮಿಷವೂ ತನ್ನ ಪ್ರಿಯನನ್ನು ಬಿಡದೆ ಸಮಸ್ತ ಭೋಗಗಳನ್ನೂ ಅವನೊಡನೆ ಅನುಭವಿಸುತ್ತಿದ್ದಳು.

ಹಿಂದೆಯೊಂದುಸಾರಿ ಒಬ್ಬ ಯಕ್ಷನು ಈ ಯಕ್ಷಿಣಿಯನ್ನು ಮೋಹಿಸಿ ತನ್ನ ಕೋರಿಕೆಯನ್ನು ಅವಳಿಗೆ ತಿಳಿಯಿಸಲು ಅವಳು ಒಪ್ಪದೆ ಅವನನ್ನು ನಿರಾಕರಿಸಿದ್ದಳು. ಈಗ ಮಾನವನೊಬ್ಬನೊಡನೆ ಭೋಗಿಸುತ್ತಿರುವ ಆ ಯಕ್ಷಕಾಂತೆಯನ್ನು ನೋಡಿ "ಅಯ್ಯೋ! ನಾನೂ ಈ ಚಂದ್ರಿಕೆಯೂ ಒಂದು ಜಾತಿಯವರು ನಾನಿವಳನ್ನು ಮೋಹಿಸಿದಾಗ ಇವಳು ನನ್ನನ್ನೊಲ್ಲದೆ ನಿರಾಕರಿಸಿ ಅವಮಾನಮಾಡಿದಳು. ಈಗ ನಮ್ಮ ಜಾತಿಗಿಂತಲೂ ಕಡಿಮೆಜಾತಿಯ ಮಾನವಮಾತ್ರನನ್ನು ಮೋಹಿಸಿ ಅವನೊಡನೆ ಸಮಸ್ತ ಭೋಗಗಳನ್ನೂ ಅನುಭವಿಸುತ್ತಿರುವಳು ಇದನ್ನು ನೋಡಿ ನಾನು ಹೇಗೆ ಸೈರಿಸಲಿ ಅಕ್ಕಟ! ಇವಳಿಂದ ತಿರಸ್ಕೃತನಾಗಿರುವ ನಾನು ಮೊದಲೇ ಪ್ರಾಣಗಳನ್ನು ಕಳೆದುಕೊಳ್ಳಬೇಕಾಗಿದ್ದಿತು ಉ! ನಾನೇತಕ್ಕೆ ಪ್ರಾಣಗಳನ್ನು ಕಳೆದುಕೊಳ್ಳಬೇಕಾಗಿದ್ದಿತು ಆಗಲಿ! ಸಮಯವನ್ನು ನಿರೀಕ್ಷಿಸಿ ರಾಜಕುಮಾರನನ್ನು ವಧಿಸುವೆನು ಆಬಳಿಕ ಇವಳೇನು ಮಾಡುವಳೋ ನೋಡುವೆನು" ಎಂದು ಅತಿಕೋಪಾಕ್ರಾಂತನಾಗಿದ್ದನು. ಒಂದು ದಿನ ಯಕ್ಷಿ

ಣಿಯು ಒಂದುದಿನವಾದರೂ ತನ್ನ ಕಾಂತನನ್ನು ಬಿಡದೆ ಕಣ್ಣಿಗೆ ಎವೆಯಂತೆ ಕಾಯುಕೊಂಡಿದ್ದಳು, ಅವನನ್ನೊಂಟಿಯಾಗಿ ಬಿಟ್ಟು ಯಾವುದೋ ಒಂದು ಕಾರ್ಯಾರ್ಥವಾಗಿ ಎಲ್ಲಿಗೆಯೋ ಹೋಗಿದ್ದಳು ಯಕ್ಷನು ಆ ಸಮಯವನ್ನು ಹೇಗೋ ತಿಳಿದು ಅಜಾಗರೂಕತೆಯಿಂದ ಇದ್ದ ಆ ಚಂದ್ರಸೇನನನ್ನು ವಧಿಸಿ ಪಲಾಯನವಾದನು. ಆ ಯಕ್ಷಕಾಂತೆಯು ಬಂದುನೋಡಿ ತನ್ನ ದಾಸಿಯರಿಂದ ಆಮೂಲಾಗ್ರವಾಗಿ ತದ್ವೃತ್ತಾಂತವನ್ನರಿತು ತನ್ನ ಅವಿವೇಕದಿಂದಲೇ ಈ ಹಾನಿ ತನಗುಂಟಾಯಿತೆಂದು ಬಗೆದು ರಾಜಕುಮಾರನ ಮರಣವನ್ನು ಕುರಿತು ಬಹಳ ವಾಗಿ ದುಃಖಿಸಿ ಈ ಪ್ರಕಾರವಾದ ದುಷ್ಟಕಾರ್ಯವನ್ನು ಮಾಡಿದ ನೀಚಯಕ್ಷ ನಿಗೆ ತಕ್ಕಶಿಕ್ಷೆಯನ್ನು ಮಾಡಿಸುವೆನೆಂದು ತತ್ಕ್ಷಣದಲ್ಲಿ ಆ ಮನೆಯನ್ನು ಬಿಟ್ಟು ಯಕ್ಷರಾಜನಾದ ಕುಬೇರನಬಳಿಗೆ ಹೋಗಿ ಆತನಿಗೆ ಹೇಳಿ ತನಗಪಕಾರವನ್ನು ಮಾಡಿದ ಆ ಯಕ್ಷನನ್ನು ಶಿಕ್ಷಿಸುವಂತೆಮಾಡಿ ಮತ್ತೆ ತನ್ನಮನೆಗೆ ಬಾರದೆ ಅಲಕಾಪಟ್ಟಣದಲ್ಲಿ ನಿಂತುಬಿಟ್ಟಳು. ಬಳಿಕ ಅರಣ್ಯದಲ್ಲಿದ್ದ ಮನೆಯು ಕಟ್ಟಿಸಿದುದು ಕಟ್ಟಿಸಿದಂತೆಯೇ ಅಚ್ಚಳಿಯದಿದ್ದಕತದಿಂದ ಅದು ಭೂತನಿರ್ಮಿತವಾದುದೆಂದೂ ಅದರಲ್ಲಿ ಪ್ರವೇಶಿಸಿದವರು ಮೃತರಾಗುವರೆಂದೂ ಜನರು ಬಗೆದು, ಅದನ್ನು ಕಣ್ಣೆತ್ತಿಯಾದರೂ ನೋಡಲು ಪ್ರೀತಿಯಿಲ್ಲದವರಾದರು ರಾಜರುಕೂಡ ಮೃಗ ಯಾವಿನೋದಾರ್ಥವಾಗಿ ಬಂದಾಗ ಆ ಮನೆಯ ಸಮೀಪಕ್ಕಾದರೂ ಹೋಗದೆ ದೂರದೂರವಾಗಿಯೇ ಇರುತ್ತಿದ್ದರು ಅದೇ ವಾಡಿಕೆಯಾಗಿಯೇರ್ಪಟ್ಟು ಅಲ್ಲಿಗೆ ಯಾರು ಬರುತ್ತಿರುವುದಿಲ್ಲ ಹೀಗೆ ಸರ್ವಾಲಂಕಾರಶೋಭಿತವಾದುದಾಗಿದ್ದರೂ ಜನರಹಿತವಾಗಿರುವುದರಿಂದ ಅದರ ಸೊಬಗು ಕಾಡಿನಲ್ಲಿ ಕಾದಬೆಳುದಿಂಗಳಂತೆ ನಿರುಪಯೋಗವಾಗಿರುವುದು. ››

ಎಂದು ಚಿದಾನಂದಯೋಗಿಯು ಆ ಕಾಡಿನ ನಡುವೆಕಂಡ ನಿಶಾಂತದ ವೃತ್ತಾಂತವನ್ನು ಹೇಳಿ ಸತ್ಯಶೀಲನನ್ನು ಸಂತೋಷಪಡಿಸಿದನು.

ಈಪ್ರಕಾರವಾಗಿ ಗುರುಶಿಷ್ಯರು ಮಾತನಾಡಿಕೊಳ್ಳುತ್ತ ಆ ದಿನದ ಮಧ್ಯಾಹ್ನವೆಲ್ಲಿಯೂ ನಿಲ್ಲದೆ ಪಯಣಮಾಡಿ ಒಂದು ನದೀತೀರದಲ್ಲಿದ್ದ ಒಂದು ನಗರವನ್ನು ಸಾಯಂಕಾಲದವೇಳೆಗೆ ಸೇರಿ ಅಲ್ಲಿದ್ದ ಒಂದು ಧರ್ಮಶಾಲೆಯಲ್ಲಿ ನಿಂತರು.

ಇಂತು ಹದಿನಾಲ್ಕನೆಯ ಕಥೆ ಮುಗಿದುದು.



## —: ಹದಿನೈದನೆಯ ದಿನದ ಕಥೆ. :—

ತಾರಯತರುಣಾರುಣನಿಭ | ಚರಣಗಜೇಂದ್ರಾರ್ತಿಹರಣಭವತರಣ ||
ಕರುಣಾವರುಣಾಲಯುಗುಣ ಮಣಿರೋಹಣಚಾರುಕೌಸ್ತುಭಾಭರಣ ||

ತಿರುಪತಿಕ್ಷೇತ್ರದಿಂದ ಚಿದಾನಂದ ಸತ್ಯಶೀಲರು ಕಾಶೀಯಾತ್ರಾಪ್ರಯುಕ್ತವಾಗಿ ಪ್ರಯಾಣಮಾಡುತ್ತ ದಾರಿಯಲ್ಲಿ ಹದಿನಾಲ್ಕು ಸ್ಥಲಗಳಲ್ಲಿ ಹದಿನಾಲ್ಕು ದಿನಗಳು ನಿಂತು ಅಲ್ಲಿಂದ ಹೊರಟು ಕಾಶಿಗೆ ಸ್ವಲ್ಪದೂರದಲ್ಲಿದ್ದ ಒಂದು ಗ್ರಾಮದಲ್ಲಿ ಹದಿನೈದನೆಯ ದಿನದಲ್ಲಿ ನಿಂತರು ಆ ಗ್ರಾಮವು ಕಾಶಿಗೆ ಹೋಗುವ ದಾರಿಯಲ್ಲಿದ್ದಿತು ಅಲ್ಲಿ ಒಂದು ಧರ್ಮಶಾಲೆಯುಂಟು ಆ ಶಾಲಾಧಿಕಾರಿಯು ಆದಾರಿಯಲ್ಲಿ ಬಂದುಹೋಗುತ್ತಿರುವ ದಾರಿಗರಿಗೆ ಅತ್ಯಂತ ವಿನಯಭಕ್ತಿಗಳಿಂದ ಉಪಚಾರಮಾಡುತ್ತಿದ್ದನು. ಆಗಂತುಕರ ಆಗಮನನಿರೀಕ್ಷಣೆಯಿಂದ ದಾರಿಯಲ್ಲಿ ಕಾದಿದ್ದು "ದಯವಿಟ್ಟು ನಮ್ಮ ಧರ್ಮಶಾಲೆಗೆ ಬಂದು ಭೋಜನವನ್ನು ಮಾಡಿಕೊಂಡುಹೋಗಿ" ಎಂದು ಪ್ರಾರ್ಥಿಸಿ ಶಾಲೆಗೆಬಂದವರಿಗೆ ಷಡ್ರಸೋಪೇತವಾದ ಅನ್ನವನ್ನಿಟ್ಟು ಗಂಧಪುಷ್ಪ ತಾಂಬೂಲಾದಿಗಳನ್ನು ಕೊಟ್ಟು ಆದರಿಸಿ ಕಳುಹಿಸುತ್ತಿದ್ದನು. ನಾಲ್ಕುಜಾತಿಯವರಿಗೂ ತಕ್ಕ ಏರ್ಪಾಡು ಮಾಡಿದ್ದುದರಿಂದ ಯಾವ ಕುಲದವನಾದರೂ ಅವನು ಎಷ್ಟು ಅವಶ್ಯವಾದ ಕೆಲಸಕ್ಕಾಗಿ ತ್ವರೆಯಿಂದ ಹೋಗುತ್ತಿದ್ದರೂ ಧರ್ಮಶಾಲಾಧಿಕಾರಿಯ ಪ್ರಾರ್ಥನೆಯನ್ನು ಕೇಳಿದಕೂಡಲೇ ನಿರಾಕರಿಸದೆ ಊಟವನ್ನು ಮಾಡಿಯೇ ಹೋಗುತ್ತಿದ್ದನು.

ಯಾತ್ರಿಕರಾದ ಈ ಗುರುಶಿಷ್ಯರು ಆ ಧರ್ಮಶಾಲೆಗೆ ಹೋಗಿ ಧರ್ಮಶಾಲಾಧಿಪತಿಯ ವಿವೇಚನಕ್ರಮವನ್ನು ಕಂಡು ಸಂತೋಷಿಸಿ ತಾವೂ ಆತನ ಪ್ರಾರ್ಥನೆಯಂತೆ ಅಲ್ಲಿ ಊಟವನ್ನುಮಾಡಿ ಬಾಗಿಲಪಕ್ಕದ ವೇದಿಕೆಯಮೇಲೆ ವಿಶ್ರಮಿಸಿಕೊಂಡರು. ಸತ್ಯಶೀಲನು ತನ್ನ ಆಚಾರ್ಯನನ್ನು ನೋಡಿ "ಸ್ವಾಮಿಾ ! ಈ ಸತ್ರಾಧಿಕಾರಿಯು ಬಹು ಧರ್ಮಾತ್ಮನಾಗಿರುವನು ಪ್ರತಿದಿನವೂ ಎಷ್ಟುಮಂದಿ ಬಂದರೂ ಸರಸಪದಾರ್ಥಸಂಪನ್ನವಾಗಿ ಈತನಂತೆ ಭೋಜನವನ್ನಾವ ನಿಡಲಾಪನು ? ನಿಮಗೀವಿಚಾರದಲ್ಲಿ ಹೇಗೆ ತೋರುತ್ತದೆಯೋ ನಾನರಿಯೆನಲ್ಲದೆ ನನ್ನ ಬುದ್ಧಿಗೆ ಈ ವಿಧವೆಲ್ಲವೂ ಅತ್ಯದ್ಭುತವಾಗಿ ತೋರುತ್ತಿರುವುದು ಆಹ ! ಈ ಮಹಾನುಭಾವನನ್ನು ಎಷ್ಟು ಸ್ತೋತ್ರಮಾಡಿದರೂ ಸಾಲದು ಇವನು ಮಹಾಪುಣ್ಯಾತ್ಮನು" ಎಂದನು.

## ದೇವದತ್ತನ ಕಥೆ.

ಬಳಿಕ ಚಿದಾನಂದನಿಂತೆಂದನು "ವತ್ಸ ! ಸತ್ಯಶೀಲನೆ ! ನೀನು ಹೇಳಿದುದೆಲ್ಲವೂವಾಸ್ತವವೇ ಈ ಛತ್ರದಲ್ಲಿ ಈ ಪ್ರಕಾರವಾದ ಧರ್ಮವು ನಡೆಯುತ್ತಿರು

ವುದಕ್ಕೆ ಕಾರಣವಿರುವುದು ಅದನ್ನು ನಿನಗೆ ಹೇಳುವೆನು ಕೇಳು" ಎಂದು ಮುಂದೆ ಹೇಳುವಪ್ರಕಾರವಾಗಿ ಹೇಳಲಾರಂಭಿಸಿದನು.

ಈ ಗ್ರಾಮದಲ್ಲಿ ನೂರುವರ್ಷಕ್ಕೆ ಹಿಂದೆ ದೇವದತ್ತನೆಂಬ ಬ್ರಾಹ್ಮಣ ನಿದ್ದನು. ಆತನು ನಾಲ್ಕುವೇದಗಳನ್ನೂ, ಆರು ಶಾಸ್ತ್ರಗಳನ್ನೂ ಹೆಚ್ಚೇಕೆ? ಚತುರ್ದಶವಿದ್ಯೆಗಳನ್ನೂ ಕಲಿತು ಮಹಾ ವಿದ್ವಾಂಸನಾಗಿ ಮಹಾಮಹೋಪಾಧ್ಯಾಯ ಬಿರುದವನ್ನು ಪಡೆದು ರಾಜಾಸ್ಥಾನಗಳಲ್ಲಿ ಪಂಡಿತ ಸಮ್ಮಾನವನ್ನು ಹೊಂದಿ ಬಹಳ ಧನವನ್ನು ಸಂಪಾದಿಸಿದನು. ಆತನಿಗೆ ಕ್ರಮವಾಗಿ ಧನಾಶೆ ಅಧಿಕವಾಗುತ್ತ ಬಂದಿತು. ಶಿಷ್ಯನೇ! ಆಶೆಗೆ ಮೇರೆಯುಂಟೆ? ಲಾಲಿಸು.

ಶ್ಲೋ॥ ನಿಸ್ವೋವಷ್ಟಿಶತಂ ಶತೀದಶಶತಂ ಲಕ್ಷಂ ಸಹಸ್ರಾಧಿಪೋ ॥
ಲಕ್ಷೇಶಃ ಕ್ಷಿತಿರಾಜತಾಂ ಕ್ಷಿತಿಪತಿಶ್ಚಕ್ರೇಶತಾಂ ವಾಂಛತಿ ॥
ಚಕ್ರೇಶಸ್ಸುರರಾಜತಾಂ ಸುರಪತಿ ರ್ಬ್ರಹ್ಮಾಸ್ಪದಂ ವಾಂಛತಿ ।
ಬ್ರಹ್ಮಾಶಂಭುಪದಂ ಹರೋಹರಿಪದಂ ತೃಷ್ಣಾವಧಿಂಕೋಗತಃ ॥

ದರಿದ್ರನು ನೂರು ರೂಪಾಯಿಗಳಾದರೆ ಸಾಕೆನ್ನುವನು. ನೂರು ರೂಪ್ಯಗಳವನಿಗೆ ದೊರೆತರೆ ಒಂದು ಸಾವಿರವನ್ನೂ, ಸಾವಿರವೂ ಲಭ್ಯವಾದರೆ ಲಕ್ಷವನ್ನೂ, ಲಕ್ಷೇಶನಾದರೆ ದೊರೆತನವನ್ನೂ ದೊರೆತನವೂ ಪ್ರಾಪ್ತವಾದರೆ ಸಾರ್ವಭೌಮತ್ವವನ್ನೂ, ಸಾರ್ವಭೌಮನು ಸ್ವರ್ಗಾಧಿಪತ್ಯ ವನ್ನೂ, ಅದು ದೊರೆತರೆ ಬ್ರಹ್ಮತ್ವವನ್ನೂ, ಅದೂ ದೊರೆತ ಬಳಿಕ ಶಿವತ್ವವನ್ನೂ ಅಪೇಕ್ಷಿಸಿ, ಶಿವನಾದ ಬಳಿಕ ವಿಷ್ಣುತ್ವವನ್ನು ಬಯಸುವನು. ಹೀಗೆ ಆಸೆಗೆ ಅಂತವೆಂದಿಗೂ ಇಲ್ಲ. ದೇವದತ್ತನು ಅಧಿಕ ಧನಯುಕ್ತನಾದರೂ ಆಸೆಗೆ ದಾಸನಾಗಿ ಆರ್ಜಿಸಿದ್ದ ಧನವನ್ನು ಬಡ್ಡಿಗೆಕೊಟ್ಟು, ಬಡ್ಡಿಗೆ ಬಡ್ಡಿಯನ್ನು ಕಟ್ಟಿ ಅದೃಷ್ಟವಶದಿಂದ ಅನತಿಕಾಲದಲ್ಲಿಯೇ ಗಣನಾತೀತವಾದ ಧನವನ್ನು ಕೂಡಿಸಿ, ಅನೇಕ ಕೋಟಿ ಧನಕ್ಕೆ ಒಡೆಯನಾದನು.

ಹೀಗೆ ಪರಮೈಶ್ವರ್ಯವಂತನಾದರೂ ಅಸಮಾನ ಪಾಂಡಿತ್ಯವನ್ನು ಪಡೆದು ಸಮಸ್ತಧರ್ಮಗಳನ್ನೂ ಅರಿತವನಾದರೂ ಆ ದೇವದತ್ತನು, ಭಿಕ್ಷುಕರಿಗೆ ಭಿಕ್ಷವನ್ನಾದರೂ ಕೊಡದೆ ಅತಿ ಲುಬ್ಧತ್ವದಿಂದ ವರ್ತಿಸುತ್ತಿದ್ದನು. ತಿರಿಪೆಯವನಾವನಾದರೂ ಬಾಗಿಲಬಳಿಗೆ ಬಂದರೆ ಒಡನೆಯೇ ಈದಿರುವ ಹುಲಿಯಂತೆ ಅತ್ಯುಗ್ರನಾಗಿ ಅವನನ್ನು ಕ್ರೂರದೃಷ್ಟಿಯಿಂದ ನೋಡುತ್ತ ಒಂದು ಕಟ್ಟಿಗೆಯನ್ನು ತೆಗೆದುಕೊಂಡು ದೂರವಾಗಿ ಅಟ್ಟಿಕೊಂಡುಹೋಗಿ ಹೊಡೆದು ಹಿಂದಿರುಗಿ ಬರುತ್ತಿದ್ದನು. ಸಾವಿರವೇಕೆ ಅತನಂತಹ ಧರ್ಮಶೂನ್ಯನೂ ಪಾಪಿಷ್ಠನೂ ಪ್ರಪಂಚದಲ್ಲಿಯೇ ಇರಲಾರನೆಂದು ದೃಢವಾಗಿ ಹೇಳಬಹುದು.

ದೇವದತ್ತನಿಗೆ ಗುರುದತ್ತನೆಂಬ ಕುಮಾರನೊಬ್ಬನಿರುವನು. ಅವನೂ ಚೆನ್ನಾಗಿ ಓದಿಕೊಂಡು ಬುದ್ಧಿವಂತನಾಗಿದ್ದನು. ದೇವದತ್ತನು ಕುಮಾರನಿಗೆ

ವಿವಾಹವನ್ನು ಮಾಡಿದ ಬಳಿಕ ಯಾವುದೋ ಒಂದು ರೋಗವು ಸಂಭವಿಸಿ ಸತ್ತನು. ಸತ್ತಬಳಿಕ ಅವನನ್ನು ಯಮಭಟರು ತೆಗೆದುಕೊಂಡುಹೋಗಿ ತಮ್ಮ ಒಡೆಯನ ಸನ್ನಿಧಿಯಲ್ಲಿ ನಿಲ್ಲಿಸಿದರು. ಯಮಧರ್ಮರಾಜನು ಚೆನ್ನಾಗಿ ಅವನ ಪ್ರವರ್ತನವನ್ನು ವಿಚಾರಿಸಿ ಅಗ್ನಿಹೋತ್ರಾದಿ ಸತ್ಕೃತ್ಯಗಳನ್ನೂ ದೇವತಾರಾಧನವನ್ನೂ ಚೆನ್ನಾಗಿ ಮಾಡುತ್ತಿದ್ದಂತೆ ತೀರ್ಮಾನವಾದುದರಿಂದ ಅವನಿಗೆ ಸಮಸ್ತಭೋಗಗಳನ್ನೂ ನಡೆಯಿಸುತ್ತಿರಬೇಕೆಂದೂ ಆಹಾರವನ್ನು ಮಾತ್ರ ಕೊಡಕೂಡದೆಂದೂ ಖಂಡಿತವಾಗಿ ಆಜ್ಞೆಯನ್ನು ಮಾಡಿದನು.

ಯಮದೂತರು ಅದೇ ಪ್ರಕಾರವಾಗಿ ಸಮಸ್ತ ಸೌಖ್ಯಗಳನ್ನೂ ಉಂಟುಮಾಡುತ್ತಿದ್ದರು. ಅನ್ನಪಾನಗಳನ್ನು ಮಾತ್ರ ಕೊಡುತ್ತಿರಲಿಲ್ಲ. ಆ ಬ್ರಾಹ್ಮಣನು ಆಹಾರಪಾನೀಯಗಳನ್ನುಳಿದು ತನಗೆ ಮತ್ತೆಷ್ಟು ಸುಖಗಳಿದ್ದರೂ ಅವುಗಳನ್ನು ಮೆಚ್ಚದೆ ಕ್ಷುತ್ತೃಷ್ಣೆಗಳಿಂದ ಬಳಲಿ ಬಾಡಿ ಸೊಕ್ಕುತ್ತ ಸೋಲುತ್ತ ಯಮನ ಸನ್ನಿಧಿಗೆ ಬಂದು, "ಅಯ್ಯಾ! ದಂಡಧರನೇ! ಅಪರಾಧಕ್ಕೆ ತಕ್ಕ ಶಿಕ್ಷೆಯನ್ನು ಮಾಡುವುದರಿಂದ ನಿನಗೆ ಧರ್ಮರಾಜನೆಂದು ಹೆಸರು ಬಂದಿರುವುದು. ಪಕ್ಷಪಾತವಿಲ್ಲದೆ ಎಲ್ಲರಲ್ಲಿಯೂ ಸಮನಾಗಿ ವರ್ತಿಸುವ ಸ್ವಭಾವವುಳ್ಳವನಾದುದರಿಂದ ನಿನಗೆ " ಸಮವರ್ತಿ " ಯೆಂದಭಿಮಾನವು ಟಾಗಿರುವುದು. ದೇವ! ನೀನು, ತ್ರಿಮೂರ್ತ್ಯಾತ್ಮಕ ಸ್ವರೂಪನೂ, ತ್ರಿದಶಸಂರಕ್ಷಕನೂ ಲೋಕಕ್ಕೆಲ್ಲ ಮಳೆ ಬೆಳೆಯನ್ನು ಕಾಪಾಡುವವನೂ ಆದ ಆದಿತ್ಯನ ಕುಮಾರನು. ಇಂಥ ನೀನು ನನಗೆ ಅನ್ನಪಾನಗಳನ್ನು ಕೊಡದಂತೆ ನಿನ್ನಭಟರಿಗೆ ಆಜ್ಞೆಮಾಡಿರುವೆ. ಇದು ಯುಕ್ತವೇ? ನಾನು ಭೂಲೋಕದಲ್ಲಿರುವಾಗ್ಗೆ ಎಷ್ಟೋ ಸತ್ಕ್ರಿಯೆಗಳನ್ನು ಮಾಡಲಿಲ್ಲವೇ? ಸ್ವಧರ್ಮವನ್ನು ಬಿಟ್ಟು ಅನ್ಯಧರ್ಮಗಳನ್ನು ಅನುಷ್ಠಿಸಿದೆನೇ? ಪರನಾರೀ ಸಂಗಮಾದಿ ದುರ್ವ್ಯವಹಾರಗಳನ್ನು ಮಾಡಿದೆನೇ? ವೇದಾದಿ ವಿದ್ಯೆಗಳನ್ನು ಮಾರಿ ಜೀವಿಕೆಯನ್ನು ನಡೆಯಿಸಿಕೊಂಡೆನೇ? ನನಗೇತಕ್ಕೆ ಇಂತಪ್ಪ ಶಿಕ್ಷೆಯನ್ನು ವಿಧಿಸಿದೆ?" ಎಂದು ಕೇಳಿದನು.

ಯಮನಾತನನ್ನು ಕಂಡು ನಕ್ಕು, "ಅಯ್ಯಾ! ಬ್ರಾಹ್ಮಣ! ಕೇಳು. ನೀನು ಹೇಳಿದುದೆಲ್ಲವೂ ಸತ್ಯವೆ. ನನಗೆ ಯಾವ ಪಕ್ಷಪಾತವೂ ಇಲ್ಲ. ಅಪರಾಧಕ್ಕೆ ತಕ್ಕ ದಂಡನವನ್ನೇ ಮಾಡುವೆನು. ಇದೇ ನನ್ನ ಸ್ವಭಾವವು. ಬ್ರಹ್ಮದೇವರು ನನ್ನನ್ನು ನಿಯಮಿಸಿರುವುದೇ ಇದಕ್ಕಾಗಿ. ನೀನು ಭೂಲೋಕದಲ್ಲಿ ದೇವದತ್ತನೆಂಬ ಹೆಸರುಳ್ಳ ಬ್ರಾಹ್ಮಣನಾಗಿದ್ದು ಅನೇಕ ಸತ್ಕಾರ್ಯಗಳನ್ನು ಮಾಡಿರುವುದು ವಾಸ್ತವವೇ ಸರಿ. ಪರನಾರೀ ಸಂಗಮಾದಿ ದುಷ್ಕಾರ್ಯಗಳನ್ನು ಮಾಡಿರುವುದಿಲ್ಲವೆಂಬುದೂ ಸತ್ಯವೇ. ಆದರೆ ಧರ್ಮಶೂನ್ಯನಾಗಿ ನೀವು ಜೀವಿಸಿರುವಷ್ಟು ಕಾಲವೂ ಬಡವರನ್ನು ಕಾಪಾಡದೆ, ಭಿಕ್ಷುಕರನ್ನು ಅಟ್ಟುತ್ತ ಒಂದು ಹಿಡಿಯನ್ನ

ವನ್ನಾಗಲಿ ಒಂದು ಸೇರಿ ಧಾನ್ಯವನ್ನಾಗಲಿ ಕೊಟ್ಟವನಾಗಲಿಲ್ಲ. ನೀನು ಎಲ್ಲ ಶಾಸ್ತ್ರಗಳನ್ನೂ ಬಲ್ಲವನು. ನಿನಗೆ ಮತ್ತೆ ನಾನು ಹೇಳಬೇಕಾದುದಿಲ್ಲ. ಆದರೂ ಪಾಂಚಭೌತಿಕ ಶರೀರವನ್ನು ಭೂಲೋಕದಲ್ಲಿ ಬಿಟ್ಟು ಯಾತನಾಶರೀರವನ್ನು ಪಡೆದಿರುವ ನಿನಗೆ ನೆನಪುಬರುವಂತೆ ಒಂದಿಷ್ಟು ಹೇಳುವೆನು.

" ಲೋಭಾವಿಷ್ಟೋ ನರೋವಿತ್ತಂ ವೀಕ್ಷತೇನ ಸಚಾಪದಂ |
ದುಗ್ಧಂ ಪಶ್ಯತಿ ಮಾರ್ಜಾರೋ ಯಥಾನ ಲಗುಡಾಹತಿಂ || "

ಬೆಕ್ಕು ಹಾಲನ್ನು ನೋಡಿ ನಲಿಯುವುದೇ ಹೊರತು ಮನೆಯ ಯಜಮಾನನು ದೊಣ್ಣೆಯಿಂದ ಹೊಡೆವುದನ್ನು ಹೇಗೆ ತಿಳಿವುದಿಲ್ಲವೋ ಹಾಗೆ ಲುಬ್ಧತ್ವದಿಂದ ಕೂಡಿದ ಮನುಷ್ಯನು ಹಣವನ್ನು ನೋಡಿ ಸಂತೋಷಿಸುವನೇ ಹೊರತು ತನಗೆ ಮುಂದೆ ಉಂಟಾಗುವ ವಿಪತ್ತನ್ನು ಬಗೆವುದಿಲ್ಲ. ಮತ್ತು,

" ನದಾತುಂ ನೋಪಭೋಕ್ತುಂಚ ಶಕ್ನೋತಿ ಕೃಪಣಃಶ್ರಿಯಂ |
ಕಿಂತುಸ್ಪೃಶತಿಹಸ್ತೇನ ನಪುಂಸಕ ಇವ ಸ್ತ್ರಿಯಂ || "

ಲೋಭಿಯಾದವನು ಧನವನ್ನು ಇತರರಿಗೆ ಕೊಡುವುದಕ್ಕಾಗಲಿ, ತಾನನುಭವಿಸುವುದಕ್ಕಾಗಲಿ ಶಕ್ತನಾಗುವುದಿಲ್ಲ. ಮತ್ತೇನೆಂದರೆ ನಪುಂಸಕನು ಸ್ತ್ರೀಯನ್ನು ಮುಟ್ಟಿ ಸಂತೋಷಿಸುವಂತೆ ಅವನು ಹಣವನ್ನು ಮುಟ್ಟಿ ಸಂತೋಷಿಸುತ್ತಿರುವನು. ಕೊನೆಗೆ ಅವನು

" ಕೃಪಣಃ ಸ್ವವಧೂಸಂಗಂ ನಕರೋತಿ ಭಯಾದಿಹ |
ಭವಿತಾ ಯದಿ ಮೇ ಪುತ್ರಃ ಸ ಮೇ ವಿತ್ತಂ ಹರೇದಿತಿ || "

ನನಗೆ ಮಗನಾದರೆ ಅವನು ನನ್ನ ಧನವನ್ನು ಅಪಹರಿಸುವನೋ ಏನೋ, ಎಂದು ಭಯದಿಂದ ತನ್ನ ಹೆಂಡತಿಯ ಸಂಗಮವನ್ನು ಕೂಡ ಮಾಡುವುದಿಲ್ಲ.

ಎಲೈ ಬ್ರಾಹ್ಮಣನೇ! ಕೃಪಣನ ಚರ್ಯೆಯು ಹೀಗಿರುತ್ತದೆ. ನೀನಿಲ್ಲಿಗೆ ಬರುವಾಗ ಒಂದು ಕಾಸನ್ನಾದರೂ ತೆಗೆದುಕೊಂಡು ಬರಲಿಲ್ಲ. ಅಲ್ಲಿಯೇ ಬಿಟ್ಟು ಬಂದೆಯಲ್ಲವೆ? ಆದರಿಂದ ನೀನಾವ ಸುಖವನ್ನು ಪಡೆದೆ? ಇಲ್ಲವಲ್ಲ. ನೀನು ಸತ್ಕಾರ್ಯಗಳನ್ನು ಮಾಡಿದುದಕ್ಕಾಗಿ ನಿನಗೆ ಭೋಗಗಳನ್ನು ಕಲ್ಪಿಸರುವೆನು. ಯಾರಿಗೂ ಒಂದು ಕವಳವನ್ನಾವರೂ ಕೊಡದ ಕಾರಣದಿಂದ ನಿನಗೆ ಅನ್ನಪಾನಗಳನ್ನು ಕೊಡಲಾಗಲಿಲ್ಲ. ನೀನೇ ಹೇಳಿವೆಯಲ್ಲವೆ " ಅಪರಾಧಿಗಳಿಗೆ ತಕ್ಕ ದಂಡವನ್ನು ವಿಧಿಸಿರುವೆನು. ನಿನ್ನ ಅಪರಾಧಗಳನ್ನು ಸ್ಮರಿಸದೆ ಈಗ ನೀನು ರೋಷಿಸಿದರೆ ಫಲವೇನು? " ಅವಶ್ಯಮನುಭೋಕ್ತವ್ಯಂ ಕೃತಂಕರ್ಮಶುಭಾಶುಭಂ" ಎಂದು ನುಡಿದನು.

" ಅಕಟಾ! ಬುದ್ಧಿಹೀನತೆಯಿಂದ ನಾನು ಕೃಪಣನಾಗಿ ದಾನಧರ್ಮಗಳನ್ನು ಮಾಡದೆ ಹಣವೇ ಸ್ಥಿರವೆಂದು ನಂಬಿ ಕಾವಲುಗಾರನಂತೆ ಕಾದಿದ್ದು

ನಾನೂ ತಿನ್ನದೆ ಹೆರರಿಗೂ ಕೊಡದೆ ಬಿಟ್ಟುಬಂದೆನು ಪ್ರಭಾಕರತನೂಭವ! ಅಪರಾಧವಾಯಿತು ಕ್ಷಮಿಸು ಕ್ಷಮಿಸದಿದ್ದರೆ ಮುಂದೆ ನನ್ನ ಗತಿಯೇನು? ಹಸಿವು ಬಾಯಾರಿಕೆಗಳನ್ನು ನಾನು ಹೇಗೆ ಸೈರಿಸಲಿ? ಮಹಾತ್ಮಾ! ನನ್ನ ಈ ಕಷ್ಟವು ತೊಲಗುವುದಕ್ಕೆ ಆವುದಾದರೂ ಪರಿಹಾರವಿದ್ದರೆ ದಯವಿಟ್ಟು ಹೇಳಿ ಕಾಪಾಡಬೇಕು" ಎಂದು ಬಹುದೈನ್ಯದಿಂದ ಬೇಡಿಕೊಂಡನು ಯಮನು ಕರುಣಿಸಿ "ಎಲೈ ಬ್ರಾಹ್ಮಣನೇ! ನೀನು ಸಂಪಾದಿಸಿದ ದ್ರವ್ಯವು ಅನಂತಪರಿಮಿತಿಯುಳ್ಳುದಾಗಿರುವುದಷ್ಟೆ? ಅದನ್ನು ಬಡವರಿಗೆ ಸಾಧುಗಳಿಗೆ ಅತಿಥಿಗಳಿಗೆ ಅಭ್ಯಾಗತರಿಗೆ ಪಥಿಕರಿಗೆ ನಿನ್ನ ಕುಮಾರನು ಪ್ರತಿದಿನವೂ ಅನ್ನದಾನಕ್ಕಾಗಿ ವೆಚ್ಚಮಾಡುತ್ತಿದ್ದರೆ ಕ್ರಮಕ್ರಮವಾಗಿ ನಿನ್ನ ಪಾಪಗಳು ನಾಶವಾಗಿ ನಿನಗೆ ಆಹಾರವು ಲಭಿಸುವುದು" ಎಂದಾಜ್ಞಾಪಿಸಿದನು.

ಆ ಮಾತುಗಳನ್ನು ಕೇಳಿ ದೇವದತ್ತನು "ಅಯ್ಯೋ! ಈ ವಿಚಾರವು ನನ್ನ ಕುಮಾರನಿಗೆ ತಿಳಿವುದೆಂತು? ಯಾರು ಹೇಳುವರು? ಹೇಳಿದರೂ ಅವನು ನನ್ನ ದುಃಖಪರಿಹಾರಕ್ಕಾಗಿ ಇಂತಪ್ಪ ಮಹತ್ಕಾರ್ಯವನ್ನು ಮಾಡುವನೆ? ಅಥವಾ ಇಲ್ಲವೋ? ಯಾರುಬಲ್ಲರು?" ಎಂದಾಲೋಚಿಸಿ ಅತ್ಯಂತ ದುಃಖದಿಂದ ನಿರಂತರವೂ ಕುದಿಯುತ್ತಿದ್ದನು. ಆ ಸಮಯದಲ್ಲಿ ತ್ರಿಲೋಕಸಂಚಾರಿಯಾದ ನಾರದಮುನಿಯು ದೇವದತ್ತನ ದುಃಖಾತಿಶಯವನ್ನು ನೋಡಿ ಮರುಗಿ ಭೂಲೋಕಕ್ಕೆ ಬಂದು ವೇಷಾಂತರದಿಂದ ಹೋದರೆ ಕಾರ್ಯಸಾಧನೆಯಾಗುವುದಿಲ್ಲವೆಂದು ಬಗೆದು ಸ್ವವೇಷದಿಂದಲೆ ಗುರುದತ್ತನ ಮನೆಗೆ ಹೋಗಿ ತಾನು ದೇವಮುನಿಯಾಗಿರುವುದನ್ನರಿಯಿಸಿದನು ಮಾನವವರ್ಗಕ್ಕೆ ಅಸದಳವಾಗಿರುವ ನಾರದಮುನಿಯ ದರ್ಶನವು ತನಗೆ ಲಭಿಸಿದುದರಿಂದ ಸಂತುಷ್ಟಾಂತರಂಗನಾಗಿ ಆ ಮುನೀಂದ್ರನನ್ನು ಅರ್ಘ್ಯಪಾದ್ಯಾಸನಾದಿಗಳಿಂದ ವಿಧಿವತ್ತಾಗಿ ಪೂಜಿಸಿ "ಸ್ವಾಮಿ! ತಾವು ಮೂರುಲೋಕಗಳಲ್ಲಿಯೂ ಸಂಚರಿಸತಕ್ಕವರಲ್ಲವೆ? ಮನುಷ್ಯರಿಗೆ ಸಾಮಾನ್ಯವಾಗಿ ಲಭಿಸದಿರುವ ತಮ್ಮ ದರ್ಶನವು ನನಗೆ ಲಭಿಸಿದುದು ಪೂರ್ವಕೃತಪುಣ್ಯವಲ್ಲವೆ? ತಮ್ಮ ದರ್ಶನದಿಂದ ನಾನು ಧನ್ಯನಾದೆನು ನನ್ನ ವಂಶವು ಪವಿತ್ರವಾಯಿತು ಒಂದು ವಿಜ್ಞಾಪನೆ ನನ್ನ ತಂದೆಯು ಮೃತನಾಗಿ ಹದಿನೆಂಟು ತಿಂಗಳುಗಳಾದುವು ಆತನು ಅಸಂಖ್ಯಾಕವಾದ ಧನವನ್ನು ಸಂಪಾದಿಸಿಟ್ಟುಹೋದನು ಆದರೆ ಅದರ ಫಲವನ್ನಾತನನುಭವಿಸಲಿಲ್ಲ ["ಅತಿಥೌತಿಷ್ಠತಿದ್ವಾರಿಯೋಭುಂಗ್ತೇನ್ನಂವಿಹಾಯತಂ | ಗೋಮಾಂಸಸಮಮನ್ನಂಸ್ಯಾತ್ಸಚಂಡಾಲಸಮೋನರಃ ||"[ "ಅತಿಥಿಯಾದವನು ಬಾಗಿಲಲ್ಲಿನಿಂತು ಹಸಿವುಗೊಂಡು ಅನ್ನವನ್ನಪೇಕ್ಷಿಸುತ್ತಿರಲು ಯಾವನು ಅವನನ್ನುಬಿಟ್ಟು ಅನ್ನವನ್ನು ತಿನ್ನುವನೊ ಆ ಅನ್ನವು ಅವನಿಗೆ ಗೋಮಾಂಸಕ್ಕೆಣೆಯಾದುದು ಅವನು ಚಂಡಾಲಸ

ಮನು" ಎಂದು ಶಾಸ್ತ್ರವು ಘೋಷಿಸುತ್ತಿರುವುದನ್ನು ಚೆನ್ನಾಗಿ ತಿಳಿದಿರುವನಾದರೂ ಆತನು ಒಂದುದಿನವಾದರೂ ಒಬ್ಬರಿಗಾದರೂ ಅನ್ನವನ್ನಿಟ್ಟು ಆದರಿಸಿದವನಲ್ಲ [" ಅತಿಥಿರ್ಯತ್ರಭಗ್ನಾಶೋಗೃಹಾತ್ಪ್ರತಿನಿವರ್ತತೇ | ಸತಸ್ಮೈದುಷ್ಕೃತಂದತ್ವಾಪುಣ್ಯಮಾದಾಯಗಚ್ಛತಿ ||"] " ಅತಿಥಿಯಾದವನು ನಿರಾಶನಾಗಿ ಮನೆಯಿಂದ ಹಿಂದಿರುಗಿಹೋಗುವಾಗ ಅವನು ತನ್ನ ಪಾಪವನ್ನು ಗೃಹಸ್ಥನಿಗೆ ಕೊಟ್ಟು ಗೃಹಸ್ಥನ ಪುಣ್ಯವನ್ನು ಪರಿಗ್ರಹಿಸಿ ಹೋಗುವನು" ಎಂಬುದನ್ನು ತಿಳಿದಿದ್ದರೂ ಆ ಪಾಪಕ್ಕೆ ಹೆದರಿದವನಲ್ಲ ಹೆಚ್ಚು ಹೇಳುವುದೇನು? ಮಹಾಮುನಿಗಳೇ! ಸ್ನಾನಸಂಧ್ಯಾ ದೇವತಾರ್ಚನಾದಿಗಳನ್ನು ಹೊರತು ಮತ್ತಾವ ಪುಣ್ಯವನ್ನೂ ಆತನು ಮಾಡಿರುವುದಿಲ್ಲ ನಾನು ಆತನಿಗೆ ಪುತ್ರನಾಗಿ ಹುಟ್ಟಿದುದಕ್ಕೆ ಆತನಿಗೆ ಸದ್ಗತಿಯುಂಟಾಗುವಂತೆ ಯಾವುದಾದರೊಂದು ಧರ್ಮವನ್ನು ಮಾಡಬೇಕೆಂಬ ಆಸೆಯು ನನಗಿರುವುದು ಈಗ ನನ್ನ ತಂದೆಯೆಲ್ಲಿರುವನು? ಯಾವ ಸ್ಥಿತಿಯಲ್ಲಿರುವನು? ಎಂಬುದನ್ನು ದಯವಿಟ್ಟು ಹೇಳುವುದಲ್ಲದೆ ಆತನಿಗೆ ಸದ್ಗತಿಪ್ರಾಪ್ತವಾಗುವುದಕ್ಕೆ ನಾನು ಯಾವ ಕರ್ತ್ರವನ್ನು ಮಾಡಬೇಕೋ ದಯವಿಟ್ಟು ಅಪ್ಪಣೆ ಕೊಡಿಸಬೇಕೆಂದು ಬೇಡುವೆನು" ಎಂದು ವಿನಯಪೂರ್ವಕವಾಗಿ ಕೇಳಿಕೊಂಡನು.

ನಾರದಮುನೀಂದ್ರನು ಆತನಿಗೆ ದೇವದತ್ತನು ಮೃತನಾದುದು ಮೊದಲಾಗಿ ಯಮಲೋಕದಲ್ಲಿ ಆತನಿಗೆ ಉಂಟಾಗುತ್ತಿರುವ ಬಾಧೆಯನ್ನು ವಿಸ್ತರಿಸಿ ಹೇಳಿ ಇಂತೆಂದನು. " ಗುರುದತ್ತ! ತಂದೆಗೆ ಸದ್ಗತಿಯನ್ನು ಉಂಟುಮಾಡುವ ಪುತ್ರನೇ ಪುತ್ರನು ಕೇಳು ನಿನ್ನ ಜನಕನು ಅಪಾರವಾದ ಧನವನ್ನು ಸಂಪಾದಿಸಿದನು ಆತನು ಲೋಕಾಂತರದಲ್ಲಿ ಕಷ್ಟಪಡುತ್ತಿರಲು ನೀನಿಲ್ಲಿ ಸುಖವನ್ನನುಭವಿಸುತ್ತಿರುವುದು ಯುಕ್ತವಲ್ಲ ಆ ಧನದಲ್ಲಿ ನಿನಗೆ ಬೇಕಾಗುವಷ್ಟನ್ನು ಉಳಿಸಿಕೊಂಡು ಉಳಿದುದನ್ನು ವೆಚ್ಚಮಾಡಿ ಅನ್ನದಾನವನ್ನು ಮಾಡುತ್ತಿರು " ನಾನ್ನೋದಕಸಮಂದಾನಂ" ಎಂಬಂತೆ ಅನ್ನದಾನಕ್ಕೆ ಸಮಾನವಾದ ದಾನವಿಲ್ಲ ನೀನು ನಿರತಾನ್ನದಾನವನ್ನು ಮಾಡುತ್ತಿದ್ದರೆ ನಿನ್ನ ತಂದೆಗೆ ಪರಲೋಕದಲ್ಲಿ ಪ್ರಾಪ್ತವಾಗಿರುವ ಕಷ್ಟಪರಂಪರೆಯು ನಾಶವಾಗಿ ಆತನಿಗೆ ಸುಖವುಂಟಾಗುವುದು" ಎಂದುಪದೇಶಿಸಿ ಮಹರ್ಷಿಯು ಮಾಯವಾಗಿ ಹೋದನು.

ಪಿತೃಭಕ್ತಿಯುಳ್ಳ ಗುರುದತ್ತನು ತಂದೆಯ ದುಸ್ಥಿತಿಯನ್ನು ಕುರಿತು ಮರುಗಿ ಕಾಲಯಾಪನ ಮಾಡದ ಈ ಧರ್ಮಶಾಲೆಯನ್ನು ಕಟ್ಟಿಸಿ ಇಲ್ಲಿ ನಿರಂತರವೂ ಸಮಸ್ತರಿಗೂ ಈಗ ನಡೆಯುತ್ತಿರುವಂತೆಯೇ ಶಾಶ್ವತವಾಗಿ ಅನ್ನದಾನವು ನಡೆಯುತಕ್ಕಬಗ್ಗೆ ತಕ್ಕ ಏರ್ಪಾಡುಗಳನ್ನು ಮಾಡಿ ಕೆಲವು ಸಂವತ್ಸರಗಳಿದ್ದು ಆತನು ಗತಿಸಿದನು ಅನ್ನದಾನಫಲದಿಂದ ಯಮಲೋಕದಲ್ಲಿ ದೇವದತ್ತನ ಕಷ್ಟ

ಗಳು ತೀರಿದುವು ಗುರುದತ್ತನು ಸತ್ತುಹೋದರೂ ಆತನು ಮಾಡಿದ್ದ ಸ್ಥಿರವಾದ ಏರ್ಪಾಡಿನಂತೆ ಈಗಲೂ ಆ ಧರ್ಮಕಾರ್ಯವು ನಡೆಯುತ್ತಿರುವುದು ಆತನ ವಂಶಸ್ಥನೇ ಆ ಧರ್ಮಕಾರ್ಯಭಾರವನ್ನು ವಹಿಸಿರುವನು" ಎಂದಾ ಚಿದಾನಂದಯೋಗಿಯು ಆ ಸತ್ರದ ವೃತ್ತಾಂತವನ್ನು ಹೇಳಿ "ಸತ್ಯಶೀಲನೇ! ಇಲ್ಲಿಗೆ ಕಾಶೀಪಟ್ಟಣವು ಮೂರು ಹರಿದಾರಿಗಳ ದೂರದಲ್ಲಿರುವುದು ಸಾಯಂಕಾಲಕ್ಕೆ ನಾವಲ್ಲಿ ಸೇರಬೇಕಾಗಿರುವುದು ಇನ್ನಿಲ್ಲಿ ನಿಲ್ಲಬಾರದು ಹೋಗುವ ಏಳು" ಎಂದು ನುಡಿದನು ಬಳಿಕ ಇಬ್ಬರೂ ಪ್ರಯಾಣವಾಗಿ ನಡೆದು ಅಸ್ತಮಾನ ಕಾಲಕ್ಕೆ ಸರಿಯಾಗಿ ವಾರಣಾಸಿಯನ್ನು ಸೇರಿದರು.

ಇಂತು ಹದಿನೈದನೆಯ ದಿನದ ಕಥೆ ಮುಗಿದುದು.



—: ಹದಿನಾರನೆಯ ಕಥೆ. :—

"ಸಿಂಧುರಪಾಲಕೃಪಾಸಿಂಧೋ | ಶ್ರಿತಭಕ್ತಕೋಟಿವರಬಂಧೋ |
ಶ್ರೀಹೃದಯಕಮಲಬಂಧೋ | ಪಾಲಯಮಾಂ ನಖಕಾಂತಿವಿಜಿತಪೂರ್ಣೇಂದೋ ||"

## ಕಾಶೀನಗರ ಪ್ರವೇಶ.

ಸಾರ್ಥನಾಮಾನಾದ ಆ ಚಿದಾನಂದಯೋಗಿಯೂ ಸತ್ಯಶೀಲನೂ ಅಲ್ಲಿಂದ ಪ್ರಯಾಣಮಾಡಿ ಸಂಜೆಯಹೊತ್ತಿಗೆ ಕಾಶೀನಗರದ ಸಮೀಪಕ್ಕೆಹೋಗಿ ಪಟ್ಟಣದ ಹೊರಗಿದ್ದ ಒಂದು ಮಂಟಪದಲ್ಲಿಳಿದು ಬೆಳಗಾಗುವವರೆಗೂ ಕಾಶೀಕ್ಷೇತ್ರದ ಮಹಿಮೆಯನ್ನು ಎಣ್ಣಿಸುತ್ತ ಕಾಲಯಾಪನವನ್ನು ಮಾಡಿ ಅರುಣೋದಯಕ್ಕೆ ಸರಿಯಾಗಿ ಎದ್ದು ಕಾಲೋಚಿತ ಕೃತ್ಯಗಳನ್ನು ಮುಗಿಸಿಕೊಂಡು ಭಕ್ತಿಯುಕ್ತರಾಗಿ ಸಮಸ್ತಪಾಪಪರಿಹಾರಿಣಿಯೂ, ಅಭಂಗತರಂಗ ಸಂಗತೆಯೂ, ಸಮುತ್ತುಂಗ ಮಂಗಳ ಪ್ರದಾಯಿನಿಯೂ ಆದ ಗಂಗೆಯನ್ನು ಪರಮಾನಂದದಿಂದ ಸಂದರ್ಶಿಸಿ ಸಾಷ್ಟಾಂಗ ನಮಸ್ಕಾರಗಳನ್ನು ಮಾಡಿ, ಕೃತಸ್ನಾನರಾಗಿ,

* ಗಾಂಗಂವಾರಿ ಮನೋಹಾರಿ | ಮುರಾರಿಚರಣಚ್ಯುತಂ ||
ತ್ರಿಪುರಾರಿ ಶಿರಶ್ಚಾರಿ | ಪಾಪಹಾರಿ ಪುನಾತುಮಾಂ ||

† ಪಾಪಾಪಹಾರಿದುರಿತಾರಿತರಂಗಧಾರಿ |
ಶೈಲಪ್ರಚಾರಿಗಿರಿರಾಜಗುಹಾವಿಹಾರಿ |

---

* ಮನೋಹರವಾಗಿಯೂ, ಶ್ರೀಮನ್ನಾರಾಯಣನ ಪಾದಕಮಲದಲ್ಲಿ ಹುಟ್ಟಿಹರಿದುದಾಗಿಯೂ ಶಂಕರನ ಶಿರಸ್ಸಿನಲ್ಲಿ ನಿಂತಿರುವುದಾಗಿಯೂ, ಪಾಪಗಳನ್ನು ಪರಿಹರಿಸುವುದಾಗಿಯೂ ಇರುವ ಗಂಗಾಜಲವು ನನ್ನನ್ನು ಪುನೀತನನ್ನಾಗಿ ಮಾಡಲಿ.

† ಪಾಪವನ್ನು ಹೋಗಲಾಡಿಸುವುದಾಗಿಯೂ, ಪಾಪಗಳಿಗೆ ಶತ್ರುವಾಗಿಯೂ, ಅಲೆಗಳುಳ್ಳುದಾಗಿಯೂ, ಬೆಟ್ಟದಲ್ಲಿ ಸಂಚರಿಸಿದುದಾಗಿಯೂ, ಪರ್ವತರಾಜನಾದ ಹಿಮವಂತನ

ಝುಂಕಾರಿಕಾರಿಹರಿಪಾದರಜೋವಿಹಾರಿ |
ಗಾಂಗಂಪುನಾತುಸತತಂಶುಭಕಾರಿವಾರಿ || ೨ ||
§ ಭಗವತಿತವತೀರೇ ನೀರಮಾತ್ರಾಶನೋಹಂ |
ವಿಗತವಿಷಯತೃಷ್ಣಃ ಕೃಷ್ಣಮಾರಾಧಯಾಮಿ |
ಸಕಲಕಲುಷಭಂಗೇ ಸ್ವರ್ಗಸೋಪಾನಸಂಗೇ |
ತರಳತರತರಂಗೇ ದೇವಿಗಂಗೇಪ್ರಸೀದ || ೩ ||

ಎಂದು ಸ್ತುತಿಸಿ ಪುನಃಪುನಃ ಪ್ರಣಾಮಗಳನ್ನು ಮಾಡಿ ಭಕ್ತಿಗೆ ಪರವಶಗಳಾದ ಮನಸ್ಸುಗಳಿಂದ ಹೊರಟು ಅನ್ನಪೂರ್ಣಾಸನಾಥನಾದ ವಿಶ್ವನಾಥನ ದರ್ಶನವನ್ನು ಮಾಡಿ, ಭವತಾರಕನೂ, ತ್ರಿಲೋಕರಕ್ಷಕನೂ ಆದ ಆ ಲಿಂಗಮೂರ್ತಿಯನ್ನು ಬಿಲ್ವಪತ್ರಗಳಿಂದ ಅರ್ಚಿಸಿ ಆನಂದಭಾಷ್ಪಗಳು ಕಣ್ಣುಗಳಲ್ಲಿ ಉರುಳುತ್ತಿರಲು, ಪ್ರದಕ್ಷಿಣ ನಮಸ್ಕಾರಾದಿಗಳನ್ನು ಮಾಡಿ, ತ್ರಿಲೋಕಶ್ಲಾಘನೀಯಳಾದ ವಿಶಾಲಾಕ್ಷಿಯ ದರ್ಶನವನ್ನು ಮಾಡಿ "ವಿಶ್ವೇಶಂ ಮಾಧವಂಧುಂಡಿಂದಂಡಪಾಣಿಂಚಭೈರವಂ | ವಂದೇಕಾಶೀಂ ಗುಹಾಂಗಂಗಾಂ ಭವಾನೀಂ ಮಣಿಕರ್ಣಿಕಾಂ" ಎಂಬ ಶ್ಲೋಕದಲ್ಲಿ ಹೇಳಿರುವಂತೆ ವಿಶ್ವೇಶ್ವರ, ಬಿಂದುಮಾಧವ, ಧುಂಡಿರಾಜ, ದಂಡಪಾಣಿ, ಕಾಲಭೈರವ, ಕಾಶೀದೇವೀ, ಗುಹೆ, ಗಂಗೆ, ಅನ್ನಪೂರ್ಣೆ ಇವರ ಸಂದರ್ಶನ ವಂದನಾದಿಗಳನ್ನು ಮಾಡಿಕೊಂಡು, ಮಧ್ಯಾಹ್ನಕ್ಕೆ ಸರಿಯಾಗಿ ಮಣಿಕರ್ಣಿಕೆಯಲ್ಲಿ ಸ್ನಾನಮಾಡಿ ಆ ದಿನವನ್ನು ಕಳೆದರು.

ಮಾರನೆಯದಿನ ಮೇಲೆ ಹೇಳಿದಂತೆ ನಿತ್ಯಯಾತ್ರೆಯನ್ನು ಮತ್ತೆ ಮಾಡಿ ಪಂಚತೀರ್ಥಸ್ನಾನ ಅಂದರೆ ಅಸೀಸಂಗಮದಲ್ಲಿ ಸ್ನಾನಮಾಡಿ ಅಸೀಮಾಧವ, ತ್ರಿವಿಕ್ರಮ, ಸಂಗಮೇಶ್ವರ, ಲೋಲಾರ್ಕ, ಅರ್ಕವಿನಾಯಕ ಈ ದೇವರುಗಳ ದರ್ಶನ ಪೂಜೆಗಳನ್ನು ನೆರವೇರಿಸಿ, "ದಶಾಶ್ವಮೇಧಘಾಟ್" ಎಂಬ ಘಟ್ಟದಲ್ಲಿ ಮಿಂದು ದಶಾಶ್ವಮೇಧೇಶ್ವರ, ವಂದೇದೇವಿ, ಶೂಲಟಂಕೇಶ್ವರ, ಆದಿವರಾಹ, ಸೋಮೇಶ್ವರ, ದಾಲ್ಭ್ಯೇಶ್ವರ, ಪ್ರಯಾಗಮಾಧವ ಇವರ ಪೂಜಾದಿಗಳನ್ನು ಮಾಡಿ, ವರುಣಾಸಂಗಮಕ್ಕೆ ತೆರಳಿ ಅಲ್ಲಿ ಸ್ನಾನಮಾಡಿ ಆದಿಕೇಶವ, ಸಂಗಮೇಶ್ವರ, ಖರ್ವವಿನಾಯಕ, ಕೇಶವಾದಿತ್ಯ, ಶ್ವೇತದ್ವೀಪತೀರ್ಥ, ಜ್ಞಾನಕೇಶವ,

---

ಗುಹೆಗಳಲ್ಲಿ ವಿಹರಿಸುವುದಾಗಿಯೂ, ಝಂಕಾರವನ್ನು ಮಾಡುವುದಾಗಿಯೂ, ಶ್ರೀಮಹಾವಿಷ್ಣುವಿನ ಪಾದಗಳ ಧೂಳಿಯಲ್ಲಿ ವಿಹಾರಮಾಡುವುದಾಗಿಯೂ ಶುಭವನ್ನುಂಟುಮಾಡುವದಾಗಿಯೂ ಇರುವ ಗಂಗಾಜಲವು ನನ್ನನ್ನು ಪವಿತ್ರಗೊಳಿಸಲಿ

§ ಪಾಪಗಳನ್ನು ಹೋಗಲಾಡಿಸುವ, ಸ್ವರ್ಗಸೋಪಾನಗಳ ಸಂಬಂಧವುಳ್ಳ ಚಲಿಸುತ್ತಿರುವ ಅಲೆಗಳುಳ್ಳ, ಭಗವತಿಯಾದ ಗಂಗಾದೇವಿಯೇ ನಿನ್ನ ತೀರದಲ್ಲಿ ನಾನು ನಿನ್ನ ತೀರ್ಥಪಾನಮಾಡಿ ಸ್ರಕ್ಚಂದನಾದಿಗಳನ್ನು ತೊರೆದು ಕೃಷ್ಣನನ್ನು ಪೂಜಿಸುತ್ತೇನೆ. ಪ್ರಸನ್ನಳಾಗು.

ನಕ್ಷತ್ರೇಶ್ವರ, ವೇದೇಶ್ವರ ಈ ದೇವರುಗಳ ಸಂದರ್ಶನ ಪೂಜೆಗಳನ್ನು ನೆರನೇ ರಿಸಿ, ಬಿಂದುಮಾಧವ, ಗಭಸ್ತೀಶ್ವರ, ಮಂಗಳಗೌರಿ ಇವರ ದರ್ಶನ ಪೂಜೆಗಳನ್ನುಮಾಡಿ, ಮಣಿಕರ್ಣಿಕೆಗೆ ಬಂದು ಸ್ನಾನಾನಂತರ ಸಿದ್ಧಿವಿನಾಯಕ, ಮಣಿಕರ್ಣೀಶ್ವರ, ವಿಶ್ವೇಶ್ವರ, ಅನ್ನಪೂರ್ಣೆ, ಜ್ಞಾನವಾಪಿ, ದಂಡಪಾಣಿ, ಘುಂಟರಾಜಗಣಪತಿ, ಮುಕ್ತಿಮಂಟಪ ಇವುಗಳ ದರ್ಶನ ಪೂಜೆಗಳನ್ನು ಮಾಡಿದರು. ಬಳಿಕ ಅಲ್ಲಿಂದ ಹೊರಟು ಗಯಾ ಪ್ರಯಾಗ ಪ್ರಮುಖ ಪುಣ್ಯಕ್ಷೇತ್ರಗಳನ್ನು ವಿಲೋಕಿಸಿ, ಅಕ್ಷಯವಟ, ವಿಷ್ಣುಪಾದಗಳನ್ನು ಕಂಡು ಪೂಜಾನಮಸ್ಕೃತಿಗಳನ್ನು ಮಾಡಿ ಮತ್ತು ಕಾಶೀನಗರಕ್ಕೆ ಸುತ್ತಲೂ ಇರುವ ಪುಣ್ಯತೀರ್ಥಗಳನ್ನೂ ಸೇವಿಸಿ ಮತ್ತೆ ವಾರಣಾಸಿಗೆ ಬಂದು ನಿತ್ಯಯಾತ್ರೆಯನ್ನು ಮಾಡುತ್ತ ಕೆಲವು ದಿನಗಳಲ್ಲಿದ್ದು ಸತ್ಕಥಾಕಥನ ಶ್ರವಣಗಳಿಂದ ಕಾಲಯಾಪನಮಾಡಿದರು.

ಬಳಿಕ ಗುರುಶಿಷ್ಯರಿಬ್ಬರೂ ರಾಮೇಶ್ವರಕ್ಕೆ ಹೋಗುವ ಇಚ್ಛೆಯಿಂದ ಶುದ್ಧ ಗಂಗಾತೀರ್ಥವನ್ನು ನಿರ್ಮಲಪಾತ್ರೆಗಳಲ್ಲಿ ತೆಗೆದುಕೊಂಡು ಕಾವಡಿಗಳನ್ನು ಕಟ್ಟಿ ಭುಜಗಳಮೇಲೆ ಧರಿಸಿ, ವಿಶ್ವನಾಥ ವಿಶಾಲಾಕ್ಷೀ ಮಂದಿರಗಳಿಗೆ ಪ್ರದಕ್ಷಿಣ ನಮಸ್ಕಾರಗಳನ್ನು ಮಾಡಿ ಅಸಮಾನ ಶಿಲ್ಪಕಲ್ಪನಾ ಚಾತುರ್ಯದಿಂದೊಪ್ಪುವ ನಗರದ ಸೊಬಗನ್ನೂ ಪ್ರಾಕಾರ ಗೋಪುರಾದಿಗಳನ್ನೂ ನೋಡಿ ಆಶ್ಚರ್ಯಪಡುತ್ತ ಪಟ್ಟಣವನ್ನು ಬಿಟ್ಟು ಹೊರಟು, ದಕ್ಷಿಣಾಭಿಮುಖರಾಗಿ, ರಾಮಲಿಂಗೇಶ್ವರನ ದರ್ಶನಕಾಂಕ್ಷೆಯು ಹೃದಯಗಳಲ್ಲಿ ತುಂಬಿ ತುಳುಕುತ್ತಿರಲು ನಡೆಯತೊಡಗಿದರು. ಅವರು ಬಂದ ಮಾರ್ಗವನ್ನು ಬಿಟ್ಟು ಬೇರೊಂದು ಮಾರ್ಗವನ್ನು ಹಿಡಿದು, ಅಲ್ಲಲ್ಲಿ ಪುಣ್ಯತೀರ್ಥ, ಪುಣ್ಯಕ್ಷೇತ್ರಗಳನ್ನು ಕಂಡು ಸೇವಿಸುತ್ತ ಬಂದು ಬಂದು, ದ್ರಾಕ್ಷಾರಾಮೇಶ್ವರ ಸಂದರ್ಶನವನ್ನು ಮಾಡಿ ಜಗನ್ನಾಥಸ್ವಾಮಿಯನ್ನು ಕಂಡು ಪೂಜಿಸಿ, ಸಿಂಹಾಚಲ ವರಾಹಸ್ವಾಮಿಯನ್ನು ಸೇವಿಸಿ ಮಂಗಳಗಿರಿ ಶ್ರೀಶೈಲಗಳಕಡೆಗೆ ತಿರುಗಿ ನಡೆದು, ಅಲ್ಲಿ ನೃಸಿಂಹಮಲ್ಲಿಕಾರ್ಜುನ ಸ್ವಾಮಿಗಳನ್ನಾರಾಧಿಸಿ, ಭದ್ರಾಚಲವನ್ನು ಸೇರಿ ಸೀತಾರಾಮರನ್ನರ್ಚಿಸಿ ಮತ್ತೆ ಮರಳಿ ಪೂರ್ವಾಭಿಮುಖರಾಗಿ ಸ್ವಲ್ಪದೂರದವರೆಗೆ ಬಂದು ದಕ್ಷಿಣಕ್ಕೆ ತಿರುಗಿ ಗೋದಾವರೀ, ಕೃಷ್ಣಾನದಿಗಳಲ್ಲಿಯೂ, ಉತ್ತರಪಿನಾಕಿನಿಯಲ್ಲಿಯೂ ಸ್ನಾನಗಳನ್ನು ಮಾಡಿ, ಅಲ್ಲಲ್ಲಿದ್ದ ದೇವತೆಗಳನ್ನು ಸ್ತೋತ್ರಮಾಡಿ ಕಾಳಹಸ್ತೀಶ್ವರನ ಚರಣಗಳನ್ನು ವಂದಿಸಿ ಕೆಲವು ದಿನಗಳಲ್ಲಿ ಶ್ರೀ ವೇಂಕಟೇಶ್ವರನಿವಾಸಸ್ಥಲವಾದ ಶೇಷಾಚಲಕ್ಕೆ ಬಂದು ಸೇರಿದರು.

ಆ ದಿನದ ಮಧ್ಯಾಹ್ನದಲ್ಲಿ ಅವರು ಪಾಪನಾಶಿನಿಯ ತೀರ್ಥದಲ್ಲಿ ಸ್ನಾನ ಮಾಡಿ ಬಂದು ಶ್ರೀನಿವಾಸನನ್ನು ಸಂದರ್ಶಿಸಿ ಅಲ್ಲಿ ಭಕ್ತರಿಗೆ ಪ್ರಸಾದವನ್ನು ಕೊಡುತ್ತಿರಲು ಬಹಳ ಭಕ್ತಿಯಿಂದ ಆ ಪ್ರಸಾದವನ್ನು ಸ್ವೀಕರಿಸಿ ಕ್ಷುದ್ಬಾಧೆ

ಯನ್ನು ಪರಿಹರಿಸಿಕೊಂಡು ಒಂದು ವಾರದವರೆಗೆ ಅಲ್ಲಿಯೇ ವಿಶ್ರಮಿಸಿಕೊಂಡರು. ಆಗಾಗ ತಾವು, ಕಾಶಿಯಲ್ಲಿ ಪ್ರಯಾಗದಲ್ಲಿ, ವಟವೃಕ್ಷಸನ್ನಿಧಿ ಮೊದಲಾದ ಕ್ಷೇತ್ರಗಳಲ್ಲಿ ಮಾಡಿದ ತೀರ್ಥಶ್ರಾದ್ಧಾದಿಗಳನ್ನು ಕುರಿತು ತತ್ಫಲಾದಿಗಳನ್ನು ಬಣ್ಣಿಸುತ್ತ ಆಯಾ ಕ್ಷೇತ್ರಗಳ ಮಹಿಮೆಗಳನ್ನು ಪ್ರಸ್ತಾಪಿಸುತ್ತ ಕಾಲವನ್ನು ಕಳೆಯುತ್ತಿದ್ದರು. ಚಿದಾನಂದ ಮುನಿಯು ಶಿಷ್ಯನನ್ನು ಸಂಬೋಧಿಸಿ "ವತ್ಸ! ನಮಗೆ ನಿರಪಾಯವಾಗಿ ಕಾಶೀಯಾತ್ರೆಯೂ ಆಯಾ ತೀರ್ಥಸ್ನಾನಗಳೂ ಸಂಪೇರಿಮವು. ವಿಶೇಷ ಪುಣ್ಯವಾಹಿನಸಂಗ್ರಹಿಸೆ ಸಾಮಾನ್ಯ ಮಾನವರಿಗೆ ಗಂಗಾಯಾತ್ರೆಯೂ, ವಿಶ್ವೇಶ್ವರನ ಸಂದರ್ಶನವೂ ಲಭಿಸಲಾರವು. (ಯಸ್ತು ವಿಶ್ವೇಶ್ವರಂ ದೃಷ್ಟ್ವಾ ಹ್ಯನ್ಯತ್ರಾಪಿ ವಿಪದ್ಯತೇ। ತಸ್ಯಜನ್ಮಾಂತರೇ ಮೋಕ್ಷೋ ಭವತ್ಯೇವನಸಂಶಯಃ ॥೧॥ ಸಕೃದ್ವಿಶ್ವೇಶ್ವರಂ ದೃಷ್ಟ್ವಾ ಜನ್ಮ ಸುಧೀನರಃ। ತ್ರೈಲೋಕ್ಯವಂದಿತಪದೋ ಜಾಯತೇ ವಸುಧಾಪತಿಃ ॥೨॥ ಸರ್ವಲಿಂಗಾರ್ಚನಂ ಪುಣ್ಯಂ ಯಾವಜ್ಜನ್ಮ ಯದರ್ಚಯಾ। ಸಕೃದ್ವಿಶ್ವೇಶಮಭ್ಯರ್ಚ್ಯ ಶ್ರದ್ಧಯಾ ತದವಾಪ್ಯತೇ ॥) "ಯಾವನಾದರೆ ವಿಶ್ವೇಶ್ವರಲಿಂಗದರ್ಶನವನ್ನು ಒಂದುಸಲವಾದರೂ ಮಾಡುವನೋ ಅಂಥವನಿಗೆ ಈ ಜನ್ಮದಲ್ಲಿ ಇಲ್ಲದಿದ್ದರೆ ಮುಂದಣಜನ್ಮದಲ್ಲಿಯಾದರೂ ಮೋಕ್ಷವನ್ನು ಕೊಡುತ್ತಾನೆ ॥ ೧ ॥ ಜನ್ಮಮಧ್ಯದಲ್ಲಿ ಒಂದುಸಾರಿ ವಿಶ್ವೇಶ್ವರನನ್ನು ಕಂಡು ನಮಿಸಿದ ಬುದ್ಧಿಶಾಲಿಯಾದ ಮಾನವನು ಮೂರುಲೋಕಗಳಿಂದ ವಂದಿಸಲ್ಪಟ್ಟ ಪಾದಗಳುಳ್ಳ ರಾಜನಾಗುತ್ತಾನೆ ॥ ೨ ॥ ಸಮಸ್ತಲಿಂಗಗಳನ್ನು ಪೂಜೆಮಾಡಿದರೆ ಯಾವ ಫಲವು ಬರುವುದೋ ಆಫಲವು ವಿಶ್ವನಾಥಮೂರ್ತಿಯನ್ನೊಂದನ್ನು ಪೂಜಿಸಿದ ಮಾತ್ರದಿಂದಲೇ ಲಭಿಸುವುದು. ॥ ೩ ॥ " ಎಂದು ಶಂಕರನು ದೇವತೆಗಳನ್ನು ಕುರಿತು ಹೇಳಿರುವನು. ಶಿಷ್ಯಾಗ್ರಣೀ! ಈಶ್ವರನ ತ್ರಿಶೂಲದಮೇಲಿರತಕ್ಕ ಕಾಶೀಕ್ಷೇತ್ರವು ಪ್ರಳಯಕಾಲದಲ್ಲಿ ಕೂಡ ನಾಶವಾಗುವುದಿಲ್ಲ. ಕಾಶೀಕ್ಷೇತ್ರದಲ್ಲಿ (ಸಪ್ತಕೋಟ್ಯಸ್ತು ಲಿಂಗಾನಿ ವಾರಣಸ್ಯಾಂ ಸ್ಥಿತಾನಿಹಿ ತೇಷಾಂ ದರ್ಶನಮಾತ್ರೇಣ ಯಜ್ಞಾನಾಂ ಫಲಮಾಪ್ನುಯಾತ್) ಸಪ್ತಕೋಟಿಲಿಂಗಗಳಿರುವುವು. ಅವುಗಳ ದರ್ಶನಮಾತ್ರದಿಂದ ಸಮಸ್ತಯಜ್ಞಗಳನ್ನು ಮಾಡಿದ ಫಲವು ಪ್ರಾಪ್ತವಾಗುತ್ತದೆ. ಉಭಯ ಪಾರ್ಶ್ವಗಳಲ್ಲಿಯೂ ವರುಣಾ, ಅಸೀ ಎಂಬ ನದಿಗಳಿರುವುದರಿಂದ "ವಾರಣಾಸೀ-ವಾರಣಾಸೀ" ಎಂದು ಕರೆಯಲ್ಪಡುವ 1ಕಾಶಿಯಲ್ಲಿ ಮೃತನಾಗುವ ಮಾನವನಿಗೆ ಸರ್ಪಗಳು ಜನಿವಾರದ ದಾರಗಳಾಗಿಯೂ, ದಿಕ್ಕುಗಳು ವಸ್ತ್ರವಾಗಿಯೂ, ಸ್ಮಶಾನವೇ ಮಂದಿರವಾಗಿಯೂ, ವಿಷವೇ ಆಹಾರವಾಗಿಯೂ

1 ಅಥಕಾಶಿಕಾಲಪರಿಪಾಕವಿನಾಯುಷಾ ಮುರುಗೀಭವೇಯುರುಪವೀತತಂತವಃ।
ವಸನಂದಿಶೋ ನಿವಸನಂ ಪರೇತಭೂರಶನಂವಿಷಂ ಯದಿಹಿರೋಚತೇವ್ರಜ ॥

ಆಗುತ್ತದೆ. ಅಂದರೆ ಅಂಥವನು ಶಂಭುಸಾರೂಪ್ಯವನ್ನು ಪಡೆವನು. ಹಾಗೆ 2 ಶಂಕರಸಾರೂಪ್ಯವನ್ನು ಪಡೆದು ಕಾಶಿಯಲ್ಲಿ ಸಂಚರಿಸುತ್ತಿರುವವರು. "ಅಯ್ಯಾ! ನಾನು ಪೂರ್ವಜನ್ಮದಲ್ಲಿ ಮೊಲದ ಜನ್ಮವನ್ನು ಪಡೆದಿದ್ದೆನು. ನಾನೊಂದು ಸೊಳ್ಳೆಯಾಗಿದ್ದೆನು. ನಾನು ಆನೆಯಾಗಿದ್ದೆನು, ನಾನು ಸಿಂಹವಾಗಿದ್ದೆನು." ಎಂದು ಒಬ್ಬರೊಡನೆ ಒಬ್ಬರು ಹೇಳಿಕೊಳ್ಳುತ್ತಿರುವರು. ಅಂದರೆ ಕಾಶಿಯಲ್ಲಿ ಸತ್ತಪ್ರಾಣಿಗಳಿಗೆಲ್ಲ ಈಶ್ವರನ ಸಾರೂಪ್ಯವು ಸಿದ್ಧಿಸುವುದೆಂದರ್ಥವು. 3 ಕಾಶಿ ಯಲ್ಲಿ ವಾಸಮಾಡುವ ಮನುಷ್ಯನು ರಾಮನಾಮಾಮೃತವನ್ನು ಕಿವಿಗಳಿಂದ ಪಾನ ಮಾಡಿ ಮಾಡಿ, ಮನಸ್ಸಿನಲ್ಲಿ ನಿರಂತರವೂ ತಾರಕನಾಮವನ್ನು ಧ್ಯಾನಮಾಡಿ ಮಾಡಿ, ದೇಹವನ್ನು ಬಿಡುವಾಗ ಕಿವಿಯಲ್ಲಿ ಸಾಕ್ಷಾದೀಶ್ವರನುಪದೇಶಿಸುವ ತಾರಕಮಂತ್ರವನ್ನು ಕೇಳಿ ಕೇಳಿ ಪ್ರತಿಯೊಂದು ಬೀದಿಯಲ್ಲಿಯೂ ಜಟಾಧಾರಿ ಯಾಗಿ ತಿರುಗುತ್ತಿರುವನು. ಸತ್ಯಶೀಲನೇ! 4 "ಗಂಗೆ! ಗಂಗೆ!" ಎಂದು ಯಾವಮನುಷ್ಯನು ನೂರಾರು ಯೋಜನಗಳಿಗಾಚೆ ಇದ್ದರೂ ಸಮಸ್ತ ಪಾಪಗ ಳಿಂದ ಮುಕ್ತನಾಗಿ ವಿಷ್ಣುಲೋಕವನ್ನು ಪಡೆವನು. ಮತ್ತು 5 ಯಾವನಾದರೂ ಗಂಗಾಯಾತ್ರೆಯನ್ನು ಮಾಡಿದಂದರೆ ಅವನನ್ನು ಕಂಡು ಸಂತೋಷಪಟ್ಟವನು ಸಹ ಯಾತ್ರಾಫಲವನ್ನು ಪಡೆಯುತ್ತಾನೆ. 6 ನಡೆವಾಗಲೂ, ನಿಂತಿರುವಾ ಗಲೂ, ಜಪಿಸುತ್ತಿರುವಾಗಲೂ, ಭೋಜನವನ್ನು ಮಾಡುವಾಗಲೂ ಯಾವನು ಗಂಗೆಯನ್ನು ಸ್ಮರಿಸುತ್ತಾನೆಯೋ ಅವನು ಭವಬಂಧದಿಂದ ಮುಕ್ತನಾಗುವನು. ಹೆಚ್ಚು ಮಾತೇನು? 7 ಕಲಿಯುಗದಲ್ಲಿ ಯಾವನು ಗಂಗೆಯನ್ನು ಸೇವಿಸದಿರುವ ಮಾನವನ ಕುಲವೂ, ಯಜ್ಞವೂ, ಮೋಕ್ಷವೂ, ತಪಸ್ಸೂ ದಾನಾದಿಗಳೂ ನಿರ ರ್ಥಕವಾದುವು" ಎಂದು ಹೇಳಿದನು.

---

2 ಶಶಕೋಹಂ ಮಶಕೋಹಂ ಮಾತಂಗೋಹಂ ಪುರಾಮೃಗೇಂದ್ರೋಹಂ ।
ಇತಿಜಲ್ಪಂತನ್ಯೋನ್ಯಂ ಕಾಶೀಪುರವಾಸಿನೋ ಪಶುಪತಯಃ ॥

3 ಪಾಯಂಪಾಯಂ ಶ್ರುತಿಚುಳುಕಿತಂ ರಾಮನಾಮಾಮೃತಂಚ ।
ಧ್ಯಾಯಂಧ್ಯಾಯಂ ಮನಸಿಸತತಂ ಬ್ರಹ್ಮತತ್ತಾರಕಾಖ್ಯಂ ॥

4 ಗಂಗಾಗಂಗೇತಿಯೋಬ್ರೂಯಾ ದ್ಯೋಜನಾನಾಂ ಶತೈರಪಿ ।
ಮುಚ್ಯತೇ ಸರ್ವಪಾಪೇಭ್ಯೋ ವಿಷ್ಣುಲೋಕಂ ಸಗಚ್ಛತಿ ॥

5 ಗಂಗಾಂಗಚ್ಛತಿಯಸ್ತ್ವೇಕೋ ಯಸ್ತು ಭಕ್ತ್ಯಾನುಮೋದಯೇತ್ ।
ತಯೋಸ್ತುಲ್ಯಂ ಫಲಂಪ್ರಾಹು ರ್ಭಕ್ತಿರೇವಾತ್ರಕಾರಣಂ ॥

6 ಗಚ್ಛನ್ತಿಷ್ಠನ್ ಜಪನ್ ಧ್ಯಾಯನ್ ಭುಂಜನ್ ಜಾಗ್ರತ್ಸ್ವಪನ್ವದನ್ ।
ಯಸ್ಸ್ಮರೇತ್ಸತತಂ ಗಂಗಾಂ ಸಹಮುಚ್ಯೇತಬಂಧನಾತ್ ॥

7 ವೃಥಾಕುಲಂ ವೃಥಾಯಜ್ಞೋ ವೃಥಾಮೋಕ್ಷೋ ವೃಥಾತಪಃ ।
ವೃಥಾದಾನಾನಿತಸ್ಯೇಹ ಕಲೌಗಂಗಾಂ ನಯೋಭಜೇತ್ ॥

ಇಂತು ಗುರುಶಿಷ್ಯರು ಒಂದು ವಾರದವರೆಗೆ ತಮ್ಮ ಯಾತ್ರಾವಿಚಾರವನ್ನು ಕುರಿತು ಮಾತನಾಡಿಕೊಳ್ಳುತ್ತ ಶೇಷಾಚಲದಲ್ಲಿಯೇ ಇದ್ದರು.

ಇಂತು ಹದಿನಾರನೆಯ ಕಥೆ ಮುಗಿದುದು



## —: ಹದಿನೇಳನೆಯ ಕಥೆ. :—

ತತ್ವಾಯತತ್ವರೂಪಾಯ ತತ್ವಾತೀತಾಯವಿಷ್ಣವೇ |
ನುತಸತ್ವಾಯಸತ್ವಾಯ ನಮೋವಾಕಂಪ್ರಶಾಸ್ಮಹೇ ||

ಶ್ರೀ ಶೇಷಾದ್ರಿಯನ್ನು ಸೇರಿದಬಳಿಕ ತಮ್ಮ ಉತ್ತರ ಯಾತ್ರಾವಿಚಾರವನ್ನು ಕುರಿತು ಸಂಭಾಷಿಸುತ್ತ ಒಂದು ವಾರದವರೆಗಿದ್ದು ಯಾತ್ರಾಶ್ರಮವನ್ನು ನಿವಾರಣೆ ಮಾಡಿಕೊಂಡರಷ್ಟೆ? ಬಳಿಕ ದಕ್ಷಿಣಯಾತ್ರೆಯನ್ನು ಮಾಡಬೇಕೆಂದು ಬಗೆದು ಗಂಗೆಯ ಕಾವಡಿಗಳನ್ನು ತೆಗೆದುಕೊಂಡು ರಾಮೇಶ್ವರಕ್ಕೆ ಹೋಗಲಾರಂಭಿಸಿದರು. ಅವರು ಸ್ವಲ್ಪದೂರದವರೆಗೆ ನಡೆದು ದಾರಿಯಲ್ಲಿದ್ದ ಒಂದು ದೊಡ್ಡ ಗ್ರಾಮದಲ್ಲಿ ಇಳಿದರು ಆಗ ಶಿಷ್ಯನು ಗ್ರಾಮದೊಳಕ್ಕೆ ಹೋಗಿ ತಕ್ಕಪದಾರ್ಥಗಳನ್ನು ತೆಗೆದುಕೊಂಡು ಬಂದು ಅಡಿಗೆಯನ್ನು ಮಾಡಿದನು ಇಬ್ಬರೂ ಭೋಜನವನ್ನು ಮಾಡಿದರು ಬಳಿಕ ಯಥಾಪ್ರಕಾರವಾಗಿ ಚಿದಾನಂದಮುನಿಯು ಸ್ವಲ್ಪ ವಿಶ್ರಮಿಸಿಕೊಂಡನು ಶಿಷ್ಯನಾದ ಸತ್ಯಶೀಲನು ಗುರುಸನ್ನಿಧಿಗೆ ಬಂದು “ಸ್ವಾಮಿಾ! ಪ್ರತಿದಿನವೂ ನಿಮಗೆ ನನ್ನ ವೇಥೆಯು ತಪ್ಪದಿರುವುದು ಬಹಳ ಹೊತ್ತಿನವರೆಗೆ ವಿಶ್ರಮಿಸಿಕೊಳ್ಳುವುದಕ್ಕೆ ಅವಕಾಶವನ್ನೇ ನಾನು ಕೊಡುತ್ತಿಲ್ಲ ಈ ಅಪರಾಧವನ್ನು ಕ್ಷಮಿಸಬೇಕು ನಿಮಗೆ ಅಡಿಗಡಿಗೆ ಇಂತಪ್ಪ ತೊಂದರೆಯನ್ನು ಕೊಡುತ್ತಿರುವುದರಿಂದ ನನಗೆಷ್ಟು ಪಾಪವು ಸಂಭವಿಸುವುದೋ ಏನೋ? ತಾವು ನನ್ನನ್ನು ಯಾವ ಪಾಪವೂ ಸ್ಪೃಶಿಸದಂತೆ ಆಶೀರ್ವಾದ ಮಾಡಬೇಕು” ಎಂದು ಪ್ರಾರ್ಥಿಸಿದನು.

ಚಿದಾನಂದಮುನಿಯು “ವತ್ಸಾ! ನನಗಿದು ತೊಂದರೆಯಲ್ಲ ಈಬಗ್ಗೆ ನೀನು ಚಿಂತಿಸಬೇಡ ನಿನಗೆ ಸತ್ಕಥೆಗಳನ್ನೂ ಪೂರ್ವವೃತ್ತಾಂತಗಳನ್ನೂ ಕೇಳುವುದರಲ್ಲಿ ಅತ್ಯಂತಾಸಕ್ತಿಯಿರುವುದು ಸಂತೋಷಕರವಾದುದು ನೀನೆಷ್ಟು ಕೇಳಿದರೂ ನಾನು ಬೇಸರಪಡುವುದಿಲ್ಲ ಚೆನ್ನಾಗಿತಿಳಿ ನೀನೀದಿನವೇ ಹಳ್ಳಿಯೊಳಕ್ಕೆ ಹೋಗಿ ಒಂದು ಮಂದಿರವನ್ನು ನೋಡಬಂದಿರುವುದೂ, ಹಳ್ಳಿಯಲ್ಲೆಲ್ಲ ಬರಿಯ ಹುಲ್ಲಿನ ಗುಡಿಸಲುಗಳೇ ಇರುವಲ್ಲಿ ಈ ರಾಜಭವನದಂತಿರುವ ಮನೆಯೊಂದು ಮಾತ್ರ ಹೇಗೆ ಉಂಟಾಯಿತೆಂಬ ಸಂದೇಹವು ನಿನ್ನ ಮನಸ್ಸಿನಲ್ಲಿ ಮೂಡಿರುವುದೂ ನನ್ನ ಮನಸ್ಸಿಗೆ ತಿಳಿದುಬಂದಿರುವುದು ಅಹುದೋ? ಅಲ್ಲವೋ? ಹೇಳು” ಎಂದನು.

ಶಿಷ್ಯನು ಕೈಮುಗಿದು “ ಮಹಾತ್ಮರೇ ! ತಾವು ಹೇಳುವುದು ಸತ್ಯವಾದುದು ಭವಿಷ್ಯದ್ಜ್ಞಾನಿಗಳಾದ ತಮಗೆ ನಾನು ಹೇಳುವುದೇನು ? ಈ ಹಳ್ಳಿಯಲ್ಲಿ ಎಲ್ಲವೂ ಹುಲ್ಲಿನಮನೆಗಳೇ ಇರುವುದು ಆದರೆ ಆ ಮನೆಗಳನಡುವೆ ಒಂದು ಮನೆಮಾತ್ರ ಸಕಲ ವೈಭವೋಪೇತವಾಗಿ ಕಾಣುತ್ತಿರುವುದು ಬಾಗಿಲಲ್ಲಿ ಅನೇಕ ಸೇವಕರು ಕಾವಲಿರುವರು ಹೀಗಿರುವುದಕ್ಕೆ ಕಾರಣವು ತಿಳಿಯಲಿಲ್ಲ ” ಎಂದನು ಆಗ ಚಿದಾನಂದಯೋಗಿಯು ಆ ಕಥೆಯನ್ನು ಹೇಳುವುದಕ್ಕೆ ಪ್ರಾರಂಭಿಸಿದನು.

ಶಿಷ್ಯವರ್ಯ ! ಕೇಳು ನಾನು ಹೇಳುವ ಕಥೆಯು ದೈವಬಲವೆಂಥದೆಂಬುದನ್ನು ಸೂಚಿಸುವುದರಿಂದ ಇದಕ್ಕೆ “ ದೈವಬಲ ” ಎಂಬ ಹೆಸರನ್ನೇ ಇಡೋಣ.

## ದೈವಬಲ ಗುಂಡಭಟ್ಟನ ಕಥೆ.

ಪೂರ್ವದಲ್ಲಿ ಈ ಹಳ್ಳಿಯಿರುವ ಸ್ಥಳದಲ್ಲಿ ಒಂದು ದೊಡ್ಡ ಪಟ್ಟಣವಿದ್ದಿತು ಆ ಪಟ್ಟಣವು ಈಗ ಈ ಸ್ಥಿತಿಗೆ ಬಂದಿರುವುದು ಆಗ ಆ ಪಟ್ಟಣಕ್ಕೆ ವಸಂತನಗರವೆಂಬ ಹೆಸರಿದ್ದಿತು ಅದಕ್ಕೆ ವಸಂತಭೂಪಾಲನೆಂಬವನು ದೊರೆಯಾಗಿದ್ದನು ಅವನಿಗೆ ವಸುದೇವನೆಂಬ ಬ್ರಾಹ್ಮಣನು ಪುರೋಹಿತನಾಗಿದ್ದನು ಆತನಿಗೆ ಇಂದುಮತಿಯೆಂಬ ಒಬ್ಬ ಮಗಳಿದ್ದಳು ಆ ಕನ್ಯೆಯನ್ನು ಸಮೀಪ ಗ್ರಾಮವಾಸಿಯಾದ ತನ್ನ ಸೋದರಳಿಯನಿಗೆ ಕೊಟ್ಟು ಮದುವೆ ಮಾಡಿದನು ಅವನು ಶುದ್ಧಮೂಢನು ನಿರಕ್ಷರಕುಕ್ಷಿ ಓನಮಬರೆಹಗಳೆಂಬ ಶಬ್ದಗಳು ಲೋಕದಲ್ಲಿ ಉಂಟೆಂಬುದನ್ನು ಕೂಡ ಅವನರಿಯನು ಇಂದುಮತಿಯಾದರೋ ಮಹಾ ಬುದ್ಧಿವಂತೆ ವಿದ್ಯಾವತಿ ಇವಳನ್ನು ವಸುದೇವಭಟ್ಟನು ತಂಗಿಯ ನಿರ್ಬಂಧದಿಂದ ಅವನಿಗೆ ಕೊಟ್ಟದ್ದೇ ಹೊರತು ಮನಃಪೂರ್ವಕವಾಗಿ ಕೊಟ್ಟವನಲ್ಲ ತನ್ನ ಗಂಡನು ಅವಿವೇಕಿಯಾಗಿಯೂ ವಿದ್ಯಾಹೀನನಾಗಿಯೂ ಇರುವುದು ಇಂದುಮತಿಗೆ ಬಹು ಅವಮಾನವನ್ನೂ ವ್ಯಾಕುಲವನ್ನೂ ಉಂಟುಮಾಡುತ್ತಿದ್ದಿತು ಆಕೆಯು ತನ್ನ ಗಂಡನನ್ನು ಕಂಡು “ ಅಯ್ಯೋ ! ನೀನು ವಿದ್ಯೆಯಿಲ್ಲದವನಾಗಿರುವೆಯಲ್ಲ ! ನಿನ್ನದೆಸೆಯಿಂದ ನಾನು ನಾಲ್ಕುಮಂದಿ ಹೆಂಗಸರಲ್ಲಿ ತಲೆಯೆತ್ತಿಕೊಂಡು ತಿರುಗುವುದಕ್ಕೆಕೂಡ ನಾಚುತ್ತಿರುವೆನಲ್ಲ ! ಎಲ್ಲರೂ ನನ್ನನ್ನು ಬಹು ಲಾಘವವಾಗಿ ನೋಡುತ್ತಿರುವರಲ್ಲ ಮರೆಮರೆಯಾಗಿ “ ಇವಳು ಮಡೆಯನ ಹೆಂಡತಿ ” ಎಂದು ಹೇಳಿಕೊಳ್ಳುವರಲ್ಲ ! ಈಗಲಾದರೂ ಎಲ್ಲಿಗಾದರೂ ಹೋಗಿ ಓದಿಕೊಂಡುಬಾ ನೀನು ಹೀಗೆಯೇ ಮೂರ್ಖನಾಗಿದ್ದರೆ ನಾನು ಪ್ರಾಣತ್ಯಾಗವನ್ನು ಮಾಡಿಕೊಳ್ಳುವೆನು ” ಎಂದು ನುಡಿದು ಬಾಧಿಸಲಾರಂಭಿಸಿದಳು.

ಯುಕ್ತಿಯಿಲ್ಲದ ಆ ಹೆಂಡತಿಯ ಬಾಧೆಗೆ ತಾಳಲಾರದೆ ಗುಂಡಭಟ್ಟನೆಂಬ ಆ ಬ್ರಾಹ್ಮಣಕುಮಾರನು ವಿದ್ಯಾಭ್ಯಾಸವನ್ನು ಮಾಡಿಕೊಂಡು ಬರಬೇಕೆಂದು ಆಲೋಚಿಸಿ ಪ್ರಯಾಣವಾಗಿ ಹೊರಟು ಸ್ವಲ್ಪ ದೂರದವರೆಗೆ ಹೋಗಿ ಆಯಾಸ

ಪಟ್ಟು ಒಂದು ಮರದಕೆಳಗೆ ಮಲಗಿದನು ಹಕ್ಕಿಯೊಂದು ಬಂದು ಆ ಮರದ ಮೇಲೆ ಕುಳಿತುಕೊಂಡಿತು. ಅದನ್ನು ಕಂಡವನು "ಎಲಯೆಲಾ ಕುಳಿತುಕೊಂಡಿತು ಹಕ್ಕಿಯೊಂದು ಎಂದು ನುಡಿದು ತನ್ನಲ್ಲಿ "ಮಝರೇ! ಸರಸ್ವತಿಯು ಕೃಪೆಮಾಡಿ ನನ್ನ ನಾಲಗೆಯಮೇಲೆ ನೆಲಸಿತು ಸತ್ಯ! ಸತ್ಯ! ಹಾಗಿಲ್ಲದಿದ್ದರೆ ನನ್ನ ಬಾಯಿಯಿಂದ ಈ ಕವಿತೆಯು ಹೊರಡುತ್ತಿದ್ದಿತೇ?" ಎಂದಾಲೋಚಿಸುತ್ತಿದ್ದನು. ಅಷ್ಟರಲ್ಲಿ ಆ ಪಕ್ಕದ ಅಡವಿಯಿಂದ ಒಂದು ಜಿಂಕೆಯು ಒಂಟಿಯಾಗಿ ಓಡಿಬಂದು ಇವನನ್ನು ಕಂಡು ಹೆದರಿ ಹಿಂದಿರುಗಿ ಓಡಿಹೋಗಿ ಸ್ವಲ್ಪ ದೂರದಲ್ಲಿನಿಂತು ಇವನನ್ನೆ ನೋಡುತ್ತಿದ್ದಿತು ಅದನ್ನು ನೋಡುತ್ತಲೇ "ಅದೆ ನೋಡೆರಳೆಯೊಂದು ನಿಂತಿಹುದು ಮುಂದು" ಎಂದು ಹೇಳಿ "ಬಲೇಬಲೇ! ನಿಜವಾಗಿಯೂ ಇದು ಶಾರದೆಯ ಮಹಿಮೆಯೇ ಇಲ್ಲದಿದ್ದರೆ ತನಗೆತಾನೆ ಈ ಮೇರಿಗೆ ತೋರುತ್ತಿರಲಿಲ್ಲ" ಎಂದು ತನ್ನಲ್ಲಿ ಹೇಳಿಕೊಳ್ಳುತ್ತಿರುವ ಸಮಯದಲ್ಲಿ ಕಾಡುಹಂದಿಯೊಂದು ಅವನಮುಂದೆ ಓಡಿಹೋಯಿತು ಅದನ್ನು ನೋಡಿ ಆ ಬ್ರಾಹ್ಮಣಕುಮಾರನು "ಪಾರಿತಾಹಾ! ಪಂದಿಭಯದಿಂದೆನೊಂದು" ಎಂದು ಹೇಳಿ "ಸರಿ! ಇನ್ನು ಸಂದೇಹವೇ ಇಲ್ಲ ಸರಸ್ವತೀದೇವಿಯು ಕೃಪೆಯು ನನ್ನಲ್ಲಿ ಪೂರ್ಣವಾಗಿ ಉಂಟಾಗಿರುವುದು ಯಾವ ಕವಿತೆಯಾಗಲಿ ಊಹೆಯಾಗಲಿ ತನಗೆ ತಾನಾಗಿ ತೋರುವಂತೆ ಸಿದ್ಧಿಯುಂಟಾಗಿರುವುದು ಇನ್ನು ಕಷ್ಟಪಟ್ಟು ನಾನೇಕೆ ಓದಬೇಕು" ಎಂದಾಲೋಚಿಸಿ ಮುಂದಕ್ಕೆ ಪ್ರಯಾಣಮಾಡದೆ ಹಿಂದಿರುಗಿ ಬಂದು ಮಾರನೆಯದಿನದ ಸಾಯಂಕಾಲಕ್ಕೆ ಮನೆಯನ್ನು ಸೇರಿದನು.

ಸತ್ಯಶೀಲನೇ! ಓದುಬರೆಹವೆಂಬ ಶಬ್ದಗಳನ್ನುಕೇಳಿ ಅರಿಯದ ಆ ಗುಂಡಭಟ್ಟನಿಗೆ ಶಾರದೆ, ಸರಸ್ವತಿ ಎಂಬುದೇ ಮೊದಲಾದ ಶಬ್ದಗಳು ಹೇಗೆ ಬಾಯಿಯಿಂದ ಬಂದುವೆಂದು ಸಂದೇಹಿಸಬೇಡ, ಇಂದುಮತಿಯು ವಿದ್ಯಾವತಿಯೆಂದು ಹಿಂದೆ ನಾನು ಹೇಳಿರುವೆನಷ್ಟೆ? ಆಕೆಯು ತನ್ನ ಗಂಡನನ್ನು ವಿದ್ಯಾವಂತನನ್ನಾಗಿ ಮಾಡಬೇಕೆಂಬ ಆಸೆಯಿಂದ ಗಂಡನಮುಂದೆ ಸತ್ಕಥೆಗಳನ್ನು ಓದುವುದು, ಒಳ್ಳೆಯ ಪದ್ಯಗಳನ್ನು ಅಯ್ದಾರ್ಯು ಹೇಳುವುದು, ಸರಸ್ವತಿಯನ್ನು ಪ್ರಾರ್ಥಿಸುವುದು, ಈ ಕೆಲಸಗಳನ್ನು ಪದ್ಮಾಗಿ ಮಾಡುತ್ತಿದ್ದಳು. ಅನೇಕಾವರ್ತಿ ಕೇಳಿದ ಸಂಸ್ಕಾರದಿಂದ ಆ ಮಾತುಗಳವನ ಬಾಯಿಂದ ಹೊರಟಿತು.

ಗುಂಡಭಟ್ಟನು ಮನೆಗೆಬಂದು ಸೇರುತ್ತಲೇ ಇಂದುಮತಿಯು ನೋಡಿ ಆಶ್ಚರ್ಯಪಟ್ಟು, "ಏನು ಬಂದುಬಿಟ್ಟೆಯಲ್ಲ! ಓದಿಕೊಳ್ಳುವುದಕ್ಕೆ ಹೋಗಲಿಲ್ಲವೆ?" ಎಂದು ಕೇಳಿದಳು. ಗುಂಡಭಟ್ಟನು ಆಕೆಯನ್ನು ನೋಡಿ, "ಛೀ! ಛೀ! ನನ್ನ ಯೋಗ್ಯತೆಯನ್ನರಿಯದೆ ಮಾತನಾಡುತ್ತಿರುವೆ, ಏನೆಂದು ತಿಳಿದಿರುವೆ? ಸರಸ್ವತೀದೇವಿಯು ಪ್ರತ್ಯಕ್ಷವಾಗಿ ನನ್ನನಾಲಗೆಯಲ್ಲಿ ನೆಲೆಗೊಂಡಿರುವಳೆಂಬುದು

ನನ್ನಮುಖವನ್ನು ನೋಡುತ್ತಲೇ ನಿನಗೆ ತೋರಲಿಲ್ಲವೆ ? ಹೋಗುವುದೇಕೆ ? ಓದುವುದೇಕೆ ? ಯಾವ ವಿದ್ವಾಂಸನಿನ್ನು ನನ್ನನ್ನು ಗೆಲ್ಲಬಲ್ಲನು" ಎಂದು ಬಲು ಗಂಭೀರದಿಂದ ನುಡಿದನು. ಪಾಪ! ಆಕೆಯು ಬೆರಗಾದಳು. ಏನೋ? ಇರ ಬಹುದು. ಪೂರ್ವದಲ್ಲಿ ಕಾಳಿಕಾದೇವಿಯು ಪ್ರಸನ್ನಳಾಗಿ ಕುರುಬನೊಬ್ಬನಿಗೆ ವಿದ್ಯಾಬುದ್ಧಿಗಳನ್ನು ಕೊಡಲಿಲ್ಲವೆ? ಹಾಗೆಯೇ ನನ್ನ ಗಂಡನ ಮೂಢತ್ವವನ್ನು ಕಂಡು ನನ್ನ ಮೊರೆಯನ್ನು ಲಾಲಿಸಿ, ಒಂದುವೇಳೆ ಪಂಡಿತನನ್ನಾಗಿ ಏಕೆ ಮಾಡಿ ರಬಾರದು? ಹಾಗಿಲ್ಲದಿದ್ದಲ್ಲಿ ಇಷ್ಟುಬೇಗನೆ ಹಿಂತಿರುಗಿ ಏಕೆ ಬರುತ್ತಿದ್ದನು ?" ಎಂದು ಬಗೆದು ಎಷ್ಟು ತಿಳಿವಳಿಕೆಯುಳ್ಳವಳಾದರೂ ಅವನ ಮಾತುಗಳನ್ನು ಸತ್ಯ ವೆಂದು ನಂಬಿ ಮೋಸಹೋಗುವುದಲ್ಲದೆ ಅಧಿಕ ಸಂತೋಷದಿಂದ ತನ್ನ ಪತಿಯನ್ನು ಅಧಿಕವಾಗಿ ಆದರಿಸಿದಳು.

ಮಾರನೆಯ ದಿನದ ರಾತ್ರಿ ಊಟವಾದ ಬಳಿಕ ಗಂಡಹೆಂಡರಿಬ್ಬರೂ ಬೆಳದಿಂಗಳಲ್ಲಿ ಹೊರಗ ಒಂದು ಮಂಚದಮೇಲೆ ಮಲಗಿದ್ದರು. ಆಗ ಇಂದು ಮತಿಯು "ಪ್ರಿಯ! ನೀನು ಓದಿದ ಕಾವ್ಯಗಳಲ್ಲಿ ಯಾವುದಾದರೊಂದು ಪದ್ಯ ವನ್ನು ಹೇಳು, ಕೇಳಿ ಸಂತೋಷಪಡುವೆನು" ಎಂದು ಕೇಳಿದಳು. ಆಗ ಆ ಗುಂಡಭಟ್ಟನು, "ನನ್ನ ವಾಕ್ಯಗಳಿಗೆ ಅರ್ಥವನ್ನು ತಿಳಿದುಕೊಳ್ಳುವುದು ನಿನಗೆ ಸಾಧ್ಯವೇ ಎಂದು ಹೇಳನವಾಗಿ ಮಾತನಾಡಿ, "ಹು! ಹಾಗಾದರೆ ಕೇಳು" ಎಂದು "ಎಲೆಯೆಲಾ! ಕುಳಿತುಕೊಂಡುದು ಹಕ್ಕಿಯೊಂದು" ಕೇಳಿದೆಯಾ? ಇದರ ಭಾವವನ್ನು ತಿಳಿದುಕೊಂಡೆಯಾ?" ಎಂದನು. ಆ ಸಮಯದಲ್ಲಿ ಧನಿಕನಾದ ನೆರೆಮನೆಯ ಬ್ರಾಹ್ಮಣನ ಮನೆಯ ಹಿಂದುಗಡೆಯಲ್ಲಿ ಒಬ್ಬ ಕಳ್ಳನು ಕನ್ನವ ನ್ನಿಟ್ಟು ಒಳಕ್ಕೆ ಪ್ರವೇಶಿಸುವುದಕ್ಕೆ ಸಮಯವನ್ನು ನಿರೀಕ್ಷಿಸುತ್ತಿದ್ದನು. ಆದರೆ, ಈ ಬ್ರಾಹ್ಮಣದಂಪತಿಗಳು ಮಾತನಾಡುತ್ತಿದ್ದುದರಿಂದ ಒಳಕ್ಕೆ ಪ್ರವೇಶಮಾಡದೆ ಕನ್ನಗಂಡಿಯಬಳಿಯಲ್ಲಿಯೇ ಕುಳಿತಿದ್ದನು. ಆಗ ಬ್ರಾಹ್ಮಣನು ನುಡಿದ "ಎಲ ಯೆಲಾ, ಕುಳಿತುಕೊಂಡುದು ಹಕ್ಕಿಯೊಂದು" ಎಂದು ನುಡಿದ ಮಾತು ಕಳ್ಳನ ಕಿವಿಗೆ ಬಿದ್ದಿತು. "ಓಹೋ ನಾನು ಇಲ್ಲಿ ಕುಳಿತಿರುವುದನ್ನು ಕುರಿತು ಈ ಬ್ರಾಹ್ಮಣನು ತನ್ನ ಹೆಂಡತಿಯೊಡನೆ ಅನ್ಯೋಕ್ತಿಯಿಂದ ಹೇಳುತ್ತಿರುವನು. ನಾನಿಲ್ಲಿಗೆ ಬಂದುದನ್ನೂ ಗೋಡೆಯಲ್ಲಿ ಸುರಂಗವನ್ನು ಕೊರೆದುದನ್ನೂ ಅವಕಾಶ ವನ್ನಿದಿರುನೋಡುತ್ತಾ ಕುಳಿತಿರುವುದನ್ನೂ ಈತನು ಕಂಡಿರುವನು" ಎಂದಾ ಚೋರಾಗ್ರಣಿಯು ತಿಳಿದು "ಇನ್ನುಮೇಲೆ ಇಲ್ಲಿಯೇ ಇದ್ದರೆ ನಾನಿವರಕೈಗೆ ಸಿಕ್ಕಿ ಬಿಡುವೆನು" ಎಂದು ಬಗೆದು ಭಯದಿಂದ ಎದ್ದು ನಿಂತುಕೊಂಡನು.

ಆ ತರುಣೀರತ್ನವು ತನ್ನಪತಿಯು ನುಡಿದ ಆಮಾತಿಗೆ ಅರ್ಥವನ್ನು ಮಾಡಿ ಕೊಳ್ಳಲಾರದೆ ತನ್ನಲ್ಲಿ ಆಲೋಚಿಸುತ್ತಿದ್ದಳು. ಗುಂಡಭಟ್ಟನು ನಗುತ್ತಾ, "ಸರಿ!

ಇನ್ನೂ ತಿಳಿಯಲಿಲ್ಲವೇ? ಇದನ್ನೇ ನೀನು ತಿಳಿಯದಿದ್ದರೆ ಎರಡನೆಯ ವಾಕ್ಯವನ್ನು ನೀನು ಹೇಗೆ ತಿಳಿದುಕೊಳ್ಳಬಲ್ಲೆ? ಕೇಳು. "ಅದೆ ನೋಡೆರಳೆಯೊಂದು ಸುಗಿದಿಹುದು ನಿಂದು" ಎಂದನು. ಆ ವಾಕ್ಯದ ಅರ್ಥವೂ ಆಯಿಂದುಮತಿಗೆ ಸ್ಫುರಿಸಲಿಲ್ಲ. ಕನ್ನಗಂಡಿಯ ಬಳಿ ನಿಂತಿದ್ದ ಕಳ್ಳನು "ತಾನು ಭಯಪಟ್ಟು ನಿಂತಿರುವುದನ್ನು ಕಂಡು, ಈ ಬ್ರಾಹ್ಮಣನು ಬೇರೊಂದು ರೀತಿಯಿಂದ ಹೆಂಡತಿಯೊಡನೆ ಹೇಳುತ್ತಿರುವನು" ಎಂದು ಆ ವಾಕ್ಯಕ್ಕೆ ತನ್ನ ಪರವಾಗಿ ಅರ್ಥವನ್ನು ಮಾಡಿಕೊಂಡ. "ಇನ್ನಿಲ್ಲಿ ನಿಂತರೆ ಕ್ಷೇಮವಿಲ್ಲ" ಎಂದು ಬಗೆದು ಹೊರಡಲಾರಂಭಿಸಿದನು. ಆಗ ಗುಂಡಭಟ್ಟನು "ಅಸಿಸಿ! ಈ ಎರಡು ಮಾತುಗಳಿಗೂ ನಿನಗರ್ಥವಾಗಲಿಲ್ಲ. ನೀನು ಇಂದುಮತಿಯಲ್ಲ, ಮುಂದಮತಿ "ವಾರಿತದೆ! ಯದೆ! ಪಂದಿ ಭಯದಿಂದ ನೊಂದು" ಇದರ ಭಾವವನ್ನಾದರೂ ತಿಳಿದುಕೊಂಡೆಯಾ? ಎಂದನು. "ಓಹೋ! ಈ ಬ್ರಾಹ್ಮಣನು ನನ್ನ ಚರ್ಯೆಗಳನ್ನು ಸ್ಪಷ್ಟವಾಗಿ ತಿಳಿದುಕೊಂಡಿರುವನು" ಎಂದು ಆಲೋಚಿಸಿ, ಬೇಗನೆ ನಡೆಯತೊಡಗಿದನು. ಅವನು ಓಡುತ್ತಿರುವುದನ್ನು ನೋಡಿ ನಾಯಿಗಳು ಬೊಗುಳಿದವು. ಬೀದಿಯಲ್ಲಿದ್ದವರೂ ಆ ಮನೆಯವರೂ ಎಚ್ಚೆತ್ತು ಹೊರಕ್ಕೆ ಬಂದು ಓಡಿಹೋಗುತ್ತಿದ್ದ ಕಳ್ಳನನ್ನು ನೋಡಿ, ಹಿಂದಟ್ಟಿ ಹಿಡಿದುಕೊಂಡರು. ಆಗ ಇಂದುಮತಿಯೂ ಅಲ್ಲಿಗೆ ಬಂದಳು. ನೆರೆಹೊರೆಯವರೆಲ್ಲರೂ ಗುಂಪುಕೂಡಿದರು. ಸುರಂಗವನ್ನು ಕೊರೆದಿದ್ದರೂ ಆ ಕಳ್ಳನು ಒಳಕ್ಕೆ ಹೋಗಿ ಏತಕ್ಕೆ ಕದಿಯಲಿಲ್ಲನೆಂದು ಬಗೆದು ಎಲ್ಲರೂ ಸುತ್ತಿಕೊಂಡು ಹೊಡೆದು ಬಡಿದು ವಿವರಿಸಿ ಕೇಳಿದರು. ಅವನು "ಹೇಳದಿದ್ದರೆ ಮತ್ತಷ್ಟು ಹೊಡೆವರೆಂದು ಬಗೆದು ಇಂತೆಂದನು. "ಅಯ್ಯಾ! ನಾನು ಹೇಗೂ ಸಿಕ್ಕಿರುವೆನು. ನನ್ನನ್ನು ಇನ್ನು ಹೊಡೆಯಬೇಡಿ. ನಾನು ಕನ್ನವನ್ನಿಟ್ಟು ಮೊದಲುಮಾಡಿದ ಕೆಲಸಗಳನ್ನೆಲ್ಲ ಪಕ್ಕದಮನೆಯಾತನು ಯಾರಮೋಲಿಯೋ ಇಟ್ಟುಕೊಂಡು ತನ್ನ ಹೆಂಡತಿಯೊಡನೆ ಹೇಳಿದನು. ಹೀಗೆ ನನ್ನ ವರ್ತನವನ್ನಾತನು ತಿಳಿದು ಹೇಳಿದುದನ್ನು ಕೇಳಿ, ಹೆದರಿ ಓಡಲಾರಂಭಿಸಿದೆನು. ಇಷ್ಟೇ ವಿಚಾರವು" ಎಂದು ಆ ತಸ್ಕರನು ನುಡಿದನು. ಆಗ ಅಲ್ಲಿದ್ದ ಇಂದುಮತಿಯು ತನ್ನ ಪತಿಯು ಹೇಳಿದ ವಾಕ್ಯಗಳಿಗೆ ಆ ಕಳ್ಳನು ಮಾಡುತ್ತಿದ್ದ ಕಾರ್ಯಗಳೇ ತಾತ್ಪರ್ಯವೆಂದು ಭಾವಿಸಿ ನೋಡದೆಯೇ ನೋಡಿದಂತೆ ಹೇಳಿದ ಆತನ ಪಾಂಡಿತ್ಯಕ್ಕೆ ಹೃದಯದಲ್ಲಿ ಆಶ್ಚರ್ಯಪಟ್ಟು ಆನಂದದಿಂದ ಹಿಗ್ಗುತ್ತ, ಎಲ್ಲರಿಗೂ ತನ್ನ ಗಂಡನ ಮಹಿಮೆಯನ್ನು ಸಕಲವಿದ್ಯಾಸಮ್ಪನ್ನತೆಯನ್ನು ಹೇಳಿ ಹೆಮ್ಮೆಪಡುತ್ತಾ ಮನೆಯನ್ನು ಪ್ರವೇಶಿಸಿದಳು. ಅದುಮೊದಲ್ಗೊಂಡು ಎಲ್ಲರೂ ಗುಂಡಭಟ್ಟನಲ್ಲ ಅಧಿಕ ಗೌರವವನ್ನಿಟ್ಟರು. ಜ್ಯೋತಿಷದಲ್ಲಿ "ಆತನಿಟ್ಟುದೇ ಹೆಸರು" ಎಂದು ಉಬ್ಬಿಯುಬ್ಬಿ ಹೇಳಲಾರಂಭಿಸಿದರು. ಯಾವುದನ್ನಾಗಲಿ ನೋಡದೆಯೇ

ತಟ್ಟನೆ ಕೇಳಿದಕೂಡಲೆ ಹೇಳುತ್ತಿದ್ದುದರಿಂದ "ಗುಂಡಭಟ್ಟ" ಎಂದು ಕರೆವುದಕ್ಕೆ ಪ್ರತಿಯಾಗಿ "ಸಿಡಿಲನುಡಿಜೋಯಿಸಂ" ಎಂಬ ಬಿರುದನ್ನು ಆತನಿಗೆ ಕೊಡುವುದು ತಕ್ಕುದೆಂದು ಬಗೆದು ಆ ದಿನದಿಂದ "ಸಿಡಿಲನುಡಿ ಜೋಯಿಸ" ನೆಂದೇ ಕರೆಯಲಾರಂಭಿಸಿದರು.

ಸತ್ಯಶೀಲನೇ ! ನೋಡು ಒಳ್ಳೆಯ ಕಾಲವು ಬಂದಾಗ ಎಂತಪ್ಪ ಅಲ್ಪನಾದರೂ ಮಹತ್ವವನ್ನು ಪಡೆವನು ಅದಕ್ಕೆ ಈ ಸಿಡಿಲನುಡಿ ಜೋಯಿಸನೇ ನಿದರ್ಶನವು. ಶಿಷ್ಯಪುಂಗವ ! ಕಾಲದ ಚರಿತ್ರವನ್ನು ಏನೆಂದು ಹೇಳಲಿ ? ["ಅಪ್ಸು ಪ್ಲವಂತೇಪಾಷಾಣಾ ಮಾನುಷಾಘ್ನಂತಿರಾಕ್ಷಸಾನ್ | ಕಪಯಃಕರ್ಮಕುರ್ವಂತಿ ಕಾಲಸ್ಯಕುಟಿಲಾಗತಿಃ ||"] ಕಲ್ಲುಗಳು ನೀರಿನಲ್ಲಿ ತೇಲುತ್ತವೆ ಮನುಷ್ಯರು ರಾಕ್ಷಸರನ್ನು ಕೊಲ್ಲುತ್ತಾರೆ ಕೋತಿಗಳು ಕೆಲಸಗಳನ್ನು ಮಾಡುತ್ತವೆ ಹೀಗೆ ಕಾಲಗತಿಯು ವಕ್ರವಾದುದು ಇದನ್ನೇ ದೈವವೆಂದು ಕೆಲವರು ಹೇಳುವರು 1 ದೈವವು ವಿಮುಖವಾದರೆ ತಾಯಿ, ತಂದೆ, ಹೆಂಡತಿ, ಸಹೋದರರು ಮೊದಲಾಗಿ ಯಾರಿದ್ದರೂ ಅವರ ಸಹಾಯವು ದೊರೆಯಲಾರದು 2 ನೀತಿಯನ್ನುಬಲ್ಲ ಮಾನವನು ಎಲ್ಲೆಲ್ಲಿಯೂ ವ್ಯವಸಾಯವನ್ನು ಮಾಡಿದರೂ ಅದರ ಫಲವುಮಾತ್ರ ದೈವಕ್ಕೆ ಅಧೀನವಾಗಿರುವುದು ಅದರ ಮನಸ್ಸಿನಲ್ಲಿ ಯಾವುದಿರುವುದೋ ಅದೇ ಫಲಿಸುವುದಲ್ಲದೆ ಬೇರೆಯಲ್ಲ.

ಗುಂಡಭಟ್ಟನಿಗೆ ದೈವಸಹಾಯವಾದುದರಿಂದಲೇ ಯಾವ ಕಷ್ಟವೂ ಇಲ್ಲದೆ ಸಿಡಿಲುನುಡಿಯ ಜೋಯಿಸನೆಂಬ ಬಿರುದು ಬಂದಿತು ಲೋಕದಲ್ಲಿ ಬಿರುದುಗಳು ಹೀಗೆ ಅನಾಯಾಸವಾಗಿ ಪಾಂಡಿತ್ಯವಿಲ್ಲದಿದ್ದರೂ ಬರುವುವು ದೈವಬಲ್ಲವಿಲ್ಲದಿದ್ದರೆ ಎಂತಹ ಪಂಡಿತರಾದರೂ ಎಂತಪ್ಪ ಯೋಗ್ಯತೆಯನ್ನು ಪಡೆದಿದ್ದರೂ ಯಾವ ಬಿರುದವೂ ದೊರೆಯಲಾರದು ಪಾಂಡಿತ್ಯವಿಲ್ಲದಿದ್ದರೂ ಕೆಲರು ಪ್ರಸಿದ್ಧಪುರುಷರಾಗುವರು ಪಾಂಡಿತ್ಯವಿದ್ದರೂ ಕೆಲವರು ಪ್ರಸಿದ್ಧಿಯನ್ನು ಪಡೆವುದಿಲ್ಲ ಇದೆಲ್ಲವೂ ದೈವಚೇಷ್ಟೆಯೇ ಕಾಲಮಹಿಮೆಯೆ. 3 ಯಾವಾಗಲೂ ದೈವವೇ ಫಲಿಸುವುದಲ್ಲದೆ ವಿದ್ಯೆಯೂ ಪೌರುಷವೂ ಫಲಿಸುವುದಿಲ್ಲ ಕಲ್ಲಿಗೆ ವಿದ್ಯೆಯುಂಟೆ ?

---

1 ದೈವೇವಿಮುಖತಾಂ ಯಾತೇ ನಕೋಪ್ಯಸ್ತಿ ಸಹಾಯವಾನ್ |
ಪಿತಾ ಮಾತಾ ತಥಾಭಾರ್ಯಾ ಭ್ರಾತಾವಾಥ ಸಹೋದರಃ || ೧ ||

2 ಕರೋತುನಾಮ ನೀತಿಜ್ಞೋ ವ್ಯವಸಾಯಮಿತಸ್ತತಃ |
ಫಲಂ ಪುನಸ್ತುದೇವಾಸ್ಯ ಯದ್ದೈವ ಮನಸಿಸ್ಥಿತಂ || ೨ ||

3 ದೈವಂ ಫಲತಿ ಸರ್ವತ್ರ, ನವಿದ್ಯಾ ನಚಪೌರುಷಂ |
ಪಾಷಾಣಸ್ಯ|ಕುತೋವಿದ್ಯಾ ಯೇನ ದೇವತ್ವ ಮಾಗತಃ || ೩ ||

ಆದರೂ ದೇವತ್ವವು ಅದಕ್ಕುಂಟಾಗಿ ಪೂಜಾರ್ಹವಾಗುತ್ತದೆ. 4 ರಾವಣನು ಹತ್ತು ತಲೆಯುವನು ಅವನ ತಮ್ಮನು ಮಹಾಬಲಶಾಲಿಯಾದ ಕುಂಭಕರ್ಣನು ಅವನ ರಾಜಧಾನಿಯಾದ ಲಂಕೆಯಾದರೋ ಸಮುದ್ರವೇ ಅಗಳಂಗಿಯುಳ್ಳುದು ಅವನು ಪುಲಸ್ತ್ಯಬ್ರಹ್ಮನ ಮೊಮ್ಮಗನು ಬ್ರಹ್ಮದತ್ತವರಸಂಪನ್ನನು ಆದರೂ ದೈವಬಲವು ದುರ್ಬಲವಾದುದರಿಂದ ಕಪಿಗಳಕೈಗೆ ಮಾನವನ ಕೈಗೆಸಿಕ್ಕಿ ನರಳಿದನು ಆದುದರಿಂದ ಸತ್ಯಶೀಲನೇ! ದೈವಬಲಕ್ಕಿಂತಲೂ ಯಾವುದೂ ಅಧಿಕವಲ್ಲ ಇನ್ನು ಪ್ರಕೃತವನ್ನನುಸರಿಸುವ.

ಸತ್ಯಶೀಲ ! ಮುಂದಿನ ಕಥೆಯನ್ನು ಆಲಿಸು ಕೆಲವು ದಿನಗಳು ಕಳೆದುವು ಬಳಿಕ ಒಂದುದಿನ ಆ ಪಟ್ಟಣದಲ್ಲಿ ಅರಸನಿಗೆ ಮಡಿಬಟ್ಟೆಗಳನ್ನು ಮಾಡಿಕೊಡುವ ಒಬ್ಬ ರಜಕನು ತನ್ನ ಎರಡು ಕತ್ತೆಗಳು ಎಲ್ಲಿಯೋ ತಪ್ಪಿಸಿಕೊಂಡುಹೋಗಿದ್ದುದರಿಂದ ಹುಡುಕಿ ಹುಡುಕಿ ಸಾಕಾಗಿ ಸಿಡಿಲನುಡಿಯ ಜೋಯಿಸನಬಳಿಗೆ ಬಂದು ನಮಸ್ಕರಿಸಿ " ಸ್ವಾಮಿ ! ನನ್ನ ಎರಡು ಕತ್ತೆಗಳು ತಪ್ಪಿಸಿಕೊಂಡು ಹೋಗಿ ನಾಲ್ಕು ದಿನಗಳಾದುವು ಎಲ್ಲೆಲ್ಲಿಯೋ ಹುಡುಕಿದೆನು ದೊರೆಯಲಿಲ್ಲ ತಮ್ಮನ್ನು ಕೇಳಬೇಕೆಂದು ಬಂದೆನು ತಾವು ಖಂಡಿತವಾಗಿಯೂ ಸತ್ಯವಾಗಿಯೂ ನುಡಿವವರು ಕೃಪೆಮಾಡಿ ಅವು ಎಲ್ಲಿರುವುವೋ ಅಪ್ಪಣೆ ಕೊಡಿಸಬೇಕು " ಎಂದು ಬಹಳವಾಗಿ ಕೇಳಿಕೊಂಡನು.

ಬಿರುದಾಂಕಿತನಾದ ಆ ಜೋಯಿಸನು ತನಗಾವುದೂ ತಿಳಿಯದಿದ್ದರೂ ತಿಳಿದವನಂತೆ ನಟಿಸುತ್ತ ಆ ಅಗಸನ ಮಾತುಗಳನ್ನು ಕೇಳಿ ತಲೆದೂಗಿ " ಎಲಾ ರಜಕ ! ಈಗ ನೀನು ಕೇಳಿದ ಲಗ್ನವು ಒಳ್ಳೆಯದಲ್ಲ ಆದುದರಿಂದ ಸ್ಪಷ್ಟವಾಗಿ ತಿಳಿಸುವುದು ಕಷ್ಟ ನಾಳೆಯ ಪ್ರಾತಃಕಾಲಕ್ಕೆಬಾ ಹೇಳುವೆನು " ಎಂದು ಹೇಳಿದನು ಹಾಗೆಯೇ ಆಗಲೆಂದು ಆ ಅಗಸನು ಒಪ್ಪಿ ಹೊರಟುಹೋದನು.

ಜೋಯಿಸನು ಆ ದಿನದ ರಾತ್ರಿ ಯಾರೂ ಅರಿಯದಂತೆ ಮನೆಯನ್ನು ಬಿಟ್ಟು ಹೊರಟು ಪಟ್ಟಣದ ಸಮೀಪದಲ್ಲಿ ಸುತ್ತಲೂ ಹುಡುಕಲಾರಂಭಿಸಿದನು ದೈವಾನುಕೂಲವೊದಗಿದಾಗ ಎಲ್ಲಕಾರ್ಯಗಳೂ ಅನುಕೂಲಿಸುವುವೆಂದು ಮೊದಲೇ ಹೇಳಿದೆನಲ್ಲವೆ ? ತತ್ಪೂರ್ವವೆಷ್ಟು ಹುಡುಕಿದರೂ ಅಗಸನಿಗೆ ದೊರೆಯದಿದ್ದ ಆ ಕತ್ತೆಗಳೆರಡೂ ತಟ್ಟನೆ ಗುಂಡಭಟ್ಟನಕಣ್ಣಿಗೆ ಗೋಚರಿಸಿದುವು ಆತನು ಸಂತೋಷಪಟ್ಟು, ಅವುಗಳನ್ನು ಹೊಡೆದುಕೊಂಡು ಬಂದು ಅನುಕೂಲವಾದ

---

4 ಜಾತೋ ಬ್ರಹ್ಮಕುಲೇಽಗ್ರಜೋ ಧನಪತಿ ರ್ಯಃಕುಂಭಕರ್ಣಾಗ್ರಜಃ ।
ಪುತ್ರ ಶ್ಶಕ್ರಜಯೀ ಸ್ವಯಂದಶಶಿರಾಃ ಪೂರ್ಣಾಭುಜಾವಿಂಶತಿಃ ।
ದೈತ್ಯಃ ಕಾಮಚರೋಽಥ ಶತ್ರುವಿಜಯೀ ಮಧ್ಯೇ ಸಮುದ್ರಂ ಗೃಹಂ ।
ಸರ್ವಂ ನಿಷ್ಫಲಿತಂ ತದೇಕವಿಧಿನಾ ದೈವೇಬಲೇದುರ್ಬಲೇ ॥ ೪ ॥

ಒಂದೆಡೆಯಲ್ಲಿ ಗಟ್ಟಿಯಾಗಿ ಕಟ್ಟಿಹಾಕಿ ಬೆಳಗಿನಯಾಮಕ್ಕೆ ಮನೆಗೆ ಬಂದು ಏನೂ ತಿಳಿಯದವನಂತೆ ಮಲಗಿದ್ದನು.

ಸೂರ್ಯೋದಯವಾಯಿತು ಅಗಸರವನು ಬಂದು "ಸ್ವಾಮಿ" ಎಂದು ಕೂಗಿದನು. ಸಿಡಿಲನುಡಿಯ ಜೋಯಿಸನು ಬೆರಳೆಣಿಸಿಕೊಂಡು ಪ್ರಮಾಣ ಶ್ಲೋಕಗಳನ್ನು ಹೇಳುವನಹಾಗೆ ತುಟಿಗಳನ್ನಲುಗಿಸುತ್ತ "ಸರಿ! ಎಲಾ ಅಗಸನೇ! ಒಳ್ಳೆಯ ಲಗ್ನಕ್ಕೆ ಬಂದಿರುವೆ ಈಗ ನಿನ್ನ ಕತ್ತೆಗಳಿರುವ ಸ್ಥಲವು ಶಾಸ್ತ್ರದಿಂದ ಕಂಡುಬಂದಿರುವುದು ಹೋಗು ಊರಿಗೆ ಉತ್ತರದಿಕ್ಕಿನಲ್ಲಿ ಒಂದು ಹುಣಿಸೆಯ ಮರದಡಿಯಲ್ಲಿ ನಿನ್ನ ಕತ್ತೆಗಳನ್ನು ಒಬ್ಬಾನೊಬ್ಬನು ಬಂಧಿಸಿರುವನು" ಎಂದು ನುಡಿದನು.

ಇಂದುಮತಿಯಾದರೋ "ತನ್ನ ಗಂಡನು ಸಕಲ ವಿದ್ಯಾಪಾರಂಗತನು" ಎಂದು ತಿಳಿದಳು ಜ್ಯೋತಿಶ್ಶಾಸ್ತ್ರದಲ್ಲಿ ಅದ್ವಿತೀಯನೆನ್ನ ಪತಿಯೆಂದು ಭಾವಿಸಿದಳು ಸಂತೋಷದಿಂದ ಉಬ್ಬುತ್ತಿದ್ದಳು.

ಚಿದಾನಂದಮುನಿಯು ಈವರೆಗಿನ ಕಥೆಯನ್ನು ಹೇಳುವವೇಳೆಗೆ ಬಹಳ ಹೊತ್ತಾದುದರಿಂದ ಶಿಷ್ಯನನ್ನು ನೋಡಿ ವತ್ಸ! ಈ ದಿನ ಬಹಳ ಹೊತ್ತಾಯಿತು ಮಲಗಿ ನಿದ್ರಿಸು ಉಳಿದ ಕಥೆಯನ್ನು ನಾಳೆಯ ದಿನ ಹೇಳುವೆನೆಂದನು ಶಿಷ್ಯನು ಒಪ್ಪಿಯಾರಾತ್ರಿಯನ್ನಲ್ಲಿಯೇ ಕಳೆದರು.

ಇಂತು ಪದಿನೇಳನೆಯ ಕಥೆ ಮುಗಿದುದು.



—: ಹದಿನೆಂಟನೆಯ ದಿನದ ಕಥೆ. :—

ಸರ್ವಾರಿಷ್ಟವಿನಾಶಾಯ ಸರ್ವಸಂಪತ್ಕರಾಯಚ |
ಸರ್ವಾಧಾರಾಯಸರ್ವಾಯ ಸರ್ವಾರ್ತಿಹರಯೇನಮಃ ||

## ಗುಂಡಭಟ್ಟನ ಕಥಾಶೇಷವು.

ಗುರುಶಿಷ್ಯರು ಸೂರ್ಯೋದಯಕ್ಕೆ ಮೊದಲೆ ಎದ್ದು ಕಾಲೋಚಿತಕೃತ್ಯಗಳನ್ನು ಮುಗಿಸಿ ಪ್ರಯಾಣಮಾಡಿ ಒಂದು ಹಳ್ಳಿಯಬಳಿ ನಿಂತರು ಅಲ್ಲಿ ಒಂದು ಆಂಜನೇಯನ ಗುಡಿಯಿದ್ದಿತು ಅದು ಸ್ವಲ್ಪ ಹೆಚ್ಚಾದ ವೈಶಾಲ್ಯದಿಂದಿದ್ದುದಲ್ಲದೆ ಮೂರ್ತಿಯು ಬಹಳ ಅಂದವಾಗಿದ್ದಿತು ಆ ಗುಡಿಯಮುಂದೆ ಒಂದು ವಿಶಾಲವಾದ ಸರೋವರವಿತ್ತು ಅಲ್ಲಿಳಿದು ಭೋಜನಾದಿಕಾರ್ಯಗಳನ್ನು ನೆರವೇರಿಸಿಕೊಳ್ಳಬೇಕೆಂದು ಸಮಾಹಿತಚಿತ್ತರಾಗಿ ತಮ್ಮ ಪದಾರ್ಥಗಳನ್ನಲ್ಲಿಟ್ಟರು ಸತ್ಯಶೀಲನಾ ಗ್ರಾಮದೊಳಕ್ಕೆ ಹೋಗಿ ಅಡಿಗೆಗೆ ಬೇಕಾಗುವ ಪದಾರ್ಥಗಳನ್ನು ತಂದು ಅಡಿಗೆಮಾಡಿ ಮಾಡಿದ ಪದಾರ್ಥವನ್ನು ಭಗವನ್ನಿವೇದನೆಯನ್ನು ಮಾಡಿ ಇಬ್ಬರೂ

ಭೋಜನವನ್ನುಗೈದರು ಚಿದಾನಂದಯೋಗಿಯು ಸ್ವಲ್ಪವಾಗಿ ವಿಶ್ರಮಿಸಿಕೊಂಡನು ಹತ್ತು ನಿಮಿಷಗಳೊಳಗಾಗಿ ಸತ್ಯಶೀಲನು ಮುಸರೆಗಳನ್ನು ಶುದ್ಧಿಗೊಳಿಸಿ ಅಡಿಗೆಯಸ್ಥಲವನ್ನು ಸಾರಿಸಿ ಹಸ್ತಪಾದಗಳನ್ನು ತೊಳೆದುಕೊಂಡು ವಿಶ್ರಮಿಸಿಕೊಂಡಿದ್ದ ಚಿದಾನಂದಮುನಿಯ ಸನ್ನಿಧಿಯನ್ನು ಸೇರಿ ಕಾಲುಗಳನ್ನು ಒತ್ತುತ್ತ “ ಮಹಾತ್ಮಾ ! ನಿನ್ನೆ ಅರ್ಧಾಂತಿಕವಾಗಿ ಹೇಳಿದ್ದ ಕಥೆಯನ್ನು ಈ ದಿನ ಹೇಳುವಂತೆ ಅಪ್ಪಣೆಯಾಗಿದ್ದಿತಲ್ಲವೆ ? ಅದನ್ನು ದಯವಿಟ್ಟು ಹೇಳಬೇಕೆಂದು ಪ್ರಾರ್ಥಿಸಿದನು ಆತನಿಂತೆಂದನು.

“ ವತ್ಸ ! ಕೇಳು ಸಿಡಿಲನುಡಿಯ ಜೋಯಿಸನೆಂಬ ಬಿರುದವನ್ನು ಧರಿಸಿದ ಗುಂಡಭಟ್ಟನ ಖ್ಯಾತಿಯು ದಿನಕ್ರಮದಿಂದ ವೃದ್ಧಿಯಾಯಿತು ದೈವಸಹಾಯವಿದ್ದುದರಿಂದ ಆತನು ಏನು ಹೇಳಿದರೂ ಸತ್ಯವಾಗಿ ಪರಿಣಮಿಸುತ್ತಿದ್ದಿತು ಆಹ ! ಆತನ ಅದೃಷ್ಟವನ್ನೇನೆಂದು ಹೇಳಲಿ ? ಕೆಲವು ದಿನಗಳಾದಬಳಿಕ ಅಮೂಲ್ಯವಾದ ರತ್ನಹಾರವೊಂದು ಯಾರೊ ಕದ್ದರು ಯಾರಮೇಲೆ ತಪ್ಪನ್ನು ಹೊರಿಸುವುದಕ್ಕೂ ಸಾಕ್ಷ್ಯವಿಲ್ಲದೆ ಹೋಯಿತು ಅನಂತರದಲ್ಲಿ ಆ ಭೂಪಾಲನು ಸಿಡಿಲನುಡಿಯ ಜೋಯಿಸನನ್ನು ಕರೆದುತರುವುದಕ್ಕೆ ಸೇವಕರನ್ನು ಕಳುಹಿಸಿದನು ಅವರು ಬಂದು ರಾಜಾಜ್ಞೆಯನ್ನು ಗುಂಡಭಟ್ಟನಿಗೆ ತಿಳಿಸಿದರು. ಆ ಮೂರ್ಖನಾದ ಗುಂಡಭಟ್ಟನು “ ಅಯ್ಯೋ ! ಇನ್ನೇನುಗತಿ ? ನನ್ನ ಹೆಸರು ರಾಜನ ಕಿವಿಗಳಿಗೂ ಮುಟ್ಟಿತಲ್ಲ ! ನಾನೇನು ಮಾಡಲಿ ? ಕೀಳುಜಾತಿಯವರು ನಂಬುವಂತೆ ಏನನ್ನೋ ಹೇಳಿ ಅವರಿಂದ ಹಣವನ್ನು ಬರಮಾಡಿಕೊಂಡು ಜೀವಿಸುತ್ತಿದ್ದೆನಲ್ಲ ! ಅದಕ್ಕೆ ಕಲ್ಲುಬಿದ್ದಿತಲ್ಲ ! ನನ್ನ ಮರ್ಮವನ್ನು ಹೆಂಡತಿಯು ಕೂಡ ತಿಳಿಯುವಂತೆ ಭದ್ರಪಡಿಸಿದ್ದೆನಲ್ಲ ! ರಾಜನಬಳಿಗೆ ಹೋಗಿ ನಾನು ಹೇಳುವುದೇನು ? ಹೇಗೂ ನನ್ನ ತಲೆಹೋಗುವುದು ನಿಜವು ರಾಜನು ನನ್ನ ಅವಿವೇಕವನ್ನು ತಿಳಿದು ಯಾವ ಶಿಕ್ಷೆಯನ್ನು ವಿಧಿಸುವನೋ ಕಾಣೆನಲ್ಲ ! ಊ ! ಆದುದಾಗಲಿ ! ” ಎಂದು ಭಯಪಡುತ್ತಲೇ ಆ ಸೇವಕರೊಡನೆ ರಾಜಾಸ್ಥಾನಕ್ಕೆ ಬಂದನು.

ರಾಜನು “ ಅಯ್ಯಾ ಸಿಡಿಲನುಡಿಯ ಜೋಯಿಸರೆ ! ನನ್ನ ಮನೆಯಲ್ಲಿ ಒಂದು ಅಮೂಲ್ಯವಾದ ರತ್ನಹಾರವು ಕಳ್ಳತನವಾಗಿದೆ ಕದ್ದವರ ಹೆಸರನ್ನು ಹೇಳಿದರೆ ನಿಮಗೆ ದೊಡ್ಡ ಬಹುಮಾನವನ್ನು ಕೊಡುವೆನು ಹೇಳಿ ” ಎಂದನು.

ದೈವಬಲವಿರುವಾಗ ಯಾರೇನು ಮಾಡಬಲ್ಲರು ? ಬಳಿಕ ಆ ಭಟ್ಟನಿಗೆ ಹೇಗೋ ಸ್ವಲ್ಪ ಧೈರ್ಯವುಂಟಾಯಿತು ರಾಜನನ್ನು ನೋಡಿ ಪ್ರಭುವೇ ! ತಾವು ಕರೆಯಿಸಿದುದು ಏತಕ್ಕೆಯೋ ಎಂದು ಬಗೆದಿದ್ದೆನು ಆಗಲಿ ಈ ದಿನದ ರಾತ್ರಿಯಲ್ಲಿ ಗುಣಕವನ್ನು ಹಾಕಿನೋಡಿ ನಾಳೆಯ ದಿನವೇ ತಮ್ಮೊಡನೆ ಹೇಳುವೆನು ಎಂದು ನುಡಿದು ಆಗ್ಗೆ ತಪ್ಪಿಸಿಕೊಂಡನು ಆದರೂ ರಾಜನು ನಾಳೆ ಹೇಳ

ಬೇಕಲ್ಲವೆ ? ಒಳ್ಳೆಯದು ಅದನ್ನು ಹೇಳುವವರೆಗೆ ನೀವು ರಾಜಮಂದಿರದಲ್ಲಿಯೇ ಇರತಕ್ಕದು ಎಂದು ಆಜ್ಞೆಮಾಡಿದನು ಜೋಯಿಸನೇನುತಾನೆ ಮಾಡಿಯಾನು ? ಮನಸ್ಸಿನಲ್ಲಿ ಭಯವನ್ನುಹೊಂದಿ ಏನುಮಾಡುವುದಕ್ಕೂ ತೋರದೆ ಆತನ ಆಜ್ಞೆಯನ್ನೊಪ್ಪಿಕೊಂಡು ತನಗೆ ನಿಯಮಿಸಿದ ಒಂದು ಸ್ಥಲದಲ್ಲಿ ಮಲಗಿದನು ನಿದ್ದೆ ಬಂದೀತೇ ? ಕಳವಳವು ಹೆಜ್ಚಾಯಿತು ಒದರಿದುದನ್ನೆ ಒದರುತ್ತ ಆಡಿದುದನ್ನೆ ಆಡುತ್ತ ಕಣ್ಣುಮುಚ್ಚಿಕೊಂಡು ಮಲಗಿದ್ದನು ಬಾರಿಬಾರಿಗೂ " ಪೋಕುಂತಲೆ ಸತ್ಯಂ " ಎಂದು ತನ್ನ ಹೆಸರುವಾಸಿ ಇಂದಿಗೆ ತೀರಿತು ಒಕ್ಕಲಿಗರು ಕುರುಬರು ಗೊಲ್ಲರು ಭಿಲ್ಲರು ಆಗಿದ್ದರೆ ಏನೋ ಒಂದೆರಡು ಮಾತುಗಳನ್ನಾಡಿಸಿ ತಪ್ಪಿಸಿಕೊಳ್ಳಬಹುದಾಗಿದ್ದಿತು ಇದು ಹಾಗಲ್ಲ ರಾಜನ ಮನೆಯ ಕಳ್ಳತನ "ಪೋಕುಂತಲೆಸತ್ಯಂ" ಇನ್ನು ಸಂದೇಹವೇನು ? " ಪೋಕುಂತಲೆಸತ್ಯಂ " ಅಯ್ಯೋ ! ದೈವವಿದುವರೆಗೆ ಸಹಾಯವಾಗಿದ್ದಿತು ಈಗ " ಪೋಕುಂತಲೆಸತ್ಯಂ " ಎಂದು ತಡಬಡಿಸುತ್ತ ಯಾವಾಗ ಬೆಳಗಾಗುವುದೋ ಎಂದು ಗಂಟೆಗಳನ್ನೆಣಿಸಿಕೊಳ್ಳುತ್ತಿದ್ದನು.

ಅರಮನೆಯಲ್ಲಿ ಕುಂತಲೆ ಎಂಬ ಒಬ್ಬ ದಾಸಿಯು ಇರುವಳು. ಅವಳು ಅಂತಃಪುರದಲ್ಲಿ ರಾಣಿಯವರ ಬಳಿಯಲ್ಲಿ ಸೇವೆಯನ್ನು ಮಾಡಿಕೊಂಡಿರುವವಳು. ರಾಣಿಯು ತನ್ನ ಕುತ್ತಿಗೆಯಲ್ಲಿದ್ದ ರತ್ನಹಾರವನ್ನು ತೆಗೆದು ಒಂದುಕಡೆಯಲ್ಲಿಟ್ಟು ಮರೆತುಹೋದಳು. ಅದು ಒಂದೆರಡುದಿವಸಗಳು ಬಿಟ್ಟಕಡೆಯೇ ಇರುತ್ತಿರಲು, ರಾಣಿಯು ಮರೆತುಹೋಗಿರುವಳೆಂದು ಭಾವಿಸಿ ಕುಂತಲೆಯು, ಅವನ್ನು ಅಪಹರಿಸಿ ತನ್ನಲ್ಲಿ ಭದ್ರಪಡಿಸಿಕೊಂಡಿದ್ದಳು. ಅವಳು ಏನೂ ಅರಿಯದವಳಂತೆ ಅರಮನೆಯಲ್ಲಿ ನಿರ್ಭಯದಿಂದ ಸುಳಿದಾಡುತ್ತಿದ್ದಳು. ಆಮೇಲೆ ರಾಣಿಗೆ ಜ್ಞಾಪಕವು ಬಂದು ಹುಡುಕಿಕೊಂಡಳು. ದೊರೆಯದಿದ್ದುದರಿಂದ " ರತ್ನಹಾರವು " ಎಲ್ಲಿಯೋ ಹೋಯಿತೆಂದು ಅರಸನಿಗೆ ಹೇಳಿದಳು. ಆ ಮೇಲೆಯೇ ಆ ಅರಸನು ಜೋಯಿಸನನ್ನು ಕರೆಯಿಸಿದುದು ಮತ್ತು ಕೇಳಿದುದು ಆ ಜೋಯಿಸಂ "ಪೋಕುಂ ತಲೇ ಸತ್ಯಂ" ಎಂಬ ಪಲ್ಲವಿಯನ್ನೆ ಹಾಡುತ್ತ ಕಳವಳಿಸುತ್ತಿದ್ದನು. ಮೊದಲೆ ಪ್ರಸಿದ್ಧನಾದ ಜೋಯಿಸನನ್ನು ಅರಮನೆಗೆ ಕರೆಯಿಸಿರುವುದನ್ನು ತಿಳಿದು " ನನ್ನ ಹೆಸರನ್ನೆಲ್ಲಿ ಹೇಳುವನೋ " ಎಂದು ಭಯಪಡುತ್ತಿದ್ದ ಆ ಕುಂತಲೆಯು " ಕುಂತಲೆ " ಎಂಬ ಶಬ್ದವನ್ನು ಕೇಳಿ " ಓಹೋ ! ಮೋಸವಾಯಿತು. ಇದ್ದುದನ್ನಿದ್ದಹಾಗೆಯೇ ಹೇಳುವನೆಂದು ಪ್ರಸಿದ್ಧಿಪಡೆದಿರುವ ಈ ಜೋಯಿಸನು ರಾತ್ರಿಯೆಲ್ಲ ಲೆಕ್ಕಮಾಡಿ ನನ್ನ ಹೆಸರನ್ನು ಶಾಸ್ತ್ರದ ಮೂಲಕ ಕಂಡುಹಿಡಿದಿರುವನು. ಅದನ್ನೆ ಹೇಳುತ್ತ ಬೆಳಗಾಗುತ್ತಲೆ ಅರಸನಿಗೆ ಹೇಳುವುದಕ್ಕೆ ಸಿದ್ಧವಾಗಿರುವನು. ಈಗ ನಾನೇನು ಮಾಡಲಿ ? ನನ್ನ

ಮಾನಪ್ರಾಣಗಳು ಹೋಗುವಹೊತ್ತು ಬಂದಿತಲ್ಲ" ಎಂದು ಭಯಪಟ್ಟು ಆ ಮಹಾನಿಶೆಯಲ್ಲಿ ಅವಳು ಆ ಜೋಯಿಸನಬಳಿಗೆ ಬಂದು ಕಾಲುಗಳ ಮೇಲೆ ಬಿದ್ದು, "ಸ್ವಾಮಿಾ? ಕೂಗಬೇಡಿ, ಬಾರಿಬಾರಿಗೂ ನನ್ನ ಹೆಸರನ್ನೇ ನುಡಿಯುತ್ತಿರುವಿರಿ, ಇನ್ನು ಬಿಡಿ, ಅವಿವೇಕದಿಂದ ರಾಣಿಯವರ ರತ್ನಹಾರವನ್ನು ಕದ್ದೆನು. ತಮ್ಮನ್ನು ಶರಣುಹೊಂದಿರುವೆನು. ಇನ್ನು ಬೆಳಗ್ಗೆ ರಾಜನೊಡನೆ ನನ್ನ ಹೆಸರನ್ನು ಹೇಳಿದರೆ ಆತನು ನನ್ನ ಪ್ರಾಣಗಳನ್ನು ತೆಗೆಯಿಸುವನು. ಅರಸನು ತಮ್ಮನ್ನು ಕರೆಯಿಸುವುದಕ್ಕೆ ಸೇವಕರನ್ನು ಕಳುಹಿಸಿದಾಗಲೆ ತಾವು ನಿಜಸ್ಥಿತಿಯನ್ನು ಹೇಳಿಬಿಡುವಿರೆಂದು ಭಯಗೊಂಡೆನು. ಈಗ ನಿಮ್ಮ ಬಾಯಿಂದ ನನ್ನ ಹೆಸರನ್ನು ಹೇಳಲು ಖಂಡಿತವಾಗಿ ತಿಳಿದುಕೊಂಡೆನು. ಜೋಯಿಸರೆ "ಕುಂತಲೆ" ಎಂದು ನನ್ನ ಹೆಸರನ್ನೆತ್ತಬೇಡಿ. ಇಗೋ ರತ್ನಹಾರವನ್ನು ತಂದಿರುವೆನು. ಇದನ್ನು ನಿಮ್ಮ ಸನ್ನಿಧಿಯಲ್ಲಿ ಸಮರ್ಪಿಸುವೆನು. ನೀವು ಹೇಗಾದರೂ ಮಾಡಿ ನನ್ನ ಮಾನವನ್ನೂ ಪ್ರಾಣವನ್ನೂ ಕಾಪಾಡಿ" ಎಂದು ಮತ್ತೆಮತ್ತೆ ಪಾದಗಳ ಮೇಲೆ ಬಿದ್ದು ಹಾರವನ್ನು ಮುಂದಿಟ್ಟು ಬೇಡಿಕೊಂಡಳು. ಆ ಬ್ರಾಹ್ಮಣನು ಸ್ವಲ್ಪವಾಗಿ ಧೈರ್ಯ ತಂದುಕೊಂಡು "ಆಹ! ಪೋಕುಂತಲೆ ಸತ್ಯಂ" "ನನ್ನ ತಲೆಹೋಗುವುದು ಸತ್ಯವು" ಎಂದು ನಾನು ಕಳವಳಪಟ್ಟು ತಲ್ಲಣಿಸುತ್ತಿರಲು ಇವಳು ಬಂದು ನನ್ನ ಶರಣುಹೊಕ್ಕು ಮಣಿಹಾರವನ್ನು ಸಮರ್ಪಿಸಿರುವಳು ಈಗ ನನಗೆ ದೈವವು ನೆರವಾಯಿತು. ಆಗಲಿ. ಈಗ ಇವಳಿಗೆ ಹೀಗೆ ಹೇಳುವೆನು. "ಎಲೌ ಸುದತಿಯೇ! ನಿನ್ನ ಹೆಸರು ಕುಂತಲೆಯಲ್ಲವೆ? ಈ ರತ್ನಹಾರವನ್ನು ನೀನೇ ಅಪಹರಿಸಿರುವೆ" ಎಂಬುದನ್ನು ಈಗ ನನ್ನ ಶಾಸ್ತ್ರದಿಂದ ತಿಳಿದುಕೊಂಡೆನು. ನೀನು ಗೋಪ್ಯವಾಗಿ ಇಲ್ಲಿಗೆ ಬಂದುದು ಒಳ್ಳೆಯವಾಯಿತು. ಇಲ್ಲದಿದ್ದರೆ ಪ್ರಮಾದವಾಗುತ್ತಿದ್ದಿತು. ಒಂದು ಮಾತನ್ನು ಹೇಳುವೆನು ಕೇಳು. ನನಗೆ ನಿನ್ನೆಯೇ ನೀನೀಹಾರವನ್ನು ಕದ್ದಿರುವುದು ಗೊತ್ತಾಗಿದ್ದಿತು. ಆದರೆ ರಾಜನು ಕೇಳುತ್ತಲೇ ಹೇಳಬಾರದೆಂದು ತಡೆದಿದ್ದೆನು. ನೀನು ನೀನಾಗಿ ತಂದುಕೊಡುವೆಯೆಂಬುದು ನನಗೆ ಶಕುನಗಳಿಂದ ಗೋಚರವಾಗಿದ್ದಿತು ಅದಂತಿರಲಿ. ನಿನ್ನ ಪ್ರಾಣ ಮಾನಗಳನ್ನು ಕಾಪಾಡುವ ಭಾರವು ನನ್ನದಾಗಿರಲಿ, ನೀನು ಭಯಪಡಬೇಡ. ಆದರೆ ನನ್ನನ್ನು ಮರೆಯಬೇಡ" ಎಂದನು. ಕುಂತಲೆಯು ಸ್ವಾಮಿಾ! ನಿಮ್ಮನ್ನು ಮರೆವೆನೇ? ಇಲ್ಲ. ಇದೆಲ್ಲವೂ ತೀರ್ಮಾನವಾದ ಬಳಿಕ ನಿಮಗೆ ಐವತ್ತು ಹೊನ್ನುಗಳನ್ನು ತಂದುಕೊಡುವೆನು" ಎಂದಳು ಜೋಯಿಸನು "ಹಾಗಾಗದು, "ಉಪಾಧ್ಯಾಯಾಶ್ಚ ವೈದ್ಯಾಶ್ಚ ಕಾರ್ಯಾಂತೇಹ್ಯಪ್ರಯೋಜಕಾಃ, ಎಂಬಂತೆ ಕೆಲಸವಾದಮೇಲೆ ಫಲವುಂಟಾಗುವುದಿಲ್ಲ ಈಗಾಗುವುದೇ ಅನುಕೂಲವು" ಎಂದು ಎಲ್ಲಿಯೋ ಕಲಿತ ಶ್ಲೋಕಾರ್ಥವನ್ನು ವಿಶೇಷ

ಜ್ಞನಂತೆ ಹೇಳಿದನು "ಹಾಗೆಯೇ ಆಗಲಿ" ಎಂದು ಅವಳು ನಡ ವಿನಲ್ಲಿಟ್ಟುಕೊಂಡಿದ್ದ ಇಪ್ಪತ್ತು ಹೊನ್ನುಗಳನ್ನು ಕೊಟ್ಟು, "ಜೋಯಿಸರೆ! ನಾನು ಬಡವಳು ಇಷ್ಟರಲ್ಲಿಯೇ ತೃಪ್ತಿಪಡಬೇಕೆಂದು ಬೇಡುತ್ತೇನೆ" ಎಂದು. ಪಾದಗಳಮೇಲೆ ಬಿದ್ದಳು. ಬ್ರಾಹ್ಮಣನು "ಬಂದಮನೆಗೆ ಹಿರಿದದ್ದೇ ಲಾಭ" ಎಂದು ಬಗೆದು ಆ ಹಣವನ್ನು ಸೊಂಟದಲ್ಲಿಟ್ಟುಕೊಂಡು "ಎಲೌ ಕುಂತಲೆ, ತೆಗೆದುಕೋ ಈ ಹಾರವನ್ನು ಕೊಂಡುಹೋಗಿ ರಾಣಿಯ ಕೊಟ್ಟಡಿಯಲ್ಲಿ ಒಂದು ಮೂಲೆಯಲ್ಲಿಟ್ಟು, ಆ ಸ್ಥಳವನ್ನು ನನಗೆ ತಿಳಿಯಿಸಿಹೋಗು" ಎಂದು ಹೇಳಿದನು. ಅವಳದೇ ಪ್ರಕಾರವಾಗಿ ಮಾಡಿ ಹೊರಟುಹೋದಳು.

ಬೆಳಗಾಯಿತು, ರಾಯನು ಸ್ತುತಿಪಾಠಕರ ಸ್ತುತಿಯಿಂದ ಎಚ್ಚತ್ತು ಸ್ನಾನಾದಿ ವಿಧಿಗಳನ್ನು ಮುಗಿಯಿಸಿಕೊಂಡು ಜೋಯಿಸನನ್ನು ಕರೆಯಿಸಿ, "ಹಾರವು ಹೋದ ಬಗೆ ಹೇಗೆ" ಎಂದು ಕೇಳಿದನು. ಹಿರಿಯ ಜೋಯಿಸನು, ಆಲೋಚನೆಯನ್ನು ಅಭಿನಯಿಸಿ, "ಅಯ್ಯಾ! ಆ ಅಮೂಲ್ಯ ರತ್ನಹಾರವು ಎಲ್ಲಿಯೂ ಹೋಗಿರುವುದಿಲ್ಲ, ಅರಮನೆಯಲ್ಲಿಯೇ ಇರುವುದು. ಅದನ್ನು ಯಾರೂ ಕದಿಯಲಿಲ್ಲ. ರಾಣಿಯವರು ಸ್ನಾನವನ್ನು ಮಾಡುವಾಗ ತೆಗೆದು ಒಂದು ಕಡೆಯಲ್ಲಿಟ್ಟು ಮರೆತುಬಿಟ್ಟರು. ಅದನ್ನು ಒಂದು ಕಾಗೆಯು ಮಾಂಸ ಭ್ರಾಂತಿಯಿಂದ ತೆಗೆದುಕೊಂಡು ಹೋಗಿ ಅದು ತನ್ನ ಆಹಾರಕ್ಕೆ ತಕ್ಕುದಲ್ಲವೆಂದು ಬಗೆದು ಅರಮನೆಯ ಪಕ್ಕದಲ್ಲಿ ತಂದು ಹಾಕಿತು. ಅದನ್ನು ಒಂದಿಲಿ ತೆಗೆದುಕೊಂಡು ಹೋಗಿ ಉತ್ತರದಿಕ್ಕಿನ ಒಂದು ಕೊಟ್ಟಡಿಯ ಮೂಲೆಯಲ್ಲಿ ಬಿಟ್ಟಿದೆ. ಆಹಾರವಸ್ತುವಲ್ಲದ ಅದನ್ನು ಇಲಿತಾನೇ ಏನು ಮಾಡೀತು ಹುಡುಕಿಸಿದರೆ ದೊರೆವುದು" ಎಂದು ಹೇಳಿದನು. ಅರಸನು ಸೇವಕರನ್ನಲ್ಲಿಗೆ ಕಳುಹಿಸಿದನು. ಅವರು ಹುಡುಕಿದ ಸ್ಥಲದಲ್ಲಿಯೇ ಆ ಹಾರವಿದ್ದಿತು. ಅವರು ಸಂತೋಷದಿಂದ ತೆಗೆದುಕೊಂಡು ಬಂದು ರಾಜನಮುಂದೆ ಇರಿಸಿದರು. ಅದನ್ನು ಕಂಡು ಪರಮಾನಂದವನ್ನು ಹೊಂದಿ ಆ ಜೋಯಿಸನನ್ನು ಮೆಚ್ಚಿಕೊಂಡು ವಿಶೇಷವಾದ ಬಹುಮಾನವನ್ನು ಮಾಡಿದನು. ಮತ್ತು ಮಾಸವೇತನವನ್ನು ಏರ್ಪಡಿಸಿ ಆತನನ್ನು ಆಸ್ಥಾನದ ಜೋಯಿಸನನ್ನಾಗಿಟ್ಟುಕೊಂಡನು. "ಯಾವಸಮಯಕ್ಕೆ ಯಾವ ಸಂಕಟವು ಪ್ರಾಪ್ತವಾಗುವುದೋ? ಪ್ರಾಣಕ್ಕೆ ಅಪಾಯ ಬರುವುದೋ?" ಎಂಬ ಭಯದಿಂದ ರಾಜನ ಆಸ್ಥಾನದಲ್ಲಿರುವುದಕ್ಕೆ ಆ ಜೋಯಿಸನು ಮೊದಮೊದಲು ಒಪ್ಪಲಿಲ್ಲ. ಆದರೆ ಈತನು ಸರ್ವಜ್ಞನಾದ ಜೋಯಿಸನೆಂದು ಅರಸನು ಭಾವಿಸಿ ಬಹಳವಾಗಿ ಪೀಡಿಸಿದುದರಿಂದ ವಿಧಿಯಿಲ್ಲದೆ ಒಪ್ಪಿಕೊಂಡನು.

ಇಂದುಮತಿಯು ತನ್ನ ಪತಿಯ ಮಹಿಮೆಗೂ ಆತನಿಂದ ಗಳಿಸಲ್ಪಟ್ಟ ಭಾಗ್ಯಕ್ಕೂ ಅನೇಕ ಸಂತೋಷವನ್ನು ಪಡೆದು ಬಿರ್ರನೆ ಬೀಗುತ್ತಿದ್ದಳು. ಗುಂಡ ಭಟ್ಟನು ಮಾತ್ರ ಒಂದು ದಿನವಾದರೂ ನಿಶ್ಚಿಂತೆಯಿಂದ ಇರಲಿಲ್ಲ. ಸತ್ಯಶೀಲ! ಭಟ್ಟನು ಕೇವಲ ವಿವೇಕಹೀನನಾದರೂ ದೈವಬಲವಿದ್ದುದರಿಂದ ಆತನಿಗೆ ಯುಕ್ತಿಯೊಂದು ತೋರಿ ತನ್ನ ರಹಸ್ಯವನ್ನು ದಂಪತಿಯೊಡನೆ ಕೂಡ ಹೇಳದೆ ಒಂದು ದಿನದ ಅರ್ಧರಾತ್ರಿಯಲ್ಲಿ ತನ್ನ ಮನೆಗೆ ಬೆಂಕಿಯನ್ನಿಟ್ಟನು. ಮನೆಯು ಧಗಧಗನೆ ಉರಿಯಲಾರಂಭಿಸಲು ನೆರೆಹೊರೆಯವರು ಬಂದು ಕೆಲವು ಪದಾರ್ಥಗಳನ್ನು ಸಾಧ್ಯವಾದಮಟ್ಟಿಗೆ ಹೊರಕ್ಕೆ ಹಾಕುತ್ತಿದ್ದರು. ಗುಂಡಜೋಯಿಸನಾದರೋ ಸರ್ವಸ್ವವನ್ನು ಕಳೆದುಕೊಂಡನಂತೆ ಒಂದುಕಡೆ ಕುಳಿತು ತಲೆಯ ಮೇಲೆ ಕೈಯನ್ನಿಟ್ಟುಕೊಂಡು, ಬಿಕ್ಕಿಬಿಕ್ಕಿ ಅಳುತ್ತ, ಯಾರು ಬಂದು ಕೇಳಿದರೂ ಅದರ ಕಾರಣವನ್ನು ಹೇಳದಿದ್ದನು. ಬೆಳಗಾಯಿತು. ಸಮಾಚಾರವು ರಾಜನಿಗೆ ತಿಳಿದು ಬಹಳವಾಗಿ ಮರುಗಿ ತಾನೇ ವಿಚಾರಿಸಬೇಕೆಂದು ಬಗೆದು ಬಂದು ಬಹುವಾಗಿ ದುಃಖಿಸುತ್ತಿದ್ದ ಆ ಜೋಯಿಸನನ್ನು ಕಂಡು ವಿಚಾರಿಸಿ, "ಸ್ವಾಮಿ ಜೋಯಿಸರೆ! ಇದು ದೈವಗತಿ. ನೀವು ಎಲ್ಲವನ್ನೂ ಬಲ್ಲವರು. ನಿಮಗೆ ಉಪದೇಶವನ್ನು ಮಾಡಲು ನಮ್ಮಂಥವರು ಶಕ್ತರೇ? ಮನೆಯು ಸುಟ್ಟು ಹೋಯಿತೆಂದು ಹೀಗೆ ಅಧಿಕವಾಗಿ ದುಃಖಿಸಬೇಕೆ? ಹೋದರೆ ಹೋಗಲಿ. ಮತ್ತೊಂದು ಸುಂದರ ಮಂದಿರವನ್ನು ನಾನು ಕಟ್ಟಿಸಿಕೊಡುವೆನು, ನೀವು ವ್ಯಾಕುಲವನ್ನು ಪಡಬೇಡಿ ಎಂದು ಸಮಾಧಾನ ಹೇಳಿದನು.

ಆ ಸಿಡಿಲನುಡಿಯ ಗುಂಡಭಟ್ಟನು ರಾಜನ ಮಾತುಗಳನ್ನು ಕೇಳಿ, ಓ ಮಹಾರಾಜನೇ! ಮನೆಯು ಸುಟ್ಟುಹೋಯಿತೆಂದು ನಾನು ದುಃಖಿಸುವನಲ್ಲ. ನನ್ನ ಜ್ಯೋತಿಷಗ್ರಂಥಗಳೆಲ್ಲವೂ ಒಳಗೆಸಿಕ್ಕಿ ಸುಟ್ಟುಹೋದುವು ನನ್ನ ಜೀವನಾಧಾರನೇ ಹಾಳಾಯಿತು. ಆ ಗ್ರಂಥಗಳಿಲ್ಲದಿದ್ದರೆ ಒಂದು ಮಾತನ್ನಾದರೂ ಹೇಳುವುದಕ್ಕೆ ನನಗೆ ಶಕ್ತಿಯೆಲ್ಲಿಯದು? ಅವುಗಳ ಮಹಿಮೆಯಿಂದಲ್ಲವೆ ತಮ್ಮ ಒಲುಮೆಯನ್ನು ಸಂಪಾದಿಸಿದುದು? ಅಯ್ಯೋ! ನಾನಿನ್ನೇನು ಹೇಳಬಲ್ಲೆನು? ಏನು ಸಂಪಾದಿಸಬಲ್ಲೆನು? ಏನುಮಾಡಲಿ? ಎಂದು ಕೈಕೈಹಿಸುಕಿಕೊಂಡು, ಎದೆ ಬಡಿದುಕೊಂಡು ಘೋರನೆ ಅತ್ತನು. ರಾಯನು ಮಹಾದಯಾಶಾಲಿಯಾದವನಿಂದ ವಿಶೇಷವಾಗಿ ಮರುಗಿ ಅಕಟಾ! ಶಿವ ಶಿವ! ಗ್ರಂಥಗಳು ಸುಟ್ಟು ಹೋದುವಲ್ಲವೆ! ಈಗ ನಿಂತಿತ್ತೆ, ಮತ್ತೆ ಅವು ಬರುವುವೆ? ಇನ್ನೇತಕೆ ನೀವು ಶಕುನಶಾಸ್ತ್ರಗಳನ್ನು ಹೇಳಬೇಕೇಕೆ. ನಿಮ್ಮ ಜೀವನಕ್ಕೆ ತಕ್ಕ ಏರ್ಪಾಡುಗಳನ್ನು ನಾನು ಮಾಡಿಕೊಟ್ಟಿರುವೆನಷ್ಟೆ? ಅವನ್ನು ನಿಮ್ಮ ಜೀವನಪರ್ಯಂತವೂ ನಡೆಯಿಸಿಕೊಡುವೆನು. ಸೈರಿಸಿ! ಸೈರಿಸಿ! ಎಂದು ನುಡಿದು ಆಗಲೇ ಒಂದು

ದಿವ್ಯಮಂದಿರವನ್ನು ನಿರ್ಮಿಸಿಕೊಡುವಂತೆ ಮಂತ್ರಿಗೆ ಆಜ್ಞೆಮಾಡಿ ಸುಖವಾಗಿ ಜೀವನಮಾಡುವುದಕ್ಕೆ ಆ ಬ್ರಾಹ್ಮಣನಿಗೆ ಮತ್ತಷ್ಟು ಧನವನ್ನು ಕೊಟ್ಟು ಆದರಿಸಿದನು.

ಬಳಿಕ ಗುಂಡಭಟ್ಟನು ನಿರ್ಭಯವಾಗಿ ಜೋಯಿಸನೆಂಬ ಹೆಸರನ್ನು ಬಿಟ್ಟು ಹೆಂಡತಿಯೊಡನೆ ಸುಖವಾಗಿ ಕಾಲವನ್ನು ಕಳೆಯುತಲಿದ್ದನು. ಹೀಗಿರಲು ಶತ್ರುರಾಜರು ಪಟ್ಟಣವನ್ನು ಮುತ್ತಿ ಆ ರಾಜನೊಡನೆ ಯುದ್ಧಮಾಡಿದರು ಶತ್ರುರಾಜನ ಸ್ಥೈರ್ಯ ಧೈರ್ಯ ಶೌರ್ಯಾದಿಗಳು ಅಧಿಕವಾದುದರಿಂದ ರಾಜನು ಸತ್ತುಬಿದ್ದನು. ಯುದ್ಧವೀರರು ಪಟ್ಟಣವನ್ನು ಪ್ರವೇಶಿಸಿ ಎಲ್ಲ ಮನೆಗಳನ್ನೂ ನೆಲಸಮ ಮಾಡತೊಡಗಿದರು. ಪಟ್ಟಣದ ಹೆಸರೇ ಉಳಿಯದಂತೆ ಮಾಡಬೇಕೆಂದು ವೈಷಮ್ಯಾತಿಶಯದಿಂದ ಹಠವನ್ನು ಹಿಡಿದ ಪರರಾಜನು ತನ್ನ ವೈಷಮ್ಯವನ್ನು ಸಾರ್ಥಕಪಡಿಸಿಕೊಂಡನು. ವರಸೆಯಾಗಿ ಮನೆಗಳನ್ನು ಕೆಡವುತ್ತ ಬಂದರು. ಆ ಸಮಯದಲ್ಲಿ ಗುಂಡಭಟ್ಟನು ಶತ್ರುರಾಜನನ್ನು ಬಹಳವಾಗಿ ಪ್ರಾರ್ಥಿಸಿದುದರಿಂದ ಆತನ ಮನೆಯೊಂದನ್ನು ಮಾತ್ರ ಉಳಿಸಿದರು. ಉಳಿದ ಬ್ರಾಹ್ಮಣರು ಹೋಗಿ ಶತ್ರುರಾಜನನ್ನು ಕೇಳಿಕೊಳ್ಳಬೇಕೆಂಬ ಬುದ್ಧಿಯುಳ್ಳವರಾಗಲಿಲ್ಲ. ಆದುದರಿಂದ ಅವರೆಲ್ಲರಮನೆಗಳೂ ನೆಲಕ್ಕೆ ಸಮವಾದವು. ಎಲ್ಲಿನವರಲ್ಲಿ ಬೇರೆಬೇರೆ ಕಡೆಗಳಿಗೆಹೋಗಿ ನೆಲೆಗಳನ್ನು ಮಾಡಿಕೊಂಡರು. ಗುಂಡಭಟ್ಟನು ಮಾತ್ರ ಇಲ್ಲಿಯೇ ನಿಂತನು. ಕಾಲಕ್ರಮದಿಂದ ಕೆಲವರು ಸಂಸಾರಿಗಳು ಬಂದು ಗುಂಡಭಟ್ಟನ ಮನೆಯ ಜತೆಗೆ ಕೆಲವು ಹುಲ್ಲಿನಮನೆಗಳನ್ನು ಕಟ್ಟಿಕೊಂಡರು. ಹಾಗೆ ಕಟ್ಟಲ್ಪಟ್ಟಿರುವುದೇ ಈ ಗ್ರಾಮವು ಗುಂಡಭಟ್ಟನೇ ಮೊದಲಾದವರು ಬಹುದಿನಗಳ ಹಿಂದೆಯೇ ಗತಿಸಿದರು. ಆತನ ಮನೆಯಲ್ಲಿ ಈಗ ಆತನ ವಂಶಸ್ಥರೇ ವಾಸಮಾಡುತ್ತಿರುವರು. ನೀನು ನೋಡಿದ ದೊಡ್ಡ ಮಂದಿರವೊಂದು ಮಾತ್ರ ಈ ಹಳ್ಳಿಯಲ್ಲಿರುವುದಕ್ಕಿದೇ ಕಾರಣವು ಎಂದು ಚಿದಾನಂದಮುನಿಯು ಹೇಳಿದನು.

ಆದಿನದ ರಾತ್ರಿ ಗುರುಶಿಷ್ಯರಾ ದೇವಾಲಯದಲ್ಲಿಯೇ ಇದ್ದು ನಿದ್ರಿಸಿದರು. ಉದಯಕ್ಕೆಯೇ ಎದ್ದು ಪ್ರಾತರಾಹ್ನಿಕವನ್ನು ಮುಗಿಸಿಕೊಂಡು ಆಂಜನೇಯ ಮೂರ್ತಿಯನ್ನು ಪೂಜಿಸಿ.

" ಕೇಸರಿ ಕಿಶೋರ ಮಾಡೇ
ಕೇಸರಿಣಂ ದನುಜದಂತಿ ಯೂಥಸ್ಯ
ಕೇಶಾಂಶ ಸಂಭವಂ ನಾ
ಕೇಶಾತ್ಮಜ ರಥ ಪತಾಕ ಸಂಕಾಶಂ "

ಎಂದು ಸ್ತೋತ್ರಮಾಡಿ ನಮಸ್ಕರಿಸಿ ಮುಂದೆ ಪ್ರಯಾಣಮಾಡಿದರು.

ಇಂತು ಹದಿನೆಂಟನೆಯಕಥೆ ಮುಗಿದುದು.

## —: ಹತ್ತೊಂಭತ್ತನೆಯ ದಿನದ ಕಥೆ. :—



ಅವ್ಯಾಜಕರುಣಾಮೂರ್ತಿ ರವ್ಯಾದಾರ್ತಾರ್ತಿಭಂಜನಃ |
ಅಪಾರಘೋರಸಂಸಾರ ತಾರಕಸ್ತಾರಕಸ್ಸತಾಂ ||

ಗುರುಶಿಷ್ಯರವರು ನಿರ್ವಿಘ್ನವಾಗಿ ತಮ್ಮ ಪ್ರಯಾಣವು ನೆರವೇರುವುದಕ್ಕಾಗಿ "ಅಗ್ರತಃಪೃಷ್ಠತಶ್ಚೈವ ಪಾರ್ಶ್ವತಶ್ಚಮಹಾಬಲೌ | ಆಕರ್ಣಪೂರ್ಣಧನ್ವಾನೌ ರಕ್ಷೇತಾಂರಾಮಲಕ್ಷ್ಮಣೌ ||" ಎಂದು ಶ್ರೀರಾಮಮೂರ್ತಿಯನ್ನು ಪ್ರಾರ್ಥಿಸಿ ಪ್ರಯಾಣಮಾಡಿ ನಡೆದು ಮಧ್ಯಾಹ್ನದವೇಳೆಗೆ ಹಳ್ಳಿಪಳ್ಳಿಗಳಿಲ್ಲದ ಒಂದು ದೊಡ್ಡ ಕಾಡಿನಲ್ಲಿ ಒಂದು ಬೆಟ್ಟದ ಓರೆಯಲ್ಲಿದ್ದ ಒಂದು ತೋಪಿಗೆ ಬಂದು ಮಾರ್ಗಾಯಾಸಪರಿಶ್ರಾಂತಿಗಾಗಿ ಒಂದು ಮರದ ನೆರಳಲ್ಲಿ ಸ್ವಲ್ಪಕಾಲವು ಕುಳಿತುಕೊಂಡರು ಸತ್ಯಶೀಲನು ಹೊರಟು ಕಾಡಿನಲ್ಲಿ ಅಲ್ಲಲ್ಲಿ ತಿರುಗಿ ಕಾಡುಹಣ್ಣುಗಳು ಕೆಲವನ್ನು ತಂದು ಗುರುವಿನಬಳಿಯಿಟ್ಟನು ಆತನು ಆತ್ಮಾರಾಮನಿಗೆ ಸಮರ್ಪಿಸಿ ಕೆಲವನ್ನು ತಿಂದನು ಸತ್ಯಶೀಲನು ಉಳಿದವುಗಳನ್ನು ಸ್ವೀಕರಿಸಿ ಬಳಿಕ ಯೋಗೀಂದ್ರನ ಸನ್ನಿಧಿಗೆ ಬಂದು ಕುಳಿತು ಇಂತೆಂದನು.

## ಮುನಿತ್ರಯದ ಕಥೆ.

ಮಹಾತ್ಮಾ! ನಾನೊಂದದ್ಭುತವಾದ ವಿಷಯವನ್ನು ನೋಡಿ ಬಂದಿರುವೆನು ಅದರ ವಿವರವನ್ನು ತಿಳಿದು ಹೇಳಲು ನೀವಲ್ಲದೆ ಇತರರಿಗೆ ಸಾಧ್ಯವಲ್ಲವೆಂದೇ ನನ್ನ ಆಶಯವು ಲಾಲಿಸಿ ಫಲಗಳನ್ನು ತಿರಿದು ತರುವುದಕ್ಕೆಂದು ಬೆಟ್ಟದಬದಿಗೆ ಹೋದೆನಷ್ಟೆ? ಅಲ್ಲಲ್ಲಿ ತಿರುಗುತ್ತಿರಲು ಒಂದುಕಡೆಯಲ್ಲಿ ಎರಡುಗುಂಡುಗಳ ಮಧ್ಯದಲ್ಲಿ ನಡುವಿನ ಉದ್ದದವರೆಗೆ ನೀರುಳ್ಳ ಒಂದು ಕುಂಟೆಯು ಕಾಣಿಸಿತು ಅದರಬಳಿಗೆ ಹೋಗಿ ನೋಡಲು ಅದರಲ್ಲಿದ್ದ ನೀರು ಘಳಘಳನೆ ಕುದಿಯುತ್ತಿದ್ದಿತು ಮೇಲಕ್ಕೆ ಹೊಗೆಯು ನೆಗೆಯುತ್ತಿದ್ದಿತು ತಳವು ಕಾಣಿಸುತ್ತಿದ್ದುದರಿಂದ ನೀರು ನಡುವಿನ ಉದ್ದವಿರುವುದೆಂದು ಅದು ತಿಳುವಾದ ನೀರೆಂದೂ ತಿಳಿದುಕೊಂಡೆನು ಇಂತಹ ಅದ್ಭುತ ಜಲಾಶಯವನ್ನು ಹಿಂದೆಎಂದೂ ನಾನು ನೋಡಿರಲಿಲ್ಲ ಈ ಬಗೆಯ ಆಶ್ಚರ್ಯಕರವಾದ ಸ್ಥಲಗಳು ಲೋಕದಲ್ಲಿರುವುವೇ ಎಂದಾಲೋಚಿಸುತ್ತ ನಾಲ್ಕೈದು ಅಡಿಗಳನ್ನು ಮುಂಬರಿದು ಬರಲಾಗಿ ಅಲ್ಲಿ ಒಂದು ಶಾಸನವು ಗೋಚರಿಸಿತು ಅದರಲ್ಲಿ ಬರೆಯಲ್ಪಟ್ಟಿದ್ದ ಬರೆವಣಿಗೆಯು ಯಾವ ಭಾಷೆಯಿಂದ ಬರೆಯಲ್ಪಟ್ಟಿದೋ ನಿಶ್ಚಯಿಸಲಾರದೆ ತಮ್ಮನ್ನು ಕೇಳಿ ತಿಳಿದುಕೊಳ್ಳಬೇಕೆಂದು ಬಗೆದು ಬಂದೆನು ಆ ನೀರು ಹಾಗೆ ಕುದಿಯುತ್ತಿರಲು ಕಾರಣವೇನು? ಆ ಶಾಸನವು ಏಕೆ ಬರೆಯಲ್ಪಟ್ಟಿರುವುದು? ದಯವಿಟ್ಟು ಹೇಳಬೇಕೆಂದು ಪ್ರಾರ್ಥಿಸಲಾಗಿ ಚಿದಾನಂದಮುನಿಯಿಂತೆಂದನು.

ವತ್ಸ ! ಸತ್ಯಶೀಲ ! ಕೇಳು ನೀನುಕಂಡ ಉಷ್ಣೋದಕಕುಂಡದ ಸಮೀಪದಲ್ಲಿ ಕೆಲವುಕಾಲಕ್ಕೆ ಹಿಂದೆ ಮೂವರು ಋಷಿಗಳು ಒಂದು ತಪೋವನವನ್ನು ಕಲ್ಪಿಸಿಕೊಂಡು ತಪಸ್ಸು ಮಾಡುತ್ತಿದ್ದರು. ಅವರು ತಮ್ಮ ತಪೋಮಹಿಮೆಯಿಂದ ಪಾದಸ್ಕಂದಾನುಸಾರಿ ಆಕಾಶಮಾರ್ಗದಿಂದ ಹೋಗಿ ಸತ್ಯಲೋಕದಲ್ಲಿ ಬ್ರಹ್ಮನನ್ನು ಸಂದರ್ಶಿಸಿ ಬರುತ್ತಿದ್ದರು. ಒಂದು ದಿವಸದಲ್ಲಿ ಆ ಮೂವರು ಋಷಿಗಳು ವಾಡಿಕೆಯಂತೆ ಆಕಾಶಮಾರ್ಗದಲ್ಲಿ ಹೋಗುತ್ತಿರಲು ಅವರೊಳಗೆ ಪುರಸ್ಕರನಾಗಿ ಒಂದು ವಿಮಾನವು ನಡೆಯಿತು ಭದ್ರನೆಂಬ ಹೆಸರಿನ ಋಷಿಯು ಉಳಿದ ಇಬ್ಬರನ್ನು ನೋಡಿ " ಮಿತ್ರರೇ ! ಭಗವಂತನು ಸಮಸ್ತ ಶರೀರಗಳನ್ನು ಸೃಷ್ಟಿಸಿರುವನಲ್ಲವೆ ? ಆ ಸೃಷ್ಟಿಯಲ್ಲಿ ಕ್ರೂರವಾದ ಸೃಷ್ಟಿಯೂ ಏಕೆ ?" ಎಂದು ಕೇಳಿದನು. ಸುಭದ್ರನೆಂಬ ಎರಡನೆಯ ಋಷಿಯು ಈ ಮಾತನ್ನು ಕೇಳಿ ಭದ್ರಾ ! ನಿನ್ನ ಸಂತುಷ್ಟಿಗೆ ನಾನು ಹೇಳುವೆನು ದೈವಸೃಷ್ಟಿಯಲ್ಲಿ ಎಂಥ ಭಯಂಕರಗಳೂ ಕ್ರೂರಗಳು ಆಗಿರುವುವು ಸಿಂಹವ್ಯಾಘ್ರಗಳು ಭಗವಂತನು ಸರ್ವಜ್ಞನಾಗಿದ್ದರೂ ಆ ಜಂತುಗಳಿಗೆ ದುಷ್ಟಗುಣಗಳನ್ನುಂಟು ಮಾಡಿರುವುದು ಲೋಕಕ್ಕೆ ಬಾಧೆಯನ್ನುಂಟು ಮಾಡಿದಂತೆಯೇ ಅಲ್ಲವೆ ? ಈತನು ಮಹಾ ಪಕ್ಷಪಾತವನ್ನೇ ವಹಿಸಿದಂತಾಗಲಿಲ್ಲವೆ ? ಅವುಗಳಿಂದ ಸಾಧುಪ್ರಾಣಿಗಳಿಗೆ ಉಳಿಗಾಲವೇ ಇಲ್ಲದಂತಾಗುವುದಿಲ್ಲವೆ ? ಎಂದನು. ಭದ್ರನಾ ಸುಭದ್ರನನ್ನು ನೋಡಿ ಸುಭದ್ರಾ ! ಭಗವಂತನ ಪಕ್ಷಪಾತವನ್ನು ಕುರಿತು ಹೇಳಿದ ನಿನ್ನ ಅಭಿಪ್ರಾಯದಲ್ಲಿ ನಾನೂ ಸಹೀಭವಿಸುವೆನು ಆದರೆ ಸಿಂಹಶಾರ್ದೂಲಗಳು ಕ್ರೂರಜಂತುಗಳೆಂಬುದನ್ನು ಮಾತ್ರ ನಾನು ಒಪ್ಪಲಾರೆನು ಏಕೆಂದರೆ ಅವುಗಳನ್ನು ಮೀರಿದ ಕ್ರೂರಪ್ರಾಣಿಗಳೆಷ್ಟೋ ಇರುವುವು ಸಿಂಹಶಾರ್ದೂಲಗಳು ಯಾವುದೋ ಒಂದಡವಿಯಲ್ಲಿ ಯಾವುದೋ ಒಂದು ಗುಹೆಯಲ್ಲಿ ವಾಸಮಾಡುತ್ತ ಯಾವುದೋ ಒಂದು ಸಮಯದಲ್ಲಿ ಮಾತ್ರವೇ ಮನುಷ್ಯರಿಗೆ ಅಪಕಾರವನ್ನು ಮಾಡುತ್ತವೆ ಸರ್ಪಗಳು ಅವುಗಳಿಗಿಂತ ಕ್ರೂರಪ್ರಾಣಿಗಳಲ್ಲವೆ ? ನಿರಂತರವೂ ಗ್ರಾಮಗಳಲ್ಲಿ ವಾಸಮಾಡುತ್ತ ಅಹರ್ನಿಶಿಗಳಲ್ಲಿ ಎಲ್ಲಕಡೆಗಳಲ್ಲಿಯೂ ಸಂಚರಿಸುತ್ತ ಯಾವುದಾದರೊಂದು ಅಲ್ಪವಾದ ಕಾರಣವು ದೊರೆತರೆ ಸಾಕು ಮನುಷ್ಯನೇ ಮೊದಲಾದ ಪ್ರಾಣಿಗಳನ್ನು ಕಡಿಯುತ್ತ ಬಾಧೆಪಡಿಸುವುದು ಅವುಗಳ ವಿಷದಿಂದ ಎಷ್ಟುಮಂದಿಯೋ ಮೃತಿಯನ್ನು ಪಡೆಯುತ್ತಿರುವರು. ಹೀಗೆ ಆ ಕ್ರೂರಜಂತುಗಳು ಮಾಡುತ್ತಿರುವುದರಿಂದ ಸೃಷ್ಟಿಕರ್ತನಿಗೆ ಉಂಟಾಗುವ ಲಾಭವೇನು ? ಇಂಥವುಗಳನ್ನೇಕೆ ಸೃಷ್ಟಿಸಬೇಕು ಆಲೋಚಿಸಿ ನೋಡಿದರೆ ಭಗವಂತನಲ್ಲಿಯೂ ಬಹು ದೋಷಗಳಿರುವುವೆಂದೇ ನನ್ನ ಅಭಿಪ್ರಾಯವು ಎಂದನು ಬಳಿಕ ಸುಭದ್ರನು ಅಹುದಹುದು ನೀನು ಚೆನ್ನಾಗಿ ತಿಳಿದುಕೊಂಡೆ ನೋಡು ಇಂಥವೇನೆ

ಸರ್ವಜ್ಞನು ಮಾಡುವ ಕಾರ್ಯಗಳು ಈ ಕ್ರೂರಸತ್ವಗಳು ಸಾಧುಪ್ರಾಣಿಗಳಿಗೆ ಮಾಡುತ್ತಿರುವ ಉಪದ್ರವಗಳನ್ನು ನೋಡುತ್ತ ಸುಮ್ಮನಿರುವನಲ್ಲ ಎಂದನು.

ಭದ್ರ ಸುಭದ್ರರ ಈ ವಿಧವಾದ ಸಂಭಾಷಣೆಯನ್ನು ಕೇಳಿ ಅಸಹ್ಯಪಟ್ಟು "ಶಾಂತಂಪಾಪಂ" ಎಂದು ಕಿವಿಗಳನ್ನು ಮುಚ್ಚಿಕೊಂಡು ಮೂರನೆಯ ಋಷಿಯಾದ ಸರ್ವತೋಭದ್ರನು ಅಕಟಕಟಾ ! ಎಂತಹ ಮಾತುಗಳಿವು ? ಭಗವಂತನಿಗೆ ಪಕ್ಷಪಾತವೆಂದರೇನು ? ಛೀ ! ಛೀ ! ಸುಮ್ಮನಿರಿ ಭಗವಂತನು ಪ್ರತಿಪ್ರಾಣಿಯನ್ನೂ ಸೃಷ್ಟಿಸುವಾಗ ಆಯಾಯಾ ಪ್ರಾಣಿಗೆತಕ್ಕ ಗುಣಸ್ವಭಾವಾದಿಗಳನ್ನು ಒಂದೊಂದು ಕಾರಣವನ್ನು ಹಿಡಿದೇ ಬೇರೆಬೇರೆಯಾಗಿ ನಿರ್ಣಯಿಸಿರಬಹುದು ಅದರ ರಹಸ್ಯವನ್ನು ವೇದಗಳೇ ಅರಿಯುವೆನ್ನುವಾಗ ಮನುಷ್ಯರಾದ ನಮಗೇನು ? ಅವನ ಸೃಷ್ಟಿಯಲ್ಲಿ ಯಾವ ಪದಾರ್ಥವೂ ನಿಷ್ಫಲವಾದವಲ್ಲ [illegible] ಸಾಮಾನ್ಯದ ಬುದ್ಧಿಯು ತಿಳಿಯುವಿರುವಂತೆ ನಿನಗೆ ಆ ಪರಮಾತ್ಮನ ಸರ್ವಜ್ಞತ್ವ ಸರ್ವಶಕ್ತಿತ್ವಾದಿಗಳು ತಿಳಿಯುವವು [illegible] ಯಾವ ವಸ್ತುವನ್ನೂ [illegible] ಪರವಸ್ತುವೆಂಬ ವಸ್ತು ನಿರ್ದೋಷವಾದುದು [illegible] ಶ್ರುತಿಸ್ಥ "ನಿಷ್ಕಲಂ [illegible] ನಿರಂಜನಂ [illegible] ಯಣಃ" ಎಂದು ಘೋಷಿಸುತ್ತಿದೆ. ಜಗಚ್ಚಕ್ಷುವಾದ ಸೂರ್ಯನಿಗೆ ಹೇಗೆ ಬಾಹ್ಯದೋಷಗಳ ಸೋಂಕಿಲ್ಲದಿರುವುದೋ ಹಾಗೆಯೇ ಪರಮಾತ್ಮನಿಗ ಯಾವ [illegible] ಇರುವುದಿಲ್ಲ ಅವನಲ್ಲಿ [illegible] ಸುವಿರಿ ? ಅನಿರ್ವಾಚ್ಯನಾದ ಅವನನ್ನು ನಿಂದಿಸಿ ನಾಶಕ್ಕೆ ಒಳಗಾಗಬೇಡಿ ಎಂದನು ಹೀಗೆ ಈ ಮುನಿತ್ರಯವು ಪ್ರಸಂಗಿಸುತ್ತ ಹೋಗುತ್ತಿರಲು ಭಗವನ್ನಿಂದಾರೂಪವಾದ ಪಾಪವು ಸಂಘಟಿಸಿ ಭದ್ರ ಸುಭದ್ರರು ಚಕ್ಕನೆ ಆಕಾಶಗಮನಶಕ್ತಿಯನ್ನು ಕಳೆದುಕೊಂಡು ನೀನು ನೋಡಿದ ಜಲಾಶಯವಿದ್ದ ಸ್ಥಲದಲ್ಲಿ ಬಿದ್ದು ಮೂರ್ಛಾಕ್ರಾಂತರಾದರು ಸರ್ವತೋಭದ್ರನೆಂಬ ಮೂರನೆಯ ಋಷಿಯು ಮಾತ್ರ ಅಂತಹ ಉಪದ್ರವವನ್ನು ಪಡೆಯದೆ ಹೀನಬುದ್ಧಿಯಿಂದ ತನ್ನ ಮಿತ್ರರು ಪೊಂದಿದ ದುಷ್ಫಲವನ್ನು ಕುರಿತು ಚಿಂತಿಸುತ್ತ ಸತ್ಯಲೋಕಕ್ಕೆ ಹೋಗಿ ಸರಸ್ವತೀಪ್ರಿಯನನ್ನು ಸಂದರ್ಶಿಸಿದನು ಆ ಮುನಿಶ್ರೇಷ್ಠನನ್ನು ಬ್ರಹ್ಮನು ಬಹಳವಾಗಿ ಮನ್ನಿಸಿದನು. ಆಗ ಆ ಮುನಿಯು ತನ್ನ ಮಿತ್ರರಿಗೆ ಸಂಭವಿಸಿದ ದುರ್ದಶೆಯನ್ನು ತಿಳಿಯಿಸಿ, ದೇವಾ ! ವಾಣೀಧವ ! ನನ್ನ ಮಿತ್ರರಾದ ಭದ್ರ ಸುಭದ್ರರಿಗೆ ಸಂಭವಿಸಿರುವ ಆ ದುರ್ದಶೆಯು ತೊಲಗುವಬಗೆ ಹೇಗೆ ? ಅವರು ಹೇಗೆ ಪೂರ್ವದಶಕ್ತಿಯನ್ನು ಪಡೆವರು ? ದಯವಿಟ್ಟು ತಿಳಿಯಿಸಬೇಕು ಎಂದು ಬೇಡಿಕೊಳ್ಳಲಾ ಪರಮೇಷ್ಠಿಯಿಂತೆಂದನು.

ಸರ್ವತೋಭದ್ರನೇ ! ಅವರಿಬ್ಬರೂ ತಪೋಮಹಿಮೆಯಿಂದ ಅಧಿಕರಾದರೂ ಸರ್ವಸಾಕ್ಷಿಯಾಗಿಯೂ, ಸರ್ವಸಮನಾಗಿಯೂ, ಸರ್ವಜ್ಞನಾಗಿಯೂ, ಸರ್ವಮಯನಾಗಿಯೂ ಇರುವ ಆ ನಿಷ್ಕಳಂಕಮೂರ್ತಿಯನ್ನು ಲಾಘವವಾಗಿ ಕಂಡು ಆ ಪರಮಾತ್ಮನ ಕೃತ್ಯಗಳನ್ನು ತಪ್ಪುಗಳನ್ನಾಗಿ ಭಾವಿಸಿದರು ಋಷೀಂದ್ರನೆ ! ಅವನ ತತ್ವವನ್ನಾರುಬಲ್ಲರು ? ನಾನು *ದೇವಮಾನದ ಒಂದುಸಾವಿರ ವರ್ಷಗಳು ತಪಸ್ಸು ಮಾಡಿದಬಳಿಕ ಆತನು ಪ್ರಸನ್ನನಾಗಲು ಆಗ “ ಭಗವನ್ ಪರಮತತ್ವರಹಸ್ಯಂಮೇಬ್ರೂಹಿ ” ಎಂದು ಪ್ರಶ್ನೆಮಾಡಿ ಆತನಿಂದ ಆ ಪರಮತತ್ವವನ್ನು ತಿಳಿದುಕೊಂಡೆನು ಇದೆಲ್ಲವೂ ಅಥರ್ವಣ ಮಹಾನಾರಾಯಣೋಪನಿಷತ್ತಿನಲ್ಲಿ ವ್ಯಕ್ತವಾಗಿ ತಿಳಿಯಲ್ಪಡುವುದಲ್ಲವೆ ? ಮುನಿವರ್ಯ ! ಭದ್ರ ಸುಭದ್ರರು ಪರಮತತ್ವವನ್ನರಿಯದೆ ಪರಮಾತ್ಮನ ಸೃಷ್ಟಿಯನ್ನು ತಪ್ಪಾಗಿ ಭಾವಿಸಿದುದರಿಂದ ಸಂಭವಿಸಿದ ಪಾಪವು ಅವರನ್ನು ಸುತ್ತಿಕೊಂಡು ಅವರನ್ನೀಗತಿಗೆ ಇಳಿಸಿತು ಅವರ ಆ ಪಾಪವು ಬಲುದೊಡ್ಡದು ನೀನು ನಿನ್ನ ತಪೋಮಹಿಮೆಯಿಂದ ಅವರಿಬ್ಬರನ್ನೂ ಪೂರ್ವಸ್ಥಿತಿಗೆ ತರಬಹುದು ಕೇಳು ನಿನ್ನ ತಪಃಫಲದಲ್ಲಿ ಅರ್ಧವನ್ನು ವಿನಿಯೋಗಿಸಿ ಈಗ ಅವರು ಬಿದ್ದಿರುವ ಸ್ಥಲದಲ್ಲಿಯೇ ಇರುವ ನೀರಿನ ಊಟೆಯ ಹಳ್ಳದಲ್ಲಿ ಅವರಿಬ್ಬರನ್ನೂ ಮುಳುಗಿಸಿ ಈಚೆಗೆ ಬರಮಾಡು ಹಾಗೆ ಮಾಡಿದರೆ ಅವರು ಮಾಡಿದ ಆ ಪಾಪವು ನೀರಿನಲ್ಲಿ ಸೇರುವುದು ಆಗ ಆ ನೀರು ನೂರು ಸಂವತ್ಸರಗಳವರೆಗೆ ಕುದಿಯುತ್ತಿರುವುದು ಬಳಿಕ ಕ್ರಮವಾಗಿ ಆರಿಹೋಗುವುದು ಹೀಗೆ ಮಾಡು ಅವರು ಪಾಪಮುಕ್ತರಾಗುವರು ಆಮೇಲೆ ದೈವದೂಷಕರಿಗೆ ಉಂಟಾಗುವ ದುರ್ಗತಿಯು ಲೋಕಕ್ಕೆ ತಿಳಿವಹಾಗೆ ಅಲ್ಲಿನಡೆದ ವಿಷಯವನ್ನು ಶಾಸನವನ್ನು ಬರೆದು ಸ್ಥಾಪಿಸಿ ನಿನ್ನ ಮಿತ್ರರನ್ನು ಕರೆದುಕೊಂಡು ಹೋಗು ಇಲ್ಲದಿದ್ದರೆ ಅವರು ಜೀವಿಸುವುದಿಲ್ಲ ಅವರಿಗೆ ನರಕಬಾಧೆಯೂ ತಪ್ಪುವುದಿಲ್ಲ ಎಂದು ಹೇಳಲು ಆ ತಪೋನಿಧಿಯು ಬ್ರಹ್ಮನಿಗೆ ನಮಸ್ಕಾರವನ್ನು ಮಾಡಿ ಬೀಳ್ಕೊಂಡು ಬಂದು ಪಿತಾಮಹನು ಹೇಳಿದಂತೆ ಎಲ್ಲವನ್ನೂ ಮಾಡಿ ಭದ್ರ ಸುಭದ್ರರನ್ನು ಕರೆದುಕೊಂಡು ಆ ಸ್ಥಲವನ್ನು ಬಿಟ್ಟು ಹಿಮಾಲಯಕ್ಕೆ ಹೋದರು ಇದು ನಡೆದು ಹೆಚ್ಚುಕಡಿಮೆ ನೂರು ವರ್ಷಗಳಾಗುತ್ತ ಬಂದಿರುವುದು ಇನ್ನು ಸ್ವಲ್ಪ ಕಾಲಕ್ಕೆಯೇ ಅವರ ನೀರು ತಣ್ಣಗಾಗುವುದು ಇದೇ ಆ ವೃತ್ತಾಂತವು ಎಂದು ಚಿದಾನಂದ ಯೋಗೀಶ್ವರನು ಹೇಳಲು ಶಿಷ್ಯನು ಆನಂದಾಂಬುನಿಧಿ ಮಗ್ನನಾದನು ಆಗ್ಗೆ ಸೂರ್ಯಾಸ್ತಮಾನಕ್ಕೆ ಇನ್ನೂ

---

*ಮನುಷ್ಯಮಾನದ ಒಂದು ತಿಂಗಳಾದರೆ ಪಿತೃಮಾನದಲ್ಲಿ ಒಂದು ದಿನವಾಗುವುದು ಪಿತೃಮಾನದ ಒಂದು ವರ್ಷವು ದೇವಮಾನದ ಒಂದು ದಿನವಾಗುವುದು.

ಹತ್ತು ಗಳಿಗೆಗಳು ಇದ್ದುದರಿಂದ ಗುರುಶಿಷ್ಯರು ಆಗಳೆ ಪ್ರಯಾಣಮಾಡಿ ಒಂದು ಅಗ್ರಹಾರಕ್ಕೆ ಬಂದುಸೇರಿ ಅಲ್ಲಿ ಒಂದು ಚಾವಡಿಯಲ್ಲಿ ಮಲಗಿ ನಿದ್ರಿಸಿದರು.

ಇಂತು ಹತ್ತೊಂಬತ್ತನೆಯ ಕಥೆ ಮುಗಿದುದು.



## —: ಇಪ್ಪತ್ತನೆಯ ಕಥೆ :—

ಓಂ ನಮಃ ಪದ್ಮನಾಭಾಯ ಪದ್ಮಾನಾಥಾಯ ವಿಷ್ಣವೇ |
ಪದ್ಮಸಂಭವ ತಾತಾಯ ಪದ್ಮಮಿತ್ರಾರಿಚಕ್ಷುಸೇ ||

ಬೆಳಗಾಯಿತು ಚಿದಾನಂದ ಸತ್ಯಶೀಲರು ಕಾಲೋಚಿತ ಕೃತ್ಯಗಳನ್ನು ತೀರಿಸಕೊಂಡು ಪ್ರಯಾಣಮಾಡಿ ಮಧ್ಯಾಹ್ನದವೇಳೆಗೆ ಮತ್ತೊಂದಗ್ರಹಾರವನ್ನು ಸೇರಿದರು. ಆ ಊರಿನ ಹೊರಗೆ ಶಿಥಿಲವಾದ ಒಂದು ಶಿವಾಲಯವಿದ್ದಿತು. ಅದರ ಬಳಿಯಲ್ಲಿ ಒಂದು ಸರೋವರವಿದ್ದಿತು ಅದರ ಸುತ್ತಲೂ ದಟ್ಟವಾದ ಛಾಯಾವೃಕ್ಷಗಳಿದ್ದುವು. ಆದಿನದ ಭೋಜನಾದಿ ಕ್ರಿಯೆಗಳಿಗೆ ಆಸ್ಥಲವು ವಸತಿಯಾಗಿರುವುದೆಂದು ಗುರುಶಿಷ್ಯರಿಬ್ಬರೂ ಅಲ್ಲಿ ನಿಂತು ಅಡಿಗೆಯನ್ನು ಮಾಡಿ ಉಂಡರು. ಬಳಿಕ ಸತ್ಯಶೀಲನು ಅತ್ತಿತ್ತ ತಿರುಗಿ-ಬಂದು, ಸ್ವಾಮಿ! ನೋಡಿದಿರಾ ಈ ದೇವಾಲಯವನ್ನು? ಯಾವ ಪುಣ್ಯಾತ್ಮನಿದನ್ನು ಕಟ್ಟಿಸಿ, ಇದರಲ್ಲಿ ಲಿಂಗಪ್ರತಿಷ್ಠೆಯನ್ನು ಮಾಡಿದನೋ? ತಿಳಿಯದಲ್ಲದೆ ದೇವಾಲಯವು ಕೇವಲ ಶಿಥಿಲವಾಗಿದ್ದರೂ ಲಿಂಗವು ಮಾತ್ರ ಬಲು ಅಂದವಾಗಿದೆ. ಶಿಶಿಥಿಲವೂ ಆಗಿಲ್ಲ, ಆಲೋಚಿಸಿದರೆ ಪೂರ್ವದಲ್ಲಿ ಯಾವಾಗಲೋ ಈ ಗ್ರಾಮವು ದೊಡ್ಡದಾಗಿದ್ದಂತೆ ತೋರುವುದು. ಇದಲ್ಲದೆ ಬ್ರಾಹ್ಮಣಕುಟುಂಬಗಳು ಹೆಚ್ಚಾಗಿದ್ದಂತೆಯೂ ಕಾಣುವುದು. ಇಷ್ಟು ಅಧಿಕವಾದ ವಿಪ್ರಸಮುದಾಯವಿದ್ದರೂ ಈ ದೇವಾಲಯವೊಂದನ್ನು ಒಳ್ಳೆಯ ಸ್ಥಿತಿಯಲ್ಲಿಟ್ಟುಕೊಳ್ಳದೆ ಇಂತಪ್ಪ ದುರ್ದಶೆಯ ಪಾಲುಮಾಡಿರುವುದನ್ನು ನೋಡಿದರೆ ಆಶ್ಚರ್ಯವಾಗುವುದು ಎಂದು ನುಡಿಯಲು ಚಿದಾನಂದನಿಂತೆಂದನು.

## ಶಿವಸ್ವಾಮಿ ಎಂಬ ಬಡಹಾರುವನ ಕಥೆ.

ವತ್ಸ! ಸತ್ಯಶೀಲ! ಈ ಗುಡಿಯು ಹಾಳಾಗುವುದಕ್ಕೆ ಕಾರಣವೊಂದಿರುವುದು. ಹೇಳುವೆನು ಕೇಳು, ನೀನು ಊಹಿಸಿದಂತೆ ಈ ಅಗ್ರಹಾರವು ಬಲು ದೊಡ್ಡದಾಗಿ ಒಂದುನೂರು ಬ್ರಾಹ್ಮಣರ ಮನೆಗಳಿಂದ ಶೋಭಿಸುತ್ತಿದ್ದಿತು. ಈಗ ಬಹಳ ಕಡಿಮೆಯ ಸ್ಥಿತಿಗೆ ಬಂದಿರುವುದು. ಅಗ್ರಹಾರದಲ್ಲಿ ಪ್ರತಿಯೊಂದು ಮನೆಗೂ ಒಂದೊಂದು ಬಾವಿ ಇದ್ದಿತು. ಆದರೂ ಎಲ್ಲ ಬಾವಿಗಳಲ್ಲಿಯೂ ಉಪ್ಪುನೀರೇ ಆಗಿದ್ದುದರಿಂದ ಅದು ಪಾನಯೋಗ್ಯವಾಗದೆ ಇದ್ದಿತು. ಗ್ರಾಮಕ್ಕೆಲ್ಲ ದೇವಾಲಯದ ಮುಂದಿರುವ ಈ ಸರೋವರವೇ ಸಿಹಿನೀರನ್ನು ಒದಗಿಸು

ತ್ತಿದ್ದಿತು. ಈ ಅಗ್ರಹಾರದಲ್ಲಿ ಬಹು ದರಿದ್ರನಾದ ಒಬ್ಬ ಬ್ರಾಹ್ಮಣನಿದ್ದನು. ಇವನಿಗೆ ತಾಯಿತಂದೆಗಳಾಗಲಿ, ಅಣ್ಣತಮ್ಮಂದಿರಾಗಲಿ ಇರಲಿಲ್ಲ. ಒಬ್ಬನೇ ಒಂದು ಮನೆಯಲ್ಲಿ ವಾಸಿಸುತ್ತಿದ್ದನು. ಇವನಿಗೆ ಮದುವೆಯೂ ಆಗಿರಲಿಲ್ಲ, ಇವನ ಹೆಸರು ಶಿವಸ್ವಾಮಿ, ಇವನು ಗ್ರಾಮದಲ್ಲಿ ಏಕಾಕಿಯಾಗಿ ಸಂಚರಿಸುತ್ತ ಅಗ್ರಹಾರದ ಬ್ರಾಹ್ಮಣರು ಹೇಳಿದ ಕೆಲಸಗಳನ್ನು ಮಾಡುತ್ತ ಅವರಿಟ್ಟ ಅನ್ನ ವನ್ನುಂಡು ಜೀವಯಾತ್ರೆಯನ್ನು ಕಳೆಯುತ್ತಿದ್ದನು. ಅವನ ಕಷ್ಟಸ್ಥಿತಿಯನ್ನು ಕಂಡು ಆ ಅಗ್ರಹಾರದ ಬ್ರಾಹ್ಮಣೋತ್ತಮರು ಮರುಗಿ ಕನಿಕರಿಸಿ ಎಲ್ಲರೂಸೇರಿ ಆಲೋಚಿಸಿ ಅವನಿಗೊಂದು ವೃತ್ತಿಯನ್ನು ಕಲ್ಪಿಸಿಕೊಡಬೇಕೆಂದು ನಿಶ್ಚಯಿಸಿ, ಪ್ರತಿದಿನವಲ್ಲಿಯೂ ಒಂದೊಂದು ಮನೆಗೆ ಒಂದೊಂದು ಕಾವಡಿಯ ಸಿಹಿ ನೀರನ್ನು ಈ ಸರೋವರದಿಂದ ತಂದು ಕೊಡುತ್ತಿರಬೇಕೆಂದು ನಿಯಮಿಸಿ ಅದ ಕ್ಕಾಗಿ ಒಂದೊಂದು ಕಾವಡಿಗೆ ಒಂದಾಣೆಯಂತೆ ಸಲ್ಲಿಸಬೇಕೆಂದು ಗೊತ್ತುಮಾ ಡಿದರು. ಆ ವರಮಾನದಿಂದ ಆ ಹಾರುವನು ನಿಶ್ಚಿಂತೆಯಾಗಿ ಜೀವನವನ್ನು ನಡೆಯಿಸಿಕೊಳ್ಳುತ್ತಿದ್ದನು. ಅಗ್ರಹಾರದಲ್ಲಿ ನೂರಕ್ಕೆ ಕಡಿಮೆಯಿಲ್ಲದೆ ಬ್ರಾಹ್ಮ ಣರ ಮನೆಗಳಿದ್ದುದರಿಂದ ಅವನೊಬ್ಬನಿಗೆ ಬರುವ ಹಣವು ಸ್ವಲ್ಪ ಹೆಚ್ಚುಕಡಿಮೆ ಸಾಕಾಗುತ್ತಿದ್ದಿತು. ಅವನು ಪ್ರತಿದಿನವೂ ಸಿಹಿನೀರಿನ ಕಾವಡಿಯೊಂದರಂತೆ ಪ್ರತಿಮನೆಗೂ ಆ ಸರೋವರದಿಂದ ತೆಗೆದುಕೊಂಡುಹೋಗಿ ಕೊಡುತ್ತಿದ್ದನು. ಇಂತಪ್ಪ ಸಿಹಿನೀರಿನ ಸರೋವರದಿಂದೊಪ್ಪುತ್ತಿರುವ ಆ ಶಿವಾಲಯವು ಹಿಂದೆ ಯಾವ ಪುಣ್ಯಾತ್ಮರಿಂದ ಪ್ರತಿಷ್ಠಿಸಲ್ಪಟ್ಟಿತೋ ತಿಳಿಯದು. ಆ ಕಾಲದಲ್ಲಿ ಈ ಶಿವಾಲಯವು ಒಳ್ಳೆಯ ಸ್ಥಿತಿಯಲ್ಲಿಯೇ ಇದ್ದಿತು. ಇದನ್ನು ಕುರಿತು ಪೂರ್ವಸ ವೃತ್ತಾಂತವಾರಿಗೂ ತಿಳಿಯದು. ಆ ಬ್ರಾಹ್ಮಣನ ಜೀವನವು ಹಾಗೆ ನಡೆಯು ರಲು ಒಂದುದಿನವಾಬ್ರಾಹ್ಮಣರಲ್ಲಿ ಕೆಲವರು ಒಂದು ಕಡೆಯಲ್ಲಿ ಕುಳಿತು ಕೊಂಡು ಹೊತ್ತುಗಳೆವುದಕ್ಕಾಗಿ ಯಾವಯಾವ ವಿಷಯಗಳನ್ನೋ ಮಾತನಾಡ ತೊಡಗಿದರು. ಆ ಸಮಯದಲ್ಲಿ ತಮ್ಮ ಗ್ರಾಮದ ಹೊರಗಡೆಯ ಶಿವಾಲಯ ದಲ್ಲಿ ಒಂದು ಶಾಸನವಿದೆಯೆಂದೂ, ಯಾವನಾದರೆ ನೂರೆಂಟು ಬಿಂದಿಗೆಗಳ ನೀರನ್ನು ಈ ಸರೋವರದಿಂದ ತೆಗೆದುಕೊಂಡು ಹೋಗಿ ಗುಡಿಯೊಳಗಿನ ಲಿಂಗಕ್ಕೆ ಅಭಿಷೇಕವನ್ನು ಮಾಡುವನೋ ಅವನು ಚಕ್ರವರ್ತಿಯಾಗುವನೆಂದು ಅದರಲ್ಲಿ ಬರೆಯಲ್ಪಟ್ಟಿರುವುದೆಂದೂ ಒಬ್ಬ ಬ್ರಾಹ್ಮಣನು ಹೇಳಿದನು. ಆಗ ಮತ್ತೊ ಬ್ಬನು ಸರಿಸರಿ! ಎಷ್ಟೋಕಡೆಗಳಲ್ಲಿ ಶಾಸನಗಳಿರಬಹುದು ಅವುಗಳಲ್ಲಿ ಬರೆಯ ಲ್ಪಟ್ಟಿರುವುದೆಲ್ಲ ನಿಜವಾಗುವುವೇ? ಎಂದನು. ಇನ್ನೊಬ್ಬನು ಈ ದೇವರ ಮಹಿಮೆಯತ್ಯದ್ಭುತವಾದುದೆಂದು ಎಲ್ಲರೂ ತಿಳಿದುಕೊಳ್ಳಲೆಂದು ವಿಚಿತ್ರವಾಗಿ ಏನೇನೋ ಬರೆವುದು ಲೋಕದಲ್ಲಿ ರೂಢಿಯಾಗಿರುವುದು, ಎಂದು ನುಡಿದನು.

ನೂರೆಂಟು ಕೊಡಗಳನ್ನು ಲಿಂಗಕ್ಕೆ ಅಭಿಷೇಕಮಾಡಿದ ಮಾತ್ರಕ್ಕೆ ಚಕ್ರವರ್ತಿಪದವಿಯು ಅವನಿಗೆ ಬರುವುದೇ ನಿಜವಾದರೆ ಎಲ್ಲರೂ ಚಕ್ರವರ್ತಿಗಳಾಗಬಹುದಲ್ಲವೆ? ಆಗ ಅವರಿಗೆ ಯಾವ ಯಾವ ಲೋಕಗಳಲ್ಲಿ ಆ ಚಕ್ರವರ್ತಿಪದವಿಯುಂಟಾಗುವುದು, ಅಷ್ಟು ಲೋಕಗಳೆಲ್ಲಿರುವುವು ಎಂದು ಮತ್ತೊಬ್ಬನು ಹೇಳಿದನು ಹೀಗೆ ಅವರವರ ಮನಸ್ಸು ಬಂದಂತೆ ಅವರವರು ಮಾತನಾಡಿಕೊಳ್ಳುತ್ತಿದ್ದು ಬಳಿಕ ಆ ಪರಿಹಾಸವಚನಗಳನ್ನು ಸಾಕುಮಾಡಿ ಅವರವರ ಮನೆಗಳಿಗೆ ಹೋದರು. ಯಾರೂ ಶಾಸನದ ಬರವಣಿಗೆ ಯನ್ನು ನಂಬಲಿಲ್ಲ.

ಶಿವಸ್ವಾಮಿಯು ಅಲ್ಲಿಯೇ ನಿಂತಿದ್ದು ಅವರ ಮಾತುಗಳನ್ನು ಕೇಳಿದನು ಆಹ! ಶಾಸನದ ಬರವಣಿಗೆಯು ಸುಳ್ಳಾಗುವುದುಂಟೆ? ಅದೇ ಕೆಲಸವಾಗಿ ಸುಳ್ಳನ್ನು ಕಲ್ಲುಹಲಗೆಗಳಮೇಲೆ ಕೆತ್ತಬೇಕಾದ ಪ್ರಯೋಜನವೇನು? ಸರ್ವಪ್ರಕಾರವಾಗಿಯೂ ಅಸತ್ಯವಾಗಲಾರದು ಅದು ಸರಿ! ಇಲ್ಲಿ ಕುಳಿತು ಭಾಷಣಮಾಡುತ್ತಿದ್ದವರೆಲ್ಲರೂ ಬುದ್ಧಿವಂತರಾಗಿರುವಾಗ ಇವರು ಆ ಬರವಣಿಗೆಯನ್ನು ನಂಬದಿರಲು ಕಾರಣವೇನು? ಸತ್ಯಾಸತ್ಯಗಳನ್ನು ಪರೀಕ್ಷಿಸದೆ ಈ ದೊಡ್ಡ ಮನುಷ್ಯರು ಹೀಗೆ ಹೇಳಬಹುದೆ? ಇವರು ನಂಬದಿದ್ದರೆ ಇರಲಿ ನಾನು ಪರೀಕ್ಷಿಸಿ ತಿಳಿದುಕೊಳ್ಳುವೆನು ಸ್ವಲ್ಪಕಾಲಡಮುಟ್ಟಿಗೆ ಶರೀರಶ್ರಮವಲ್ಲದೆ ಇದರಿಂದ ನಷ್ಟವೇನು? ನನ್ನ ವೃತ್ತಿಯು ನೀರನ್ನು ಹೊರುವುದೇ ಅಲ್ಲವೆ? ಆದುದರಿಂದ ಲಿಂಗಾಭಿಷೇಕಕ್ಕೆ ನೂರೆಂಟು ಕೊಡಗಳನ್ನು ತಂದು ಸುರಿವುದರಿಂದ ನನಗೇನೂ ಕಡಿಮೆಯಾಗಲಾರದು ಅದೊಂದು ದೊಡ್ಡ ಕೆಲಸವೂ ಅಲ್ಲ ಒಂದುವೇಳೆ ಶಾಸನದ ಬರವಣಿಗೆಯು ನಿಜವಾದರೆ ನನಗೆ ಸಾರ್ವಭೌಮತ್ವವು ಸಿದ್ಧಿಸಿ ನೀರುಹೊರುವ ಕೆಲಸವೇ ತಪ್ಪುವುದು ಅಪಾರಸೌಖ್ಯವುಂಟಾಗುವುದು ನಿಜವಲ್ಲದಿದ್ದರೆ ನನ್ನವೃತ್ತಿಗೆ ಭಂಗವು ಬರುವುದಿಲ್ಲ ಮತ್ತು "ಅಭಿಷೇಕಪ್ರಿಯಶ್ಶಿವಃ" ಎಂಬಂತೆ ನನ್ನ ಅಭಿಷೇಕದಿಂದ ಚಂದ್ರಮೌಳಿಯು ತೃಪ್ತನಾಗುವನು "ಆದರೆ ಅಡಿಕೆಯುಮರ ಹೋದರೆ ಒಂದು ಗೋಟಡಿಕೆ" ಎಂಬ ಸಾಮತಿಯಂತಾಗುವುದು ಎಂದು ನಿಶ್ಚಯಿಸಿಕೊಂಡು ತನಗೆ ಕೆಲಸವಿಲ್ಲದಿರುವ ಆ ದಿನದ ರಾತ್ರಿಯಲ್ಲಿ ಕೊಡವನ್ನು ತೆಗೆದುಕೊಂಡುಹೋಗಿ ಸರೋವರದಿಂದ ನೀರನ್ನು ತಂದು ಲಿಂಗದಮೇಲೆ ಸುರಿಯಲಾರಂಭಿಸಿದನು ಒಂದಾಯಿತು ಎರಡಾಯಿತು ಮೂರಾಯಿತು ನಾಲ್ಕಾಯಿತು ತೊಂಬತ್ತೊಂಬತ್ತಾಯಿತು ನೂರನೆಯ ಕೊಡವನ್ನು ತರುತ್ತ ತನ್ನ ಮನಸ್ಸಿನಲ್ಲಿ ಏನಿದು? ನೂರೆಂಟು ಬಿಂದಿಗೆಗಳನ್ನು ಸುರಿದರೆ ಚಕ್ರವರ್ತಿಪದವಿಯು ಪ್ರಾಪ್ತವಾಗುವುದಲ್ಲವೆ? ಈವರೆಗೆ ನಾನು ತೊಂಬತ್ತೊಂಬತ್ತು ಕೊಡಗಳನ್ನು ಸುರಿದೆನು ಆದರೂ ಚಕ್ರವರ್ತಿ ಲಕ್ಷಣವೊಂದಾದರೂ ನನ್ನಲ್ಲಿ ತೋರಲಿಲ್ಲವಲ್ಲ ಶಾಸನವಸತ್ಯವೇ? ಇರಬಹುದು ಹಾಗೆಯೇ ತೋರುವುದು ಹಾಗಲ್ಲದಿದ್ದರೆ

ಧೀಮಂತರಾದ ವಿಪ್ರರು ಅದನ್ನು ನಂಬಲಿಲ್ಲವೇಕೆ ? ನಾನು ಊರಿನವರಿಗೆ ಎಷ್ಟು ಕೊಡಗಳನ್ನು ತೆಗೆದುಕೊಂಡುಹೋಗಿ ಕೊಡುವೆನೋ ಅಷ್ಟು ಆಣೆಗಳು ದುರುವುವು ಹಾಗೆಯೇ ತೊಂಬತ್ತೊಂಬತ್ತು ಬಿಂದಿಗೆಗಳನ್ನು ಸುರಿದೆನು ಫಲವೇ ಇಲ್ಲವಲ್ಲ ! ನೂರೆಂಟು ಬಿಂದಿಗೆಗಳನ್ನು ಸುರಿಯಬೇಕೆಂದಲ್ಲವೆ ನಿಯಮವು ಇಷ್ಟರಲ್ಲಿ ನಾನೇಕೆ ತ್ವರೆಪಡಬೇಕು ? ಕಡೆಯವರೆಗೂ ನೋಡಿಯೇಬಿಡುವೆನು ಎಂದಾಲೋಚಿಸಿ ಸುರಿಯುತ್ತಬಂದನು ನೂರೇಳು ಕೊಡಗಳಾದುವು ಇನ್ನು ಒಂದು ಕೊಡವು ಮಾತ್ರವೇ ಉಳಿದಿರುವುದು ಅದನ್ನೂ ತರುತ್ತಿದ್ದು ತಾನಷ್ಟು ಕಷ್ಟಪಟ್ಟು ಶಾಸನದಲ್ಲಿ ಹೇಳಿರುವಂತೆ ಮಾಡಿಯೂ ಯಾವ ಲಾಭವೂ ಇಲ್ಲದಿದ್ದುದರಿಂದ ಆಗ್ರಹೋದಗ್ರನಾಗಿ ಮತ್ತೆ ಹೀಗೆಂದಾಲೋಚಿಸಿದನು.

ಓಹೋ ! ಶಾಸನದ ನುಡಿಯು ಸತ್ಯವು ಈ ಹಾಳು ಶಾಸನವನ್ನು ಯಾವ ಪಾಪಿಷ್ಠನು ಬರೆದನೋ ಕಾಣೆನು ಎಲ್ಲವೂ ಬರಿಯದು ಅಲ್ಲದಿದ್ದರೆ ಈ ಅಗ್ರಹಾರದ ಅಗ್ರಜನ್ಮರು ಅಲ್ಪವಾದ ಈ ಕಾರ್ಯವನ್ನು ಮಾಡದಿರುತ್ತಿದ್ದರೆ ? ಚಕ್ರವರ್ತಿಗಳಾಗುವುದಕ್ಕೆ ಅವರಿಗೆ ಇಷ್ಟವಿಲ್ಲದಿದ್ದಿತೆ ? ಅಷ್ಟು ಹುಚ್ಚರೆ ಅವರು ? ಛೀ ! ಛೀ ! ವ್ಯರ್ಥವಾಗಿ ಕಷ್ಟಪಟ್ಟೆನು ಚಕ್ರವರ್ತಿಯಾಗಬೇಕೆಂದು ಆಸೆಪಟ್ಟುದು ಬುದ್ಧಿಹೀನತೆಯೇ ಹೊರತು ಬೇರೆಯಲ್ಲ ಕಳೆದುವಕ್ಕಿನ್ನು ಚಿಂತಿಸಲೇಕೆ ? ಈ ಕೊಡದ ನೀರನ್ನು ತೆಗೆದುಕೊಂಡುಹೋಗಿ ನನಗೆ ಇಷ್ಟು ಕಷ್ಟವಿತ್ತ ಆ ಶಿವನ ತಲೆಯಮೇಲೆ ಕುಕ್ಕಿಹೋಗುವೆನು ಶಿವನೂ ಇಲ್ಲ ಗಿವನೂ ಇಲ್ಲ ಇಂತಪ್ಪ ಬೋಳಲಿಂಗಗಳೇ ಚಕ್ರವರ್ತಿ ಪದವಿಯನ್ನು ಕೊಡುವುವು ? ನನ್ನಿಂದ ನೀರುಹೊರಿಸಿದುದಕ್ಕೆ ಫಲವಾಲಿಂಗದ ತಲೆಯೊಡೆವುದೇ ಎಂದತ್ಯುಗ್ರನಾಗಿ ಬೇಗಬೇಗನೆ ನೀರಕೊಡವನ್ನು ತಂದು ಎಲಾ ! ಲಿಂಗಾ ! ನೀನು ದೇವರೇ ಆಗು, ದೇವರೇ ಆಗು. ನನಗೆ ಭಯವಿಲ್ಲ ನಿಜವಾಗಿ ದೇವರಾಗಿದ್ದರೆ ಇಷ್ಟು ಕಷ್ಟಪಟ್ಟ ನನ್ನಲ್ಲಿ ಅನುಗ್ರಹಮಾಡದೆ ಇರುತ್ತಿದ್ದೆಯಾ ? ಎಂದು ಮೂಢವಚನಗಳನ್ನು ನುಡಿಯುತ್ತ ತಾನುತಂದ ತುಂಬುಕೊಡವನ್ನು ಗುಭಳ್ಳನೆ ಆ ಲಿಂಗದ ಮೇಲೆ ಕುಕ್ಕಿದನು.

ತತ್ಕ್ಷಣದಲ್ಲಿಯೇ ಆ ಲಿಂಗವು ಸೀಳಿಯದರಿಂದ ತ್ರಿಶೂಲ ಡಮರುಕ ಭುಜಂಗ ಕಪಾಲಮಾಲಿಕೆಗಳನ್ನು ಧರಿಸಿ ತೇಜೋಮೂರ್ತಿಯಾದ ಶಂಕರನಾವಿರ್ಭವಿಸಿ ತನ್ನ ಆಕೃತಿಯನ್ನು ನೋಡಿ ಹೆದರಿ ಆಶ್ಚರ್ಯಚಿತ್ತನಾಗಿದ್ದ ಆ ಬ್ರಾಹ್ಮಣಕುಮಾರನೊಡನೆ ಎಲಾ ! ಅವಿವೇಕಿಯೇ ! ನೀನು ಬ್ರಾಹ್ಮಣನಾಗಿ ಹುಟ್ಟಿದರೂ ಬ್ರಾಹ್ಮಣಜಾತಿಗೆತಕ್ಕ ಶಾಂತಪಲ್ಲದೆ ಹೀಗೆ ಅಧಿಕ ಕೋಪವನ್ನು ತಾಳಬಹುದೆ ? ಕ್ರಮವಾಗಿ ನೂರಏಳು ಕೊಡಗಳಿಂದಭಿಷೇಕಮಾಡಿ ಇನ್ನೊಂದು ಬಿಂದಿಗೆಯಲ್ಲಿ ಭಾವಿಫಲವನ್ನು ನಾಶಪಡಿಸಿಕೊಂಡೆ ನಿನ್ನ ಅಪರಾಧದಿಂದಲೇ

ನಿನಗೆ ಕೇಡುಂಟಾಯಿತು ಶಾಂತಚಿತ್ತದಿಂದಲೇ ಈ ಕೊಡದ ನೀರನ್ನು ನನ್ನ ಮೇಲೆ ಹಾಕಿದ್ದರೆ ತಪ್ಪದೆ ನೀನು ಚಕ್ರವರ್ತಿಯಾಗುತ್ತಿದ್ದೆ ಹಾಗೆ ಮಾಡದಿದ್ದುದರಿಂದ ನಿನಗಾಪದವಿಯು ತಪ್ಪಿಹೋಯಿತು ಆದರೂ ನೀನು ಮಾಡಿದ ಅಭಿಷೇಕಕ್ಕೆ ತಕ್ಕಫಲವಿಲ್ಲದೆ ಹೋಗಲಿಲ್ಲ ಮುಂದಿನ ಜನ್ಮದಲ್ಲಿ ತುರುಷ್ಕ ಚಕ್ರವರ್ತಿಯಾಗುವೆ ? ಈ ಫಲವು ಒಂದಾವೃತ್ತಿಯುಂಟಾಗುವುದೇ ಹೊರತು ಮತ್ತೆಯುಂಟಾಗದು ಇನ್ನುಮೇಲೆ ನಿನ್ನಹಾಗೆ ಯಾರಾದರೂ ಮಾಡಿದರೆ ಅವರು ಪ್ರಯೋಜನವನ್ನು ಹೊಂದಲಾರರು ಈ ಗ್ರಾಮಸ್ಥರು ನನ್ನ ಮಹಿಮೆಯನ್ನು ನಂಬಲಾರದೆ ಹೋದರು ಆದುದರಿಂದ ಅವರ ದೈವಭಕ್ತಿಯು ನಾಶವಾಗುವುದು ಎಂದು ನುಡಿದು ಅಂತರ್ಧಾನವನ್ನು ಪಡೆದನು.

ಅವನು ಶಂಕರನ ನುಡಿಗಳನ್ನು ಕೇಳಿ ತನ್ನ ಅವಿವೇಕದಿಂದ ಮುಂದೆ ಲಭಿಸಬಹುವಾಗಿದ್ದ ಪದವಿಯನ್ನು ಕಳೆದುಕೊಂಡಬಗ್ಗೆ ದುಃಖಿಸುತ್ತ ಹೊರಟುಹೋದನು ಈಶ್ವರನ ಶಾಪದಿಂದ ಈ ಗ್ರಾಮದವರಿಗೆ ಭಗವದ್ಭಕ್ತಿ ತೊಲಗಿಹೋಯಿತು. ಈ ದೇವಾಲಯದ ವಿಷಯದಲ್ಲಿ ಸ್ವಲ್ಪವಾದರೂ ಶ್ರದ್ಧೆಯನ್ನು ವಹಿಸದಿದ್ದುದರಿಂದ ಈ ದೇವಾಲಯವು ದಿನಕ್ರಮವಾಗಿ ಶಿಥಿಲವಾಗಿ ಈಗಿನ ಸ್ಥಿತಿಗೆ ಬಂದಿರುವುದು ಇದೀ ದೇವಾಲಯದ ಚರಿತ್ರವು ಎಂದು ಚಿದಾನಂದ ಯೋಗಿಯು ಹೇಳಲು ಕೇಳಿ ಶಿಷ್ಯನು ಆನಂದಾಶ್ಚರ್ಯಗಳಲ್ಲಿ ಮುಳುಗಿದನು.

ಇಂತು ಇಪ್ಪತ್ತನೆಯ ಕಥೆ ಮುಗಿದುದು.



## — ಇಪ್ಪತ್ತೊಂದನೆಯ ಕಥೆ —

ಓಮಿತ್ಯೇಕಾಕ್ಷರಂ ಬ್ರಹ್ಮ ನಿರಾಕಾರಂ ನಿರಂಜನಂ |
ವೇದವೇದಾಂತಗಮ್ಯಂತ ಮದ್ವಿತೀಯ ಮುಪಾಸ್ಮಹೇ ||

ಚಿದಾನಂದ ಸತ್ಯಶೀಲರು ಆ ಅಗ್ರಹಾರದಲ್ಲಿ ಆರಾತ್ರಿ ತಂಗಿದ್ದು ಸೂರ್ಯೋದಯಕ್ಕಿಂತ ಮೊದಲೇ ಎಚ್ಚತ್ತು ಸ್ನಾನಾದಿ ವಿಧಿಗಳನ್ನು ಮುಗಿಸಿಕೊಂಡು ಬಳಿಕ ಭಗವನ್ನಿವೇದಿತವಾದ ಕೆಲವು ಫಲಸಮುದಾಯವನ್ನು ತಿಂದು ಸೂರ್ಯಾಸ್ತಮಯದವರೆಗೂ ನಡೆದು ಕಾವೇರೀ ತೀರದಲ್ಲಿರುವ ತಿರುವಾನಕ್ಕಾವಲ್ ಎಂಬ ಅಗ್ರಹಾರವೊಂದಕ್ಕೆ ಬಂದು ಸೇರಿದರು. ಇದಕ್ಕೆ ಜನಾರ್ಧನಪುರವೆಂಬುದು ನಾಮಾಂತರವು. ಆ ಅಗ್ರಹಾರದಲ್ಲಿ ಒಂದು ಧರ್ಮಶಾಲೆಯುಂಟು. ಅದು ಪ್ರಯಾಣಿಕರಿಗೆ ಒಳ್ಳೆಯ ವಸತಿಯಾಗಿದ್ದಿತು. ಗುರುಶಿಷ್ಯರಲ್ಲಿ ಇಳಿದು ಅಡಿಗೆಮಾಡಿದರು. ಊಟವಾಯಿತು. ಬಳಿಕ ಶಿಷ್ಯನು ಗುರುವಿನ ಬಳಿಯಲ್ಲಿ ಕುಳಿತುಕೊಂಡು ಪಾದಸಂವಾಹನವನ್ನು ಮಾಡುತ್ತ, ಸ್ವಾಮಿ! ಪ್ರತಿಯೊಂದು ಊರಿಗೂ ಯಾವುದಾದರೊಂದು ಹೆಸರು ಇರುವುದುಂಟಷ್ಟೆ ?

ಆ ಊರಿಗೆ ಆ ಹೆಸರು ಯಾವದಾವರೊಂದು ಕಾರಣದಿಂದ ಬಂದಿರುವುದಾಗಿ ತೋರುವುದು. ತಿರುಪತಿಬೆಟ್ಟಕ್ಕೆ ಶೇಷಶೈಲ, ಗರುಡಾಚಲ, ವೇಂಕಟಾದ್ರಿ, ನಾರಾಯಣಾದ್ರಿ ಮೊದಲಾದ ಹೆಸರುಗಳು ಬಂದಿರುವುದಕ್ಕೆ ತಕ್ಕ ಕಾರಣವು. ವೇಂಕಟಾಚಲ ಮಹಿಮೆಯಲ್ಲಿ ಹೇಳಲ್ಪಟ್ಟಿರುವುದಲ್ಲವೆ ? ಹಿಮಾಲಯಕ್ಕೆ, ಹಿಮಕ್ಕೆ ಮನೆಯಾಗಿರುವುದರಿಂದಲ್ಲವೆ ಆ ಹೆಸರು ಬಂದಿರುವುದು ? ವಾರಣಾಸಿಗೆ, ವರುಣ ಅಸಿಯೆಂಬೆರಡು ನದಿಗಳ ನಡುವೆ ಇರುವುದರಿಂದ ತನ್ನಾಮವುಂಟಾಗಿರುವುದೆಂದು ತಾವೇ ಹೇಳಿದಿರಿ. ಆದಕಾರಣ ನಾನೊಂದರಿಕೆಯನ್ನು ಮಾಡುವೆನು. ದಯಮಾಡಿ ಹೇಳಬೇಕು, ನಾವಿಳಿದಿರುವ ಈ ಅಗ್ರಹಾರಕ್ಕೆ ಜನಾರ್ದನಪುರವೆಂಬ ನಾಮಾಂತರವುಂಟೆಂದು ಎಲ್ಲರೂ ಹೇಳುವುದಲ್ಲದೆ ಎಲ್ಲರೂ ವಾಡಿಕೆಯಾಗಿ "ಜನಾರ್ಧನಪುರಂ" ಎಂದೇ ಕರೆಯುತ್ತಿರುವರು. ಇದಕ್ಕೇನು ಕಾರಣವೋ ಅನುಗ್ರಹಿಸಿ ಹೇಳಬೇಕೆಂದು ಕೋರುತ್ತೇನೆ ಎಂದು ಕೇಳಿದನು. ಚಿದಾನಂದನು ಕುಮಾರ! ಪುರಾವೃತ್ತಗಳನ್ನು ಕೇಳುವುದಕ್ಕೆ ನಿನಗೆ ಬಹಳವಾಗಿ ಇಷ್ಟವುಂಟೆಂಬುದನ್ನು ನಾನರಿತಿರುವೆನು. ನೀನು ಕೇಳಿದುದನ್ನು ಅತ್ಯಂತ ಸಂತೋಷದಿಂದ ಹೇಳುವೆನು. ಲಾಲಿಸು.

## ತಾಲಧ್ವಜ ಜನಾರ್ಧನಶರ್ಮರ ಕಥೆ.

ತಾಲಧ್ವಜನೆಂಬ ರಾಜಸ್ರೇಷ್ಠಂಗವನು ತಾಲುಕಾನಗರವೆಂಬ ಪಟ್ಟಣದಲ್ಲಿ ರಾಜ್ಯಭಾರಮಾಡುತ್ತಿದ್ದನು. ಆ ಕಾಲದಲ್ಲಿ ಈ ದೇಶವೆಲ್ಲವೂ ಆತನ ಪಾಲನೆಗೆ ಒಳಪಟ್ಟಿದ್ದಿತು. ಆ ರಾಜನ ಬಳಿಯಲ್ಲಿ ಗುರು ಬುಧ ಶುಕ್ರರಿಗೆ ಸಮವಾದ ಬುದ್ಧಿಯುಳ್ಳ ಜನಾರ್ದನಶರ್ಮನೆಂಬವನು ಮುಖ್ಯ ಸಚಿವನಾಗಿದ್ದನು. ಅವನು, ಇಂದ್ರನಿಗೆ ಬೃಹಸ್ಪತಿಯಂತೆ, ಶ್ರೀರಾಮನಿಗೆ ವಸಿಷ್ಠನಂತೆ, ಜನಕನಿಗೆ ಶತಾನಂದನಂತೆ ರಾಜನಿಗೆ ಹಿತಚಿಂತಕನಾಗಿ ರಾಜನನ್ನು ಒಂದು ನಿಮಿಷವಾದರೂ ಬಿಟ್ಟಿರದೆ ಕಣ್ಣಿಗೆ ಎವೆಯಂತೆ ಇರುತ್ತಿದ್ದನು. ಮೂರ್ತೀಭವಿಸಿದ ರಾಜಭಕ್ತಿಯೋ, ರೂಪುಗೊಂಡ ಧರ್ಮವೋ, ಆಕೃತಿಯನ್ನು ಪಡೆದ ಸತ್ಯವೋ ಎಂಬಂತಿರುತ್ತ ತನ್ನ ಪ್ರಭುವಿಗೆ ಯಾವ ಸಂಕಟವೂ ಪ್ರಾಪ್ತವಾಗದಂತೆ ನಿರಂತರವೂ ಜಾಗರೂಕನಾಗಿ ವರ್ತಿಸುತ್ತಿದ್ದನು.

ಅದೃಷ್ಟವಶದಿಂದ ಒಂದು ದಿನದಲ್ಲಿ ಸಂನ್ಯಾಸಿಯೊಬ್ಬನು ಆ ಮಂತ್ರಿಯ ಮನೆಗೆ ಬಂದನು. ಆಗ ಆ ಸಚಿವೋತ್ತಮನು ಮಹಾನಂದದಿಂದ ಆತನನ್ನು ಇದಿರ್ಗೊಂಡು ಕರೆದುತಂದು ಅರ್ಘ್ಯಪಾದ್ಯಾದಿಗಳಿಂದ ಪೂಜಿಸಿ ಸತ್ಕಾರವನ್ನು ಮಾಡಿದನು.

ಕುಮಾರ! ಸತ್ಯಶೀಲ! ಜನಾರ್ದನಶರ್ಮನು ಧರ್ಮವನ್ನು ಚೆನ್ನಾಗಿ ಬಲ್ಲವನು. ಗೃಹಸ್ಥನಾದವನು ತನ್ನ ಮನೆಗೆ ಬಂದ ವೃದ್ಧರನ್ನು ಆದರದಿಂದ

ಇದಿರ್ಗೊಂಡು ಕರೆದುತಂದು ಸತ್ಕರಿಸಬೇಕು. ಧರ್ಮಶಾಸ್ತ್ರವು ಹೀಗೆ ಸಾರುತ್ತಿರುವುದು:— “ ಊರ್ಧ್ವಂಪ್ರಾಣಾಹ್ಯುತ್ಕ್ರಮಂತಿ ಯೂನಸ್ಥವಿರಆಗತೇ। ಪ್ರತ್ಯುತ್ಥಾನಾಭಿವಾದಾಭ್ಯಾಂ ಪುನಸ್ತಾನ್ ಪ್ರತಿಪದ್ಯತೇ ॥” ಅಂದರೆ ವೃದ್ಧನಾದವನು ಮನೆಗೆ ಬಂದಾಗ ಯೌವನಸ್ಥನ ಪ್ರಾಣಗಳು ಮೇಲಕ್ಕೆ ಹೊರಡುತ್ತವೆ. ಪ್ರತ್ಯುತ್ಥಾನಾಭಿವಾದನಗಳಿಂದ ಆ ಪ್ರಾಣಗಳನ್ನು ಅವನು ಮತ್ತೆ ಪಡೆಯುತ್ತಾನೆ. ಆದುದರಿಂದಲೇ ಜನಾರ್ದನಶರ್ಮನೆಂಬ ಆ ಮಂತ್ರಿಯು ಆ ಸಂನ್ಯಾಸಿಯನ್ನಿದಿರುಗೊಂಡು ಕರೆತಂದು ಆದರಿಸಿದುದು.

ಹೀಗೆ ಮಂತ್ರಿಪುಂಗವನಿಂದ ಸತ್ಕೃತನಾದ ಆ ಸಂನ್ಯಾಸಿಯು ಆತನು ಮಾಡಿದ ಮಹೋಪಚಾರಗಳಿಂದ ತೃಪ್ತನಾಗಿ ಆತನಿಗೆ ಎಲ್ಲಪ್ರಾಣಿಗಳಭಾಷೆಯೂ ಸುಕರವಾಗಿ ಮನದಟ್ಟಾಗುವಂತೆ ಅನುಗ್ರಹಿಸಿ ಮಂತ್ರೋಪದೇಶವನ್ನು ಮಾಡಿ ಅಯ್ಯಾ! ನಿನ್ನ ನಿಷ್ಕಲಂಕವಾದ ಆದರಣದಿಂದ ನಾನು ತೃಪ್ತನಾದೆನು. ಪಶುಪಕ್ಷ್ಯಾದಿ ಸಮಸ್ತ ಜಂತುಗಳ ಭಾಷೆಯನ್ನರಿಯುವ ಮಂತ್ರವಿದನ್ನು ನಿನಗೆ ಉಪದೇಶಿಸಿರುವೆನು. “ ಗುರುಂ ಪ್ರಕಾಶಯೇದ್ಧೀಮಾನ್ । ಮಂತ್ರಂ ಯತ್ನೇನ ಗೋಪಯೇತ್ ॥ ಅಪ್ರಕಾಶಪ್ರಕಾಶಾಭ್ಯಾಂ । ಕ್ಷೀಯೇತೆ ಸಂಪದಾಯುಷೀ, ಅಂದರೆ, ಬುದ್ಧಿವಂತನಾದವನು, ತನ್ನ ಗುರುವಿಂಥವನೆಂದು ಪ್ರಕಾಶಪಡಿಸಬೇಕು. ಪ್ರಯತ್ನಪೂರ್ವಕವಾಗಿ ಮಂತ್ರವನ್ನು ಗೋಪ್ಯವಾಗಿಟ್ಟಿರಬೇಕು ಯಾವನಾದರೆ ಗುರುವನ್ನು ಪ್ರಸಿದ್ಧಿಗೊಳಿಸದೆ ಮಂತ್ರವನ್ನು ರಹಸ್ಯವಲ್ಲಿಡದೆ ಹೋಗುವನೋ ಅವನ ಸಂಪತ್ತು ಮತ್ತು ಆಯುಷ್ಯವು ನಾಶವಾಗುವುದು. ಇದನ್ನು ನೆನಪಿನಲ್ಲಿಟ್ಟಿರು” ಎಂದುಸಿರಿ ಹೊರಟುಹೋದನು.

ತನ್ಮಂತ್ರ ಮಹಿಮೆಯಿಂದ ಮಂತ್ರಿಗೆ ಅದುಮೊದಲಾಗಿ ಸಕಲಜಂತುಗಳ ಭಾಷೆಯನ್ನು ತಿಳಿವಶಕ್ತಿಯುಂಟಾಗಿದ್ದಿತು. ಆದರೂ ತನಗೆ ಜಂತುಭಾಷೆ ತಿಳಿದಿರುವಂತೆ ರಾಜನಿಗಾಗಲಿ, ಇತರರಿಗಾಗಲಿ ಹೇಳಿದವನೇ ಅಲ್ಲ. ಆದುದರಿಂದ ಆತನಿಗೆ ಅಂಥ ಅಮೂಲ್ಯವಾದ ಶಕ್ತಿಯುಂಟಾಗಿರುವಿಕೆಯನ್ನು ಯಾರೂ ಅರಿಯರು.

ಹೀಗೆ ಕೆಲದಿನಗಳು ಕಳೆದುವು. ಒಂದು ದಿನದಲ್ಲಿ ಆ ತಾಲಧ್ವಜನೃಪಾಲನು ಮಂತ್ರಿಯನ್ನು ಕರೆದುಕೊಂಡು ಪರಿವಾರದೊಡನೆ ಬೇಟೆಯಾಡುವುದಕ್ಕಾಗಿ ಕಾಡಿಗೆ ಹೋದನು. ಎಲ್ಲರೂ ಆದಿನದ ಸಾಯಂಕಾಲದವರೆಗೂ ಬೇಟೆಯಾಡಿ ಅನೇಕ ದುಷ್ಟಮೃಗಗಳನ್ನು ವಧಿಸಿ ಸೂರ್ಯಾಸ್ತಮಯ ಸಮಯವು ಪ್ರಾಪ್ತವಾಗಲಾಗಿ ತಾವು ಇಳಿದಿದ್ದ ಗುಡಾರಗಳಿರುವ ಸ್ಥಲಕ್ಕೆ ಬರುವುದಕ್ಕೋಸ್ಕರ ಹಿಂದಿರುಗಿದರು. ಆಗ ಮೃಗಯಾಭಿಲಾಷೆಯಿಂದ ಬಹುದೂರದವರೆಗೆ ಹೋಗಿದ್ದುದರಿಂದ ಬೇಟೆಗಾರರು ಒಬ್ಬರೊಡನೊಬ್ಬರು ಸೇರದೆ ಅಲ್ಲಲ್ಲಿ ಹಿಂದು

ಳಿದು ನಿಂತು ಬಹಳಹೊತ್ತಿಗೆ ತಮ್ಮ ಬಿಡಾರಕ್ಕೆ ಬಂದು ಸೇರಿ ರಾಯನ ಆಗಮನವನ್ನು ನಿರೀಕ್ಷಿಸುತ್ತಿದ್ದರು. ಮಂತ್ರಿಯೊಬ್ಬನು ಮಾತ್ರ ರಾಜನನ್ನು ಬಿಡದೆ ಹಿಂಬಾಲಿಸಿದ್ದನು.

ಆ ಅರಸನೂ ಮಂತ್ರಿಯೂ ಬೇಟೆಯಿಂದ ಬಹಳವಾಗಿ ಬಳಲಿದವರಾಗಿ ತಮ್ಮ ಪರಿವಾರವನ್ನು ಕಾಣದೆ ಕತ್ತಲೆಯಾಗುತ್ತ ಬಂದುದರಿಂದ ತ್ವರೆಯಾಗಿ ಬರುತ್ತಿರುವ ಅವಸರದಲ್ಲಿ ದಟ್ಟವಾದ ಆ ಕಾಡಿನಲ್ಲಿ ದಾರಿತಪ್ಪಿ ಎಷ್ಟುದೂರದವರೆಗೆ ನಡೆದುಬಂದರೂ ತಮ್ಮ ಬಿಡಾರವನ್ನು ಕಂಡುಕೊಳ್ಳಲಾರದೆ ತಿರುಗಿ ತಿರುಗಿ ಬೇಸತ್ತು, ಬೆಳಗಾದಹೊರತು ದಿಕ್ಕನ್ನು ತಿಳಿದು ಹೋಗುವುದಕ್ಕೆ ಸಾಧ್ಯವಲ್ಲವೆಂದು ನಿಶ್ಚಯಿಸಿಕೊಂಡು ಬದಿಯಲ್ಲಿದ್ದ ಒಂದು ದೊಡ್ಡ ಆಲದಮರದಡಿಯಲ್ಲಿ ನಿಂತು ಸೂರ್ಯೋದಯವಾಗುವ ತನಕ ಅಲ್ಲಿಯೇ ಇದ್ದು ಕಾಲವನ್ನು ಕಳೆಯಬೇಕೆಂದು ಭಾವಿಸಿ ಅಲ್ಲಿದ್ದ ಒಂದು ಬಂಡೆಯಮೇಲೆ ಕುಳಿತುಕೊಂಡರು ಬೇಟೆಯಾಡಿ ಬಳಲಿದ್ದುದರಿಂದಲೂ, ಆಹಾರವಿಲ್ಲದಿದ್ದುದರಿಂದಲೂ ತಾಲಧ್ವಜನು ಕುಳಿತುಕೊಳ್ಳಲಾರದೆ ಆ ಗಿಡದ ಒಂದು ಬೇರಿನಮೇಲೆ ತಲೆಯನ್ನಿಟ್ಟು ಮಲಗಿದನು ಗಾಢನಿದ್ರೆಯನ್ನೂ ಮಾಡಿದನು.

ಮಂತ್ರಿಯು ಮಾತ್ರ ನಿದ್ರಿಸಲಿಲ್ಲ ನಿರಂತರವೂ ರಾಜನಿಗೆ ಹಿತವನ್ನೆ ಬಯಸುವನಾದುದರಿಂದ ಭೂಮಿಯಮೇಲಕ್ಕೆ ಬಂದಿರುವ ಮರದಬೇರನೊಂದನ್ನು ತಲೆಗಿಂಬಾಗಿಸಿ ಮಲಗಿ ನಿದ್ರಿಸುತ್ತಿದ್ದ ರಾಜನ ಕಷ್ಟವನ್ನು ಸಚಿವಾಗ್ರಣಿಯು ನಿಟ್ಟಿಸಿ ಅಕಟಾ ! ದೈವತಂತ್ರವನ್ನು ಬಲ್ಲವನಾರು ? ಅರಮನೆಯಲ್ಲಿ ಹಂಸತೂಲಿಕಾತಲ್ಪದಲ್ಲಿ ಪವಡಿಸಿ ಸುಖನಿದ್ರೆಯನ್ನು ಮಾಡುವ ರಾಜನು ಈಗ ನೆಲದಮೇಲೆ ಹೀಗೆ ಮಲಗಿ ನಿದ್ರಿಸುತ್ತಿರುವನಲ್ಲಾ ! ಸಕಲೋಪಚಾರಗಳನ್ನೂ ಸಮಸ್ತ ಭೋಗಗಳನ್ನೂ ಪಡೆವ ಅರಸನು ಈಗ ಹೊಟ್ಟೆಗಿಲ್ಲದೆ ಕಷ್ಟಜೀವನನಾದ ಒಬ್ಬ ಬಡವನಂತೆ ಸಣ್ಣಕಲ್ಲುಗಳಿಂದ ವ್ಯಾಪ್ತವಾದ ಈ ಭೂಮಿಯಮೇಲೆ ಬೇರಿನ ತಲೆಗಿಂಬಿನಲ್ಲಿ ತಲೆಯಿಟ್ಟು ಮಲಗಿ ನಿದ್ರಿಸುತ್ತಿರುವುದನ್ನು ಕಂಡರೆ ನನ್ನ ಹೃದಯವು ಭೇದಿಸುತ್ತಿರುವುದಲ್ಲ ಇನ್ನೊಂದು ನಿಮಿಷದಲ್ಲಿ ಪ್ರಾಪ್ತವಾಗಬಹುದಾದ ಹಾನಿವೃದ್ಧಿಗಳನ್ನು ತಿಳಿಯಲು ಯಾರಿಗೂ ಶಕ್ಯವಲ್ಲ ಎಂಥವನಾದರೇನು ? ದೈವಸಂಕಲ್ಪದಂತೆಯೇರ್ಪಟ್ಟ ಕಷ್ಟಸುಖಗಳನ್ನನುಭವಿಸದೆ ತಪ್ಪುವುದಿಲ್ಲ " ನಕೇವಲಂಮನುಷ್ಯೇಷು ದೈವಂದೇವೇಷ್ವಪಿಪ್ರಭು | ಸತಿಮಿತ್ರೇಧನಾಧ್ಯಕ್ಷೇ ಚರ್ಮಪ್ರಾವರಣೋಹರಃ ॥ " ಅಂದರೆ ದೈವವು ಕೇವಲ ಮನುಷ್ಯರಲ್ಲಿಯೇ ಅಲ್ಲ ದೇವತೆಗಳಲ್ಲಿಯೂ ಕೂಡ ತನ್ನ ಪ್ರಭುತ್ವವನ್ನು ನಡೆಯಿಸುವುದು ಕುಬೇರನೇ ತನಗೆ ಮಿತ್ರನಾಗಿದ್ದರೂ ಈಶ್ವರನು ಚರ್ಮವನ್ನು ಹೊದೆದಿರುವನಲ್ಲವೆ ? ಈಗ ನಾವೇತಕ್ಕೆ ಬೇಟೆಗೆ ಬರಬೇಕಾಗಿದ್ದಿತು ? ಅಯ್ಯೋ ! ಈ ನಿರ್ಜ

ನಪ್ರದೇಶದಲ್ಲಿ ಏಕೆ ಮಲಗಬೇಕಾಗಿದ್ದಿತು ? ಇದನ್ನಾಲೋಚಿಸಿದರೆ ಕರ್ಮದಿಂದ ಬುದ್ಧಿಯು ಬಾಧಿಸಲ್ಪಡುವುದೇ ಹೊರತು ಬುದ್ಧಿಯಿಂದ ಕರ್ಮವು ಬಾಧಿಸಲ್ಪಡುವುದಿಲ್ಲವೆಂದು ತೋರುವುದು ರಾಮನು ಬುದ್ಧಿಶಾಲಿಯೇ ಅಲ್ಲವೆ ? ಆದರೂ ಚಿನ್ನದ ಜಿಂಕೆಯನ್ನು ಹಿಂಬಾಲಿಸಿದನು ಎಂದಾಲೋಚಿಸುತ್ತ ರಾಜನಿಗೆ ಯಾವ ವಿಧವಾದ ಮೃಗಬಾಧೆಯುಂಟಾಗವಂತೆ ಖಡ್ಗಹಸ್ತನಾಗಿ ಕುಳಿತು ಜಾಗರೂಕನಾಗಿದ್ದನು. ಒಂದೆರಡು ನಿಮಿಷಗಳಾದಬಳಿಕ ಆ ದೊಡ್ಡ ಮರದಲ್ಲಿದ್ದ ಒಂದು ಪೊಟ್ಟರೆಯಲ್ಲಿ ವಾಸಮಾಡುತ್ತಿದ್ದ ಗಂಡು ಹೆಣ್ಣು ಗೂಬೆಗಳೆರಡು ಪ್ರತಿದಿನದ ರೂಢಿಯಂತೆ ಆಹಾರಸಂಪಾದನಾರ್ಥವಾಗಿ ಹೊರಡಬೇಕೆಂದುದ್ದೇಶಿಸಿ ಆ ಕೋಟರದಿಂದ ಹೊರಟುಬಂದು ಒಂದು ಕೊಂಬೆಯಮೇಲೆ ಕುಳಿತು ಮರದಡಿಯಲ್ಲಿದ್ದ ಇಬ್ಬರು ಮಾನವರನ್ನು ನೋಡಿ ಜನರಹಿತವಾಗಿಯೂ ಅತಿಭಯಂಕರವಾಗಿಯೂ ಇರುವ ಆ ಕಾಡಿಗೆ ಅಕಸ್ಮಾತ್ತಾಗಿ ಅವರು ಬಂದಿರುವುದಕ್ಕಾಗಿ ಆಶ್ಚರ್ಯಪಟ್ಟು ಅವು ಪರಸ್ಪರವಾಗಿ ಸಂಭಾಷಣೆಯನ್ನು ಮಾಡಲಾರಂಭಿಸಿದುವು.

ಹೆಣ್ಣುಗೂಬೆ—ಪ್ರಿಯೆ ! ರಾಜಲಕ್ಷಣಸಂಪನ್ನನಾದ ಯಾವನೋ ಒಬ್ಬನು ದುಷ್ಟಜಂತುಗಳ ಭಯವೊಂದಿನಿಸೂ ಇಲ್ಲದೆ ಇಲ್ಲಿ ನೊರಜುಕಲ್ಲಿನಮೇಲೆ ಮಲಗಿ ನಿದ್ರಿಸುತ್ತಿರುವನು ಕಂಡೆಯಾ ? ಎಷ್ಟರವನಾದರೇನು ? ಕಷ್ಟಕಾಲದಲ್ಲಿ ತತ್ಫಲವನ್ನು ಅನುಭವಿಸದೆ ತಪ್ಪದು ಅಗೊ ! ಮತ್ತೊಬ್ಬನೂ ಇಲ್ಲಿರುವನು ಆದರೆ ತಾನು ನಿದ್ರಿಸದೆ ನಿದ್ರಿಸುತ್ತಿರುವವನ ಪಾಲನಾರ್ಥವಾಗಿ ಕುಳಿತೇ ಇರುವನು.

ಗಂಡುಗೂಬೆ— ನಿನಗೆ ಈತನ ವೃತ್ತಾಂತವು ತಿಳಿಯದೆಂದು ತೋರುವುದು ಇಲ್ಲಿ ಮಲಗಿರುವ ಮಾನವನು ಮಾನಸನಾಥನು ಈತನೀದೇಶಕ್ಕೆ ಒಡೆಯನು ಖಡ್ಗವನ್ನು ಕೈಯಲ್ಲಿ ಹಿಡಿದು ಕುಳಿತಿರುವನಲ್ಲ ! ಆತನು ಆ ರಾಜನ ಸಚಿವನು ಬೇಟೆಗಾಗಿ ಬಂದು ದಾರಿತಪ್ಪಿ ಇಲ್ಲಿಗೆ ಬಂದು ಕತ್ತಲೆಬಿದ್ದುದರಿಂದ ಇಲ್ಲಿಯೇ ನಿಂತರು ರಾಜನು ಬಹು ಧರ್ಮಿಷ್ಠನು ಪ್ರಜಾಪಾಲನತತ್ಪರನು ಆದರೇನು ? ನಾಳೆಗೆ ಈತನ ಆಯುಷ್ಯವು ಮುಗಿದುಹೋಗುವುದು ಪಾಪ ! ಪ್ರಜೆಗಳು ಅನಾಥರಾಗುವರು.

ಹೆಣ್ಣುಗೂಬೆ—(ಗಾಬರಿಯಿಂದ) ಏನು ? ಆಯುಷ್ಯವು ಮುಗಿವುದೇ ಈ ರಾಜನಿಗೆ ? ಅಕಟಾ ! ಏತಕ್ಕೆ ಹೀಗಾಗುವುದು ?

ಗಂಡುಗೂಬೆ—ಏತಕ್ಕೆಂದರೆ ಹುಟ್ಟಿದ ಪ್ರಾಣಿಗೆ ಸಾವು ನಿಶ್ಚಯವಲ್ಲವೆ ? ಈ ರಾಜನಿಗೆ ಇದೊಂದಪಮೃತ್ಯುವು ಈ ಗಂಡವು ತಪ್ಪುವುದು ಕಷ್ಟವು.

ಹೆಣ್ಣುಪಕ್ಷಿ—ಅಯ್ಯೋ ಪಾಪ ! ಇನ್ನೂ ಚಿಕ್ಕವಯಸ್ಸು ಇಂಥವನು ಸಾವುವೆಂದರೆ ನಾನು ನಂಬಲಾರೆನು.

ಗಂಡುಗೂಬೆ—ಸುಮ್ಮನಿರು ನಿನಗೆ ತಿಳಿಯದು ನೀನು ನಂಬದಿದ್ದರೇನು ? ನಂಬಿದರೇನು ಆಗಬೇಕಾದ ಕೆಲಸವು ಆಗದೆ ತಪ್ಪುವುದೆ ? ಹುಚ್ಚಳೆ ! ನಾನು ಅಸತ್ಯವನ್ನು ನುಡಿವೆನೇ ?

ಹೆಣ್ಣು— ನೀನು ಅಸತ್ಯವನ್ನು ನುಡಿವುದಿಲ್ಲವಲ್ಲವೆ ? ಹಾಗಾದರೆ ಈತನು ಹೇಗೆ ಸಾಯುವನು ? ಹೇಳು.

ಗಂಡು—ಕೇಳು ಈತನಿಗೆ ನಾಳೆಯ ಸೂರ್ಯೋದಯಕಾಲದಿಂದ ಸೂರ್ಯಾಸ್ತಮಯದೊಳಗಾಗಿ ಐದು ಗಂಡಗಳು ಸಂಭವಿಸುವುದು ಅವುಗಳಲ್ಲಿ ಯಾವುದೊಂದು ಪುಣ್ಯವಶದಿಂದ ಒಂದು ಗಂಡವು ತಪ್ಪುವುದಾದರೆ ಮತ್ತೊಂದ ಗಂಡವು ಮೃತಿಯನ್ನುಂಟು ಮಾಡುವುದು

ಹೆಣ್ಣು—ಒಂದು ಗಂಡವು ತಪ್ಪುವುದಾದರೆ ಎಂದು ನುಡಿದೆಯಲ್ಲವೆ ? ದೈವಿಕವಾಗಿ ಎಲ್ಲಗಂಡಗಳೂ ತಪ್ಪಿದರೆ,

ಗಂಡು—ತಪ್ಪುವುದು ದುರ್ಲಭವು ಒಂದುವೇಳೆ ತಪ್ಪಿದರೆ ಈತನಿಗೆ ಮುಂದೆ ಒಂದುನೂರು ವರ್ಷಗಳವರೆಗೆ ಸಾವೇ ಇಲ್ಲ ಸಮಸ್ತ ಸುಖಗಳನ್ನೂ ಅನುಭವಿಸುತ್ತಿರುವನು.

ಹೀಗೆಂದು ಸಂಭಾಷಣೆ ಮಾಡುತ್ತಿರುವ ಘೂಕದಂಪತಿಗಳನ್ನು ನೋಡಿ ಆಶ್ಚರ್ಯಯುಕ್ತನಾದ ಆ ಮಂತ್ರಿಯು ತಾನು ಜಂತುಭಾಷಾಕುಶಲನಾದುದರಿಂದ ಆ ಮಾತುಗಳು ತನ್ನ ರಾಜನ ವಿಷಯಕಗಳಾದುವೆಂದರಿತು ಅಯ್ಯೋ ! ರಾಜನಿಗೆ ಐದು ಗಂಡಗಳು ಬರುವುವೇ ? ಅವು ಯಾವುವೋ ? ಹೇಗೆ ಸಂಭವಿಸುವುದೋ ? ಇದನ್ನು ಕುರಿತು ಈ ಪಕ್ಷಿಗಳು ಮಾತನಾಡದೆ ಇರುವುವಲ್ಲ ! ಹೇಗೆ ತಿಳಿಸುಕೊಳ್ಳಲಿ ? ಎಂದು ತಳಮಳಗೊಂಡು ಅವುಗಳೀ ವಿಚಾರವನ್ನು ಕುರಿತು ಮತ್ತೇನು ಮಾತನಾಡುವುವೋ ತಿಳಿದುಕೊಳ್ಳಬೇಕೆಂದು ತವಕದಿಂದಿರು ನೋಡುತ್ತಿದ್ದನು ಆಗ ಆ ಪಕ್ಷಿಗಳು ಮತ್ತೆ ಮಾತನಾಡಲಾರಂಭಿಸಿದುವು.

ಗಂಡುಗೂಬೆ—ಪ್ರಿಯೆ ! ಈ ವಿಷಯವು ನಮಗೇಕೆ ? ತಡವಾಗುವುದು ನಡೆ ಆಹಾರವನ್ನು ಹುಡುಕಿಕೊಂಡು ಹೋಗುವ.

ಹೀಗೆ ಹೇಳುವಷ್ಟರಲ್ಲಿ ಮಂತ್ರಿಯು ಗಾಬರಿಬಿದ್ದು ಅಯ್ಯೋ ಇನ್ನೆಂತು ? ಮುಖ್ಯವಾದ ವಿಷಯವನ್ನು ಪ್ರಸ್ತಾವಿಸದೆ ಇವು ಹೊರಟುಹೋಗುವುವಲ್ಲ ! ನಾನಿನ್ನು ತಿಳಿವಬಗೆ ಹೇಗೆ ? ಏನು ಮಾಡಲಿ ? ಎಂದು ಕಳವಳಿಸುತ್ತಿದ್ದನು ಆಗ

ಹೆಣ್ಣುಗೂಬೆ—(ಹೊರಟುಹೋಗುವುದಕ್ಕೆ ತ್ವರೆಪಡುತ್ತಿದ್ದ ಗಂಡನನ್ನುನೋಡಿ) ಅಷ್ಟವಸರವೇನು? ಹೋದರಾಯಿತು. ರಾಜನಕಥೆಯು ಮುಗಿಯಲಿ ಹೇಳು. ಆತನಿಗೆ ಸಂಭವಿಸುವ ಗಂಡಗಳಾವುವು? ಹೇಗೆ ಸಂಭವಿಸುವುವು? ಹೇಳುವುದಕ್ಕೆ ಮೊದಲಿಟ್ಟಬಳಿಕ ಕೊನೆಯವರೆಗೂ ಹೇಳಿಬಿಡಬೇಕಲ್ಲವೆ? ಆತನ ವಿಚಾರದಲ್ಲಿ ನನಗೆ ಏತಕ್ಕೆಯೋ ದುಃಖವುಂಟಾಗುವುದು. ಆದರೆ ನಾವೇನು ಮಾಡಲಾಪೆವು. ಆ ಗಂಡಗಳ ವಿಚಾರವನ್ನು ಹೇಳು ಬಳಿಕ ಹೊರಡುವ.

ಗಂಡು—ಹೆಂಗಸರ ಸ್ವಭಾವವೇನೋ! ಹಿಡಿದ ಪಟ್ಟನ್ನು ಬಿಡುವುದಿಲ್ಲ. ಅನಾವಶ್ಯಕವಾದ ವಿಷಯಗಳನ್ನು ಕೂಡ ಕೇಳಲಿಚ್ಛಿಸುವರು. ಹೇಳುವೆನು ಕೇಳು.

ಹೀಗೆ ಗಂಡುಗೂಬೆಯು ಹೇಳಲಾರಂಭಿಸಲು ಆಗ ಮಂತ್ರಿಯ ಮನಸ್ಸು ಸ್ವಲ್ಪ ಸಮಾಧಾನಸ್ಥಿತಿಗೆ ಬಂದಿತು. ಶ್ರದ್ಧೆಯಾಗಿ ಮನಸ್ಸನ್ನೂ ಕಿವಿಗಳನ್ನೂ ಆ ಮಾತುಗಳಮೇಲೆ ಸಾವಧಾನವಾಗಿಟ್ಟು ಕೇಳುತ್ತಿದ್ದನು.

ಗಂಡುಗೂಬೆ—ಪ್ರಿಯೆ! ಈ ರಾತ್ರಿ ಕಳೆದು ಬೆಳಗಾಗುತ್ತಲೇ ಇಲ್ಲಿಂದ ಇಬ್ಬರೂ ಹೊರಡುವರು. ಅರಸನು ಮುಂದೆಯೂ ಮಂತ್ರಿಯು ಹಿಂದೆಯೂ ಹೋಗುವರು. ಆಗ ಒಂದಾಲದ ಮರದ ಕೆಳಗೆ ಹೋಗುವ ಸಂಭವವುಂಟಾಗುವುದು. ಆ ಸಮಯದಲ್ಲಿ ಮೊದಲೆ ಶಿಥಿಲವಾಗಿದ್ದ ಅದರ ದೊಡ್ಡ ಕೊಂಬೊಂದು ಮುಂದೆ ಹೋಗುತ್ತಿರುವ ರಾಜನ ತಲೆಯಮೇಲೆ ಬೀಳುವುದು. ಆಗ ಆತನು ಮೃತನಾಗುವನು. ಇದು ಮೊದಲನೆಯ ಗಂಡವು.

ಹೆಣ್ಣುಗೂಬೆ—ಎಲೈ ಪತಿಯೇ! ಅದು ತಪ್ಪುವುದೋ? ಒಂದುವೇಳೆ ತಪ್ಪಿದರೆ,

ಗಂಡು—ಅದೊಂದುವೇಳೆ ತಪ್ಪಿದರೆ ಮುಂದೆ ದಾರಿಹಿಡಿದು ಹೋಗುವಾಗ ರಾಜನು ಒಂದು ಹುತ್ತದ ಪಕ್ಕದಲ್ಲಿ ನಡೆವಾಗ ದಟ್ಟವಾಗಿ ಉದಿರಿದ್ದ ಎಲೆಗಳಮೇಲೆ ಹೆಜ್ಜೆಯನ್ನಿಡುವನು. ಆ ಎಲೆಗಳಲ್ಲಿ ಒಂದು ನಾಗರ ಹಾವು ಮಲಗಿದ್ದು ಅರಸನ ಕಾಲನ್ನು ಕಚ್ಚುವುದು. ಬಹಳ ಭಯಂಕರವಾದ ಅದರ ವಿಷದಿಂದ ಆತನು ಮೃತನಾಗುವನು.

ಹೆಣ್ಣು—ಆಯಿತು, ಇದೇ ಎರಡನೆಯ ಗಂಡವು　ಇದೂ ತಪ್ಪಿದರೆ.

ಗಂಡು—ಆ ಗಂಡವನ್ನು ಪುರುಷಪ್ರಯತ್ನದಿಂದ ತಪ್ಪಿದರೆ, ಕುಮರಿಯನ್ನು ಹತ್ತಿ ತನ್ನ ನಗರಕ್ಕೆ ಹೋಗುವ ಸಮಯದಲ್ಲಿ ಅಡ್ಡವಾಗಿ ಹರಿವ ಒಂದು ಕಾಲುವೆಯನ್ನು ದಾಟಬೇಕಾದ ಸಂಭವವೊದಗಿ ಆತನು ಕುದುರೆಯನ್ನು ಹಾರಿಸುವನು. ಅದರ ಲಂಘನದ ವೇಗದಿಂದ ಅರಸನು ಜಾರಿ ಕುದು

ರೆಯ ಮೇಲನಿಂದ ಕೆಳಗೆ ಬೀಳುವನು. ಆಗ ಅಲ್ಲಿದ್ದ ಒಂದು ಕಲ್ಲಿಗೆ ಆತನ ತಲೆ ತಗುಲುವುದರಿಂದ ತಲೆಯೊಡೆದು ಸಾಯುವನು.

ಹೆಣ್ಣು—ಇದು ಮೂರನೆಯ ಗಂಡವೋ? ಇದೂ ತಪ್ಪಿದರೆ.

ಗಂಡು—ಒಂದುವೇಳೆ ದೈವವಶದಿಂದ ಆ ಗಂಡವು ತಪ್ಪಿದರೆ ಪುರದ್ವಾರವನ್ನು ಪ್ರವೇಶಿಸುವಾಗ ಹಳೆಯದಾಗಿದ್ದ ಆ ದ್ವಾರವು ಪುರೋಗಾಮಿಯಾದ ರಾಜನಮೇಲೆ ಬಿದ್ದು ಮರಣವನ್ನು ಹೊಂದುವನು. ಇದು ನಾಲ್ಕನೆಯ ಗಂಡವು.

ಹೆಣ್ಣು—ನಾಥ! ಭಗವತ್ಸಂಕಲ್ಪವು ಬೇರ್ಪಟ್ಟು ಒಂದುವೇಳೆ ಆವಿಪತ್ತೂ ತಪ್ಪಿಹೋದರೆ ಮುಂದಿನ ಗಂಡವು ಹೇಗೆ ಪರಿಣಮಿಸುವುದು?

ಗಂಡು—ಪ್ರಿಯಳೆ! ಐದನೆಯ ಗಂಡವು ಅಸಂಖ್ಯವಾದುದು. ಇದು ತಪ್ಪುವುದಸಾಧ್ಯವು. ಯಾವುದು ತಪ್ಪಿದರೂ ಒಂದುವೇಳೆ ತಪ್ಪಬಹುದೋ ಏನೋ! ಈಕಡೆಯ ಗಂಡವನ್ನು ಆತನು ತಪ್ಪಿಸಿಕೊಳ್ಳಲಾರನು. ಹೇಗೆಂದರೆ—ಈ ಅರಸನಿಗೆ ಇಬ್ಬರು ಹೆಂಡತಿಯರು ಇರುವರು. ಚಿಕ್ಕವಳಲ್ಲಿ ಈತನಿಗೆ ಅಧಿಕಾನುರಾಗವುಂಟು. ಆದರೆ ಅವಳಿಗೆ ಈತನಲ್ಲಿ ಲೇಶವಾದರೂ ಪ್ರೀತಿಯಿಲ್ಲ. ಹಿಂದೆ ಹೇಳಿದ ನಾಲ್ಕು ಗಂಡಗಳನ್ನೂ ಪುರುಷಪ್ರಯತ್ನದಿಂದಲೋ ದೈವವಶದಿಂದಲೋ ತಪ್ಪಿಸಿಕೊಂಡು ಈತನರಮನೆಯನ್ನು ಸೇರಿದರೆ ಆ ಎರಡನೆಯ ಹೆಂಡತಿ ಈತನನ್ನು ಬರಮಾಡಿಕೊಳ್ಳುವಳು. ಆದರೆ ಅನುರಾಗದಿಂದಲ್ಲ, ವಂಚನೆಯಿಂದ. ಅವಳ ಚರಿತ್ರೆಯನ್ನು ಹೇಳುವೆನು ಕೇಳು. ಇವಳಿಗೆ ಕುದುರೆಯ ಕಾಸ್ತಾರನೊಬ್ಬನು ಮಿಂಡನು. ಈ ನೀಚಳೂ ಆ ನೀಚನೂ ಮೊದಲೇ ತಕ್ಕ ಏರ್ಪಾಟು ಮಾಡಿಕೊಂಡಿದ್ದು ರಾಜನು ಮಲಗಿ ನಿದ್ರಿಸುತ್ತಿದ್ದಾಗ ಕತ್ತಿಯಿಂದ ಕತ್ತರಿಸುವರು. ಈ ಕೆಲಸವನ್ನು ಈತನ ಎರಡನೆಯ ಹೆಂಡತಿಯು ತಾನೆ ತನ್ನ ಕೈಯಿಂದಲೇ ಮಾಡುವಳು. ಇದು ತಪ್ಪದ ಗಂಡವು ನೋಡು.

ಹೆಣ್ಣು—ಈ ಗಂಡವು ತಪ್ಪುವುದಿಲ್ಲವೆ? ದೈವಬಲವಿದ್ದರೆ ಏತಕ್ಕೆ ತಾನೆ ತಪ್ಪಬಾರದು?

ಗಂಡು—ಏನು? ಮೊದಲಿನಂತೆಯೇ ಪ್ರಶ್ನೆಮಾಡುತ್ತಿರುವೆ? ಪ್ರಾಯಿಕವಾಗಿ ಈ ಗಂಡವು ತಪ್ಪಲಾರದು. ಇದು ತಪ್ಪಿದರೆ, ಮುಂದೆ ಒಂದು ನೂರು ಸಂವತ್ಸರಗಳವರೆಗೂ ಜೀವಿಸುವನು ಸಂದೇಹವಿಲ್ಲ. ಆಲಸ್ಯವಾಯಿತು. ಯಾರ ಪಾಡು ಹೇಗಿದ್ದರೇನು? ನಮ್ಮ ಪಾಡು ನಮಗೆ ತಪ್ಪುವದೇ? ಇನ್ನಾಹಾರವನ್ನು ಹುಡುಕಿಕೊಂಡು ಹೋಗೋಣ. (ಎಂದು ಎರಡೂ ಹೊರಟುಹೋದುವು.)

ಆ ದಿವಾಭೀತ ದಂಪತಿಗಳು ಹೊರಟುಹೋದ ಬಳಿಕ ಆ ಅರಸನಿಗೆ ಮುಂದೆ ಸಂಭವಿಸುವ ಪ್ರಾಣೋಪದ್ರವಗಳನ್ನೂ ಅವುಗಳನ್ನು ತಪ್ಪಿಸುವುದಕ್ಕಾಗಿ ತಾನು ಮಾಡಬೇಕಾದ ಕೆಲಸಗಳನ್ನು ಕುರಿತು ಆಲೋಚಿಸುತ್ತ, ಆಹ! ಜಂತುಭಾಷೆಯು ನನಗೆ ತಿಳಿದಿರುವುದರಿಂದಲ್ಲವೆ ವಿಹಂಗಮಿಥುನ ಪ್ರಸಂಗದಿಂದ ಅರಸನಿಗೆ ಮುಂದೆ ಪ್ರಾಪ್ತವಾಗುವ ಗಂಡಗಳನ್ನು ನಾನು ತಿಳಿದುಕೊಂಡೆನೆಂದು ಸಂತೋಷಿಸುತ್ತ ಹೇಗಾದರೂ ಸತ್ಪುರುಷನಾದ ಈ ರಾಜನ ಗಂಡಗಳನ್ನು ತಪ್ಪಿಸೆಂದು ಸರ್ವಶಕ್ತನೂ ಸರ್ವಜ್ಞನೂ ಅಘಟಿತಘಟನಾಪಟಿಷ್ಠನೂ ಆನಂದಮಯನೂ ಆದ ಪರಮಾತ್ಮನನ್ನು ಪ್ರಾರ್ಥಿಸುತ್ತ ಜಾಗರೂಕನಾಗಿ ಆ ರಾತ್ರಿಯನ್ನು ಕಳೆದನು. ಅರುಣೋದಯವಾಯಿತು ರಾಜನೆಚ್ಚೆತ್ತು ಸಚಿವನತಂಸ! ಬೇಟೆಯಾಡಿದುದರಿಂದುಂಟಾದ ಬಳಲ್ಕೆಯಿಂದ ಮೈಮರೆತು ನಿದ್ರಿಸಿದೆನು. ನೀನು ನಿದ್ರಿಸಿದಂತೆ ತೋರಲಿಲ್ಲ. ಇನ್ನೇಳು, ಹೋಗೋಣ. ನಮ್ಮ ಪರಿವಾರವನ್ನು ಕೂಡಿ ನಗರಕ್ಕೆ ಬೇಗನೆ ತೆರಳಬೇಕಲ್ಲವೆ? ಎಂದು ನುಡಿದು ಸಿದ್ಧನಾದ ಮಂತ್ರಿಯೊಡನೆ ಪ್ರಯಾಣಮಾಡಿ ಇಬ್ಬರೂ ಅಶ್ವಾರೂಢರಾಗಿ ಹೊರಟರು. ಮಂತ್ರಿಯು ಹಿಂದಿನರಾತ್ರಿ ನಡೆದ ವರ್ತಮಾನವನ್ನು ರಾಜನಿಗೆ ಹೇಳಲಿಲ್ಲ.

ಅವರಾಸ್ಥಲವನ್ನು ಬಿಟ್ಟು ಸ್ವಲ್ಪ ದೂರದವರೆಗೆ ಹೋಗುವಷ್ಟರಲ್ಲಿ ಘೂಕರಾಜನು ಹೇಳಿದಂತೆಯೇ ಒಂದು ವಟವೃಕ್ಷದ ಕೆಳಗೆ ಹೋಗಬೇಕಾಗುವಂತೆ ತಟಸ್ಥಿಸಿತು. ದಾರಿಗಡ್ಡವಾಗಿ ಮೇಲ್ಗಡೆಯಲ್ಲಿ ಒಂದು ದೊಡ್ಡ ಶಾಖೆಯು ಇದ್ದು ಅದರಡಿಯಲ್ಲಿಯೇ ಹೋಗಬೇಕಾಗಿದ್ದಿತು. ರಾಜನು ಮುಂದೆಯೂ ಮಂತ್ರಿಯು ಹಿಂದೆಯೂ ಹೋಗುತ್ತಿದ್ದರು ಆಗ ಮಂತ್ರಿಯು ನಿಲ್ಲು! ನಿಲ್ಲು!! ಮಹಾರಾಜಾ! ಹೋಗದಿರು! ಹೋಗದಿರು!! ಎಂದು ಹೇಳುತ್ತ ತಾನು ಮುಂಬರಿದು ಕುದುರೆಯ ಕಡಿವಾಣವನ್ನು ಹಿಡಿದು ನಿಲ್ಲಿಸಿದನು ಆತನು ಹಾಗೆ ನಿಲ್ಲಿಸುವುದಕ್ಕೆ ಕಾರಣವನ್ನರಿಯದೆ ರಾಜಾಗ್ರಣಿಯು, ಏನು? ಏಕೆ ನನ್ನ ನಡಿಗೆಯನ್ನು ತಡೆದೆ? ಎಂದು ಕೇಳುತ್ತಿರುವಷ್ಟರಲ್ಲಿ ಆ ವಟಶಾಖೆಯು ಫಳಫಳನೆ ಮುರಿದು ದಾರಿಗಡ್ಡಲಾಗಿ ಬಿದ್ದಿತು. ರಾಜನು ಬೆಚ್ಚಿಬಿದ್ದನು. ಮಂತ್ರಿಯು ತನ್ನನ್ನು ನಿಲ್ಲಿಸದಿದ್ದರೆ ಮುರಿದ ಕೊಂಬೆಯು ನನ್ನ ತಲೆಯ ಮೇಲೆ ಬೀಳುತ್ತಿದ್ದಿತಲ್ಲ! ನಾನುಳಿಯುತ್ತಿದ್ದನೆ? ಎಂದು ಹಲುಬುತ್ತ, ಆತನದನ್ನರಿತು ನಿಲ್ಲಿಸಿದುದಕ್ಕಾಗಿ ಆಶ್ಚರ್ಯಪಡುತ್ತ ಅಯ್ಯಾ ಮಂತ್ರಿಪುಂಗವ! ನನ್ನ ಪ್ರಾಣಗಳನ್ನು ಕಾಪಾಡಿದೆ. ಮಂತ್ರಿಯೆಂದರೆ ನೀನೇ ಎಂದಾತನನ್ನು ಬಹಳವಾಗಿ ಶ್ಲಾಘಿಸಿದನು.

ಅಲ್ಲಿಂದ ಮತ್ತೆ ಸ್ವಲ್ಪ ದೂರವು ನಡೆದರು ದಾರಿಯಲ್ಲಿ ಒಂದು ಹುತ್ತು ಕಾಣಿಸಿತು ಅಲ್ಲಿ ಮರಗಳು ಒತ್ತಾಗಿದ್ದುದರಿಂದ ಕುದುರೆಯನ್ನೇರಿ ಹೋಗುವು

ದಕ್ಕೆ ಸಾಧ್ಯವಾಗದೆ ಇಬ್ಬರೂ ಕುದುರೆಗಳಿಂದಿಳಿದು ಅವುಗಳ ಕಡಿವಾಣಗಳನ್ನು ಹಿಡಿದುಕೊಂಡು ನಡೆದೇಹೋಗಬೇಕಾಗಿ ಬಂತು ಆಗ ಮಂತ್ರಿಯು ರಾಜನೊಡನೆ ಪ್ರಭುವೇ ! ಈ ಹುತ್ತಿನಿಂದ ಆಕಡೆಗೆ ಮೂವತ್ತುಬಾರಿನಷ್ಟು ದೂರದವರೆಗೆ ಅತಿತ್ವರೆಯಾಗಿ ಅಡಿಗಳನ್ನಿಡುತ್ತ ಹೋಗಬೇಕೆಂದು ಬೇಡುವೆನು ಕಾರಣವು ಆಮೇಲೆ ನಿಮಗೆ ತನಗೆತಾನೆ ಮನದಟ್ಟಾಗುವುದು ಎಂದು ನುಡಿದು ಕತ್ತಿಯನ್ನು ಒರೆಯಿಂದುಗಿದು ಬಹು ಜಾಗರೂಕನಾಗಿ ರಾಜನ ಪಾದಗಳಮೇಲೆ ದೃಷ್ಟಿಯನ್ನು ನಿಲ್ಲಿಸಿ ಆತನಬಳಿಬಡಿದು ನಡೆದನು. ಆಗ ಆ ವಲ್ಮೀಕದಬಳಿಯಲ್ಲಿ ಉದಿರಿರುವ ಹಣ್ಣೆಲೆಗಳ ತರಗಿನಿಂದ ಒಂದು ಕ್ರೂರವಾದ ಸರ್ಪವು ಬುಸ್ಸನೆ ಶಬ್ದಮಾಡುತ್ತ ಎದ್ದು ರಾಜನನ್ನು ಬೆನ್ನಟ್ಟಲು ಹಿಂಬಾಲಿಸಿ ಬರುತ್ತಿದ್ದ ಮಂತ್ರಿಯು ಒಂದೇಏಟಿಗೆ ಅದನ್ನು ತನ್ನ ಕತ್ತಿಯಿಂದ ಕತ್ತರಿಸಿಕೊಂಡು ರಾಜನ ಪ್ರಾಣಗಳನ್ನು ಕಾಪಾಡಿದನು. ಅಯ್ಯಾ ! ತರಗೆಲೆಗಳ ಕೆಳಗೆ ಮಲಗಿದ್ದ ಹಾವಿನಮೇಲೆ ನಿಮ್ಮ ಪಾದಗಳು ಬಿದ್ದು ಅದಕ್ಕೆ ನೋವಾದುದರಿಂದ ನಿಮ್ಮನ್ನು ಕಚ್ಚುವುದಕ್ಕೆ ನಿಮ್ಮನ್ನಟ್ಟಿಕೊಂಡು ಬಂದಿತು ಅದಕ್ಕೆ ಆಯುಸ್ಸು ತೀರಿದ್ದಿತು ಸತ್ತಿತು ಎಂದನು ತನಗೆ ಸಂಭವಿಸಬಹುದಾಗಿದ್ದ ಎರಡು ಅಪಮೃತ್ಯುಗಳು ಮಂತ್ರಿಯುದೆಸೆಯಿಂದ ತಪ್ಪಿತೆಂದು ಸಂತೋಷಿಸಿ ಆತನ ಜಾಗರೂಕತೆಗೂ ರಾಜಭಕ್ತಿಗೂ ಮಹಿಮೆಗೂ ಮೆಚ್ಚಿ ತಾಲಧ್ವಜನು ಮಂತ್ರಿಯನ್ನು ಬಹಳವಾಗಿ ಶ್ಲಾಘಿಸಿದನು.

ಬಳಿಕ ಅವರು ಹೋಗಿಹೋಗಿ ತಮ್ಮ ಪರಿವಾರದೊಡನೆ ಸೇರಿಕೊಂಡು ಪಟ್ಟಣದಕಡೆ ಹೊರಟರು ಆಗಲೂ ರಾಯನನ್ನು ಎಡೆಬಿಡದೆ ಮಂತ್ರಿಯು ಹಿಂದೆಯೇ ಹೋಗುತ್ತಿದ್ದನು ಪಕ್ಷಿಯು ಹೇಳಿದ್ದಂತೆ ಒಂದು ಕಾಲುವೆಯು ಅಡ್ಡವಾಗಿಬಂತು ರಾಯನು ಅದನ್ನು ಕುದುರೆಯಿಂದ ದಾಟುವುದಕ್ಕೆ ಪ್ರಯತ್ನಿಸಿದನು ಮಂತ್ರಿಯು ಸ್ವಾಮಿ ! ಸ್ವಲ್ಪಹೊತ್ತು ಈ ಕುದುರೆಯನ್ನು ನಿಲ್ಲಿಸು ಎಂದು ಹೇಳಿ ಕೆಲವರಾಳುಗಳೊಡನೆ ತಾನು ಮುಂದಾಗಿ ಹೊರಟು ಆ ಕಡೆಯು ದಡಕ್ಕೆ ಹೋಗಿ ಅಲ್ಲಿದ್ದ ಒಂದೆರಡು ಬಂಡೆಗಳಮೇಲೆ ಮೃದುವಾದ ಮತ್ತು ಒತ್ತಾದ ಮೆತ್ತೆಗಳನ್ನು ಹಾಸುವಂತೆ ಆಜ್ಞೆಮಾಡಿದನು ಅವರು ಮೂರುನಾಲ್ಕು ಮೆತ್ತೆಗಳನ್ನು ಆ ಬಂಡೆಗಳಮೇಲೆ ಹಾಸಿದರು ಆತನು ಆರೀತಿಯಾಗಿ ಮಾಡಿದ ಕಾರಣವನ್ನು ರಾಜನರಿಯಲಾರದೆ ಹೋದನು ಬಳಿಕ ತನ್ನ ಕುದುರೆಯನ್ನು ಹಾರಿಸಿ ರಾಯನಾಕಾಲುವೆಯನ್ನು ದಾಟಿದನು ಆಗ ರಾಜನು ಆ ಕುದುರೆಯಿಂದ ಜಾರಿ ಪುಟನೆಗೆದು ಪಕ್ಕದ ಬಂಡೆಯಮೇಲೆ ಹಾಸಿದ್ದ ಮೆತ್ತೆಗಳಮೇಲೆ ಧೊಪ್ಪನೆ ಬಿದ್ದನು. ರಾಜನಿಗೆ ಸ್ವಲ್ಪವಾದರೂ ನೋವಾಗಲಿಲ್ಲ. ಮಂತ್ರಿಯು ಆ ಯುಕ್ತಿಯನ್ನು ಮಾಡದಿದ್ದರೆ ರಾಜನ ತಲೆಯು ಒಡೆಯುತ್ತಿದ್ದಿತು. ಆಗ

ಮೂರುಸಾರಿ ತನ್ನ ಗಂಡಗಳನ್ನು ತಪ್ಪಿಸಿದ ಮಂತ್ರಿಯ ಬುದ್ಧಿವಿಶೇಷವನ್ನು ಕೊಂಡಾಡಿದನು.

ಅಲ್ಲಿಂದ ಹೊರಟು ಪಟ್ಟಣದ ಬಳಿಗೆ ಹೋಗಿ ಪುರದ್ವಾರವನ್ನು ಪ್ರವೇಶಿಸಬೇಕೆಂದಿರುವಷ್ಟರಲ್ಲಿ ರಾಜಪುಂಗವ! ನಿಲ್ಲು! ನಿಲ್ಲು! ಒಂದೆರಡು ನಿಮಿಷಗಳು. ಒಂದು ವಿಪತ್ತು ಸಂಭವಿಸಲಿರುವುದು. ಅದನ್ನು ತಪ್ಪಿಸಿಕೊಳ್ಳಬೇಕು ಎಂದು ನುಡಿದನು. ಆತನ ಮಾತುಗಳಲ್ಲಿ ಅಧಿಕವಾದ ಆದರವುಳ್ಳ ಆ ರಾಯನು ಕೂಡಲೆ ನಿಂತನು. ಬಳಿಕ ಒಂದೆರಡು ನಿಮಿಷಗಳಲ್ಲಿ ಮಹಾದ್ವಾರವು ಗೋಪುರದೊಡನೆ ಧೊಪ್ಪನೆ ಕೆಳಕ್ಕೆ ಬಿದ್ದಿತು. ತಾಳಧ್ವಜರಾಜನು ಆಶ್ಚರ್ಯಪಟ್ಟು ಈ ವಿಷಯಗಳೆಲ್ಲವೂ ಮಂತ್ರಿಗೆ ಹೇಗೆ ತಿಳಿದಿರುವುವೆಂಬುವನ್ನರಿಯದೆ ತನ್ನ ಪಾಲಿನ ದೇವರೇ ಈತನೆಂದು ಭಾವಿಸಿ ಪುರಪ್ರವೇಶವನ್ನು ಮಾಡಿ ಅರಮನೆಯನ್ನು ಪ್ರವೇಶಿಸಬೇಕೆಂದಿರುವ ಸಮಯದಲ್ಲಿ ಆತನಿಗೆ ಆ ಮಂತ್ರಿಯು ಕೆಲವು ರಹಸ್ಯ ವಿಷಯಗಳನ್ನು ಇತರರಿಗೆ ತಿಳಿಯದಿರುವಂತೆ ಹೇಳಿ, ಅವಕ್ಕೆ ತಕ್ಕ ಏರ್ಪಾಡುಗಳನ್ನು ಮಾಡುವುದಕ್ಕಾಗಿ ರಾಜನ ಅನುಜ್ಞೆಯನ್ನು ಪಡೆದು ತೆರಳಿದನು.

ಆದಿನದ ರಾತ್ರಿ ರಾಜನು ಚಿಕ್ಕಹೆಂಡತಿಯ ಮನೆಗೆ ಹೋಗಲು ಅವಳು ಯಾವುದೋ ಒಂದು ರೋಗದಿಂದ ಪೀಡಿತಳಾಗಿರುವಂತೆ ತೋರ್ಪಡಿಸಿಕೊಂಡು ರಾಜನನ್ನು ಸೇರದೆ ಆತನನ್ನು ಕೊನೆಗಾಣಿಸುವುದಕ್ಕಾಗಿ ಆಲೋಚಿಸಿದ್ದಳು. ಮಂತ್ರಿಶ್ರೇಷ್ಠನ ನಿರ್ಣಯದಂತೆ ತನ್ನಂತೆ ನಿರ್ಮಿಸಿದ್ದ ಮತ್ತು ಸಜೀವದಂತೆ ಕಾಣಲ್ಪಡುತ್ತಿದ್ದ ಒಂದು ಪ್ರತಿಮೆಯನ್ನು ತನ್ನ ಹೆಂಡತಿಗೆ ತಿಳಿಯದಂತೆ ತನ್ನ ಮಂಚದಮೇಲೆ ಪೂರ್ವಭಾವಿಯಾಗಿಯೇ ಮಲಗಿಸಿ ಒಂದು ಶಾಲನ್ನು ಹೊದೆಯಿಸಿ ಆ ರಾಜನು ಖಡ್ಗಹಸ್ತನಾಗಿ ಮಂಚದ ಕೆಳಗಡೆ ಅವಿತುಕೊಂಡಿದ್ದನು. ಶಯ್ಯಾಗೃಹವು ಸಣ್ಣದೀಪದಿಂದ ಪ್ರಕಾಶಿಸುತ್ತಿದ್ದಿತು.

ಚಿಕ್ಕಹೆಂಡತಿಯು ಬಂದು ಹಾಸಿಗೆಯಮೇಲೆ ಹೊದಿಕೆಯೊಳಗಿದ್ದ ಪ್ರತಿಮೆಯನ್ನು ರಾಜನನ್ನಾಗಿ ಭಾವಿಸಿ, ತಾನು ಮಾಡಬೆಣೆಸಿರುವುದು ಕ್ರೂರಕೃತ್ಯವಾದುದರಿಂದ ಯಾರಾದರೂ ನೋಡಿಯಾರೆಂಬ ಗಾಬರಿಯಿಂದ ಆ ಕಿರುಬೆಳಕಿನಲ್ಲಿ ಚೆನ್ನಾಗಿ ಪರಿಶೀಲಿಸಿ ನೋಡದೆ, ಎಲಾ! ರಾಜಾಧಮಾ! ನನ್ನಮೇಲೆ ನಿನಗೆಷ್ಟು ಮೋಹವುಂಟಾದರೇನು? ನನ್ನಲ್ಲಿ ನಿನ್ನಮೇಲೆ ಎಳ್ಳಷ್ಟಾದರೂ ಮೋಹವಿಲ್ಲ. ನಿನ್ನೊಡನೆ ಸಂಸಾರವನ್ನು ಮಾಡುತ್ತ ದುಃಖವನ್ನನುಭವಿಸುವುವಕ್ಕಿಂತಲೂ ನಿನ್ನನ್ನು ಕೊಂದು ನನ್ನ ಪ್ರಿಯನನ್ನು ಕೂಡಿ ಸುಖಿಸುವೆನು ಎಂದು ಮೆಲ್ಲನೆ ಹೇಳಿ ತನ್ನ ಕೈಯ ಕತ್ತಿಯನ್ನು ಹಿರಿದು ಮುಸುಕನ್ನು ತೆಗೆದು ತನ್ನ ಗಂಡನನ್ನು ಹೋಲುವ ಆ ಪ್ರತಿಮೆಯನ್ನು ಒಂದೇಪೆಟ್ಟಿಗೆ ಕತ್ತರಿಸಿ, ಆಗಲಾವರೂ ಪ್ರತಿಮೆಯೆಂದು ತಿಳಿದುಕೊಳ್ಳಲಾರದೆ ನಿಜವಾಗಿಯೂ ರಾಜನೇ ಸತ್ತಿರುವನೆಂದು

ಭಾವಿಸಿ ತನ್ನಮೇಲೆ ಅಪರಾಧವಾರೋಪಿತವಾದೀತೆಂದು ಭಾವಿಸಿ ತಟ್ಟನೆ ಹೊರಕ್ಕೆ ಓಡಿಬಂದು ಅಯ್ಯೋ! ಮಲಗಿ ನಿದ್ರಿಸುತ್ತಿರುವಾಗ ಯಾವಕ್ರೂರನೋ ಯಾವ ಪಾಪಾತ್ಮನೋ ಬಂದು ಧರ್ಮಾತ್ಮನಾದ ನನ್ನ ಪ್ರಾಣನಾಥನನ್ನು ಕೊಂದು ಓಡಿಯೇ ಹೋಗಿರುವನು! ಅಕಟಾ! ಇನ್ನೇನು ಮಾಡಲಿ? ಯಾವನೋ ಕೊಂದನೆಂದೇತಕ್ಕೆ ಹೇಳಬೇಕು ? ರಾಜ್ಯವನ್ನಪಹರಿಸಬೇಕೆಂಬ ಆಸೆಯಿಂದ ಮಂತ್ರಿಯೇ ಈ ಹಿಂಸಾಕಾರ್ಯವನ್ನು ನಡೆಯಿಸಿರಬೇಕು. ಯಾರಪ್ಪಾ! ಬನ್ನಿರಪ್ಪಾ! ಎಂದು ಗಟ್ಟಿಯಾಗಿ ಅರಚಿದಳು. ಅರಮನೆಯು ಪ್ರತಿಧ್ವನಿ ಕೊಡುವಂತೆ ರೋದಿಸಿದಳು. ಆ ಧ್ವನಿಯನ್ನು ಕೇಳಿ ಅರಮನೆಯಲ್ಲಿ ಊಳಿಗದವರು ಮೊದಲಾಗಿ ಎಲ್ಲರೂ ಎದ್ದುಬಂದು ತಲೆಯ ಕೂದಲನ್ನು ಕೆದರಿಕೊಂಡಿರು ಎದೆಯನ್ನು ಬಡಿದುಕೊಳ್ಳುತ್ತಿರುವ ಚಿಕ್ಕರಾಣಿಯು ಹೇಳಿದ ಮಾತುಗಳನ್ನು ಕೇಳಿ ಭಯಭ್ರಾಂತರಾಗಿ ಒಳಕ್ಕೆಹೋಗಿ ನೋಡದೆಯೇ ತಾವೂ ಅಳುತ್ತ ಅವರವರಿಗೆ ತೋರಿದಹಾಗೆಲ್ಲ ರಾಜಸಂತಹನನ್ನು ಕುರಿತು ಮಾತನಾಡಲಾರಂಭಿಸಿದರು ಅಷ್ಟರಲ್ಲಿ ಮಂಚದಕೆಳಗೆ ಅವಿತುಕೊಂಡಿದ್ದ ರಾಜನು ಹೆಂಡತಿ ಹೇಳಿದ ಮಾತುಗಳನ್ನು ಕಿವಿಯಾರೆ ಕೇಳಿ, ಮಾಡಿದ ಕೆಲಸವನ್ನು ಕಣ್ಣಾರೆ ನೋಡಿ, ಆ ನೀಚಳು ಮಾಡುತ್ತಿರುವ ಬಗೆಬಗೆಯ ಚೇಷ್ಟೆಗಳನ್ನು ತಿಳಿದುಕೊಂಡು, ತನ್ನ ಮಂತ್ರಿಯ ಬುದ್ಧಿ ವೈಭವವನ್ನು ಮೆಚ್ಚಿಕೊಂಡು ಒಂದು ದಿನದಲ್ಲಿ ಐದುಸಾರಿ ತನ್ನ ಮರಣವಾತನಿಂದ ತಪ್ಪಿಹೋದಬಗ್ಗೆ ಆತನನ್ನು ಬಹಳವಾಗಿ ಪ್ರಶಂಸಿಸಿ, ಕಡೆಗಾಲಾಗದ ಆ ಹೆಂಡತಿಯ ಮೇಲಣ ಕೋಪದಿಂದ ಖಡ್ಗಹಸ್ತನಾಗಿ ತಟ್ಟನೆ ಬಂದು ಆ ನೀಚಳ ಮುಂದೆ ನಿಂತನು. ಕೈಯಾರೆ ತಾನು ಯಾವನನ್ನು ಕೊಂದನಂತೆ ತಿಳಿದು ಸಂತಸಗೊಂಡಿದ್ದಳೋ ಆತನು ಕ್ರೂರ ಕರವಾಲ ಧಾರಿಯಾಗಿ ತನ್ನ ಮುಂದೆ ನಿಂತುದಕ್ಕೆ ಅವಳು ಅತ್ಯಾಶ್ಚರ್ಯಪಟ್ಟು ಬಹಳವಾಗಿ ಭಯಪಟ್ಟಳು ಒಡನೆಯೇ ತನ್ನಿಂದ ಕೊಲ್ಲಲ್ಪಟ್ಟ ರಾಜನು ಪಿಶಾಚವಾಗಿ ತನ್ನನ್ನು ವೇಧಿಸುವುದಕ್ಕೆ ಬಂದಿರುವನೆಂದು ಬಗೆದು, ಅವಳು ಗಟ್ಟಿಯಾಗಿ ಕಿರಚಿಕೊಂಡು ಕೆಳಕ್ಕೆ ಬಿದ್ದು ಮೂರ್ಛಿತಳಾದಳು. ಎಲ್ಲರೂ ಆಶ್ಚರ್ಯಚಕಿತ ಚಿತ್ತರಾಗಿ ಮಾತನಾಡಲು ಕೂಡ ಶಕ್ತರಾಗದೆ ಸ್ತಂಭಗಳಂತೆ ನಿಶ್ಚೇಷ್ಟಿತರಾದರು. ತಾಲಧ್ವಜನಾ ರಾತ್ರಿವೇಳೆಯಲ್ಲಿಯೇ ಓಲಗವನ್ನೇರ್ಪಡಿಸಿ ಮಂತ್ರಿ ಮೊದಲಾದವರನ್ನು ಬರಿಸಿ ಸಭೆಗೆ ತನ್ನ ಚಿಕ್ಕಹೆಂಡತಿಯನ್ನು ಕಟ್ಟಿ ಎಳೆದುಕೊಂಡು ಬರುವಂತೆ ತನ್ನ ಸೇವಕರಿಗೆ ಆಜ್ಞಾಪಿಸಿದನು. ಜನಾರ್ದನಶರ್ಮನೊಬ್ಬನಿಗೆ ಹೊರತು ಉಳಿದವರಿಗೆ ಇಂದ್ರಜಾಲದಂತಹ ಆ ನಟನೆಯು ತಿಳಿಯದಿದ್ದುದರಿಂದ ಚಿತ್ರಾರ್ಪಿತ ಪ್ರತಿಮೆಗಳಂತೆ ಅವರು ಸ್ತಬ್ಧರಾಗಿದ್ದರು. ಸೇವಕರು ಹೋಗಿ ಮೂರ್ಛಿತಳಾಗಿದ್ದ ಆ ರಾಜನ ಕಿರಿಯ ಹೆಂಡತಿಯನ್ನು ಹಿಂಗಟ್ಟುಮುರಿಯಕಟ್ಟಿ ತಿಳಿವಳಿಕೆ ಬಾರ

ದಿರುವುದಕ್ಕೆ ಮೊದಲೇ ಸಭಾಸ್ಥಾನಕ್ಕೆ ತಂದು ರಾಜನ ಇದಿರಿನಲ್ಲಿ ಕೆಡವಿದರು. ಅಷ್ಟರಲ್ಲಿ ಅವಳು ಎಚ್ಚರನನ್ನು ಹೊಂದಿದಳು. ತಾನು ಸಭೆಯಲ್ಲಿ ಪಾಶಬದ್ಧಳಾಗಿರುವುದನ್ನು ನೋಡಿ ಭ್ರಾಂತಿಯಿಂದ ಕಣ್ಣುಬಿಡುತ್ತಿದ್ದಳು.

ರಾಯನು ನಡೆದ ವೃತ್ತಾಂತವನ್ನೆಲ್ಲ ಮೊದಲಿಂದ ಕೊನೆಯವರೆಗೂ ಸಭ್ಯರಿಗೆ ಹೇಳಿ ಸಭ್ಯರೇ ! ಈ ಮಂತ್ರಿಶ್ರೇಷ್ಠನು ನನಗೆ ಪ್ರಾಣದಾತನಾಗಿರುವನು ಈತನಿಗೆ ಹೇಗೆ ತಿಳಿಯಿತೋ ಏನೋ ಗೊತ್ತಿಲ್ಲ ನಿನ್ನೆಯ ದಿನದಲ್ಲಿ ನನಗೆ ಸಂಭವಿಸಿದ ಐದು ಗಂಡಗಳು ಈತನಿಂದ ಪರಿಹಾರವಾದುವು ಈತನು ಎಚ್ಚರಿಕೆಯನ್ನು ಕೊಡದಿದ್ದಲ್ಲಿ ನಾನು ಮೊದಲಿನ ಗಂಡಕ್ಕೆಯೇ ಬಲಿಯಾಗುತ್ತಿದ್ದೆನು ಧರ್ಮಶಾಸ್ತ್ರದಲ್ಲಿ ಹೇಳಿರುವಂತೆ ಈತನು ನನ್ನ ತಂದೆ ಎಂದು ನುಡಿದು ಆತನನ್ನು ಬಿಗಿದಪ್ಪಿ ಕೈಮುಗಿದು ಸಭೆಯಕಡೆ ತಿರುಗಿ ಮಂತ್ರಿ ಹೇಳಿದಪ್ರಕಾರವಾಗಿ ಅಂತಃಪುರದಲ್ಲಿ ತಾನು ಮಾಡಿದ ಕೆಲಸವನ್ನೂ ತಾನು ವ್ಯಗರೆದಿದ್ದ ವಿಧಾನವನ್ನೂ ದುಷ್ಟಳಾದ ಕಿರಿಯ ಹೆಂಡತಿ ಬಂದು ಮೆಲ್ಲಗೆ ನುಡಿದ ಮಾತುಗಳನ್ನೂ ಮಾಡಿದ ಕ್ರೂರಕರ್ಮವನ್ನೂ ಬಳಿಕ ನಡೆಯಿಸಿದ ಚರ್ಯೆಯನ್ನೂ ಹೇಳಲು ಸಭಾಸದರು ಅತ್ಯಾಶ್ಚರ್ಯವನ್ನು ತಾಳಿದರು ಭಯದಿಂದ ನಡುಗಿದರು ಕಡೆಗೆ ರಾಜನು ಬದುಕಿದಬಗ್ಗೆ ಸಂತೋಷಿಸಿದರು ರಾಜನಮಂತ್ರಿಯನ್ನು ಕೊಂಡಾಡಿದರು ವಿಷಯಪಂಚಕವು ಹೇಗೆ ತಿಳಿಯಿತೋ ದಯವಿಟ್ಟು ಹೇಳಬೇಕೆಂದು ಪ್ರಾರ್ಥಿಸಿದರು.

ಬಳಿಕ ಮಂತ್ರಿಯು ತನಗೆ ಜಂತುಭಾಷೆಯು ತಿಳಿದ ವಿಜ್ಞಾನವನ್ನೂ ಅದರ ಪ್ರಭಾವದಿಂದ ಅಡವಿಯಲ್ಲಿ ರಾಜನು ನಿದ್ರಿಸುತ್ತಿರುವಾಗ ತಾನು ಎಚ್ಚರದಿಂದಿದ್ದು ದಿವಾಂಧ ದಂಪತಿಗಳು ಪರಸ್ಪರವಾಗಿ ಮಾತಾಡಿದ ಮಾತುಗಳ ವಿವರವನ್ನು ತಿಳಿದುಕೊಂಡುದನ್ನೂ ರಾಜನಿಗೆ ಆಗಾಗ್ಗೆ ಒದಗಿದ ಗಂಡಗಳನ್ನು ತಪ್ಪಿಸಿದರೀತಿಯನ್ನೂ ಅಂತಃಪುರದಲ್ಲಿ ನಡೆಯಿಸಬೇಕಾದ ಕೃತ್ಯಗಳನ್ನು ತಾನು ರಾಜನಿಗೆ ಬೋಧಿಸಿ ಕಳುಹಿಸಿದಬಗೆಯನ್ನೂ ಹೇಳಲು ಸಭಾಸದರೆಲ್ಲರೂ ಕೇಳಿ ಸಂತೋಷಪಟ್ಟು ಆತನ ಪ್ರಭುಭಕ್ತಿಯನ್ನು ಬಹಳವಾಗಿ ಪ್ರಶಂಸಿಸಿದರು.

ಆಮೇಲೆ ಅತ್ಯಾಗ್ರಹಪರವಶನಾಗಿದ್ದ ರಾಜನು ಸೇವಕರನ್ನು ಕರೆದು ಎಲೈ ಭೃತ್ಯರುಗಳಿರಾ ! ಈ ದುಷ್ಟೆಯನ್ನು ಭ್ರಷ್ಟೆಯನ್ನು ಪರಮಪಾಪಿಷ್ಠೆಯನ್ನು ಚಿತ್ರವಧೆಗೆಯ್ದು ಇವಳ ಮಾಂಸವನ್ನು ನಾಯಿಗಳಿಗೆ ಹಾಕಿ ಎಂದು ಆಜ್ಞಾಪಿಸಿದನು ಅವರು ಸ್ವಲ್ಪವಾದರೂ ದಯೆಯನ್ನು ತೋರಿಸದೆ ಅರಸನ ಆಜ್ಞೆಯನ್ನು ನೆರವೇರಿಸಿದರು ರಾಜನು ಜನಾರ್ದನಶರ್ಮನಿಗೆ ತನ್ನ ದೇಶದಲ್ಲಿ ನೂರೆಂಟು ಗ್ರಾಮುಗಳನ್ನು ಕಟ್ಟುವುದಕ್ಕೆ ತಕ್ಕಷ್ಟು ಪ್ರದೇಶವನ್ನು ಕಟ್ಟಿಸುವುದಕ್ಕೆ ಸಾಕಾಗುವಷ್ಟು ದ್ರವ್ಯವನ್ನೂ ಕೊಟ್ಟು ಮಂತ್ರಿವರ್ಯ ! ಜನಾರ್ದನಾ

ಚಾರ್ಯ ! ನೀನು ನನಗೆ ಪ್ರಾಣದಾನವನ್ನು ಮಾಡಿದುದಕ್ಕಾಗಿ ಯಾವ ಪ್ರತ್ಯುಪಕಾರವನ್ನು ಮಾಡಿದರೂ ಸಾಲದು ನಾನು ನಿನಗೆ ಕೊಟ್ಟಿರುವ ಈ ಅಲ್ಪವಾದ ಭೂಮಿಯನ್ನೂ ದ್ರವ್ಯವನ್ನೂ ದಯಮಾಡಿ ಪರಿಗ್ರಹಿಸಿ ನನ್ನನ್ನು ಕೃತ್ಯಕೃತ್ಯನನ್ನಾಗಿಸಬೇಕು ಈ ನನ್ನ ರಾಜ್ಯದಲ್ಲಿ ನಿನಗೆ ಮನಸ್ಸು ಬರುವ ಸ್ಥಲಗಳಲ್ಲಿ ಗ್ರಾಮಗಳನ್ನು ನಿರ್ಮಿಸಿ ಬ್ರಾಹ್ಮಣರಿಗೆ ದಾನವಾಗಿ ಕೊಟ್ಟು ನಿನ್ನ ಹೆಸರನ್ನು ಶಾಶ್ವತವಾಗಿ ನಿಲ್ಲಿಸಿಕೊ ಎಂದು ಹೇಳಿದನು. ಆದರೆ ಆ ಮಂತ್ರಿಸತ್ತಮನು ಆತನು ಕೊಟ್ಟ ಪ್ರದೇಶಗಳಲ್ಲಿ ಆತನುಕೊಟ್ಟ ದ್ರವ್ಯದಿಂದ ನೂರಏಳಗ್ರಹಾರಗಳನ್ನು ಕಟ್ಟಿಸಿ ರಾಜನ ಹೆಸರಿನಿಂದಲೇ ಧರ್ಮವಾಗಿ ಬಡಬ್ರಾಹ್ಮಣರಿಗೆ ಕೊಟ್ಟು ಒಂದಗ್ರಹಾರವನ್ನು ಮಾತ್ರ ರಾಜನ ಪ್ರೀತಿಗಾಗಿ ತನ್ನ ಹೆಸರಿನಿಂದ ನಿರ್ಮಿಸಿ ಬ್ರಾಹ್ಮಣರಿಗೆ ಪುತ್ರಪೌತ್ರಪಾರಂಪರ್ಯವಾಗಿ ಅನುಭವಿಸಿಕೊಳ್ಳುವಂತೆ ಸನ್ನದುಗಳನ್ನು ಬರೆದುಕೊಟ್ಟನು. ಅದುಮೊದಲು ಆ ನೂರೆಂಟು ಅಗ್ರಹಾರಗಳನ್ನು ಅವರವರ ವಂಶದವರೇ ಅನುಭವಿಸುತ್ತಿರುವರು. ಸತ್ಯಶೀಲ ! ನಾವಿಳಿದಿರುವ ಈ ಅಗ್ರಹಾರಕ್ಕೆ "ಜನಾರ್ದನಪುರ" ಎಂದು ಹೆಸರು ಬಂದುದು ಜನಾರ್ದನಶರ್ಮನೆಂಬ ಮಂತ್ರಿಯಿಂದಲೇ ಎಂದು ಹೇಳಿದನು. ಸತ್ಯಶೀಲನು ಚಿದಾನಂದಮುನಿಯ ಬುದ್ಧಿವೈಶಷ್ಯವನ್ನೂ ಕಾಲತ್ರಯವೇದಿತ್ವವನ್ನೂ ಶಿಷ್ಯವಾತ್ಸಲ್ಯವನ್ನೂ ಶ್ಲಾಘಿಸಿದನು. ಇಬ್ಬರೂ ಆ ದಿನದ ರಾತ್ರಿ ಅಲ್ಲಿಯೇ ಮಲಗಿದ್ದು ಅರುಣೋದಯಕ್ಕೆಯೇ ಎದ್ದು ಕಾಲೋಚಿತಕೃತ್ಯಗಳನ್ನು ಮುಗಿಸಿಕೊಂಡು ಮುಂದಿನ ಪ್ರಯಾಣಕ್ಕೆ ಸಿದ್ಧರಾದರು.

ಇಪ್ಪತ್ತೊಂದನೆಯ ಕಥೆ ಮುಗಿದುದು.



## —: ಇಪ್ಪತ್ತೆರಡನೆಯ ದಿನದ ಕಥೆ. :—

ದೇವಸ್ಯಸವಿತುರ್ಭರ್ಗೋ ವರೇಣ್ಯಂತಚ್ಚ ಧೀಮಹಿ |
ಪ್ರಚೋದಯಾದ್ಧಿಯೋಯೋನ ಸ್ತ್ರಾಸಾಕ್ಷಿತಾತ್ಮನಾಂ ||

ಗುರುಶಿಷ್ಯರು ಮುಂದಿನ ಪ್ರಯಾಣಕ್ಕೆ ಸಿದ್ಧರಾಗಿ ಹೊರಟು ಮಾರ್ಗಮಧ್ಯದಲ್ಲಿ ಎಲ್ಲಿಯೂ ನಿಲ್ಲದೆ ಅಧ್ವಶ್ರಮವನ್ನು ಲೆಕ್ಕಿಸದೆ ಸಾಯಂಕಾಲದವರೆಗೆ ನಡೆದರು. ಆ ದಿನದಲ್ಲಿ ಅಷ್ಟುಹೊತ್ತಿನವರೆಗೆ ಆಹಾರವೇ ಇಲ್ಲ ಅಸ್ತಮಯ ಸಮಯಕ್ಕೆ ಯಾವುದಾದರೊಂದು ಗ್ರಾಮವನ್ನು ಸೇರಿ ಅಡಿಗೆಯನ್ನು ಮಾಡಿಕೊಳ್ಳಬಹುದೆಂದು ಬಗೆದು ದಾರಿಯಲ್ಲಿ ದೊರೆತ ಎಲ್ಲಗ್ರಾಮಗಳನ್ನೂ ಅತಿಕ್ರಮಿಸಿ ಬಂದರು. ಆದರೆ ಮಾರ್ಗದಲ್ಲಿ ಒಂದು ಸಣ್ಣಹಳ್ಳಿಯೂ ಗೋಚರಿಸಲಿಲ್ಲ ಏನು ತಾನೆ ಮಾಡಿಯಾರು ? ಆ ದಾರಿಯಲ್ಲಿ ಒಂದು ತೊರೆಯು ಕಂಡುಬಂದುದರಿಂದ ಅಲ್ಲಿಳಿದು ಸಾಯಂತನ ಸಂಧ್ಯೆಯನ್ನು ನಿರ್ವರ್ತಿಸಿ ನದಿಯ ಮಧುರಜಲವ

ನ್ನೀಟಿ ತಕ್ತೀರದ ಒಂದು ಮರದ ನೆರಳಿನಲ್ಲಿ ವಿಶ್ರಮಿಸಿಕೊಂಡರು. ಆಗ್ಗೆ ಇನ್ನೂ ಹತ್ತಲಿಸೂಗದಿದ್ದುದರಿಂದ ಸತ್ಯಶೀಲನು ನದೀತೀರದಲ್ಲಿ ಸ್ವಲ್ಪ ದೂರದ ವರೆಗೆ ಹೋಗಿ ಅಲ್ಲಲ್ಲಿ ತಿರುಗಾಡಿ ಬಂದು ಚಿದಾನಂದಯೋಗಿಯ ಬಳಿಯಲ್ಲಿ ಕುಳಿತುಕೊಂಡು ಇಂತೆಂದನು

ಮಹಾತ್ಮಾ ! ಸುತ್ತಮುತ್ತಲೆಲ್ಲಿಯೂ ಒಂದು ಹಳ್ಳಿಯಾದರೂ ಇಲ್ಲವೆಂದಲ್ಲವೆ ನಾವು ಭಾವಿಸಿದುದು ಅಗೋ ! ನಾನು ನೀಡಿರುವ ತೋರು ಬೆರಲಿಗೆ ಸರಿಯಾಗಿ ಒಂದು ಗ್ರಾಮವಿರುವುದು. ಈ ತೊರೆಯ ಕರೆಯಲ್ಲಿ ಒಂದಿನಿಸು ದೂರದವರೆಗೆ ಹೋಗಲಾಗಿ ಅಲ್ಲಿ ನದೀತೀರದಲ್ಲಿ ಸರ್ಪಾಕಾರವಾಗಿಯೂ ಸುಂದರವಾಗಿಯೂ ಇರುವ ಒಂದು ಕಲ್ಲನ್ನು ನೆಟ್ಟಿರುವರು. ಅದನ್ನು ಆಗ ತಾನೆ ಪೂಜಿಸಿದ್ದ ಕುರುಹು ಕಂಡುಬಂದುದರಿಂದ ಸಮೀಪದಲ್ಲಿಯೇ ಯಾವುದೋ ಒಂದು ಗ್ರಾಮವಿರಬಹುದೆಂದು ಮತ್ತಷ್ಟು ದೂರ ಹೋಗಲು ಅಲ್ಲಿ ಒಂದು ಹಳ್ಳಿಯು ಗೋಚರಿಸಿತು ನಾವಲ್ಲಿಗೆ ಹೋದರೆ ಪಾಕಪ್ರಯತ್ನವನ್ನು ಮಾಡಬಹುದು ಹೋಗೋಣವೆ ? ಎಂದು ಕೇಳಿದನು ಯೋಗಿಯುದಕ್ಕೆ ಸಮ್ಮತಿಸಿದನು ಇಬ್ಬರೂ ಎದ್ದು ಅಲ್ಲಿಗೆ ಒಂದುಗಳಿಗೆಯ ದೂರದಲ್ಲಿರುವ ಆ ಸಣ್ಣ ಹಳ್ಳಿಗೆ ಹೋಗಿ ಅಲ್ಲಿ ಅಡಿಗೆಯನ್ನು ಮಾಡಿ ಇಬ್ಬರೂ ಊಟ ಮಾಡಿದರು.

ಚಿದಾನಂದಯೋಗಿ ಒಂದುಕಡೆ ವಿಶ್ರಮಿಸಿಕೊಂಡನು ಸತ್ಯಶೀಲನು ತನ್ನ ಕೆಲಸಗಳನ್ನೆಲ್ಲ ಮುಗಿಸಿಕೊಂಡು ಗುರುವಿನೆಡೆಗೆಯ್ದಿಂದು ಗುರುವರ್ಯ ! ನಾನು ಕಂಡ ನಾಗಶಿಲೆಗೂ ಈ ಹಳ್ಳಿಗೂ ಹೆಚ್ಚು ಕಡಿಮೆ ಕಾಲುಹರಿದಾರಿಯಾಗುವುದು ಆ ನಾಗಶಿಲೆಯನ್ನು ಈ ಗ್ರಾಮದ ಹತ್ತಿರದಲ್ಲಿ ಪ್ರತಿಷ್ಠಿಸದೆ ಅಷ್ಟುದೂರದಲ್ಲಿ ಏಕೆ ಪ್ರತಿಷ್ಠಿಸಿದರು ? ಗ್ರಾಮದಬಳಿಯಿದ್ದರೆ ಅರ್ಚನೆಗೆ ತುಂಬ ಅನುಕೂಲವಲ್ಲವೆ ? ಕಾಯಿ ಹಣ್ಣುಗಳನ್ನು ಹೊತ್ತುಕೊಂಡು ಹೋಗಿ ಅಲ್ಲಿ ಪೂಜೆಮಾಡಿಕೊಂಡು ಬರಬೇಕಾದರೆ ಕಷ್ಟವಲ್ಲವೆ ? ಎಂದು ಕೇಳಿದನು.

## ಜ್ಞಾನೋಪದೇಶವನ್ನು ಪಡೆದ ಮಹಾಭುಜಂಗವು.

ಆಗ ಯೋಗೀಂದ್ರನು ಪ್ರಿಯಕುಮಾರ ! ಲಾಲಿಸು ಇಲ್ಲಿಗೆ ಸಮೀಪದಲ್ಲಿ ದಟ್ಟವಾದ ಒಂದು ಕಾಡಿರುವುದು ಅಲ್ಲಿ ಮಹನೀಯನಾದ ಒಬ್ಬ ಯೋಗಿಯು ತಪಸ್ಸುಮಾಡಿಕೊಳ್ಳುತ್ತ ಕಂದಮೂಲ ಫಲಾದಿಗಳನ್ನು ಭಕ್ಷಿಸಿ ಹಸಿವನ್ನಡಗಿಸಿಕೊಳ್ಳುತ್ತ ಮನುಷ್ಯಗೋಷ್ಠಿಯನ್ನೆ ತೊರೆದು ಆ ಕಾಡಿನಲ್ಲಿಯೇ ಇದ್ದನು ಆ ಮಹಾಪುರುಷನೊಂದು ದಿನದಲ್ಲಿ ನದಿಗೆ ಹೋಗಿ ಸ್ನಾನಾದ್ಯನುಷ್ಠಾನಗಳನ್ನು ಮುಗಿಸಿಕೊಂಡು ಬರುತ್ತಿದ್ದನು. ಆಗ ಒಂದು ದೊಡ್ಡ ಹಾವು ದಾರಿಗಡ್ಡವಾಗಿ ಮಲಗಿ ಕದಲದೆ ಇದ್ದುದನ್ನಾತನು ಕಂಡು ಜಂತುಭಾಷೆಯನ್ನರಿತ ಆ ಯೋಗಿಯು ಅದರೊಡನೆ ಇಂತೆಂದನು. ಓ ಸರ್ಪವೇ ! ನೀನು ದಾರಿಗೆ ಅಡ್ಡವಾಗಿ

ಮಲಗಿದ್ದರೆ ನಾನು ಹೋಗುವುದು ಹೇಗೆ ? ನನಗೆ ನಿನ್ನ ವಿಷದಿಂದ ಭಯವುಂಟಾಗದು ಆದರೆ ನಿನ್ನನ್ನು ಯಾರಾದರೂ ಕಂಡರೆ ಭಯಭ್ರಾಂತರಾಗುವುದಿಲ್ಲವೆ ? ನೀನಿಲ್ಲಿರುವುದು ಯುಕ್ತವಲ್ಲ ನಿನ್ನನ್ನೀಗ ದಾಟಿಹೋಗುವುದು ಧರ್ಮವಲ್ಲ ದಾರಿಯನ್ನು ಬಿಟ್ಟು ಒಂದಿಷ್ಟು ತೊಲಗು ಎಂದು ಮುನಿಯು ಕಡುಶಾಂತದಿಂದ ನುಡಿದನು.

ಸತ್ಯಶೀಲನೆ ! ಸಾಧುಗಳ ದರ್ಶನ ಸಂಭಾಷಣೆಗಳು ಎಂತಹ ಮಹತ್ವವುಳ್ಳವುಗಳೋ ? ಏನು ಹೇಳಲಿ ? ಆ ದುಷ್ಟಸರ್ಪಕ್ಕೆ ಅದರ ಭಾಗ್ಯವು ಫಲಿಸುವ ಸಮಯವು ಬಂತೋ ಹೇಗೋ ! ಅದಕ್ಕೆ ಜ್ಞಾನೋದಯವಾಯಿತು ಕೇಳು.

[ಮಹಾನುಭಾವಸಂಸರ್ಗಃ ಕಸ್ಯನೋನ್ನತಿಕಾರಕಃ |
ರಥ್ಯಾಂಬುಜಾಹ್ನವೀ ಸಂಗಾತ್ತ್ರಿದಶೈರಪಿವಂದ್ಯತೇ ||೧||
ಸಾಧೂನಾಂದರ್ಶನಂ ಪುಣ್ಯಂತೀರ್ಥಭೂತಾಹಿಸಾಧವಃ |
ಕಾಲೇನಫಲತೇತೀರ್ಥಂ ಸದ್ಯಸ್ಸಾಧುಸಮಾಗಮಃ ||೨||]

ದಾರಿಗಳಲ್ಲಿ ಬಿದ್ದ ಮಳೆಯನೀರು ಗಂಗಾನದಿಯಲ್ಲಿ ಬೆರೆವುದಲ್ಲವೆ ಅದು ಗಂಗಾಸಂಗದಿಂದ ಪವಿತ್ರವಾಗಿ ದೇವತೆಗಳಿಂದಕೂಡ ವಂದಿಸಲ್ಪಡುವುದು ಹಾಗೆಯೇ ಮಹಾತ್ಮರ ಸಂಗವು ಯಾರಿಗೇ ಆಗಲಿ ಮಹತ್ತ್ವವನ್ನೆ ಉಂಟುಮಾಡುವುದು ಸಾಧುಗಳು ಮಹಾತೀರ್ಥಗಳಿಗೆ ಸಮಾನರಾದವರು ಆದುದರಿಂದ ಸಾಧುಸಂದರ್ಶನವು ಪುಣ್ಯಕರವಾದುದು ತೀರ್ಥವು ಯಾವ ಕಾಲದಲ್ಲಿಯೋ ಫಲವನ್ನು ಕೊಡುವುದು ಸಾಧುಸಮಾಗಮವಾದರೋ ಆ ನಿಮಿಷವಲ್ಲಿಯೇ ಫಲಕಾರಿಯಾಗುವುದು ಸಾಧುಗಳ ಸಂಗದಿಂದ ದುಷ್ಟರು ಸಾಧುತ್ವವನ್ನು ಪಡೆವುದುಂಟೇ ? ಎಂದು ಸಂಶಯಪಡಬೇಡ.

" ಸತ್ಸಂಗಾ ದ್ಭವತಿಹಿ ಸಾಧುತಾ ಖಲಾನಾಂ |
ಸಾಧೂನಾಂ ನಹಿ ಖಲಸಂಗಮಾ ತ್ಖಲತ್ವಂ ||
ಆಮೋದಂ ಕುಸುಮಭವಂ ಮೃದೇವಧತ್ತೇ |
ಮೃದ್ಗಂಧಂ ನಹಿ ಕುಸುಮಾನಿ ಧಾರಯನ್ತಿ || ೧ ||

ಸತ್ಸಂಗದಿಂದ ದುಷ್ಟರಿಗೆ ಸಾಧುತ್ವವುಂಟಾಗುವುದು. ದುಸ್ಸಂಗದಿಂದ ಸಾಧುಗಳಿಗೆ ದುಷ್ಟತ್ವವುಂಟಾಗುವುದಿಲ್ಲ. ಹೇಗೆಂದರೆ—ಹೂವಿನ ಸುವಾಸನೆಯನ್ನು ಪಡೆದ ಮಣ್ಣು ಮಗಮಗಿಸುತ್ತದೆ ಆದರೆ ಹೂಗಳು ಮಣ್ಣಿನ ವಾಸನೆಯನ್ನು ಪಡೆವುದಿಲ್ಲ.

ಸತ್ಯಶೀಲನೆ, ಆ ಘಟಸರ್ಪಕ್ಕೆ ಮುನಿಯ ದರ್ಶನದಿಂದ ಜ್ಞಾನೋದಯವಾಯಿತಷ್ಟೆ? ಆಗ ಅದು ಹೆಡೆಯನ್ನೆತ್ತಿ ನಮಸ್ಕರಿಸಿ, ಇಂತೆಂದಿತು.

"ಸ್ವಾಮಿ! ನಾನು ದುಷ್ಟ ಜಂತು. ತಾವು ಅಹಿಂಸಾಪರರೂ ಶಾಂತ ಚಿತ್ತರೂ ಆಗಿರುವುದರಿಂದ ನನ್ನ ಬಳಿಯಲ್ಲಿ ನಿಂತು ದೂರವಾಗಿ ತೊಲಗೆಂದು ಹೇಳಿದಿರಿ. ಮತ್ತೊಬ್ಬರಾಗಿದ್ದರೆ ಇದು ದುಷ್ಟಜಂತುವು, ಇದರಿಂದ ಅನೇಕ ರಿಗೆ ತೊಂದರೆಯಾಗುವುದು ಎಂದು ತಿಳಿದು ಕೊಂದೇಬಿಡುತ್ತಿದ್ದರು, ನನಗೆ ವಿಷವು ಹೇಗೆ ಸಹಜಾತವಾದುದೋ ಹಾಗೆಯೇ ದುರ್ಗುಣಗಳೂ ಸಹಜಾತ ಗಳು. ನಾನೀವರೆಗೆ ಅನೇಕರನ್ನು ಕಚ್ಚಿ ಮದೀಯ ಖರ ವಿಷಾಗ್ನಿಜ್ವಾಲೆಗಳಿ ಗಾಹುತಿಯನ್ನಿತ್ತಿರುವೆನು. ಲೆಕ್ಕವಿಲ್ಲದಷ್ಟು ಅಲ್ಪಜಂತುಗಳನ್ನು ಹಿಂಸೆಮಾಡಿ ತಿಂದು ಹೊಟ್ಟೆಯನ್ನು ತುಂಬಿಕೊಂಡೆನು ಎಷ್ಟುಕಾಲವಾದರೂ ಹೀಗೆಯೇ ಇದ್ದರೆ, ಅಯ್ಯೋ! ನಾನು ಕೃತಾರ್ಥನಾಗುವುದೆಂದಿಗೆ? ನನ್ನಲ್ಲಿ ಅನುಗ್ರಹವನ್ನು ಮಾಡಿ ನನ್ನ ಈ ಪಾಪಜನ್ಮವನ್ನು ಕಳೆದುಕೊಂಡು ನಿಶ್ರೇಯಸವನ್ನು ಪಡೆವುದ ಕ್ಕಾಗಿ ಮಾಡಬೇಕಾದ ರೀತಿಯನ್ನು ನನಗೆ ಉಪದೇಶಮಾಡಿ ತೆರಳಬೇಕೆಂದು ಪ್ರಾರ್ಥಿಸುತ್ತೇನೆ ಎಂದು ವಿನಯದಿಂದ ಪ್ರಾರ್ಥಿಸಿತು.

ದುಷ್ಟಜಂತುವದು ವಿವೇಕದಿಂದ ಕೇಳಿಕೊಂಡುದಕ್ಕೆ ಯೋಗಿಯು ಪರ ಮಾಶ್ಚರ್ಯವನ್ನು ಪಡೆದು ಅದರೊಡನಿಂತೆಂದನು.

ನಿನ್ನ ಜನ್ಮಾಂತರ ಸಂಸ್ಕಾರವು ಒಳ್ಳೆಯದೆಂದು ನಾನು ಭಾವಿಸುವೆನು. ಹಾಗಿಲ್ಲದಿದ್ದರೆ ತಿರ್ಯಗ್ಜಂತುವಾದ ನಿನಗೆ ಈ ಪಾರಮಾರ್ಥಿಕ ಜ್ಞಾನವು ಹುಟ್ಟುತ್ತಿರಲಿಲ್ಲ. ಕೇಳು, ನಿನ್ನ ಕರ್ತವ್ಯಕರ್ಮವನ್ನು ಹೇಳುವೆನು. ಓ ಸರ್ಪ ಶ್ರೇಷ್ಠನೆ! ನೀನು ನನ್ನ ಉಪದೇಶದಂತೆ ವರ್ತಿಸುವೆಯಾದರೆ ನಿನಗೆ ಸದ್ಗತಿ ಯುಂಟಾಗುವುದು. ಇಂದು ಮೊದಲಾಗಿ ನೀನು ಯಾರನ್ನೂ ಕಡಿಯದೆ, ಯಾರಿಗೂ ಉಪದ್ರವವನ್ನು ಮಾಡದೆ, ಬಾಯಿಯ ಹತ್ತಿರಕ್ಕೆ ಬಂದರೂ ಅಲ್ಪ ಜಂತುಗಳನ್ನು ಕೊಲ್ಲದೆ, ಶಾಂತತೆಯನ್ನು ವಹಿಸಿ, ನಿಮ್ಮಜಾತಿಗೆ ಸ್ವಭಾವವಾಗಿ ವಾಯುವೇ ಆಹಾರವಾದುದರಿಂದ ವಾಯುಭಕ್ಷಣೆಯನ್ನು ಮಾತ್ರ ಮಾಡುತ್ತ ಕಾಲವನ್ನು ಕಳೆ. ನೋಡಿದವರ ಮೇಲೆಯೆಲ್ಲ ಆಗ್ರಹವನ್ನು ಮಾಡಬೇಡ. ನಿಷ್ಕಾರಣವಾಗಿ ಭಯಂಕರವಾದ ಭುಸ್ ಎಂಬ ಶಬ್ದವನ್ನು ಮಾಡಬೇಡ. ಇದೊಂದು ವ್ರತವೆಂದು ತಿಳಿ. ಈ ವ್ರತವನ್ನು ಬಿಡದೆ ಆಚರಿಸಿದೆಯಾದರೆ ನಿನಗೆ ಸದ್ಗತಿಯುಂಟಾಗುವುದು. ನಿರಂತರವೂ ಭಗವಂತನನ್ನು ಉಪಾಸಿ ಸುತ್ತಿರು ಎಂದು ನುಡಿದು ಬಳಿಗಿವಿಯಲ್ಲಿ ತಾರಕಮಂತ್ರವನ್ನು ಉಪದೇಶಿಸಿ ಹೊರಟುಹೋದನು. ಆ ಸರ್ಪವು ಮಹಾ ಸಂತೋಷದಿಂದ ಆ ಮುನಿಯ ಉಪದೇಶವನ್ನು ಕೈಕೊಂಡು ಆ ದಾರಿಯನ್ನು ಬಿಟ್ಟು ಬೇರೆಯೊಂದು ಸ್ಥಳಕ್ಕೆ ಹೋಯಿತು.

ಆ ಮಹಾಸರ್ಪವು ಅಂದು ಮೊದಲಾಗಿ ತನ್ನ ದುಷ್ಟವರ್ತನವನ್ನೆಲ್ಲ ಬಿಟ್ಟು, ಸಾಧುವಾಗಿರುತ್ತ ಗಾಳಿಯನ್ನು ಮಾತ್ರ ಆಹಾರಮಾಡುತ್ತ ತಿರುಗಾಡು ತ್ತಿದ್ದಿತು. ಸರಿಯಾದ ಆಹಾರವಿಲ್ಲದುದರಿಂದ ಅದು ದಿನದಿನಕ್ಕೂ ಒಣಗಿ ಒಣಗಿದ ಬಾಳೆಯ ಪಟ್ಟೆಯಂತಾಯಿತು. ಜವಸತ್ವಗಳು ಕ್ಷೀಣಿಸಿದುವು. ಮೆಲ್ಲನೆ ತೆವಳಿಕೊಂಡು ಬರುವಹಾಗಾಯಿತೇ ಹೊರತು ಒಂದು ಕಡೆಯಿಂದ ಮತ್ತೊಂದುಕಡೆಗೆ ಹೋಗುವುದೆಂದರೆ ಅತಿ ಕಷ್ಟವಾಗುತ್ತಿದ್ದಿತು. ಹೀಗೆ ಎಷ್ಟು ಹೀನಸ್ಥಿತಿಗೆ ಬಂದರೂ ಅದು ಮುನಿಯ ಉಪದೇಶವನ್ನು ಮಾತ್ರ ಮರೆಯದೆ ಆಚರಿಸುತ್ತಿದ್ದಿತು.

ಅದು ಒಂದೇಕಡೆ ಇರುವುದಕ್ಕೆ ಬೇಸರಪಟ್ಟು ಗ್ರಾಮದಬಳಿಯ ಒಂದು ಬೇಲಿಯಬಳಿಗೆ ತೆವಳಿಕೊಂಡುಹೋಗಿ ಅಲ್ಲಿ ಮಲಗಿದ್ದಿತು. ಆ ಗ್ರಾಮದ ಬಾಲಕರನೇಕರು ಅಲ್ಲಲ್ಲಿ ಆಡಿಕೊಳ್ಳುತ್ತ ಅದರ ಸಮೀಪಕ್ಕೆ ಬಂದರು. ಆ ಸರ್ಪವನ್ನು ಕಂಡು ಹೆದರಿ ಮೊದಲನೆಯದಿನವಲ್ಲಿ ನಿಲ್ಲದೆ ಓಡಿಹೋದರು. ಆದರೆ ಹಾವು ಬುಸ್ಸೆಂದವರನ್ನು ಭಯಪಡಿಸಲಿಲ್ಲ. ಕಚ್ಚಿ ಉಪದ್ರವಗೊಳಿ ಸಲೂ ಇಲ್ಲ. ಆ ಬಾಲಕರು ಮಾರನೆಯದಿನವಲ್ಲಿಗೆ ಆಟವಾಡುವುದಕ್ಕೆ ಬಂದರು. ಹಾವು ಅದೇಸ್ಥಲದಲ್ಲಿ ಮಲಗಿದ್ದಿತಲ್ಲದೆ ಮತ್ತೊಂದುಕಡೆಗೆ ಜರುಗಿ ಕೂಡ ಇರಲಿಲ್ಲ. ಆದುದರಿಂದ ಆ ಹುಡುಗರಲ್ಲಿ ಕೆಲವರು ಹಾವು ಸತ್ತುಹೋಗಿದೆ ಎಂದೂ ಮತ್ತೆ ಕೆಲವರು ಪ್ರಾಣವೇನೋ ಇರುವುದು. ಆದರೆ ಏತಕ್ಕೋ ಕದ ಲದೆ ಬಿದ್ದಿರುವುದು ಎಂದೂ ತಮ್ಮ ಮನಸ್ಸು ಬಂದ ಹಾಗೆ ಹೇಳಿಕೊಳ್ಳುತ್ತ ಸ್ವಲ್ಪ ಸಮೀಪಕ್ಕೆ ಮೆಲ್ಲಮೆಲ್ಲನೆ ಬಂದು ಕಲ್ಲುಗಳಿಂದ ಬಡಿವುದು. ಮಣ್ಣು ಚೆಲ್ಲುವುದು. ಕಟ್ಟಿಗೆಗಳನ್ನು ಹಾಕುವುದು ಮೊದಲಾದ ಹಿಂಸೆಗಳನ್ನು ಮಾಡ ತೊಡಗಿದರು. "ಮೃದು ಸರ್ವತ್ರ ಬಾಧ್ಯತೇ" ಎಂಬಂತೆ ಸಾಧುಗಳಾಗಿರುವ ಪ್ರಾಣಿಗಳಿಗೆ ದುಷ್ಟರಿಂದ ಹಿಂಸೆಯು ಹೆಚ್ಚಾಗಿರುವುದು. ಬಾಲಕರಾದರೋ ಯುಕ್ತಾಯುಕ್ತ ವಿಚಾರಶೂನ್ಯರಾದುದರಿಂದ ನಿಷ್ಕಾರಣವಾಗಿ ಅದನ್ನು ಹಿಂಸಿ ಸುತ್ತಿದ್ದರು. ಅದು ವಿಷಜಂತುವಾದರೂ ಸಾಧುವಾಗಿಯೂ ವಿವೇಕಿಯಾ ಗಿಯೂ ಇದ್ದುದರಿಂದ ಅವರಿಗೆ ಯಾವುದೊಂದು ತೊಂದರೆಯನ್ನೂ ಮಾಡಲಿಲ್ಲ.

ಆ ಹೆಬ್ಬಾವು ಯಾರಿಗೂ ಯಾವ ಕೇಡನ್ನೂ ಮಾಡದೆ ಎಷ್ಟು ಶಾಂತವಾಗಿ ಬಾಧೆಗಳನ್ನು ತಾಳಿ ಇದ್ದಿತೋ ಅಷ್ಟು ಅಧಿಕವಾದ ಕಷ್ಟವದಕ್ಕೆ ಸಂಭವಿಸುತ್ತಿ ದ್ದಿತು. ಆ ಊರಿನ ಬೇಲಿಯ ಹತ್ತಿರವಿರಲಾರದೆ ಅದು ಜರುಗಿಕೊಂಡು ಹೋಗಿ ಮೊದಲಿನಂತೆ ಆ ಮುನೀಶ್ವರನು ಬಂದು ಹೋಗುತ್ತಿರುವ ದಾರಿಗಡ್ಡ ವಾಗಿ ಮತ್ತೆ ಮಲಗಿತು. ಆ ಮಹಾತ್ಮನಾಮಾರ್ಗದಲ್ಲಿ ಬಂದು ಆ ಸರ್ಪ ವನ್ನು ನೋಡಿ ತನ್ನಿಂದ ಉಪದೇಶವನ್ನು ಪಡೆದ ಭುಜಂಗಮವಿದೆಂದು ತಿಳಿದು

ಅದರ ಭಾಷೆಯಿಂದ ಎಲೈ ಪವನಾಶನವೇ! ಕ್ಷೇಮವೆ? ನಾನು ಬೋಧಿಸಿದಂತೆ ವರ್ತಿಸುತ್ತಿರುವೆಯಾ? ಎಂದು ಕೇಳಿದನು ಭುಜಂಗವಾತನಿಗೆ ನಮಸ್ಕಾರವನ್ನು ಮಾಡಿ, ಮಹಾತ್ಮಾ! ನನ್ನ ಕ್ಷೇಮವನ್ನೇನು ಕೇಳುವಿರಿ. ಇಗೋ! ನನ್ನ ದೇಹಸ್ಥಿತಿಯನ್ನು ನೋಡಿರಿ. ನನ್ನಿಂದ ಹೊರಡುತ್ತಿರುವ ಸ್ವರದ ಬಗೆಯನ್ನಾಲಿಸಿರಿ. ದೇವ! ತಮ್ಮ ಉಪದೇಶವು ನನಗೆ ಮೇಲನ್ನುಂಟುಮಾಡುವುದಕ್ಕೆ ಪ್ರತಿಯಾಗಿ ಕೇಡನ್ನೇ ಉಂಟುಮಾಡಿರುವುದು. ಹೀಗಾಗುವುದೆಂದು ನಾನು ಭಾವಿಸಿರಲಿಲ್ಲ. ಎಂದು ನಡೆದ ವರ್ತಮಾನವನ್ನೆಲ್ಲ ಹೇಳಿತು. ಮತ್ತು ಸ್ವಾಮಿ! ನನ್ನ ಬಳಿಗೆ ಯಾರಾದರೂ ಬಂದಾಗ ಅವರನ್ನು ಬುಸ್ಸೆಂದು ಹೆದರಿಸುವುದು, ಅಟ್ಟುವುದು, ಕಚ್ಚುವುದಕ್ಕೆ ಹೋಗುವುದು ಮುಂತಾದ ನನ್ನ ದುಷ್ಟತನವನ್ನು ತೋರಿಸುತ್ತಿದ್ದರೆ ನನಗೆ ಈಪಾಡು ಬರುತ್ತಿರಲಿಲ್ಲ. ಹೀಗೆಯೇ ಸಾಧುಗಳಿಗೆ ಹೆಚ್ಚು ಬಾಧೆಗಳುಂಟೆಂದು ತೋರುವುದು. ಸಾಧುಗಳನ್ನು ನಿಷ್ಕಾರಣವಾಗಿ ಹಿಂಸಿಸುವವನೇಕರು ನಿಮ್ಮಾಜ್ಞೆಯ ಪ್ರಕಾರ ನಾನು ಸುಮ್ಮನಿದ್ದುದರಿಂದ ಇಷ್ಟು ಕಷ್ಟಗಳಿಗೆ ಒಳಗಾದೆನು. ಎಂದು ಬಹು ದೀನಸ್ವರದಿಂದ ನುಡಿಯಿತು.

ಯೋಗೀಶ್ವರನವರ ನುಡಿಗಳಿಗೆ ಬೆರಗಾಗಿ ನಗುತ್ತ ಮರುಳೆ! ನನ್ನ ಮಾತುಗಳಿಗರ್ಥವನ್ನು ತಿಳಿದುಕೊಳ್ಳಲಾರದೆಹೋದೆ. ಪರರಿಗೆ ಹಿಂಸೆಯನ್ನುಂಟುಮಾಡಬೇಡವೆಂದು ಹೇಳಿದೆನೇ ಹೊರತು ನಿರ್ದಯರಾಗಿ ಬಾಧಿಸುವವರನ್ನು ಬೆದರಿಸಿ ಅವರು ನಿನ್ನಗೊಡವೆಗೆ ಬಾರದಿರುವಂತೆ ಮಾಡಿಕೊಳ್ಳಬೇಡವೆಂದು ಹೇಳಿದೆನೇ? ಅಂತಹ ಉಪದೇಶವನ್ನು ನಾನು ನಿನಗೆ ಮಾಡುವೆನೆ? ಆಲೋಚಿಸದೆ ನೀನಾಗಿ ಕಷ್ಟಗಳನ್ನನುಭವಿಸಿದೆ; ಇದು ಮೊದಲು ನಿನಗೆ ಬಾಧೆಯುಂಟುಮಾಡಲು ಬಂದವರನ್ನು ನೋಡಿದಾಗ ಭೀಷಣವಾಗಿ ಬುಸ್ಸೆಂದು ಶಬ್ದಮಾಡು. ಆಗ ನಿನ್ನ ಹತ್ತಿರಕ್ಕೆ ಬಂದು ನಿನ್ನನ್ನು ಬಾಧಿಸುವುದಕ್ಕೆ ಯಾರೂ ಪ್ರಯತ್ನಮಾಡರು. ಯಾರಿಗೂ ಅಪಕಾರವನ್ನು ಮಾಡದಿದ್ದರೆ ತಪ್ಪದೆ ನಿನಗೆ ಸದ್ಗತಿಯುಂಟಾಗುವುದು ಹೋಗು ಎಂದಾಜ್ಞಾಪಿಸಿ ಮುನಿಯು ಹೊರಟುಹೋದನು.

ಅದು ಮೊದಲ್ಗೊಂಡು ಸರ್ಪರಾಜನು ಅದೇ ಪ್ರಕಾರವಾಗಿ ಮಾಡುತ್ತ ಕಾಲವನ್ನು ಕಳೆಯುತ್ತಿರಲು ಅದಕ್ಕೆ ಅವಸಾನಕಾಲವು ಸಮೀಪಿಸಿತು. ಯೋಗಿವರ್ಯನು ಸ್ನಾನಾರ್ಥವಾಗಿ ಹೊಳೆಗೆ ಹೋಗುವಾಗ ಕಾಣಿಸಿಕೊಂಡು ಗುರುವರ್ಯ! ಇಂದಿಗೆ ನನ್ನ ಆಯುಷ್ಯವು ತೀರಿತು. ಈ ಲೋಕವನ್ನು ಬಿಡುವುದಕ್ಕೆ ಅಪ್ಪಣೆಯನ್ನು ಕೊಡು ಎಂದು ಹೇಳಿ ಆ ಭುಜಂಗಮವು ಪ್ರಾಣಗಳನ್ನುಬಿಟ್ಟಿತು ಒಡನೆಯೇ ಗಂಧರ್ವನೊಬ್ಬನು ಆಕಾಶದಲ್ಲಿ ವಿಮಾನದಲ್ಲಿ ಕುಳಿತು ಮುನಿಯನ್ನು ಸಂಬೋಧಿಸಿ ಎಲೈ ಮುನಿಮಂಡನನವೇ! ನಾನು ಚಿತ್ರಕೇತುವೆಂಬ ಗಂಧರ್ವನು. ವೈಷ್ಣವಭಕ್ತಿಯ ಮಹಿಮೆಯೇನೆಂದು ಕೇಳುವುದಕ್ಕಾಗಿ ನಾನು,

ವೈಕುಂಠಕ್ಕೆ ಅತಿತ್ವರಿತವಾಗಿ ಯಾವ ಕಾರ್ಯಾರ್ಥಿಯಾಗಿಯೋ ಹೋಗುತ್ತಿದ್ದ ನಾರದಮುನೀಂದ್ರನನ್ನು ನೋಡಿ, "ಮುನೇ! ಮಾಸರ್ಪ ಮಾಸರ್ಪ" ಋಷಿಯೇ! ಹೋಗಬೇಡ! ಹೋಗಬೇಡ! ಎಂದು ಹೇಳಿ ಮುಂದೆ ನನ್ನ ಅಭಿಪ್ರಾಯುವನ್ನು! ಹೇಳಬೇಕೆಂದಿರುವಷ್ಟರಲ್ಲಿ ಆತನು ಶಾಂತಚಿತ್ತನಾದರೂ ನನ್ನ ಗ್ರಹಚಾರ! ಮಹಾಕೋಪಿಷ್ಠನಾಗಿ, "ಸರ್ಪೋಭವ" ಎಂದು ಶಾಪವನ್ನಿತ್ತನು. ವಿಶಾಪವನ್ನನುಗ್ರಹಿಸಬೇಕೆಂದು ಕೇಳಿಕೊಂಡ ಬಳಿಕ ಆತನು ಹೀಗೆಂದನು— ನೀನು ಪಿಪ್ಪಲಾರಣ್ಯವೆಂಬ ಕಾಡಿನಲ್ಲಿ ಸರ್ಪವಾಗಿರು. ಸಮೀಪದಲ್ಲಿರುವ ಒಂದು ಬೆಟ್ಟದ ಗುಹೆಯಲ್ಲಿ ಕೌಂಡಿನ್ಯನೆಂಬ ಒಬ್ಬ ಮುನಿಯು ಭವಾನೀನದಿಗೆ ಪ್ರತಿದಿನವೂ ಸ್ನಾನಕ್ಕೆಂದು ಬರುತ್ತಿರುವನು. ನೀನು ದಾರಿಯಲ್ಲಿ ಅಡ್ಡಲಾಗಿ ಮಲಗಿದ್ದರೆ ನಿನ್ನನ್ನು ನೋಡಿ ಮಾತನಾಡುವನು. ಆಗ ನಿನಗೂ ಆತನಿಗೂ ಸಂಭಾಷಣೆ ಆಗುವುದು. ಆತನು ನಿನಗೆ ತಾರಕವನ್ನುಪದೇಶಿಸುವನು. ನಿನಗವಸಾನ ಕಾಲವು ಪ್ರಾಪ್ತವಾದಾಗ ಆತನ ಪುನರ್ದರ್ಶನವು ನಿನಗಾಗುವುದು. ಆಗ ನಿನಗೆ ಪ್ರಾಣವು ಹೋಗುವುದು. ಬಳಿಕ ನಿನ್ನ ಗಂಧರ್ವತ್ವವು ನಿನಗೆ ಪ್ರಾಪ್ತವಾಗುವುದು ಹೋಗು ಎಂದು ಹೇಳಿ ಹೊರಟುಹೋದನು. ಕೌಂಡಿನ್ಯ ಮುನೀಶ್ವರನೇ! ನಿನ್ನಿಂದ ನನಗೆ ಸ್ವರೂಪವು ಸಿದ್ಧಿಸಿತು. ಇದುವರೆಗೆ ನಾನು ವಾಸಿಸುತ್ತಿದ್ದ ಈ ಶರೀರವನ್ನಿಲ್ಲಿಯೇ ಹೂತಿಟ್ಟು ಇವರನ್ನೆಲ್ಲ ಈ ದೇಹದ ಆಕಾರದಿಂದ ಒಂದು ವಿಗ್ರಹವನ್ನು ಮಾಡಿಸಿ ಪೂಜಾರ್ಹವಾಗುವಂತೆ ದಯವಿಟ್ಟು ಮಾಡು ಎಂದು ಹೇಳಿ ಮುನೀಶ್ವರನನ್ನು ವಂದಿಸಿ ಆತನು ಗಂಧರ್ವಲೋಕಕ್ಕೆ ಹೊರಟುಹೋದನು. ಬಳಿಕ ಕೌಂಡಿನ್ಯಮುನಿಯು ಆ ಸರ್ಪದೇಹವನ್ನು ಅಲ್ಲಿಯೇ ಹೂಳಿಸಿ ಗ್ರಾಮಸ್ಥರ ಸಹಾಯದಿಂದ ಆ ಭುಜಂಗನ ಬಿಂಬವೊಂದನ್ನು ನಿರ್ಮಲವಾದ ಒಂದು ಶಿಲೆಯಿಂದ ನಿರ್ಮಾಣಮಾಡಿಸಿ ಆ ಸ್ಥಾನದಲ್ಲಿ ಪ್ರತಿಷ್ಠೆಮಾಡಿಸಿ ಅದರ ಮಹಿಮೆಯನ್ನು ಎಲ್ಲರಿಗೂ ತಿಳಿಯಿಸಿ, ನೀವೆಲ್ಲರೂ ಈ ಬಿಂಬವನ್ನು ಪೂಜಿಸುತ್ತಿದ್ದರೆ ಪುತ್ರಪೌತ್ರಾಭಿವೃದ್ಧಿಯೂ ಐಶ್ವರ್ಯಾಭಿವೃದ್ಧಿಯೂ ಉಂಟಾಗುವುದು ಎಂದು ಹೇಳಿ ಆ ಯೋಗಿಯು ಹೊರಟುಹೋದನು. ಅಲ್ಲಿಂದಾರಂಭಿಸಿ ಗ್ರಾಮನಿವಾಸಿಗಳು ಸ್ವಲ್ಪ ದೂರವಾದರೂ ಹೋಗಿ ಆ ನಾಗರಕಲ್ಲನ್ನು ಪೂಜೆಮಾಡಿಕೊಂಡು ಬರುತ್ತಿರುವರು. ಈ ವೃತ್ತಾಂತವು ನಡೆದು ಬಹುಕಾಲವಾಗಿರುವುದು. ಜನರು ವಾಡಿಕೆಯಾಗಿ ಪರಂಪರೆಯಿಂದ ಪೂಜೆಯನ್ನುಮಾಡುತ್ತಿರುವರು ಎಂದಾ ಚಿದಾನಂದ ಮುನಿಯು ಹೇಳಲು ಸತ್ಯಶೀಲನು ಪರಮಾನಂದ ಕಂದಳಿತ ಹೃದಯಾರವಿಂದನಾಗಿ ಗುರುವನ್ನು ಶ್ಲಾಘಿಸಿದನು.

ಇಂತು ಇಪ್ಪತ್ತೆರಡನೆಯ ಕಥೆ ಮುಗಿದುದು.



## —: ಇಪ್ಪತ್ತುಮೂರನೆಯ ದಿನದ ಕಥೆ. :—



ರಕ್ಷಶ್ಶಿಕ್ಷಣದಕ್ಷಾಯ ಪಕ್ಷಿಪತ್ರಾಯಜಿಷ್ಣವೇ |
ಚಕ್ಷುಶ್ರವಶಯಾನಾಯ ಸಾಕ್ಷಿಣೇಬ್ರಹ್ಮಣೇನಮಃ ||

ಆ ದಿನದ ರಾತ್ರಿ ಆ ಹಳ್ಳಿಯಲ್ಲಿಯೇ ಮಲಗಿ ನಿದ್ರಿಸಿ ಉದಯವಾಗುತ್ತಲೇ ಎದ್ದು ನದಿಗೆ ಬಂದು ಸ್ನಾನಾನುಷ್ಠಾನವನ್ನು ತೀರಿಸಿಕೊಂಡು ಚಿದಾನಂದ ಮುನಿಯು ಶಿಷ್ಯನೊಡನೆ ಪ್ರಯಾಣಮಾಡಿ ಹಳ್ಳಿಪಳ್ಳಿಗಳಿಲ್ಲದೆ ದಾರಿಗರ ಸೌಕರ್ಯಾರ್ಥವಾಗಿ ದಾರಿಯಲ್ಲಿ ಕಟ್ಟಲ್ಪಟ್ಟಿದ್ದ ಧರ್ಮಶಾಲೆಯೊಂದನ್ನು ಕಂಡು ಅಲ್ಲಿಳಿದು ಶಾಲಾಧಿಕಾರಿಯು ಕೊಟ್ಟ ಸದಾವೃತ್ತಿಯಿಂದ ಕ್ಷುತ್ತೃಷ್ಣೆಗಳನ್ನು ಕಳೆದುಕೊಂಡು ಮಾರ್ಗಾಯಾಸವನ್ನು ಪರಿಹರಿಸಿಕೊಳ್ಳುವುದಕ್ಕಾಗಿ ಬಾಗಿಲ ಬಳಿಯಿದ್ದ ಒಂದು ತಿಟ್ಟನಮೇಲೆ ಮಲಗಿದರು. ಸತ್ಯಶೀಲನಾಗ ಗುರುವಂ ನಿರುಕಿಸಿ ಗುರುವರ್ಯ ! ನೋಡಿದಿರಲ್ಲವೆ ? ಒಳ್ಳೆಯನೀರಾದರೂ ದೊರೆಯದ ಈ ದುರ್ಗಮ ಪ್ರದೇಶದಲ್ಲಿ ಇಷ್ಟು ದೊಡ್ಡ ಸತ್ರವನ್ನು ಕಟ್ಟಿಸಿ ಬಂದವರಿಗೆ ಇಲ್ಲವೆನ್ನದೆ ಆಹಾರಾದ್ಯುಪಚಾರಗಳು ನಡೆವಂತೆ ಕಟ್ಟಳೆಯನ್ನು ಮಾಡಿರುವ ಆ ಮಹಾನುಭಾವನಾವನೋ ತಿಳಿಯದು ಆತನು ಸರ್ವರಿಂದಲೂ ಕೊಂಡಾಡಲ್ಪಡುತ್ತಿರುವನಲ್ಲವೆ ? ನಿಜವಾಗಿಯೂ ಆತನು ಸ್ತೋತ್ರಾರ್ಹನೇಸರಿ ಬಹುದೂರದಿಂದಲೂ ನಡೆದುಬಂದ ನಮಗೆ ಈ ನಡುಗಾಡಿನಲ್ಲಿ ಈ ಧರ್ಮಶಾಲೆಯು ತಟಸ್ಥಿಸದಿದ್ದರೆ ಬಹು ಪ್ರಯಾಸವಾಗುತ್ತಿದ್ದಿತು ಭಗವಂತನು ಈ ದುರ್ಗಮ ಪ್ರದೇಶದಲ್ಲಿ ನಮಗೀ ಧರ್ಮಶಾಲೆಯನ್ನು ತೋರಿಸಿದನು ಎಂದು ನುಡಿದನು. ಆಗ ಯೋಗಿಪುಂಗವನಾತನೊಡನೆ ಕುಮಾರ ! ಈ ನಡುಗಾಡಿನಲ್ಲಿ ಈ ಧರ್ಮಶಾಲೆಯನ್ನು ಕಟ್ಟಿಸಲಿಕ್ಕೆ ಕಾರಣವುಂಟು ಸಾವಧಾನವಾಗಿ ಕೇಳು ಇಂತಹ ವಿಷಯಗಳನ್ನು ತಿಳಿದುಕೊಳ್ಳುವುದಕ್ಕೆ ನಿನಗೆ ಅಧಿಕ ಕುತೂಹಲವಲ್ಲವೆ ? ಎಂದು ತತ್ಕಥಾಕಥನವನ್ನು ಪ್ರಾರಂಭಿಸಿದನು.

## ಬ್ರಹ್ಮರಾಕ್ಷಸನ ಕಥೆ.

ವತ್ಸ ! ಸತ್ಯಶೀಲ ! ಅಗೋ ! ನಮಗೆ ಅಭಿಮುಖವಾಗಿ ದೂರದಲ್ಲಿ ಅತ್ಯುನ್ನತವಾದ ಬೆಟ್ಟವು ಗೋಚರಿಸುತ್ತಿರುವುದು ನೋಡು ಅದಕ್ಕೆ ಏಕಶೃಂಗವೆಂದು ಹೆಸರು ಉನ್ನತವಾದ ಶಿಖರವೊಂದೇ ಇರುವುದರಿಂದ ಆ ಹೆಸರು ಅದಕ್ಕೆ ಸಲ್ಲುತ್ತಿರುವುದು ಅದರ ಬುಡದಲ್ಲಿ ನಂದಿವರ್ಧನವೆಂಬೊಂದು ಗ್ರಾಮವಿದ್ದಿತು. ಅದರಲ್ಲಿ ಸದಾಚಾರಸಂಪನ್ನನೂ ಪರಮಶಾಂತನೂ ಆದ ಒಬ್ಬ ಬ್ರಾಹ್ಮಣನು ಭಾರ್ಯಾದ್ವಿತೀಯನಾಗಿ ವಾಸಿಸುತ್ತಿದ್ದನು ಆತನ ಹೆಸರು ಧರ್ಮಶರ್ಮನು ಆತನ ಹೆಂಡತಿಯ ಹೆಸರು ಚಂಡಿಕೆ ಧರ್ಮಶರ್ಮನೆಷ್ಟು ಯೋಗ್ಯನೋ

ಚಂಡಿಕೆಯು ಅಷ್ಟು ಅಯೋಗ್ಯಳು ದಯಾದಾಕ್ಷಿಣ್ಯಗಳೆಂಬ ಗುಣಗಳುಂಟೆಂಬುದೇ ಅವಳಿಗೆ ತಿಳಿಯದು ಮಹಾದುಷ್ಟಳಾದ ಅವಳು ಸ್ವಲ್ಪವೂ ಲಕ್ಷ್ಯವಿಲ್ಲದೆ ಬಹು ಸಾಧುವಾದ ಆತನನ್ನು ಬಾಯಿಗೆ ಬಂದಹಾಗೆಲ್ಲ ಬಯ್ದು ಹೊಡೆದು ಪರಿಪರಿಯಾಗಿ ಬಾಧೆಗೊಳಿಸುತ್ತ "ಎಲಾ ಮುಂಡೆಯ ಮಗನೇ! ಮದುವೆಯಾದವನು ಹೆಂಡತಿಗೆ ಅನ್ನವಸ್ತ್ರಗಳನ್ನು ಕೊಟ್ಟು ಕಾಪಾಡಬೇಡವೆ? ಮನೆಯಲ್ಲಿ ಸುಮ್ಮನೆ ಕುಳಿತರೆ ಸಂಸಾರವಾಗುವುದು ಹೇಗೆ? ಹೋಗು ಭಿಕ್ಷವನೆತ್ತಿಕೊಂಡು ಬಂದು ಕೊಡು. ನಿನ್ನ ಕಷ್ಟವು ನನಗೆ ಬೇಕಾಗಿರುವದಿಲ್ಲ, ನಿನ್ನನ್ನು ಬಿಟ್ಟು ಮತ್ತೊಬ್ಬನನ್ನು ಕೈಹಿಡಿದಿದ್ದರೆ ಎಷ್ಟೋ ಸೌಖ್ಯವನ್ನನುಭವಿಸುತ್ತಿದ್ದೆನು. ನಾನು ಮಾಡಿದ ದುಷ್ಕರ್ಮದಿಂದ ನಿನಗೆ ಹೆಂಡತಿಯಾದೆನು, ಎಂದು ಮನಸ್ಸಿಗೆ ಬಂದಂತೆ ನಿಂದಿಸಲು ಮಹಾ ಶಾಂತಚಿತ್ತನಾದ ಧರ್ಮಶರ್ಮನು ಹೆಂಡತಿಯು ಕೊಡುತ್ತಿದ್ದ ತೊಂದರೆಗಳಿಗೂ, ಅವಳಾಡುತ್ತಿದ್ದ ದುರ್ಭಾಷೆಗಳಿಗೂ ಮಾನಗೆಟ್ಟು ಸೈರಿಸಲಾರದೆ ಭಿಕ್ಷಾವೃತ್ತಿಗೆ ಪ್ರಾರಂಭಿಸಿ ಆ ಗ್ರಾಮದಲ್ಲಿಯೂ ಸುತ್ತುಮುತ್ತಲಿನ ಹಳ್ಳಿಗಳಲ್ಲಿಯೂ ಭಿಕ್ಷವನ್ನು ತಿರಿದು ತಂದು ಹೆಂಡತಿಯ ವಶಕ್ಕೆ ಕೊಡುತ್ತಿದ್ದನು ಸತ್ಪುರುಷನೆಂದು ಬಗೆದು ಎಲ್ಲರೂ ಹೆಚ್ಚುಹೆಚ್ಚಾಗಿ ಭಿಕ್ಷವನ್ನು ಹಾಕುತ್ತಿದ್ದರು. ಆ ಪರಮಪಾಪಿಷ್ಠೆಯಾದ ಚಂಡಿಕೆಯು ಆತನ ಕಷ್ಟಗಳನ್ನು ಕುರಿತಾಲೋಚಿಸದೆ ತಂದ ಅಕ್ಕಿ ಮೊದಲಾದ ಪದಾರ್ಥಗಳನ್ನು ರುಚಿಯಾಗಿ ಪಕ್ವಮಾಡಿ ತಾನುಮಾತ್ರ ಹೊಟ್ಟೆಯತುಂಬ ಭಕ್ಷಿಸಿ ಆ ಬಳಿಕ ಪಾತ್ರೆಯ ಅಡಿಯಲ್ಲಿ ಸೀದುಹೋಗಿದ್ದ ಸೀಕಲನ್ನೂ ನೀರನ್ನೂ ನಾಯಿಗೆ ಹಾಕಿದಂತೆ ಅವನಿಗೆ ಹಾಕುತ್ತಿದ್ದಳು ಆತನದನ್ನೆ ಅಮೃತವಾಗಿ ಭಾವಿಸಿ ಅವಳು ಕೊಟ್ಟುದರಲ್ಲಿಯೇ ಹೊಟ್ಟೆಯನ್ನು ತುಂಬಿಸಿಕೊಳ್ಳುತ್ತಿದ್ದನು.

ದುಷ್ಟಳಾದ ಅವಳಾತನನ್ನು ಅಷ್ಟರಲ್ಲಿಯೇ ಬಿಡುತ್ತಿರಲಿಲ್ಲ ಪ್ರತಿದಿನವೂ ಪ್ರಾತಃಕಾಲದಲ್ಲಿ ನಿದ್ರೆಯಿಂದೇಳುತ್ತಲೇ ಹಗ್ಗವನ್ನು ತೆಗೆದುಕೊಂಡು ತನ್ನ ಕೈಗಳು ನೋಯುವವರೆಗೂ ಆ ಪರಮ ಸಾಧುವನ್ನು ಹೊಡೆದು ಹೆಂಡತಿಯನ್ನು ಸೌಖ್ಯವಾಗಿ ಬಾಳಿಸದ ನಿನಗಿದೇ ಶಿಕ್ಷಣವೆಂದು ಹೇಳಿ ಭಿಕ್ಷಕ್ಕೆ ಕಳುಹುತ್ತಿದ್ದಳು ಹೀಗೆ ಮಾಡುವುದವಳಿಗೆ ರೂಢಿಯಾಗಿ ಹೋಗಿದ್ದಿತು ಆತನು ಆ ದೆಬ್ಬೆಗಳಂ ತಾಳಲಾರದೆ ತಲ್ಲಣಿಸುತ್ತ ತಂಬಿಗೆಯನ್ನು ತೆಗೆದುಕೊಂಡುಹೋಗಿ ತಿರಿದು ತಂದು ಹೆಂಡತಿಗೆ ಸಮರ್ಪಿಸುತ್ತಿದ್ದನು ಆತನು ತನ್ನ ದುಸ್ಥಿತಿಯನ್ನು ಯಾರಿಗೂ ಒಂದು ದಿನವಾದರೂ ಹೇಳಿದವನಲ್ಲ.

ಆ ನೀಚಳು ಪ್ರತಿದಿನವೂ ತಪ್ಪದೆ ಆ ಬ್ರಾಹ್ಮಣನನ್ನು ಹಗ್ಗದಿಂದ ಹೊಡೆಯುತ್ತಿದ್ದುದನ್ನು ನೋಡುತ್ತಿದ್ದರೂ ಆ ಊರಿನವರು ಆ ಚಂಡಿಕೆಯ ಬಾಯಿಗೆ ಹೆದರಿ ಯಾವ ಮಾತನ್ನಾಗಲಿ ಆಡಲಾರದೆ ಸಂಕಟಪಡುತ್ತ ಅಯ್ಯೋ! ಪಾಪ!

ಬ್ರಾಹ್ಮಣನ ಹಣೆಯಬರಹವೇ ಹೀಗಿರುವಾಗ ಯಾರೇನು ಮಾಡಬಲ್ಲರು ? ಎಂದು ಬಗೆದು ಸುಮ್ಮನಿರುತ್ತಿದ್ದರು ಸಾವಿರವೇಕೆ? ಆ ಚಂಡಿಕೆಯನ್ನು ಕಂಡರೆ ಪ್ರಳಯಕಾಲದ ಚಂಡಿಕೆಯನ್ನು ಕಂಡಂತೆ ಗ್ರಾಮಸ್ಥರು ಭೀತಚಿತ್ತರಾಗಿ ದೂರವಾಗಿ ತೊಲಗುತ್ತಿದ್ದರು.

ಸತ್ಯಶೀಲ! ಸೃಷ್ಟಿಯಲ್ಲಿ ಗೃಹಸ್ಥನಾದವನಿಗೆ ಪುರಾಕೃತಪುಣ್ಯದಿಂದ ಒಳ್ಳೆ ಹೆಂಡತಿಯು ದೊರೆಯಬೇಕಲ್ಲದೆ ಬೇರೆಯಿಲ್ಲ. 1ಸ್ತ್ರೀಗೆ ಪತಿಯೇ ದೇವರು, ಪತಿಯೇ ಬಂಧುವು, ಪತಿಯೇ ಗತಿಯು, ಪತಿಗಿಂತಲೂ ಅಧಿಕವಾದ ಗತಿಯು ಸ್ತ್ರೀಗೆ ಇಲ್ಲವೇ ಇಲ್ಲ. 2ಪತಿಯು ಮರದಡಿಯಲ್ಲಿದ್ದರೂ ಅದೇ ಸತಿಗೆ ಮನೆ. ಅವನಿಲ್ಲದಿದ್ದರೆ ಅದು ಉಪ್ಪರಿಗೆಯ ಮನೆಯಾದರೂ ಕಾಡು. 3 ಸ್ತ್ರೀಯರು ಯಜ್ಞಗಳನ್ನು ಮಾಡಬೇಕಾಗಿರುವುದಿಲ್ಲ, ವ್ರತಗಳನ್ನು ಮಾಡಬೇಕಾಗಿಲ್ಲ, ಉಪವಾಸವನ್ನು ಮಾಡಬೇಕಾಗಿರುವುದಿಲ್ಲ, ನಿಜವಾದ ಭಕ್ತಿಯಿಂದ ಪತಿಯನ್ನು ಸೇವಿಸುತ್ತಿದ್ದರೆ ಅವಳಿಗೆ ಸ್ವರ್ಗದಲ್ಲಿಯೂ ಪೂಜ್ಯತೆಯುಂಟು. 4ಗಂಡನು ಬದುಕಿದ್ದರೆ ತಾನು ಬದುಕಿರುವಳೂ, ಗಂಡನು ಸತ್ತರೆ ತಾನು ಸಾಯುವಳೂ, ಗಂಡನು ಸಂತೋಷದಿಂದಿದ್ದರೆ ತಾನು ಸಂತೋಷದಿಂದಿರುವಳೂ ಯಾವಳೋ ಅಂತಹ ಸಹಜವಾದ ಸ್ನೇಹರಸದಿಂದ ಶೋಭಿಸುವ ಕುಲವನಿತೆಗೆ ಯಾರು ಸಮನಾಗುವರು? ವತ್ಸ! ಈ ಕಲಿಯುಗದಲ್ಲಿ ಕೆಲವರು ಸ್ತ್ರೀಯರು ಪರಕೀಯ ಧರ್ಮವನ್ನು ಅವಲೋಕಿಸಿ ತಮ್ಮ ಧರ್ಮವನ್ನು ಮಾರ್ಪಡಿಸಿ, ಓಹೋ! ಗಂಡಸರು ಹೆಂಗಸರನ್ನು ಸ್ವಾಧೀನಪಡಿಸಿಕೊಳ್ಳುವುದಕ್ಕಾಗಿ ತಮ್ಮ ಮೂಗಿಗೆ ನೇರವಾಗಿ ಸ್ತ್ರೀಯರು ಅಸ್ವತಂತ್ರರು, ಎಲ್ಲ ವಯಸ್ಸಿನಲ್ಲಿಯೂ ಆಕಾಲಕ್ಕೆ ತಕ್ಕಂತೆ ತಂದೆಗೂ ಗಂಡನಿಗೂ ಮಕ್ಕಳಿಗೂ ಅಧೀನರಾಗಿರಬೇಕು ಎಂದುಮುಂತಾಗಿ ಹೇಳುತ್ತಿರುವರು ಇಂತಹ ಶಾಸ್ತ್ರಗಳೆಲ್ಲವೂ ಗಂಡಸರೇ ಮಾಡಿದುವು ಹೆಂಗಸರು ವಿದ್ಯಾವಂತರಾಗಿ ಮಾಡಿದ್ದರೆ ಇಂತಪ್ಪ ಶಾಸ್ತ್ರಗಳನ್ನು ಮಾಡುತ್ತಿರಲಿಲ್ಲ ಎಂದು ಮೊದಲಾಗಿ ಹೇಳುತ್ತ ವಿಶೃಂಖಲವೃತ್ತಿಯಿಂದ ಪತಿಯಲ್ಲಿ ಸ್ವಲ್ಪವಾದರೂ ಭಕ್ತಿಯಿಲ್ಲದೆ ವರ್ತಿಸುತ್ತಿರುವರು ಇದು ಕಲಿಯುಮಹಿಮೆ ಮಾಡುವುದೇನು ?

---

1 ಪತಿರ್ಹಿದೇವೋ ನಾರೀಣಾಂ ಪತಿರ್ಬಂಧುಃ ಪತಿರ್ಗತಿಃ ||
ಪತ್ಯುರ್ಗತಿ ಸಮಾನಾಸ್ತಿ ದೈವತಂ ವಾ ಯಥಾಪತಿಃ || ೧ ||

2 ವೃಕ್ಷಮೂಲೇಪಿದಯಿತೋ ಯತ್ರ ತಿಷ್ಠತಿ ತದ್ಗೃಹಂ ||
ಪ್ರಾಸಾದಸ್ತೇನಹೀನಸ್ತು ಕಾಂತಾರಾವತಿರಿಚ್ಯತೇ || ೨ ||

3 ನಾಸ್ತಿ ಸ್ತ್ರೀಣಾಂ ಪೃಥಗ್ಯಜ್ಞೋ ನವ್ರತಂ ನಾಪ್ಯುಪೋಷಣಂ ||
ಪತಿಂ ಶುಶ್ರೂಷತೇ ಯೇನ ತೇನ ಸ್ವರ್ಗೇ ಮಹೀಯತೇ || ೩ ||

4 ಜೀವತಿ ಜೀವತಿನಾಥೇ ಮೃತೇ ಮೃತಾಯಾ ಮುದಾಯುತಾ ಮುದಿತೇ ||
ಸಹಜಸ್ನೇಹರಸಾಲಾ ಕುಲವನಿತಾತೇನತ ಲ್ಯಾಸ್ಯಾತ್ || ೪ ||

ಶಿಷ್ಯಾಗ್ರಣೀ ! ಯಾವಳು ದುಷ್ಟೆಯಾಗಿ ವಿವಾದಶೀಲೆಯಾಗಿರುವಳೋ ಅಂಥ ಹೆಂಡತಿಯನ್ನು ಬಿಟ್ಟುಬಿಡಬೇಕೆಂದು ನೀತಿಜ್ಞರು ಹೇಳುತ್ತಾರೆ ಕೆಲವರು ಹಾಗೆ ಬಿಟ್ಟುಬಿಡುತ್ತಾರೆ. ಪಕ್ಕದ ಊರಲ್ಲಿದ್ದ ಮಾಧವರಾಯನೆಂಬ ಗೃಹಸ್ಥನು ಐದಾರು ಮಕ್ಕಳಾಗುವವರೆಗೂ ಅತಿಕಷ್ಟದಿಂದ ಸಂಸಾರ ಮಾಡಿಕೊಂಡಿದ್ದರೂ ನರಸಮ್ಮನೆಂಬ ತನ್ನ ಹೆಂಡತಿಯಿಂದ ಹಲ್ಲುಮುರಿಯುವಂತೆ ಪೆಟ್ಟುಗಳನ್ನು ತಿಂದು ಕಡೆಗೆ ವೈರಾಗ್ಯವನ್ನು ವಹಿಸಿ ಪುತ್ರವತಿಯಾದ ಅವಳನ್ನೂ ಪುತ್ರರನ್ನೂ ಬಿಟ್ಟು ದೇಶಾಂತರಗತನಾದನು ಧರ್ಮಶರ್ಮನಿಗೆ ಅಂತಹ ವೈರಾಗ್ಯವು ಹುಟ್ಟಲಿಲ್ಲ. ಪ್ರತಿದಿನವೂ ಚಂಡಿಕೆಯ ಕೈಯಲ್ಲಿ ಪೆಟ್ಟುಗಳನ್ನು ತಿನ್ನುವುದೇ ಅಭ್ಯಾಸವಾಗಿದ್ದಿತು. 5 ದುಷ್ಟಳಾದ ಹೆಂಡತಿ, ದುರ್ಜನನಾದ ಸ್ನೇಹಿತನು, ಪ್ರತ್ಯುತ್ತರವನ್ನು ಕೊಡುವ ಸೇವಕನೂ, ಹಾವು ನೆಲಸಿರುವ ಮನೆಯಲ್ಲಿ ಮಾಡುವ ವಾಸವೂ ಮೃತ್ಯುಪ್ರದವಾದುವು. ಹಾಗೆ ಚಂಡಿಕೆಯಿರುವ ಮನೆಯು ಆ ಬ್ರಾಹ್ಮಣನಿಗೆ ಮೃತ್ಯುಪ್ರಾಯವಾಗಿದ್ದಿತು ಹೀಗೆಯೇ ಕೆಲವು ದಿನಗಳು ಕಳೆದುವು. ಬಳಿಕ ಒಂದುದಿನ ಧರ್ಮಶರ್ಮನು ಬೆಳಗ್ಗೆ ಹಗ್ಗದ ಪೆಟ್ಟುಗಳನ್ನು ತಿಂದು ತಂಬಿಗೆಯನ್ನು ತೆಗೆದುಕೊಂಡು ತಿರಿಕೆಗಾಗಿ ಬೇರೊಂದು ಗ್ರಾಮಕ್ಕೆ ಹೋಗಿ ಅಲ್ಲಿಗೆ ಸ್ವಲ್ಪ ದೂರದಲ್ಲಿರುವ ಮತ್ತೊಂದು ಗ್ರಾಮದಲ್ಲಿ ದೊಡ್ಡ ಸಮಾರಾಧನೆಯಾಗುವುದೆಂದೂ ದಕ್ಷಿಣೆಯನ್ನೂ ಕೊಡುವರೆಂದೂ ಕೇಳಿ ಅಲ್ಲಿಗೆ ಹೋಗುತ್ತಿದ್ದ ಬ್ರಾಹ್ಮಣರೊಡನೆ ಸೇರಿ ತಾನೂ ಹೊರಟನು.

ಅಲ್ಲಿ ಸಮಾರಾಧನೆಯು ಚೆನ್ನಾಗಿ ನಡೆಯಿತು ಮೊದಲಿಂದಲೂ ಹೊಟ್ಟೆಯತುಂಬ ಅನ್ನವನ್ನು ತಿಂದರಿಯದ ಧರ್ಮಶರ್ಮನು ಅಲ್ಲಿ ಷಡ್ರಸೋಪೇತವಾದ ಭೋಜನವನ್ನು ತೃಪ್ತಿಯಾಗಿ ಭುಜಿಸಿ ಯಜಮಾನನಿತ್ತ ದಕ್ಷಿಣೆಯನ್ನು ತೆಗೆದುಕೊಂಡು ತನ್ನ ಮನೆಗೆ ಹೋಗುವುದಕ್ಕೆ ಪ್ರಯಾಣವಾದನು ಆದರೆ ಅನೇಕ ದಿನಗಳಿಂದ ತಕ್ಕಷ್ಟು ಆಹಾರವಿಲ್ಲದಿದ್ದು ಆ ದಿನ ತುಷ್ಟಿಯಾಗಿ ಊಟವನ್ನು ಮಾಡಿದುದರಿಂದ ಅಧಿಕವಾದ ಆಯಾಸವನ್ನುಹೊಂದಿ ಮುಂದೆ ಒಂದು ಹಜ್ಜೆಯನ್ನಾದರೂ ಇಡಲಾರದೆ ಒಂದಾನೊಂದು ಮನೆಯ ಮುಖಶಾಲೆಯ ವೇದಿಕೆಯಮೇಲೆ ತಂಬಿಗೆಯನ್ನು ಪಕ್ಕದಲ್ಲಿಟ್ಟುಕೊಂಡು ಮಲಗಿದನು ಕೊಂಚ ಮಟ್ಟಿಗೆ ಆಯಾಸವನ್ನು ತೀರಿಸಿಕೊಂಡು ಹೋಗಬೇಕೆಂಬ ಇಚ್ಛೆಯುಳ್ಳವನಾಗಿದ್ದರೂ ತೂಕಡಿಕೆಬಂದು ಗಾಢನಿದ್ರಾವಶನಾದನು ಯಾರೂ ಆತನನ್ನು ಎಚ್ಚರ

5 ದುಷ್ಟಾಭಾರ್ಯಾಶಠಂ ಮಿತ್ರಂ ಭೃತ್ಯಶ್ಚೋತ್ತರದಾಯಕಃ |
ಸಸರ್ಪೇಚಗೃಹೇವಾಸೋ ಮೃತ್ಯುರೇವ ನಸಂಶಯಃ ||
ವಿವಾದಶೀಲಾಂ ಸ್ವಯಮರ್ಥಚೋರಿಣೀಂ ಪರಾನುಕೂಲಾ ಪರಿಹಾಸಭಾಷಿಣೀಂ||
ಅಗ್ರಾಶಿನೀ ಮನ್ಯಗೃಹಪ್ರವೇಶಿನೀಂ ತ್ಯಜಂತಿಭಾರ್ಯಾಂ ದಶಪುತ್ರಮಾತರಂ ||

ಗೊಳಿಸಲಿಲ್ಲ. ಮಾರನೆಯ ದಿನದಲ್ಲಿ ಸೂರ್ಯೋದಯವಾದ ಒಂದು ಗಳಿಗೆಯ ಮೇಲೆ ಆತನಿಗೆ ಎಚ್ಚರವಾಯಿತು ಎಚ್ಚತ್ತಬಳಿಕ ತನ್ನ ಪ್ರಮಾದವನ್ನು ಕುರಿತು ಅಯ್ಯೋ ! ಮರೆತು ನಿದ್ರಿಸಿವೆನಲ್ಲ ! ಮುಂದೇನುಗತಿ ? ಹಾ ! ದೈವವೇ ! ನಾನಿನ್ನು ಬದುಕಿರುವೆನೇ ? ನನ್ನ ಗ್ರಾಮವು ಬಹುದೂರದಲ್ಲಿರುವುದಲ್ಲ ! ನಡೆಯಲುತ್ಸಾಹವೇ ಇಲ್ಲವಲ್ಲ ಈ ದಿನದಲ್ಲಿ ನಾನು ಮನೆಗೆ ಹೋಗದಿದ್ದರೆ ರಕ್ಕಸಿಯಾದ ನನ್ನ ಹೆಂಡತಿಯು ಪ್ರಾಣವನ್ನೇ ಹಿಂಡಿಬಿಡುವಳಲ್ಲ ! ಎರಡು ದಿನಗಳ ಪೆಟ್ಟುಗಳನ್ನು ಒಂದೇ ದಿನವನುಭವಿಸಬೇಕಾಯಿತಲ್ಲ ! ಏನುಮಾಡಲಿ ? ಎಂದು ಭಯಪಟ್ಟು ಕಳವಳಗೊಂಡು ಹಲುಬಿ ಹಂಬಲಿಸಿ ಕಟಿತಟವದಿರೆಕಾತರಿಸಿ ಡೋಲಾಂದೋಳಿತಮಾನಸನಾಗಿ ಒಂದಿನಿಸಾಲೋಚಿಸಿ ಹೇಗೂ ಹೋಗದಿದ್ದರೆ ಆಗದೆಂದು ಬಗೆದು ಅಕ್ಕಿತುಂಬಿದ ತನ್ನ ದೊಡ್ಡ ತಂಬಿಗೆಯನ್ನೆತ್ತಿಕೊಂಡು ಪ್ರಯಾಣವಾಗಿ ಹೊರಡಲಾರಂಭಿಸಿದನು.

ಅತ್ತ ಚಂಡಿಕೆಯು ಆ ದಿನದ ಬೆಳಗ್ಗೆ ತನ್ನ ಗಂಡನು ಮನೆಯಲ್ಲಿಲ್ಲದಿದ್ದುದರಿಂದ ಎಂದಿನಂತೆ ಗಂಡನನ್ನು ಪ್ರಗ್ರಹಪ್ರಹಾರಗಳಿಂದ ಶಿಕ್ಷಿಸುವುದಕ್ಕವಕಾಶವಿಲ್ಲವೆಂದಾಲೋಚಿಸಿ ಬಾಗಿಲಬಳಿಗೆ ಬಂದು ಬಾಗಿನೋಡಿದಳು ಗಂಡನ ಆಗಮನ ಸೂಚನೆಯು ಕಾಣಲಿಲ್ಲ ಆದರೂ ವಾಡಿಕೆಯುಪ್ರಕಾರವಾಗಿ ಮಾಡದಿದ್ದರೆ ರೂಢಿಯು ತಪ್ಪಿಹೋಗುವುದೆಂದು ಭಾವಿಸಿ, ಸಮಯಕ್ಕೆ ಸರಿಯಾಗಿ ಬಾರದೆ ತನ್ನಿಂದ ಪ್ರಹಾರಗಳನ್ನು ಹೊಂದದೆ ತಾಮಸಮಾಡಿದುದರಿಂದ ಭರ್ತೃವಿನ ಮೇಲೆ ಕೋಪಗೊಂಡು ಔಡುಗಚ್ಚುತ್ತ ಹಲ್ಲುಗಡಿಯುತ್ತ ಕೈಗಳನ್ನು ಹಿಸಿಕಿಕೊಳ್ಳುತ್ತ ಒಳ್ಳೆಯದು ! ಆ ಬುದ್ಧಿಹೀನನು ನನ್ನ ವಾಡಿಕೆಯನ್ನು ತಪ್ಪಿಸಬೇಕೆಂದು ಬಗೆದು ನಿಂತಿರಬಹುದು ಬರಲಿ ! ತನ್ನ ಗತಿಯನ್ನು ಆಗಳಲ್ಲವೆ ತಿಳಿದುಕೊಳ್ಳುವನು ? ಈಗ ಸುಮ್ಮನೆ ಹೇಗಿರಲಿ ? ಕೈಯತೀಟೆಯನ್ನು ಹೇಗೆ ಪರಿಹರಿಸಿಕೊಳ್ಳಲಿ ? ಅಯ್ಯೋ ಆ ಮುಂಡೆಮಗನಿಗೆ ನನ್ನ ಭಯವೇ ಇಲ್ಲದೆಹೋಯಿತಲ್ಲ ! ಆಗಲಿ ! ಸಮಯಕ್ಕೆ ಸರಿಯಾಗಿ ಬಾರದ ಅಪರಾಧಕ್ಕಾಗಿ ಇಮ್ಮಡಿಯು ಪೆಟ್ಟುಗಳನ್ನು ಹೊಡೆಯದೆ ಬಿಡುವೆನೇ ? ಈಗ ಸುಮ್ಮನಿರಲಾಗದು ನನ್ನ ಅಭ್ಯಾಸಕ್ಕೂ ವ್ರತಕ್ಕೂ ಲೋಪವು ಬರುವುದು ಇವಕ್ಕೇನುಪಾಯವು ? ಎಂದು ಕೊಂಚಹೊತ್ತಾಲೋಚಿಸಿ ಹಗ್ಗವನ್ನು ಹೊಸೆದು ಹಿತ್ತಲಿಗೆಹೋಗಿ ಅಲ್ಲಿದ್ದ ಒಂದರಳಿಯ ಮರವನ್ನು ಕಂಡು ಸಮೀಪಿಸಿ ಆಗ್ಗೆ ಆ ಅಶ್ವತ್ಥವೃಕ್ಷವೇ ತನ್ನ ಗಂಡನೆಂದು ಭಾವಿಸಿ ಅತ್ಯುಗ್ರತೆಯಿಂದ ಗಂಡನನ್ನು ಬಯ್ದು ಹಾಗೆಯೇ ಬಯ್ಯುತ್ತ ಹಗ್ಗದಿಂದ ಆ ಮರದ ಬೊಬ್ಬಡೆಯು ಒಡೆದುಹೋಗುವಂತೆಯೂ ಹಗ್ಗವು ಹರಿದುಹೋಗುವಂತೆಯೂ ತಾಡಿಸಿದಳು ಸತ್ಯಶೀಲನೇ ! ಆ ವಿನೋದವನ್ನೇನೆಂದು ಹೇಳಲಿ ? ಅವಳಿಂದ ಹೊಡೆಯಲ್ಪಟ್ಟ ಆ ಅಶ್ವತ್ಥವೃಕ್ಷದಮೇಲೆ

ಬಹುಕಾಲದಿಂದ ಒಬ್ಬ ಬ್ರಹ್ಮರಾಕ್ಷಸನು ವಾಸವಾಡುತ್ತಿದ್ದನು ಆ ಸಂಗತಿಯು ಯಾರಿಗೂ ತಿಳಿಯದು ಅಂತಾ ಬ್ರಹ್ಮರಕ್ಷಸನು ಮಹೋಗ್ರಮೂರ್ತಿಯಾಗಿ ತಾನಿದ್ದ ಆ ಪಿಪ್ಪಲವೃಕ್ಷವನ್ನು ಹಗ್ಗದಿಂದ ಬಲವಾಗಿ ಹೊಡೆಯುತ್ತಿದ್ದುದನ್ನು ಕಂಡು ಅವಳು ತನ್ನ ಹೆಸರಿಗೆ ತಕ್ಕಂತೆ ಮಹಾದುಷ್ಟೆಯಾದುದರಿಂದ ತಾನಲ್ಲಿರುವುದನ್ನು ತಿಳಿದು ತನ್ನನ್ನು ಒಂದುವೇಳೆ ಹೊಡೆದಾಳೆಂದು ಭಯಪಟ್ಟು ತ್ವರೆಯಾಗಿ ಆ ಮರವನ್ನು ಬಿಟ್ಟುಹೋಗುವುದೊಳ್ಳೆಯದೆಂದಾಲೋಚಿಸಿ ಮರದಿಂದ ದುಮುಕಿ ಅವಳಿಗೆ ಗೋಚರನಾಗಿ ಓಡಿಹೋದನು. ಚಂಡಿಕೆಯ ಪ್ರಭಾವವು ಗೊತ್ತಾಯಿತೇ ? ಕುಮಾರ ! ಬ್ರಹ್ಮರಾಕ್ಷಸನಾರೀತಿಯಾಗಿ ಓಡುತ್ತಿರಲು ಧರ್ಮಶರ್ಮನು ಅಕ್ಕಿಯ ತಂಬಿಗೆಯನ್ನು ತಲೆಯಮೇಲಿಟ್ಟುಕೊಂಡು ದೀನವದನದಿಂದ ರಾಕ್ಷಸನು ಓಡಿಹೋದ ಮಾರ್ಗದಿಂದಲೇ ಬರುತ್ತಿದ್ದನು ದೂರದಲ್ಲಿ ಬರುತ್ತಿರುವಾಗಲೇ ಬ್ರಹ್ಮರಾಕ್ಷಸನಾತನನ್ನು ನೋಡಿ ಆತನ ದೈನ್ಯವನ್ನು ಕುರಿತು ಮರುಕಗೊಂಡು ಅಯ್ಯೋ ! ಈ ಬ್ರಾಹ್ಮಣನು ಆ ಪಾಪಿಷ್ಠೆಯ ಕೈಯಿಂದ ಪೆಟ್ಟುಗಳನ್ನು ತಿನ್ನುವುದಕ್ಕೆ ಹೋಗುತ್ತಿರುವನಲ್ಲ ! ಈತನು ಸಾವಕಾಶಮಾಡಿದಬಗ್ಗೆ ಅವಳು ಅತ್ಯಾಗ್ರಹವನ್ನು ಪಡೆದಿರುವಳಲ್ಲ ! ನನ್ನಂಥವನುಕೂಡ ಅವಳಿಗೆ ಭಯಪಟ್ಟು ಓಡಿಹೋಗುತ್ತಿರುವೆನಲ್ಲ ! ಪಾಪ ! ಅವಳೀತನನ್ನು ಈಗ ಬದುಕಲೀಯುವಳೆ ? ಅನ್ಯಾಯವಾಗಿ ಹೋಗಿ ಆ ಪರಮಪಾಪಿಷ್ಠೆಯಿಂದ ಹೊಡೆಯಲ್ಪಟ್ಟು ಸಾಯುವನು ಹೇಗಾದರೂ ಅವಳಬಾರಿಗೆ ಸಿಕ್ಕದಂತೆಮಾಡಿ ನಾನೀತನನ್ನು ಕಾಪಾಡಿ ಸುಖಗೊಳಿಸುವೆನು ಬಹುಕಾಲದಿಂದ ಈತನ ಹಿತ್ತಲಲ್ಲಿರುವ ಅರಳಿಯಗಿಡದಮೇಲೆ ನಾನು ವಾಸಮಾಡಿಕೊಂಡಿದ್ದುದಕ್ಕೆ ಈ ಬ್ರಾಹ್ಮಣನಿಗೆ ಈ ಉಪಕಾರವನ್ನು ಮಾಡತಕ್ಕುದು ಉಚಿತವಾಗಿರುವುದು ಎಂದು ತನ್ನಲ್ಲಿ ನಿಶ್ಚಯಿಸಿ ಮನುಷ್ಯರೂಪವನ್ನು ತಳೆದು ಧರ್ಮಶರ್ಮನಿಗಿದಿರಾಗಿ ಹೋಗಿ ಅಲ್ಲಿ ನಿಲ್ಲಿಸಿ ಇಂತೆಂದನು.

ಎಲೈ ನಿರ್ಭಾಗ್ಯನೇ ! ಧರ್ಮಶರ್ಮನೇ ! ಏಕೆ ಇಷ್ಟು ತ್ವರೆಯಾಗಿ ಹೋಗುತ್ತಿರುವೆ ? ಎಂದು ಕೇಳಿದನು. ಆ ಬ್ರಾಹ್ಮಣನು ತನಗೆ ಪರಿಚಯವಿಲ್ಲದವನು ತನ್ನ ಹೆಸರನ್ನು ಹೇಳಿ ಕರೆದು ಈಬಗೆಯಿಂದ ಕೇಳಿದುದಕ್ಕೆ ಅತ್ಯಾಶ್ಚರ್ಯವನ್ನು ಹೊಂದಿ ನಿಂತು ಅಯ್ಯಾ ! ತಾವು ಯಾರು ? ನಿಮ್ಮನ್ನು ನಾನು ಹಿಂದೆಯೆಂದೂ ಕಾಣೆನಲ್ಲ ! ನನ್ನ ಹೆಸರು ನಿಮಗೆ ಹೇಗೆ ತಿಳಿಯಿತು ? ಎಂದು ಕೇಳಿದನು ಆ ಬ್ರಹ್ಮರಾಕ್ಷಸನು ನೀನು ನನ್ನನ್ನು ಕಂಡಿಲ್ಲ ಆದರೆ ನಾನು ನಿನ್ನನ್ನು ಕಂಡಿರುವೆನು. ನಿನ್ನ ವಿಚಾರವೆಲ್ಲವನ್ನೂ ತಿಳಿದಿರುವೆನು. ಅದಂತಿರಲಿ ! ಏಕೆ ನೀನಿಷ್ಟು ತ್ವರೆಯಾಗಿ ಹೋಗುತ್ತಿರುವೆ ? ಎಂದು ಕೇಳಿದನು. ಅಯ್ಯೋ! ನನ್ನ ಬಾಳನ್ನು ಕೇಳುವಿರಾ ? ಏನೆಂದು ಹೇಳಲಿ ? ನಾನು ನಿನ್ನೆ ಗ್ರಾಮಾಂತರಕ್ಕೆ

ಹೋಗಿದ್ದೆನು. ನಿನ್ನೆಯೇ ಬರಲಾಗಲಿಲ್ಲ. ಆಯಾಸವಾಗಿದ್ದುದರಿಂದ ಎಲ್ಲಿಯೋ ಮಲಗಿದೆನು. ಎಚ್ಚರವಾಗದಷ್ಟು ನಿದ್ದೆಬಂತು. ಈ ದಿನ ಪ್ರಾತಃಕಾಲದಲ್ಲಿ ಎಚ್ಚರವಾಯಿತು. ನನ್ನ ಹೆಂಡತಿಯು ದಿನಾಲೂ ಬೆಳಗಿನ ಹೊತ್ತಿನಲ್ಲಿ ನನ್ನನ್ನು ಹಗ್ಗದಿಂದ ಚೆನ್ನಾಗಿ ಪ್ರಹರಿಸಿ ಭಿಕ್ಷಕ್ಕೆ ಕಳುಹುವ ವಾಡಿಕೆ. ಈ ದಿನದಲ್ಲಿ ಹಾಗೆ ನಡೆಯಲವಕಾಶವಿಲ್ಲವಾಯಿತು. ಈಗ ಮನೆಗೆ ಹೋದರೆ ನನ್ನ ಗತಿಯೇನಾಗುವುದೋ ದೇವರೇ ಬಲ್ಲನು. ಇಂದು ಅವಳು ನನಗಿಕ್ಕುವ ಹಿಂಸೆಯಿಂದ ನನ್ನ ಪ್ರಾಣಗಳುಳಿವುದೇ ಸಂಶಯವಾಗಿದೆ. ಮಹಾತ್ಮಾ! ಇನ್ನು ನನ್ನನ್ನು ತಡೆಯಬೇಡ, ಅವಳ ದೆಸೆಯಿಂದ ಪ್ರಾಪ್ತವಾಗಿರುವ ಭಯದಿಂದ ನನ್ನ ಹೃದಯವು ತಲ್ಲಣಿಸುತ್ತಿರುವುದು. ಆದುದರಿಂದಲೇ ಬೇಗಬೇಗನೆ ಹೋಗುತ್ತಿರುವೆನು. ದಾರಿಯನ್ನು ಬಿಟ್ಟುಬಿಡು ಎಂದು ಬೇಡಿಕೊಂಡನು. ಕಣ್ಣುತುಂಬ ನೀರನ್ನಿಟ್ಟನು. ಬ್ರಹ್ಮರಾಕ್ಷಸನಿಗೂ ಕಂಬನಿಯುಯುಕ್ಕಿ ಬಂತು. ಅಯ್ಯೋ! ನನ್ನ ದುರ್ದಶೆಯಿಂಥದು ನನ್ನ ಪುರಃಕೃತ ಕರ್ಮವಿದು. ನನ್ನ ಸಲುವಾಗಿ ನೀವೇತಕ್ಕೆ ದುಃಖಿಸುವಿರಿ? ತೀರಿಸುವವರಾರು? ಆಲಸ್ಯವಾಗಿ ಹೋದರೆ ದ್ವಿಗುಣ ಶಿಕ್ಷೆಯಾಗುವುದು ನನಗೆ. ದಯವಿಟ್ಟು ದಾರಿಯನ್ನು ಬಿಡಿ, ನಿಮಗೆ ಪುಣ್ಯವು ಬರುವುದು ಎಂದು ಮತ್ತೆ ಹೇಳಿದನು.

ಆ ಬ್ರಾಹ್ಮಣನು ಹೇಳಿದುದೆಲ್ಲವೂ ಬ್ರಹ್ಮರಾಕ್ಷಸನು ತಿಳಿದಂಶವೇ. ಆದುದರಿಂದ ಆಶ್ಚರ್ಯಚಿತ್ತನಾಗದೆ ಆತನ ವಿಷಯದಲ್ಲಿ ಹೆಚ್ಚಾದ ಮರುಕವುಳ್ಳವನಾಗಿ ಎಲೈ ವಿಪ್ರವರ್ಯನೆ! ನಿನ್ನ ಕಷ್ಟವನ್ನರಿತ ನಾನು ನಿನಗೆ ಮೇಲುಮಾಡಬೇಕೆಂದು ಬಗೆದು ಈ ಬ್ರಾಹ್ಮಣರೂಪದಿಂದ ನಿನಗೆ ಕಾಣಿಸಿಕೊಂಡಿರುವೆನು. ನಾನು ಮಾನವನಲ್ಲ. ನಿನ್ನ ಮನೆಯ ಹಿತ್ತಲಲ್ಲಿರುವ ಅಶ್ವತ್ಥವೃಕ್ಷದಲ್ಲಿ ಚಿರಕಾಲದಿಂದಲೂ ವಾಸಿಸುತ್ತಿದ್ದ ಬ್ರಹ್ಮರಾಕ್ಷಸನು. ಲೋಗರೆಲ್ಲರೂ ನನ್ನ ಶಕ್ತಿಯನ್ನು ಕೇಳಿದರೆ ಸಾಕು, ಹೆದರಿ ಮೂರ್ಛಿತರಾಗುವರು. ಇಂತಪ್ಪ ನಾನು ನಿನ್ನ ಹೆಂಡತಿಗೆ ಹೆದರಿ ಚಿರಕಾಲದಿಂದ ವಾಸಿಸುತ್ತಿದ್ದ ಆ ವೃಕ್ಷವನ್ನು ಬಿಟ್ಟು ಓಡಿಬಂದೆನು. ಆ ದುಷ್ಟೆ - ಆ ಭ್ರಷ್ಟೆ - ಪಾಪಿಷ್ಠೆ ನೀನು ಹೊತ್ತಿಗೆ ಸರಿಯಾಗಿ ಪ್ರಹಾರಗಳನ್ನು ಪಡೆಯಲಿಕ್ಕೆ ಬರಲಿಲ್ಲವೆಂದು ಕೋಪಿಸಿ ಹೊಸೆದ ಹಗ್ಗವನ್ನು ಹಿಡಿದು ಭಯಂಕರಾಕಾರದಿಂದ ಬಂದು, ನಿನ್ನಮೇಲೆ ತನಗಿರುವ ಆಕ್ರೋಶವನ್ನು ತೀರಿಸಿಕೊಳ್ಳುವಳ ಹಾಗೆ ನಾವಿದ್ದ ಆ ಮರವನ್ನು ಹೊಡೆಯಲಾರಂಭಿಸಿದಳು. ಆಗ ನಾನವಳ ಉಗ್ರಾಕೃತಿಯನ್ನು ಕಂಡು ನನ್ನ ಸ್ಥಿತಿಯನ್ನರಿತು ನನ್ನನ್ನು ಎಲ್ಲಿ ಹೊಡೆವಳೋ ನಿನ್ನ ಗತಿಯೇ ನನಗೂ ಬರುವುದೋ ಏನೋ ಎಂದು ಬಗೆದು ಭಯಪಟ್ಟು ಆ ಸ್ಥಳವನ್ನೆ ಬಿಡುವುದುತ್ತಮವೆಂದು ಬಗೆದು ಬಂದೆನು. ಅಕಟಾ! ನಾನೇ ಅವಳ ಕ್ರೌರ್ಯಕ್ಕಿಷ್ಟು ಭೀತಿಗೊಂಡು ಪಲಾಯನಮಾಡಲು ಬಗೆದಿ

ರಲು ನೀನೇ ಅವಳ ವಶಕ್ಕೆ ಸಿಕ್ಕಿ ಬದುಕುವನು? ಈಗ ನೀನು ಮನೆಗೆಹೋದರೆ ನಿನ್ನ ಪ್ರಾಣಗಳನ್ನವಳು ತೆಗೆವುದೆ ನಿಜ. ಅವಳು ಕಡುಮುಳಿದಿರುವಳು. ಸುಮ್ಮನೆ ನಿನ್ನನ್ನು ಬಿಡುವಳಲ್ಲ. ಆದುದರಿಂದ ಮನೆಯ ಸುದ್ದಿಯನ್ನು ಬಿಟ್ಟು ಹಿಂದಕ್ಕೆ ತೆರಳು. ಖಂಡಿತವಾಗಿಯೂ ನೀನು ಮನೆಗೆ ಹೋಗಬೇಡ ಎಂದು ಬಹಳ ಕನಿಕರದಿಂದ ಹೇಳಿದನು.

ಬ್ರಹ್ಮರಾಕ್ಷಸನ ಈ ನುಡಿಗಳನ್ನು ಕೇಳಿ ಧರ್ಮಶರ್ಮನು ಮೊದಲು ಸ್ವಲ್ಪವಾಗಿ ಭಯಪಟ್ಟನು. ಆದರೆ ಆತನು ಹೇಳಿದ ಮಾತುಗಳು ದಯಾಯುಕ್ತಗಳಾಗಿದ್ದುದರಿಂದ ಭಯವನ್ನು ಬಿಟ್ಟು ಸ್ವಾಮೀ! ಹಿಂತಿರುಗಿದರೆ ಗತಿಯೇನು? ಅವಳು ನನ್ನನ್ನು ಹುಡುಕಿಸಿಕೊಂಡು ಬಂದು ನನ್ನನ್ನು ಕೊಲ್ಲದಿರುವಳೆ? ಎಲ್ಲಿಗೆ ಹೋಗಲಿ, ಏನುಮಾಡಲಿ, ಎಂದು ದೈನ್ಯವಾಗಿ ನುಡಿಯಲು ಆತನು ಹೇಳುವೆನು ಲಾಲಿಸು, ನೀನು ನನ್ನ ಉಪದೇಶದಂತೆ ಮಾಡಿದೆಯಾದರೆ ಆ ದುಷ್ಟಸ್ತ್ರೀ ಬಾಧೆಯು ತಪ್ಪಿಹೋಗುವುದು. ಅವನು ನಿನ್ನ ನೆಲೆಯನ್ನು ತಿಳಿಯಲಾರಳು. ನಿನ್ನ ಉಳಿದ ಜೀವಿತಕಾಲವನ್ನು ಸುಖವಾಗಿ ಕಳೆಯುವೆ ಎಂದು ಬೋಧಿಸಲು ಆ ವಿಪ್ರನು ಆತನ ಮಾತುಗಳ ಪ್ರಕಾರವಾಗಿ ವರ್ತಿಸುವುದಕ್ಕೆ ಸಮ್ಮತಿಸಿ, ಯಾವವಿಧದಿಂದಲಾದರೂ ತನ್ನಹೆಂಡತಿ ತನಗಿಡುತ್ತಿರುವ ಬಾಧೆಯಿಂದ ಮುಕ್ತನಾಗಬೇಕೆಂಬ ಅಭಿಪ್ರಾಯವನ್ನು ತಿಳಿಸಲಾಗಿ ಆ ಬ್ರಹ್ಮರಾಕ್ಷಸನು ಸಂತಸಂಗೊಂಡು ಆತನೊಡನಿಂತೆಂದನು:—

ಎಲೈ ಸಾಧುಪುರುಷನೇ! ಕೇಳು. ನಾನಿಲ್ಲಿಂದ ಹೊರಟು ಇಲ್ಲಿಗೆ ಪಶ್ಚಿಮ ದಿಕ್ಕಿನಲ್ಲಿ ಏಳುಗಾವುದ ದೂರದಲ್ಲಿರುವ ಕುಶಾವತಿಯೆಂಬ ಪಟ್ಟಣದ ದೊರೆಯಾದ ದೀರ್ಘಬಾಹುವೆಂಬ ರಾಜನ ಮಗಳಾದ ಮದನಮಾಲಿಕೆ ಎಂಬ ಬಿಂಬಾಧರೆಯಲ್ಲಿ ಆವೇಶಿಸಿ ಪರಿಪರಿಯಾಗಿ ಉಪದ್ರವಗೊಳಿಸುವೆನು. ಗಟ್ಟಿಗರಾದ ಎಷ್ಟುಮಂದಿ ಮಾಂತ್ರಿಕರು ಬಂದು ಮಂತ್ರಿಸಿದರೂ ಅವರ ಮಂತ್ರಗಳಿಗೆ ಒಳಗಾಗದೆ ಹೊಡದು ಬಯ್ದು ಬೆಚ್ಚುಗೊಳಿಸಿ ಕಚ್ಚಿ ಅಲ್ಲಿ ಸೇರದಂತೆ ತರುಬುವೆನು. ಅವಳಲ್ಲಿ ನಾನಾವೇಶಿಸಿ ಮಾಡುವ ಕಾರ್ಯಗಳು ಸರ್ವಜನ ಭಯಂಕರಗಳಾಗಿರುವುವು. ನೀನು ಈದಿನವೇ ಇಲ್ಲಿಂಡ ಹೊರಟು ಆ ಪಟ್ಟಣವನ್ನು ಸೇರಿ ಆ ರಾಜನನ್ನು ಕಂಡು ನಿನ್ನ ಮಗಳನ್ನು ಹಿಡಿದಿರುವ ಗ್ರಹವನ್ನು ಓಡಿಸುವೆನೆಂದು ಹೇಳಿ ಆತನ ಅಪ್ಪಣೆಯನ್ನು ಹೊಂದು. ಬಳಿಕ ನನ್ನಿಂದ ಆವಿಷ್ಟಳಾದ ಆ ರಾಜಕುಮಾರಿಯ ಬಳಿಗೆ ಬಂದು ಮಂತ್ರೋಚ್ಚಾಟಣೆಯನ್ನು ಮಾಡುವನಂತೆ ತುಟಿಗಳಲ್ಲಾಡಿಸುತ್ತ ಬೇವಿನಸೊಪ್ಪಿನಿಂದ ಚುಪ್ ಚುಪ್, ಎಂದು ಮಂತ್ರಿಸುತ್ತ, ನವಿಲಿನ ಪಿಂಛದಿಂದ ತಲೆಯಮೇಲೆ ಹೊಡೆಯುತ್ತ, ಇಳಿಯತೆಗೆದು ನಿಂಬೆಯಹಣ್ಣನ್ನು ಕತ್ತರಿಸಿಹಾಕುತ್ತ, ಇಗೋ! ಬಡಿತಗಳ ಬಾಡಬಂ

ಬಂದಿರ್ಪೆಂ ತೊಲತೊಲಗುಬೇಗಂ|| ಎಂದು ಗಟ್ಟಿಯಾಗಿ ಹೇಳು. ಆಗ ನಾನು ರಾಜಪುತ್ರಿಯನ್ನು ಬಿಟ್ಟುಹೋಗುವೆನು. ತನ್ನ ಮಗಳು ಸ್ವಸ್ಥತೆಯನ್ನು ಪಡೆದ ಬಗ್ಗೆ ಆ ಭೂಪಾಲನು ಸಂತಸಂಗೊಂಡು ನೀನಪೇಕ್ಷಿಸಿದ ಬಹುಮಾನವನ್ನು ಕೊಡುವನು. ಹಾಗೆ ಸನ್ಮಾನಿತನಾಗಿ ನೀನು ಮತ್ತೊಬ್ಬಳನ್ನು ಮದುವೆಯಾಗಿ ಅಲ್ಲಿಯೇ ಸುಂದರವಾದೊಂದು ಮಂದಿರವನ್ನು ನಿರ್ಮಿಸಿಕೊಂಡು ಸುಖವಾಗಿರು ನಿನಗೆ ಬೇಕಾದಾಗ ನನ್ನನ್ನು ಸ್ಮರಿಸು. ನಾನು ಬಂದು ನಿನ್ನ ಇಷ್ಟಾರ್ಥ ಸಂಪಾದನೆಗೆ ತಕ್ಕ ಉಪಾಯವನ್ನು ಹೇಳಿ ಕೊಡುವೆನು. ನೀನು ಹಿಂತಿರುಗಿ ಕುಶಾವತೀ ಪಟ್ಟಣದ ದಾರಿಯನ್ನು ಹಿಡಿ. ನಾನಿನ್ನು ಹೊರಡುವೆನು. ಎಂದು ಆದೇಶಿಸಿ ಆತನಿಗೆ ನಂಬಿಕೆಯುಂಟಾಗುವುದಕ್ಕಾಗಿ ತನ್ನ ಅದ್ಭುತಾಕಾರವನ್ನು ತೋರಿಸಿ ಮಾಯವಾದನು.

ರಕ್ಕಸಿಯಂತಹ ಹೆಂಡತಿಯನ್ನು ವಶಪಡಿಸಿಕೊಳ್ಳಲಾರದೆ ಹೋದನೇ ಹೊರತು ಎಷ್ಟುಮಾತ್ರವೂ ಆತನನ್ನು ಬುದ್ಧಿಹೀನನೆಂದು ಹೇಳಲಾಗದು ಆತನು ಶಾಸ್ತ್ರಕೋವಿದನೂ ವಿವೇಕಿಯೂ ಆಚಾರಶೀಲನೂ ಆಗಿದ್ದನು. ಆತನ ಪುರಾಕೃತ ಪಾಪಫಲವು ಪತ್ನೀರೂಪವಾಗಿ ಆತನನ್ನು ವೇಧಿಸುತ್ತಿದ್ದಿತೇ ಹೊರತು ಬೇರೆಯಲ್ಲ ಆತನೇನುತಾನೆ ಮಾಡಬಲ್ಲನು ಬ್ರಹ್ಮರಾಕ್ಷಸನು ಮಾಡಿದ ಹಿತಬೋಧೆಯನ್ನು ಕುರಿತು ತನ್ನಲ್ಲಿ ಚೆನ್ನಾಗಿ ಆಲೋಚಿಸಿ ಆರೀತಿಯಾಗಿ ಮಾಡುವುದೇ ಕ್ಷೇಮಕರವೆಂದು ನಿಶ್ಚಯಿಸಿ ಸ್ವಗೃಹಕ್ಕೆ ಹೋಗುವುದನ್ನುಳಿದು ಕುಶಾವತಿಯ ಮಾರ್ಗವನ್ನು ಹಿಡಿದು ಕ್ರಮಕ್ರಮವಾಗಿ ನಡೆದು ಹದಿನೈದು ದಿನಗಳಿಗೆ ಆ ನಗರವನ್ನು ಸೇರಿದನು ಆ ದಿನ ಆತನನ್ನು ಹಿಡಿದಿದ್ದ ದೆವ್ವವು ತೊಲಗಿತು ಬ್ರಾಹ್ಮಣನಾನಗರವನ್ನು ಸೇರುವುದಕ್ಕೆ ಮೊದಲೆ ಬ್ರಹ್ಮರಾಕ್ಷಸನು ತಾನಾಬ್ರಾಹ್ಮಣನಿಗೆ ಕೊಟ್ಟಿದ್ದ ವಾಗ್ದಾನದಂತೆ ಆ ಕುಶಾವತೀ ರಾಜನಾದ ದೀರ್ಘಬಾಹುವಿನ ಮಗಳಲ್ಲಿ ಆವೇಶಿಸಿ ಬಗೆಬಗೆಯಾಗಿ ಆಕೆಯನ್ನು ಬಾಧಿಸಲಾರಂಭಿಸಿದನು. ರಾಜನು ಹೆಸರುವಾಸಿಯುಳ್ಳ ಅನೇಕ ಮಾಂತ್ರಿಕರನ್ನು ಕರೆಯಿಸಿ ಎಷ್ಟೋಬಗೆಯಿಂದ ಚಿಕಿತ್ಸೆಮಾಡಿಸುತ್ತಿದ್ದನು. ಬಂದ ಮಾಂತ್ರಿಕರಲ್ಲಿ ಪಡಿಯೊಬ್ಬನೂ ಆ ಮದನಮಂಜರಿಯ ಕಾಲಿನ ಒದೆಗಳನ್ನು ತಡೆಯಲಾರದೆ ಇತರರರಿಯದಂತೆ ಓಡಿಹೋಗುತ್ತಿದ್ದನು. ಹದಿನೈದು ದಿನಗಳಿಗೂ ಹೆಚ್ಚುಕಡಿಮೆ ಇಪ್ಪತ್ತುಮಂದಿ ಮಾಂತ್ರಿಕರು ಕಡೆಬಿದ್ದರು. ಹತ್ತಿರಕ್ಕೆ ಬಂದವರನ್ನೆಲ್ಲ ಹೊಡೆದು ಬಾಧಿಸುತ್ತಲೂ ಅನ್ನಪಾನೀಯಗಳನ್ನು ಮುಟ್ಟದೆ ಭಯಂಕರ ಮೂರ್ತಿಯಾಗಿ ಉಗ್ರದೃಷ್ಟಿಗಳಿಂದ ನೋಡುತ್ತಲೂ ವರ್ತಿಸುತ್ತಿದ್ದ ಪುತ್ರಿಯಂ ನೋಡಿ ಒಂದು ಕೊಟ್ಟಡಿಯಲ್ಲಿ ಅವಳನ್ನಿಟ್ಟು, ಬಾಗಿಲನ್ನು ಮುಚ್ಚಿ ಬೀಗದಿಂದ ಭದ್ರಪಡಿಸಿ, ಚಿಕಿತ್ಸೆಯನ್ನು ಮಾಡುವುದಕ್ಕೆ ಯಾವ ವೈದ್ಯನಾದರೂ ಬಂದರೆ ಬೀಗದಕ್ಕೆ

ಯನ್ನು ಕೊಟ್ಟು ಅಯ್ಯಾ! ನೀನೆ ಬೀಗವನ್ನು ತೆರೆದಾಕೆಯನ್ನು ನೋಡು. ಸಾಧ್ಯ ವಾಗುವ ಹಾಗಿದ್ದರೆ ಚಿಕಿತ್ಸೆಯನ್ನು ಮಾಡು, ಎಂದು ಹೇಳುತ್ತಿದ್ದನು. ಗ್ರಹ ಚಾರವಶದಿಂದ ಯಾವನಾದರೂ ಬೀಗವನ್ನು ತೆಗೆದು ನೋಡಿದರೆ ಆ ನಿಮಿಷದ ಲ್ಲಿಯೇ ಆ ರಾಜಪುತ್ರಿ ಎದ್ದು ಮೇಲೆಬಿದ್ದು ಕೆಡವಿ ಅವನ ಶರೀರವನ್ನು ಕಚ್ಚಿ ಗಾಯಗಳನ್ನಾಗಿಸಿ ರಕ್ತವು ಧಾರೆಧಾರೆಯಾಗಿ ಹರಿದುಹೋಗುವಂತೆ ಮಾಡು ತ್ತಿದ್ದಳು. ಈ ವೃತ್ತಾಂತವನ್ನರಿತು ವೈದ್ಯರು ಬರುವುದನ್ನೆ ಬಿಟ್ಟುಬಿಟ್ಟರು.

ಅಂತಪ್ಪ ಸ್ಥಿತಿಯಲ್ಲಿ ಧರ್ಮಶರ್ಮನಾ ನಗರವನ್ನು ಸೇರಿ ರಾಜಕುಮಾ ರಿಯ ವೃತ್ತಾಂತವನ್ನು ಅಲ್ಲಲ್ಲಿ ವಿಚಾರಿಸಿ ತಿಳಿದುಕೊಂಡು, ಅದೆಲ್ಲವೂ ಬ್ರಹ್ಮ ರಾಕ್ಷಸನು ತನ್ನೊಡನೆ ಹೇಳಿದ್ದ ನಟನೆಯೇ ಆಗಿದ್ದುದರಿಂದ ಭಯಪಡದೆ ರಾಜ ಸಭೆಗೆ ಹೋಗಿ ರಾಜನನ್ನು ಸಂದರ್ಶಿಸಿ ಮಹಾಪ್ರಭುವೆ! ನಾನೊಬ್ಬ ಭೂತ ವೈದ್ಯನು. ನಿಮ್ಮ ಕುಮಾರಿಯು ಭೂತಪೀಡಿತಳಾಗಿರುವುನ್ನು ಕರ್ಣಾಕರ್ಣಿಕೆ ಯಾಗಿ ಕೇಳಿ ಆ ಭೂತವನ್ನು ನಿಗ್ರಹಿಸಿ ಉಚ್ಚಾಟನೆ ಮಾಡಬೇಕೆಂದು ಬಂದಿರು ವೆನು. ನಿಮ್ಮ ಕುಮಾರಿಯನ್ನು ಆ ಭೂತವು ಬಿಟ್ಟುಹೋದರೆ ಸಂತೋಷ ಪಟ್ಟು ನೀವು ಮನ್ನಣೆಯನ್ನು ಉಚಿತರೀತಿಯಿಂದ ಮಾಡುವಿರೆಂಬುದನ್ನು ನಾನು ಬಲ್ಲೆನು. ಚಿಕಿತ್ಸೆಗಾಗಿ ಅಪ್ಪಣೆಯನ್ನು ಕೊಡಬೇಕು ಎಂದು ಬಹು ಧೈರ್ಯ ದಿಂದ ನುಡಿದನು.

ರಾಜನಾತನ ತೇಜೋವಿಶೇಷವನ್ನೂ ಲಕ್ಷಣಗಳನ್ನೂ ಕಂಡು ಆತನ ವಚನ ರಚನೆಯನ್ನು ಕೇಳಿದಮೇಲೆಯೂ ಆತನಲ್ಲಿ ರಾಜನಿಗೆ ನಂಬಿಕೆಯು ಹುಟ್ಟಲಿಲ್ಲ. ಆಹ! ನನ್ನ ಮಗಳನ್ನು ಹಿಡಿದು ಪೀಡಿಸುತ್ತಿರುವ ಭೂತವು ಈ ಬಡ ಹಾರುವ ನಿಗೆ ಹೆದರುವುದೇ? ಈತನ ತೇಜಸ್ಸೂ ಲಕ್ಷಣಗಳೂ ವಚನದ ಬೆಡಗೂ ನನ್ನನ್ನು ಮೋಹಗೊಳಿಸಿರುವುದೇನೋ ಸರಿ! ಆದರೆ ಕೃಶಾಂಗನಾಗಿರುವನಲ್ಲ! ಒಂದು ವೇಳೆ ಈತನು ನನ್ನ ಮಗಳಕಣ್ಣಿಗೆ ಬಿದ್ದರೆ ಅವಳ ನೊವಲಪೆಟ್ಟಿಗೆಯೇ ಮುರಿದು ಕೊಳ್ಳುವನಲ್ಲವೆ? ನನಗೆ ಪ್ರಾಪ್ತವಾಗಿರುವ ಈ ಪಾಪಕರ್ಮದ ಜತೆಗೆ ಬ್ರಹ್ಮ ಹತ್ಯವೊಂದು ಪ್ರಾಪ್ತವಾದೀತು! ಏನುಮಾಡಲಿ? ಹಿಂದೆ ಅನೇಕ ಮಾಂತ್ರಿಕರು ಬಂದು ಭೂತೋಚ್ಚಾಟನವನ್ನು ಮಾಡುವುದಕ್ಕೆ ಶಕ್ತರಾಗದೆ ಓಡಿಹೋದ ರಲ್ಲಾ! ಆಗಲಿ! ಒಳಗಿನ ಶಕ್ತಿಯನ್ನು ಯಾರುಬಲ್ಲರು? ಮಹಿಮೆಯುಳ್ಳವರ ತಿರುಳನ್ನು ಆಕೃತಿಯಿಂದ ಮಾತ್ರವೇ ನಿರ್ಣಯಿಸುವುದು ಹೇಗೆ? ವಾಲಿಖಿಲ್ಯಾದಿ ಮಹರ್ಷಿಗಳು ಕೃಶಾಂಗರಾಗಿರಲಿಲ್ಲವೆ? ಅವರ ಮಹಿಮೆಯು ಸಾಮಾನ್ಯವಾಗಿ ದ್ದಿತೇ? ನೋಡೋಣ ಈತನ ಶಕ್ತಿಯನ್ನು ಎಂದಾಲೋಚಿಸುತ್ತಿರಲು ಮಂತ್ರಿಯು ಸಮೀಪಿಸಿ ರಾಜನ್ಯಪುಂಗವ! ಏನಾಲೋಚಿಸುತ್ತಿರುವೆ? ಯಾರಲ್ಲಿ ಯಾವ ಮಹಿಮೆಯಿರುವುದೋ? ಆರುಬಲ್ಲರು? ನೋಡುವುದಕ್ಕೆ ಈತನು ಬಡಕಲಾಗಿ

ದ್ದರೆ ತಾನೆ ಮಂತ್ರಜ್ಞನಾಗಿರಬಾರದೇಕೆ ? ರೂಪದಿಂದಲೇ ಶಕ್ತಿಯನ್ನು ನಿರ್ಣಯಿಸುವುದಕ್ಕೆ ಸಾಧ್ಯವೆ? ಅನೇಕ ಮಾಂತ್ರಿಕರು ಸೋತುಹೋದರಲ್ಲ, ಇವನಿಂದೇನಾದೀತು ? ಎಂದಾಲೋಚಿಸಬೇಡ. ದೈವವು ಅನುಕೂಲಿಸಿದರೆ ಈತನಿಂದಲೇ ನಿಮ್ಮ ಕುಮಾರಿಯು ಭೂತಮುಕ್ತೆಯಾಗಬಹುದು. ಈತನನ್ನು ನಾವು ಕರೆಯಿಸಲಿಲ್ಲ. ತನಗೆ ತಾನೇ ಬಂದು ಭೂತೋಚ್ಚಾಟನೆಯನ್ನು ಮಾಡುವೆನೆಂದು ಧೈರ್ಯವಾಗಿ ಹೇಳುತ್ತಿರುವನು. ಸಂಶಯಿಸುವುದೇಕೆ ? ನೋಡುವ. ಆಜ್ಞೆಯನ್ನು ಕೊಡು ಎಂದು ಒತ್ತಿ ಹೇಳಿದನು.

ರಾಜನು ಮಂತ್ರಿಯಮಾತುಗಳನ್ನು ಮನ್ನಿಸಿ ಧರ್ಮಶರ್ಮನ ಮುಖವನ್ನು ನೋಡಿ, ಬ್ರಾಹ್ಮಣೋತ್ತಮ ! ನನ್ನ ಆತ್ಮಜಾತೆಯ ಮೇಲೆ ಆವೇಶಿಸಿರುವ ಗ್ರಹವು ಬಲುಕೆಟ್ಟುದು. ಬಂದ ಮಾಂತ್ರಿಕರನ್ನೆಲ್ಲ ಬಗೆಬಗೆಯಿಂದ ಪರಚಿ ಕಚ್ಚಿ ಹೊಡೆದು ಬಡಿದು ಓಡಿಸಿರುವುದು. ನೀನು ಚಿಕಿತ್ಸೆಯನ್ನು ಮಾಡುವುದಕ್ಕೆ ಅನುಮತಿಯನ್ನು ಕೊಡುವೆನು. ಆದರೆ ನಿನಗೆ ಆ ಗ್ರಹದ ದೆಸೆಯಿಂದ ಏನಾದರೂ ಹಾನಿಯುಂಟಾದರೆ ಅದಕ್ಕೆ ನಾವು ಉತ್ತರವಾದಿಗಳಲ್ಲ. ನಾವು ಸಮೀಪಕ್ಕಾದರೂ ಬರಲಾರೆವು. ನೀನೇ ಹೋಗಿ ಬಾಗಿಲನ್ನು ತೆರೆದು ಏನು ಮಾಡುವೆಯೋ ಮಾಡು, ಇಗೋ ಬೀಗದಕ್ಕೆ ಎಂದು ಬೀಗದಕ್ಕೆಯನ್ನು ಕೊಟ್ಟು ತತ್ಪೂರ್ವದಲ್ಲಿ ಬಂದ ಮಾಂತ್ರಿಕರು ಪಟ್ಟ ಕೆಲವು ಬಾಧೆಗಳನ್ನಾತನೊಡನೆ ಹೇಳಿದನು. ಧರ್ಮಶರ್ಮನು ಭಯಪಡಲಾಗದು. ನಾನು ಎಲ್ಲರಂತೆ ಮಾಂತ್ರಿಕನಲ್ಲ. ನನ್ನಮೇಲೆ ಗುರುವಿನ ಅನುಗ್ರಹವಿದೆ. ನನ್ನ ಶಕ್ತಿಯನ್ನು ನೋಡುತ್ತಿರಿ ಎಂದು ನುಡಿದು ಬೇಗನೆಹೋಗಿ ರಾಜಕುಮಾರಿಯಿದ್ದ ಕೊಟ್ಟಡಿಯ ಬಾಗಿಲನ್ನು ತೆರೆಯುವಷ್ಟರಲ್ಲಿ ಬ್ರಹ್ಮರಾಕ್ಷಸಾವಿಷ್ಟಳಾದ ಆಕೆಯು ಮಹಾಕೋಪದಿಂದ ಭಯಂಕರವಾಗಿ ಆರ್ಭಟಿಸುತ್ತ, ಕಣ್ಣುಗುಡ್ಡೆಗಳನ್ನು ತಿರುಗಿಸುತ್ತ, ಹಲ್ಲುಗಳನ್ನು ಕಚ್ಚುತ್ತ, ಎಲಾ ! ಚಂಡಾಲ ! ನೀನೊಬ್ಬ ಮಾಂತ್ರಿಕನೋ ? ಚಿಕಿತ್ಸೆಮಾಡುವುದಕ್ಕೆ ಬಂದೆಯೋ? ನಾನಾರೆಂದು ತಿಳಿದಿರುವೆ? ಬಂದ ಮಾಂತ್ರಿಕರ ಗತಿಯೇನಾಯಿತೆಂಬುದನ್ನು ಬಲ್ಲೆಯಾ? ಬಾ! ನಿನ್ನ ಕರುಳನ್ನು ಕಿತ್ತೊಗೆವೆನು ಎಂದು ಮೇಲಕ್ಕೆ ಬಂದಳು. ಈಚೆಯಕಡೆ ಇದ್ದವರು ಓಹೋ ! ಈ ಬ್ರಾಹ್ಮಣನ ಆಯುಷ್ಯವು ಇಂದಿಗೆ ತೀರಿತು. ಅಯ್ಯೋ ! ಈ ಬಡಕಲಹಾರುವಯ್ಯನಿಗೆ ಈ ದುರ್ಬುದ್ಧಿಯುಂಟಾಯಿತೇಕೆ? ಪಾಪ! ಯಾವದೇಶವೋ! ಹುಟ್ಟಿದುದೆಲ್ಲಿಯೋ! ಇಲ್ಲಿಗೆ ಬಂದು ಸಾಯುವ ಹೊತ್ತು ಬಂತಲ್ಲಾ ! ಎಂದು ಪಶ್ಚಾತ್ತಾಪಪಡುತ್ತಿದ್ದರು. ಕೊಟ್ಟಡಿಯಲ್ಲಿದ್ದ ಬ್ರಾಹ್ಮಣನು ಎಲೈ ಭೂತರಾಜನೆ ! ನಿನ್ನನ್ನು ನಾನು ಬಲ್ಲೆನು. ನಿನ್ನ ಕೃಪೆಯನ್ನು ಪಡೆದೇ ಇಲ್ಲಿಗೆ ಬಂದಿರುವೆನು. ಸುಮ್ಮನೆ ನನ್ನಮೇಲೆ ಬೀಳುತ್ತಿರುವೆಯೇಕೆ? ನನ್ನ ಕಥೆಯು ನಿನಗೆ ತಿಳಿದೇ ಇದೆ.

ವ್ಯರ್ಥವಾಗಿ ಏಕೆ ಗಾಬರಿಯನ್ನು ಮಾಡುತ್ತಿರುವೆ? ಇಗೋ ಬಡಿತಗಳಬಾಡಬ ನಾಂಬಂದಿರ್ಪೆಂ ತೊಲಕೊಲಗುಬೇಗಂ ಎಂದು ಸ್ವಲ್ಪ ವಿಭೂತಿಯನ್ನು ಮೇಲೆ ಚೆಲ್ಲಿದನು. ಬೇವಿನಸೊಪ್ಪಿನಿಂದ ತುಟಿಯನ್ನಲುಗಿಸುತ್ತ ಮಂತ್ರಿಸಿದನು. ಚುಪ್ ಚುಪ್ ಎಂಬ ಧ್ವನಿಯನ್ನು ಹೊರಕ್ಕೆ ಕೇಳಿಸುವಹಾಗೆ ಉಚ್ಚರಿಸಿದನು. ರಂಭಂ ನಂ ಸಂ ಕಂ ಝುಂ ಕ್ಷಿ ಫಟ್ ಸ್ವಾಹಾ ಮದನಮುಂಜರ್ಯಾಃ ಸರ್ವಗ್ರಹೋಚ್ಚಾಟನಂ ಕುರು ಸರ್ವಶಾಂತಿಂ ಕುರು ಸ್ವಾಹಾ, ಎಂದು ಗಟ್ಟಿಯಾಗಿ ಹೇಳಿದನು. ವೇಷಕ್ಕೆ ತಕ್ಕಂತೆ ಬಾಷೆಯು ಇರಬೇಕೆಂದಾ ಬ್ರಾಹ್ಮಣನು ಬಲ್ಲನು. ಆತನೂ ಕುಶಲನಲ್ಲವೆ?

ಬ್ರಹ್ಮರಾಕ್ಷಸನು, ಆಗ ಇವನು ನನ್ನಿಂದ ಉಪದೇಶವನ್ನು ಪಡೆದ ಬ್ರಾಹ್ಮಣನೆಂದು ತಿಳಿದು ಓಹೋ! ಹಾಗೆಯೇ! ಬಂದಿರುವೆಯಾ? ಇನ್ನಿಲ್ಲಿ ನಿಲ್ಲುವುದಿಲ್ಲ. ಇಗೋ ಹೊರಡುವೆನು ಎಂದು ಹೊರಗಿನವರಿಗೆ ಕೇಳಿಸುವಂತೆ ಹೇಳಿ ಆ ರಾಜಕುಮಾರಿಯುಮೇಲೆ ಆವೇಶಿಸಿರುವುದನ್ನು ಬಿಟ್ಟು ಹೊರಕ್ಕೆ ಬಂದನು. ಆ ಕುಮಾರಿಯು ಮೂರ್ಛಿತಳಾದಳು. ಆಗ ಬ್ರಹ್ಮರಾಕ್ಷಸನಾ ಬ್ರಾಹ್ಮಣನ ಮುಂದೆ ಸೌಮ್ಯರೂಪದಿಂದ ನಿಂತು ಎಲೈ ಮಿತ್ರನೆ! ನಾನಿನ್ನು ಹೊರಡುವೆನು ಹೋಗಿ ಮಧುರಾಪುರದ ರಾಜನ ಮಗಳನ್ನು ಹಿಡಿವೆನು. ನಿನ್ನ ಬಾಧೆಯು ಇಂದಿಗೆ ತೊಲಗಿತಲ್ಲವೆ? ಹಿಂದೆ ಉಪದೇಶಿಸಿರುವಂತೆ ರಾಜನಿಂದ ಬಹುಮಾನವನ್ನು ಪಡೆದು ಮದುವೆಮಾಡಿಕೊಂಡು ಇಲ್ಲಿಯೇ ಸುಖವಾಗಿರು. ಚಂಡಿಕೆಯನ್ನು ಕನಸಿನಲ್ಲಾದರೂ ಸ್ಮರಿಸದಿರು ಎಂದು ಮೆಲ್ಲಗೆ ನುಡಿದು ಅಂತರ್ಹಿತನಾದನು.

ರಾಜಪುತ್ರಿಯು ಸ್ವಸ್ಥತೆಯನ್ನು ಪಡೆದಳು. ಐದು ನಿಮಿಷಗಳೊಳಗಾಗಿ ರಾಜಪುತ್ರಿಯು ಮೂರ್ಛೆಯಿಂದೆಚ್ಚೆತ್ತಳು. ಬ್ರಾಹ್ಮಣನು ಕೊಟ್ಟಡಿಯ ಬಾಗಿಲನ್ನು ತೆರೆದು ಹೊರಕ್ಕೆಬಂದನು. ಆತನ ಹಿಂದೆಯೇ ರಾಜಪುತ್ರಿಯೂ ಬಂದಳು. ಈ ವಿಪ್ರೋತ್ತಮನು ಎರಡುಮೂರು ತಾಸುಗಳಲ್ಲಿಯೇ ಭಯಂಕರವಾದ ಭೂತವನ್ನು ಓಡಿಸಿದನಲ್ಲ! ಈತನು ಮಹಾ ಮಹಿಮಸಂಪನ್ನನು. ಈತನ ಪ್ರಭಾವವನ್ನರಿಯದೆ ಪ್ರಥಮದಲ್ಲಿ ನಾನು ಭಾವಿಸಿದ ಭಾವನೆಯು ತಪ್ಪಾದುದು. ನಿರುಪಮಾನ ಶಕ್ತಿಯುಳ್ಳ ಈತನು ನಮ್ಮ ಮನ್ನಣೆಗೆ ಅರ್ಹನು. ಎಂದು ದೀರ್ಘಬಾಹುರಾಜನು ನುಡಿದು ಗ್ರಹಗ್ರಹಣದಿಂದ ಮುಕ್ತಳಾದ ಮದನಮಂಜರಿಯನ್ನು ಅಂತಃಪುರಕ್ಕೆ ಕಳುಹಿಸಿಕೊಟ್ಟು, ಧರ್ಮಶರ್ಮನನ್ನು ಕರೆದುಕೊಂಡು ಓಲಗದ ಚಾವಡಿಗೆ ಬಂದು ಹೆಚ್ಚಾದ ಗೌರವದಿಂದ ಉಚಿತಾಸನದಲ್ಲಿ ಕುಳ್ಳಿರಿಸಿ ತನ್ನ ಸಂತೋಷವನ್ನು ತೋರ್ಪಡಿಸುತ್ತ, ಮಹಾನುಭಾವನೆ ಏತಾದೃಶ ಮಹಿಮೆಯುಳ್ಳವನೆಂದು ಮೊಟ್ಟಮೊದಲು ನಾನು ತಿಳಿದುಕೊಂಡಿರಲಿಲ್ಲ. ಬಹು ಲಾಘವವಾಗಿ ಬಗೆದಿದ್ದೆನು. ಈಗ ನಿನ್ನ ಪ್ರಭಾವವು ಗೋಚರವಾಯಿತು.

ಯಾವುದೋ ಒಂದು ಮಾತನ್ನು ನುಡಿದು ಭಯಂಕರವಾದ ಭೂತವನ್ನು ಓಡಿಸಿ ನನ್ನ ಮಗಳ ಉಪದ್ರವವನ್ನು ನಿವಾರಣೆಮಾಡಿ ಪುಣ್ಯವನ್ನು ಪಡೆದೆ. ನಿನ್ನನ್ನು ಹೊಗಳುವುದಕ್ಕೆ ನಾನು ಶಕ್ತನಲ್ಲ. ಭಗವಂತನು ನಮಗಾಗಿ ನಿನ್ನನ್ನಿಲ್ಲಿಗೆ ಕರೆ ತಂದನು. ಏನು ಕೇಳಿದರೂ ಕೊಡುವುದಕ್ಕೆ ನಾನು ಸಿದ್ಧನಾಗಿರುವೆನು. ನಿಮ್ಮ ಇಷ್ಟವಾವುದೋ ದಯವಿಟ್ಟು ಕೇಳಬೇಕು ಎಂದು ಬೇಡಿಕೊಂಡನು.

ಬ್ರಹ್ಮರಾಕ್ಷಸನಿಂದ ಮೊದಲೇ ಬೋಧಿಸಲ್ಪಟ್ಟಿದ್ದ ಧರ್ಮಶರ್ಮನು ರಾಜಾಗ್ರಣೀ! ನನ್ನ ಮೊದಲನೆಯ ಹೆಂಡತಿ ನನ್ನನ್ನಗಲಿರುವಳು. ಆದುದ ರಿಂದ ನನಗೊಂದು ಮದುವೆಯನ್ನು ಮಾಡಿ ಮನೆಯನ್ನು ಕಟ್ಟಿಸಿಕೊಟ್ಟು ಸುಖ ವಾಗಿ ಜೀವನವು ನಡೆವುದಕ್ಕೆ ತಕ್ಕ ಏರ್ಪಾಡನ್ನು ಮಾಡಬೇಕೆಂದು ಪ್ರಾರ್ಥಿ ಸುತ್ತೇನೆ. ನಾನು ನಿನಗಾಶ್ರಿತನಾಗಿ ಇಲ್ಲಿಯೇ ವಾಸಿಸುವೆನು ಎಂದು ಪ್ರಾರ್ಥಿಸಿದನು.

ರಾಜನಾಮಾತನ್ನು ಕೇಳಿ, ಆತನು ತನ್ನಬಳಿಯಲ್ಲಿಯೇ ಇರುವುದಕ್ಕಾಗಿ ನಿಶ್ಚಯಿಸಿದಬಗ್ಗೆ ಅತ್ಯಂತ ಸಂತೋಷವನ್ನು ಪಡೆದು, ಆತನು ಕೋರಿದ ಕೋರಿ ಕೆಗಳನ್ನೆಲ್ಲ ನಡೆಯಿಸಿ ಆತನಿಗೆ ಯಾವ ಕೊರತೆಯೂ ಇಲ್ಲದಂತೆ ಎಲ್ಲ ಕಾರ್ಯ ಗಳನ್ನೂ ನೆರವೇರಿಸಿದನು. ಧರ್ಮಶರ್ಮನು ತನಗೆ ಎರಡನೆಯ ಹೆಂಡತಿಯಾದ ಮಹಾಲಕ್ಷ್ಮಿಯೊಡನೆ ಕುಶಾವತೀ ಪಟ್ಟಣದಲ್ಲಿ ಸೌಖ್ಯವಾಗಿರುತ್ತಿದ್ದನು.

ಇತ್ತ ಹೀಗಿರಲಾಗಿ ದೀರ್ಘಬಾಹುವಿನ ಪುತ್ರಿಕೆಯನ್ನು ಬಿಟ್ಟುಹೋದ ಬ್ರಹ್ಮರಾಕ್ಷಸನು ಮಧುರಾಪುರದ ಅರಸನ ಮಗಳಾದ ಕಲಾವತಿಯನ್ನು ಹಿಡಿದು ಇಲ್ಲಿಗಿಂತಲೂ ಸಾವಿರದಷ್ಟು ಹೆಚ್ಚಾಗಿ ಗಾಬರಿಮಾಡಿ ಬಾಧಿಸಲಾರಂಭಿಸಿದನು. ಆರಾಜನು ಮಾಡಿಸಿದ ಚಿಕಿತ್ಸೆಗಳಿಗೆ ಲೆಕ್ಕವೇ ಇಲ್ಲ. ಎಷ್ಟುಮಾಡಿದರೂ ಲಾಭ ವುಂಟಾಗಲಿಲ್ಲ.

ಹೀಗಿರುತ್ತಿರಲು ಕುಶಾವತಿಯ ಅರಸನಾದ ದೀರ್ಘಬಾಹುರಾಜನ ಮಗ ಳಿಗೆ ಹಿಡಿದಿದ್ದ ಭೂತವನ್ನು ಯಾವನೋ ಒಬ್ಬ ಬ್ರಾಹ್ಮಣನು ಬಂದು ಓಡಿಸಿದ ನೆಂದೂ, ಆ ಭೂತವು ಅನೇಕ ಮಾಂತ್ರಿಕರನ್ನು ಓಡಿಸಿದ್ದಿತೆಂದೂ ಈಗ ಆರಾಜ ಕುಮಾರಿಯು ಸ್ವಸ್ಥವಾಗಿರುವಳೆಂದೂ, ದೀರ್ಘಬಾಹುನೃಪಾಲನಾ ಮಾಂತ್ರಿಕ ನಿಗೆ ಅನೇಕ ಬಹುಮತಿಗಳನ್ನು ಕೊಟ್ಟು ತನ್ನ ಪಟ್ಟಣದಲ್ಲಿ ಇಟ್ಟುಕೊಂಡಿರುವ ನೆಂದೂ ಮಾಂತ್ರಿಕನು ಯಾರಿಗೂ ಶಕ್ಯವಲ್ಲದ ಭೂತಗಳನ್ನು ಓಡಿಸಬಲ್ಲನೆಂದೂ ಮಧುರಾನಾಥನಿಗೆ ವರ್ತಮಾನವು ಬಂದಿತು. ಆ ರಾಜನಿಗೂ ದೀರ್ಘಬಾಹು ಭೂಪತಿಗೂ ಮೈತ್ರಿಯುಂಟಾಗಿದ್ದುದರಿಂದ ಮಧುರಾಧಿಪತಿಯು ಆ ಮಾಂತ್ರಿ ಕನನ್ನು ತನ್ನ ಮಗಳಿಗೆ ಚಿಕಿತ್ಸೆ ಮಾಡುವುದಕ್ಕೋಸ್ಕರ ಕಳುಹಬೇಕೆಂದೂ ಆತನಿಗೆ ಹೆಚ್ಚಾದ ಬಹುಮಾನಗಳನ್ನು ಕೊಟ್ಟು ಗೌರವಿಸಿ ಕಳುಹಿಸಿಕೊಡುವೆ

ನೆಂದೂ ದೀರ್ಘಬಾಹುವಿಗೆ ಒಂದು ಪತ್ರವನ್ನು ಬರೆದು ಕಳುಹಿಸಿಕೊಟ್ಟನು. ದೀರ್ಘಬಾಹುವಾ ಕಾಗದವನ್ನು ಓದಿನೋಡಿ, ತನ್ನ ಮಿತ್ರನ ಕುಮಾರಿಗೆ ಭೂತ ಬಾಧೆಯನ್ನು ನಿವಾರಣೆಮಾಡಿಸಲಿಚ್ಛಿಸಿ ಧರ್ಮಶರ್ಮನನ್ನು ಕರೆಯಿಸಿ ಪತ್ರದ ವಿಷಯವನ್ನು ತಿಳಿಸಿ, ಅಯ್ಯಾ! ಮಧುರೇಶನು ನನ್ನ ಪರಮಮಿತ್ರನು. ಆತನಿಗೆ ಒಂದು ಸಂಕಟವು ಪ್ರಾಪ್ತವಾಗಿರುವಾಗ ಆ ಸಂಕಟವನ್ನು ಹೋಗಲಾಡಿಸಬಲ್ಲ ನಿನ್ನಂಥ ಶಕ್ತಿಸಂಪನ್ನನನ್ನು ಬಳಿಯುಲ್ಲಿಟ್ಟುಕೊಂಡು ಸುಮ್ಮನಿರುವುದು ನನ್ನ ಗೌರವಕ್ಕೆ ತಕ್ಕುದಲ್ಲ. ಹಾಗೆ ಉದಾಸೀನವಾಗಿರುವುದು ಮಿತ್ರತೆಗೆ ತಕ್ಕುದಲ್ಲ. 1ಶರೀರಕ್ಕೆ ಕೈಗಳೂ, ಕಣ್ಣಿಗೆ ಎವೆಗಳೂ ಹೇಗೋ ಹಾಗೆ ವಿಚಾರಿಸದೆಯೇ ಯಾವನು ಪ್ರಿಯವನ್ನುಂಟುಮಾಡುವನೋ ಅವನೇ ಮಿತ್ರ ಶಬ್ದಕ್ಕೆ ಅರ್ಹನು. 2ನಿರ್ಮಲಚಿತ್ತತ್ವವೂ, ದಾನಶೀಲತ್ವವೂ, ಶೌರ್ಯವೂ, ಸುಖದುಃಖಗಳಲ್ಲಿ ಸಮತ್ವವೂ, ಸರಲತ್ವವೂ, ಪ್ರೀತಿಯೂ, ಸತ್ಯವೂ ಮಿತ್ರನ ಗುಣಗಳು. 3ಸಂತೋಷ, ದುರ್ಭಿಕ್ಷ, ವ್ಯಸನ, ರಾಷ್ಟ್ರವಿಪ್ಲವ, ರಾಜದ್ವಾರ, ಶ್ಮಶಾನ ಇವುಗಳಲ್ಲಿ ಯಾವನು ಹಿಂಬಾಲಿಸಿರುವನೋ ಅವನೇ ಮಿತ್ರನು. 4ನೋಡಿದರೆ, ಮುಟ್ಟಿದರೆ ಮಾತಾಡಿದರೆ ಮಾತುಗಳನ್ನು ಕೇಳಿದರೆ ಎಲ್ಲಿ ಮನಸ್ಸು ಪ್ರವಿಸುವುದೋ ಅದೇ ಸ್ನೇಹವು. ಆದುದರಿಂದ ಎಲೈ ಮಾಂತ್ರಿಕಮಣಿಯೇ! ನೀನು ಹೋಗಿ ಆ ರಾಜಾತ್ಮಜಾತೆಯ ಬಾಧೆಯನ್ನು ತೊಲಗಿಸಿ, ಆತನು ಕೊಡುವ ಬಹುಮತಿಗಳನ್ನು ಸ್ವೀಕರಿಸಿ ಬರಬೇಕು. ಈ ದಿನವೇ ಹೊರಡಬೇಕು ಪ್ರಯಾಣಸನ್ನಾಹವನ್ನು ಮಾಡಿಸುವೆನು ಎಂದುಸುರಿದನು ಆ ಮಾತುಗಳನ್ನು ಕೇಳುತ್ತಲೇ ಧರ್ಮಶರ್ಮನ ಹೃದಯವು ಬಿರಿಯಿತು ಮುಗಿಲು ಮುರಿದು ಮೇಲೆ ಬಿದ್ದಂತಾಯಿತು ಆ ಬ್ರಾಹ್ಮಣನು ಭಯಭ್ರಾಂತನಾಗಿ ತನ್ನಲ್ಲಿ ಅಕಟಕಟಾ! ಇನ್ನೇನುಗತಿ? ಹಾ! ದೈವವೇ! ಘೋರವಿಪತ್ತಿನಲ್ಲಿ ಸಿಕ್ಕಿಕೊಂಡೆನಲ್ಲ! ಈ ವಿಪತ್ತು ಹೇಗೆ ತಪ್ಪುವುದು? ಬ್ರಹ್ಮರಾಕ್ಷಸನ ಅನುಜ್ಞೆಯಂತೆ ಮಾಡಿದುದರಿಂದ ನನ್ನಲ್ಲಿ ಕನಿಕರಿಸಿ ಆತನೀ ರಾಜಪುತ್ರಿಯನ್ನು ಬಿಟ್ಟುಹೋದನೇ ಹೊರತು ನನ್ನ ಮಂತ್ರಗಳ ಬಲದಿಂದಲ್ಲವಲ್ಲ! ನಾನು ಮಂತ್ರಗಳನ್ನು ಬಲ್ಲೆನೆ? ಮಾಂತ್ರಿಕ ವೇಷಧಾರಿಯು

---

1 ಕರಾವಿವ ಶರೀರಸ್ಯ ನೇತ್ರಯೋರಿವಪಕ್ಷ್ಮಣೀ ।
ಅವಿಚಾರ್ಯಪ್ರಿಯಂ ಕುರ್ಯಾತ್ತನ್ಮಿತ್ರಂ ಮಿತ್ರಮುಚ್ಯತೇ ॥

2 ಶುಚಿತ್ವಂ ತ್ಯಾಗಿತಾಶೌರ್ಯಂ ಸಾಮಾನ್ಯಂ ಸುಖದುಃಖಯೋಃ ।
ದಾಕ್ಷಿಣ್ಯಂ ಚಾನುರಕ್ತಿಶ್ಚ ಸತ್ಯತಾಚ ಸುಹೃದ್ಗುಣಾಃ ॥

3 ಉತ್ಸವೇ ವ್ಯಸನೇ ಚೈವ ದುರ್ಭಿಕ್ಷೇ ರಾಷ್ಟ್ರವಿಪ್ಲವೇ ।
ರಾಜದ್ವಾರೇ ಶ್ಮಶಾನೇ ಚ ಯಸ್ತಿಷ್ಠತಿ ಸಬಾಂಧವಃ ॥

4 ದರ್ಶನೇ ಸ್ಪರ್ಶನೇ ವಾಪಿ ಶ್ರವಣೇ ಭಾಷಣೇಪಿವಾ ।
ಯತ್ರದ್ರವತ್ಯಂತರಂಗಂ ಸಸ್ನೇಹ ಇತಿ ಕಥ್ಯತೇ ॥

ಲ್ಲದೆ ಸಹಜವಾದ ಮಾಂತ್ರಿಕನು ನಾನಲ್ಲವಲ್ಲ ಬ್ರಹ್ಮರಾಕ್ಷಸನ ಆಜ್ಞಾ ಬಲದಿಂದ ರಂ ನಂ ಥಂ ಎಂದಿತ್ಯಾದಿ ವರ್ಣಗಳನ್ನು ನುಡಿದೆನಲ್ಲದೆ ಅವುಗಳು ಗುರುಮುಖ ದಿಂದರಿತ ಬೀಜಾಕ್ಷರಗಳಲ್ಲವಲ್ಲ ! ರಾಜಾಜ್ಞೆಯಾಗಿರುವುದೆಂದು ನಾನಲ್ಲಿಗೆ ಹೋದರೆ ಅಲ್ಲಿ ಮಾಡುವುದೇನು ? (ಜ್ಞಾಪಕವನ್ನಭಿನಯಿಸಿ) ಓಹೋ ! ಜ್ಞಾಪ ಕಕ್ಕೆ ಬಂತು ನನಗೆ ಮಹೋಪಕಾರವನ್ನು ಮಾಡಿದ ಬ್ರಹ್ಮರಾಕ್ಷಸನೇ ಅಲ್ಲವೆ ಮಧುರಾಧಿಪತಿಯ ಮಗಳನ್ನು ಹಿಡಿದಿರುವುದು ? ಈ ವಿಷಯವನ್ನು ನನ್ನೊಡನೆ ಹೇಳಿಯೇ ಹೋದನಲ್ಲವೆ ? ಅಹುದಹುದು ! ಆದರೆ ಆತನಿಂದ ಇಂತಹ ಸುಸ್ಥಿ ತಿಗೆಬಂದ ನಾನು ಮತ್ತೆ ಆತನಬಳಿಗೆ ಹೋದರೆ ನಾನು ಹೋದಕಡೆಗೆಲ್ಲಿ ಬರುವ ನೆಂಬ ಕೋಪದಿಂದ ನನ್ನನ್ನು ಕೊಲ್ಲದೆ ಬಿಡುವನೆ ? ಹೀಗೆ ಸಾಯುವಂತೆ ವಿಧಿಯು ನನ್ನ ಹಣೆಯಲ್ಲಿ ಬರೆದಿರುವನೋ ಏನೊ ? ಮರೆತಿದ್ದೆನು ಎಂದು ಪರಿಪರಿಯಾಗಿ ಪರಿತಪಿಸಿ ತನ್ನ ಆಲೋಚನೆಯನ್ನು ಪ್ರಕಟಗೊಳಿಸದೆ, ಬ್ರಹ್ಮ ರಾಕ್ಷಸನಿಗೂ ತನಗೂ ನಡೆದ ಸಂಭಾಷಣೆಯನ್ನು ಕೂಡ ಬಹಿರಂಗಪಡಿಸದೆ ರಾಜಾಜ್ಞೆಯಪ್ರಕಾರವಾಗಿ ಮಾಡಬೇಕಾದುದು ತನ್ನ ಕರ್ತವ್ಯವಾದುದರಿಂದ ಒಪ್ಪಿಕೊಂಡು ಮನೆಗೆ ಹೋಗಿ ಹೆಂಡತಿಗೆ ಸಹಿತವಾಗಿ ತನ್ನ ಗುಟ್ಟನ್ನು ಹೇಳದೆ ಪ್ರಯಾಣವೃತ್ತಾಂತವನ್ನು ಮಾತ್ರ ತಿಳಿಯಿಸಿ ರಾಯನು ತನಗಾಗಿ ಸಿದ್ಧಪಡಿ ಸಿದ ಪಲ್ಲಕ್ಕಿಯಲ್ಲಿ ಕುಳಿತುಕೊಂಡು ಭಗವಂತನಮೇಲೆ ಭಾರವನ್ನು ಹಾಕಿ ಮಧು ರಾನಗರಕ್ಕೆ ಹೊರಟನು.

ಆ ರಾಯನು ಧರ್ಮವರ್ಮನನ್ನು ಬಹುಗೌರವದಿಂದ ಬರಮಾಡಿಕೊಂಡು ಮರ್ಯಾದೆಮಾಡಿ ಸ್ವಾಮಿಾ ! ನೀವು ಕೃಪೆಯಿಂದ ನನ್ನ ಕುಮಾರಿಯ ಬಾಧೆ ಯನ್ನು ನಿವಾರಣೆಮಾಡಿ ಪುಣ್ಯವನ್ನು ಕಟ್ಟಿಕೊಳ್ಳಬೇಕು ನನಗಿರುವಳೊಬ್ಬ ಮಗಳು ನಾಲ್ಕಾರು ತಿಂಗಳುಗಳಿಂದ ಅನ್ನಪಾನಗಳಿಲ್ಲದೆ ಕಷ್ಟಪಡುತ್ತಿರುವಳು ಅನೇಕ ಮಾಂತ್ರಿಕರಿಂದ ಚಿಕಿತ್ಸೆ ಮಾಡಿಸಿದರೂ ಆವೇಶಿಸಿರುವ ಭೂತವು ತೊಲ ಗಲಿಲ್ಲ ಮಾಂತ್ರಿಕರೇ ಭಯಪಟ್ಟು ಓಡಿಹೋಗುತ್ತಿರುವರು. ನಿಮ್ಮದೆಸೆಯಿಂದ ಭೂತೋಚ್ಚಾಟನೆಯಾಗಿ ನನ್ನ ಪ್ರಿಯಪುತ್ರಿಕೆಯು ಬದುಕಿಕೊಳ್ಳಬಹುದೆಂದು ನಾನು ನಂಬುತ್ತೇನೆ ಎಂದು ನುಡಿದು ನಮಸ್ಕರಿಸಿ ಬೇಡಿಕೊಂಡನು ದೀರ್ಘಬಾ ಹುವಿನ ಪುತ್ರಿಯನ್ನು ಹೇಗೋ ಹಾಗೆಯೇ ಮಧುರಾಧಿಪನ ಪುತ್ರಿಯನ್ನೂ ಒಂದು ಕೊಟ್ಟಡಿಯಲ್ಲಿಟ್ಟು ಬಾಗಿಲನ್ನು ಭದ್ರಪಡಿಸಿದ್ದರು ಆ ಕೊಟ್ಟಡಿಯ ಬೀಗದ ಕೈಯನ್ನು ರಾಯನು ಧರ್ಮಶರ್ಮನಕೈಗೆ ಕೊಟ್ಟನು ಆತನು ಹೋಗಿ ಕೊಟ್ಟಡಿಯ ಬೀಗವನ್ನು ತೆಗೆದು ಒಳಕ್ಕೆ ಹೋದನು ಕೂಡಲೆ ಆ ಭೂತಗ್ರಸ್ತ ಕುಮಾರಿಯು ಹೋಯೆಂದು ಉಚ್ಚೈಶ್ಶಬ್ದವನ್ನು ಮಾಡುತ್ತ ಬ್ರಾಹ್ಮಣನಮೇ ಲಕ್ಕೆ ಬಂದಳು ಆಗ ಧರ್ಮಶರ್ಮನು ತನ್ನ ಮನಸ್ಸಿನಲ್ಲಿ ಅಯ್ಯೋ ! ನನಗೆ

ಅಂತ್ಯಕಾಲವು ಸಮೀಪಿಸಿರುವುದು ಬ್ರಹ್ಮರಾಕ್ಷಸನಿಂದ ನನಗೀ ದಿನದಲ್ಲಿ ಸಾವು ತಪ್ಪದು ಎಂದು ನಿಶ್ಚಯಿಸಿಕೊಂಡನು ಆ ಭೂತವು ತನ್ನಮೇಲಕ್ಕೆ ಬರುತ್ತಲೇ ಆತನು ಗಡಗಡನೆ ನಡುಗುತ್ತ ಅಷ್ಟರಲ್ಲಿ ದೈವಿಕವಾಗಿ ಒಂದು ಯುಕ್ತಿತೋರಿ ದುದರಿಂದ ಕೊಂಚವುಟ್ಟಿಗೆ ಮನಸ್ಸನ್ನು ದೃಢಪಡಿಸಿಕೊಂಡು ಮಹಾತ್ಮಾ ! “ ಬಡಿತಗಳಬಾಡಬಂಬಂದಿರ್ಪೆಂ ” ಎಂದು ಭಯದಿಂದ ಉಂಟಾದ ಗದ್ಗದಸ್ವರದಿಂದ ನುಡಿದನು. ಆ ಮಾತನ್ನು ಕೇಳುತ್ತಲೇ ಆ ಬ್ರಹ್ಮರಾಕ್ಷಸನು ಅಗ್ರ ಹೋದಗ್ರನಾಗಿ ಕ್ರೂರದೃಷ್ಟಿಯಿಂದಾತನನ್ನು ನಿರುಕಿಸುತ್ತ ಏನು ? ಬಡಿತಗಳ ಬಾಡಬನೆ ? ಪ್ರಹಾರಗಳ ವಿಪ್ರನೆ ? ಪೆಟ್ಟುಗಳ ಹಾರುವನೆ ? ಮತ್ತೆಬಂದೆಯಾ ಇಲ್ಲಿಗೆ ? ಎಲಾ ! ಪಾಪಿಷ್ಠನೆ ! ನೀನು ಹೊಂದುತ್ತಿದ್ದ ಕಷ್ಟವನ್ನು ಕಂಡು ನಿನ ಗುಪಕಾರವನ್ನು ಮಾಡಬೇಕೆಂದು ಬಗೆದು ಉಪಾಯವನ್ನು ಹೇಳಿ ರಾಯನಿಂದ ಬಹುಮತಿಯು ಲಭಿಸುವಹಾಗೆ ಮಾಡಿಬಂದೆನು ಈಗ ನೀನು ಗರ್ವಿಸಿ ನಾನೆಲ್ಲಿಗೆ ಹೋದರಲ್ಲಿಗೆ ನನ್ನನ್ನು ಓಡಿಸುವುದಕ್ಕೆ ಬರಲಾರಂಭಿಸಿದೆಯಾ ? ಈ ದುರುದ್ದೇಶವು ನಿನಗೆ ತಕ್ಕುದೆ ? ಇದೇಯೇ ನನಗೆ ಮಾಡತಕ್ಕ ಪ್ರತ್ಯುಪಕಾರವು ? ಬುದ್ಧಿಹೀನನೇ ! ನೀಚರಿಗೆ ಉಪಕಾರವನ್ನು ಮಾಡಿದರೆ ಅವರು ಅದಕ್ಕೆ ಪ್ರತಿಯಾಗಿ ಅಪಕಾರವನ್ನು ಮಾಡುತ್ತಾರೆ ಹಾವಿಗೆ ಹಾಲುಕೊಟ್ಟರೂ ಅವಕ್ಕೆ ವಿಷವೃದ್ಧಿಯಾಗುವುದೇ ಹೊರತು ಬೇರೆಯಲ್ಲ ನಿನಗೆ ಮಾಡಿದ ಉಪಕಾರವು ಹಾಲಿಗೆ ಹಾಲೆರೆದಂತಾಯಿತು ಕೃತಘ್ನನೆ ! ಬ್ರಹ್ಮಹತ್ಯವನ್ನು ಮಾಡಿದವನಿಗೆ ಮದ್ಯಪಾನವನ್ನು ಮಾಡಿದವನಿಗೆ ಕಳ್ಳನಿಗೆ ವ್ರತಭಂಗವಾದವನಿಗೆ ಲೋಕದಲ್ಲಿ ಪ್ರಾಯಶ್ಚಿತ್ತವುಂಟು ಕೃತಘ್ನನಿಗೆ ಯಾವ ಪ್ರಾಯಶ್ಚಿತ್ತದಿಂದಲೂ ಶುದ್ಧಿಯಿರುವುದಿಲ್ಲ ವಿದ್ಯಾವಂತನಾಗಿರುವ ನಿನಗೆ ಇಷ್ಟುಮುಟ್ಟಿಗೆ ತೋರಲಿಲ್ಲವೆ ? ಏತಕ್ಕೆಬಂದೆ ? ಛೀ ! ಮಾನವರು ಪರರಿಗಪಕಾರವನ್ನೆ ಮಾಡುವ ಪಾಪಚಿತ್ತರು ಅವರನ್ನು ರಕ್ಷಿಸುವುದಕ್ಕಿಂತಲೂ ಶಿಕ್ಷಿಸುವುದೇ ಒಳ್ಳೆಯದು ಇಗೋ ! ಈಗಲೇ ನಿನ್ನ ಪ್ರಾಣಗಳನ್ನು ತೆಗೆವೆನು ಎಂದತ್ಯುಗ್ರವಾಗಿ ನುಡಿಯಲು ನಡನಡಗುತ್ತ ಇಂತೆಂದನು.

ಮಹಾತ್ಮಾ ! ನೀನು ನಟ್ಟಗಿಡವನ್ನು ನೀನೆ ಕಿತ್ತುಹಾಕಿದರೆ ನಿನ್ನನ್ನು ತಡೆವರಾರು ? ನಿನ್ನದೆಸೆಯಿಂದ ನನ್ನ ಹೆಂಡತಿಯ ಬಾಧೆಯು ನಿವೃತ್ತಿಯಾಯಿತು ಮತ್ತೊಂದು ಮದುವೆಯಾಯಿತು ರಾಜಾನುಗ್ರಹವು ದೊರೆಯಿತು ಜೀವ ವಿರುವವರೆಗೆ ಜೀವನಾಧಾರವಾಯಿತು ಹೀಗೆ ನಿನ್ನ ಕೃಪೆಗೆ ಪಾತ್ರನಾದ ನನ್ನನ್ನು ಕೊಲ್ಲುವುದು ನಿನಗೆ ಧರ್ಮವಾದರೆ ಕೊಲ್ಲು ನಿನ್ನ ಇಚ್ಛೆ ಅಸ್ಮದಾಚಾರ್ಯ ! ನಾನು ನಿನಗೆ ಸಂಕಟವನ್ನುಂಟುಮಾಡುವ ಸಂಕಲ್ಪದಿಂದ ಬಂದವನಲ್ಲ ನೀನು ಮಾಡಿದ ಉಪಕಾರವನ್ನು ಮರೆದವನಲ್ಲ ನಾನು ಕೃತಘ್ನನಲ್ಲ ನನಗೂ ನನ್ನ

ಮೂಲಕವಾಗಿ ನಿನಗೂ ಮಹಾ ವಿಪತ್ತು ಸಂಭವಿಸುವಂತೇರ್ಪಟ್ಟಿರುವುದು ಉಪಕಾರಿಯಾದ ನಿನಗೆ ಆ ವಿಚಾರವನ್ನು ತಿಳಿಯಿಸದಿರುವುದಕ್ಕೆ ಮನಸ್ಸಿಲ್ಲದೆ ನಿನ್ನೊಡನೆ ಹೇಳಿಹೋಗುವುದೊಳ್ಳೆತೆಂದು ಬಂದಿರುವೆನು ನನ್ನ ಮಾತುಗಳನ್ನು ಕೇಳಿದಬಳಿಕ, ನಿನ್ನ ಮನಸ್ಸುಬಂದಂತೆ ಮಾಡು ನನ್ನ ಮಾನಪ್ರಾಣಗಳನ್ನು ಕಾಪಾಡಿದ ನೀನು ವಿಪತ್ತನ್ನು ಪಡೆಯದೆ ಸುಖವಾಗಿರಬೇಕೆಂಬುದೇ ನನ್ನ ಉದ್ದೇಶ ಎಂದು ವಿನಯಪೂರ್ವಕವಾಗಿ ಹೇಳಿ ಕೈಮುಗಿದು ಏನು ಹೇಳಬೇಕೆಂದು ಬಂದಿರುವೆಯೋ ಬೇಗನೆ ಹೇಳು ಎಂದು ಬ್ರಹ್ಮರಾಕ್ಷಸನು ಹೇಳಲಾಗ ಧರ್ಮಶರ್ಮನು ಮತ್ತಿಂತೆಂದನು.

ಸ್ವಾಮಿಾ ! ಏನು ಹೇಳಲಿ ? ನಿನ್ನಿಂದ ಉಪದಿಷ್ಟನಾಗಿ ನಾನು ನನ್ನ ಗ್ರಾಮಕ್ಕೆ ಹೋಗದೆ ಕುಶಾವತಿಯಲ್ಲಿಯೇ ನಿಂತು, ಭವದೀಯ ದಿವ್ಯಕೃಪೆಯಿಂದ ಒಂದು ಮನೆಯನ್ನು ಮಾಡಿಕೊಂಡು ಇರುವಲ್ಲಿ ನನ್ನ ಪ್ರಥಮ ಭಾರ್ಯೆಯು ಹೇಗೋ ನನ್ನ ವೃತ್ತಾಂತವನ್ನು ತಿಳಿದುಕೊಂಡಳು. ನಿನ್ನ ಮಾತುಗಳನ್ನು ಕೇಳಿ ಮನೆಗೆ ಹೋಗದಿದ್ದುದಕ್ಕಾಗಿ ನನ್ನಮೇಲೆಯೂ ಮಜೋರ್ಭನೆಯನ್ನು ಮಾಡಿ ನನ್ನನ್ನು ಮರಳಿಸಿದುದಕ್ಕಾಗಿ ನಿನ್ನಮೇಲೆಯೂ ಆಗ್ರಹಗೊಂಡು ಓಹೋ ! ಇದೋ ನಡೆದ ನಡೆವಳಿಕೆ ? ನನ್ನ ಗಂಡನಿಗೆ ಬುದ್ಧಿಬರುವಂತೆ ಮಾಡುವುದನ್ನು ಬಿಟ್ಟು ಇಂತಹ ಅಪಕಾರವನ್ನು ನನಗೆ ಮಾಡಿದ ಆ ದುಷ್ಟನಾದ ಬ್ರಹ್ಮರಾಕ್ಷಸನಿಗೆ ತಕ್ಕಶಿಕ್ಷೆಯನ್ನು ಮಾಡುವೆನು ಎಂದು ನುಡಿದು ನನಗಾಗಿ ಒಂದು ಬಂಡಿಯಮೇಲೆಯೂ ನಿನಗಾಗಿ ಎರಡು ಬಂಡಿಗಳಮೇಲೆಯೂ ಚೆನ್ನಾಗಿ ಹೊಸೆದ ತೆಂಗಿನನಾರಿನ ಹಗ್ಗಗಳ ಹೊರೆಗಳನ್ನು ಹಾಕಿಕೊಂಡು ಕುಶಾವತಿಗೆ ಬಂದು ನಾನಿರವ ಸ್ಥಲವನ್ನು ವಿಚಾರಿಸುತ್ತಿರಲು, ಆಗ ದೈವವಶದಿಂದ ಯಾವುದೊ ಒಂದು ಕಾರ್ಯಾರ್ಥವಾಗಿ ಆಗತಾನೆ ಹೊರಕ್ಕೆ ಹೋಗಿದ್ದ ನಾನು ನನ್ನ ಸ್ನೇಹಿತನಿಂದ ಆ ಚಂಡಿಕೆಯ ಆಗಮನವನ್ನೂ ಉದ್ದೇಶವನ್ನೂ ತಿಳಿದುಕೊಂಡು ಮನೆಗೆ ಹೋಗದೆ ಮಹೋಪಕಾರಿಯಾದ ನಿನಗೆ ಮುಂದೆ ಸಂಭವಿಸಬಹುದಾದ ಮಹೋಪದ್ರವವನ್ನು ಪೂರ್ವಭಾವಿಯಾಗಿ ನಿನಗೆ ತಿಳಿಸಬೇಕೆಂದೂ ನನ್ನ ಗತಿಯು ಹೇಗಾದರೂ ಆಗಲಿ ನಿನಗೆ ಮೇಲನ್ನುಂಟು ಮಾಡಬೇಕೆಂದೂ ತ್ವರಿತದಿಂದ ಈ ವೃತ್ತಾಂತವನ್ನು ಹೇಳುವುದಕ್ಕಾಗಿ ಇಲ್ಲಿಗೆ ಬಂದಿರುವೆನು ನಾನಿಲ್ಲಿಗೆ ಬರುವುದನ್ನು ತಿಳಿದುಕೊಂಡು ನನ್ನ ಹಿಂದೆಯೇ ಆಕೆಯೂ ಬಂಡಿಗಳನ್ನು ಹೊಡೆದುಕೊಂಡು ಬರುತ್ತಿರುವಳು ಇಲ್ಲಿ ನೀನು ನಿಂತಿರುವುದನ್ನು ಆಕೆ ತಿಳಿದುಕೊಂಡಿರುವಳು ಮೊದಲು ನಿನ್ನನ್ನು ಶಿಕ್ಷಿಸಬೇಕೆಂಬುದೇ ಅವಳ ಕೋರಿಕೆ ಅವಳು ಬಂದರೆ ನಮ್ಮಿಬ್ಬರಿಗೂ ಸಾವು ತಪ್ಪದು ಇದೇ ವಿಚಾರ ದೇವ ! ನಾನುಬಂದ ಕಾರಣವನ್ನು ಅರಿಕೆಮಾಡಿದೆನಲ್ಲವೆ ? ಇನ್ನು ನನ್ನನ್ನು

ಮೊಟ್ಟಮೊದಲು ಕೊಂದುಬಿಡು ಮಹಾಕ್ರೂರಚಿತ್ತಳಾದ ಅವಳಿಂದ ಸಾಯುವು ದಕ್ಕಿಂತ ದಯಾಮಯನಾದ ನಿನ್ನ ಕೈಯಿಂದ ಸತ್ತರೆ ನನಗೆ ಪುಣ್ಯಲೋಕ ಪ್ರಾಪ್ತಿಯಾಗುವುದು ನಡೆದಿರುವ ಸಮಾಚಾರವನ್ನು ಹೇಳಿಬಿಟ್ಟೆನು ಆದುದ ರಿಂದ ನಾನಿನ್ನು ಸತ್ತರೂ ಚಿಂತೆಯಿಲ್ಲ ಎಂದು ಕಡುಭೀತಿಯನ್ನು ಹೊಂದಿದವ ನಂತೆ ನಟಿಸುತ್ತ ಹೇಳಿದನು.

ಧರ್ಮಶರ್ಮನೀಬಗೆಯಾದ ಉಪಾಯವನ್ನು ಕಲ್ಪಿಸಿ ಹೇಳುತ್ತಲೇ ಸತ್ಯ ವೆಂದು ನಂಬಿದ ಆ ಬ್ರಹ್ಮರಾಕ್ಷಸನ ಎದೆಯು ನಡುಗಿತು ಏನು ? ನಾನು ನಿನಗ ದುರ್ಬೋಧನೆಯನ್ನು ಮಾಡಿ ಮನೆಗೆ ಹೋಗದಂತೆ ಮಾಡಿದೆನೆಂದು ನಿನ್ನ ದೊಡ್ಡ ಹೆಂಡತಿ ಚಂಡಿಕೆ ತಿಳಿದುಕೊಂಡಳೆ ? ನನ್ನನ್ನೂ ನಿನ್ನನ್ನೂ ಹುಡುಕಿ ಕೊಂಡು ನಾನಿಲ್ಲಿರುವುದನ್ನು ತಿಳಿದು ಬರುತ್ತಿರುವಳೆ ? ಅಯ್ಯೋ ! ಅವಳು ಎಂತಹ ಕಾರ್ಯವನ್ನಾದರೂ ಮಾಡತಕ್ಕವಳೇ ! ಅವಳಬಾರಿಗೆ ಸಿಕ್ಕಿದವರಿಗೆ ಪ್ರಾಣವುಳಿವುದುಂಟೆ ? ದಯವಿಟ್ಟು ನೀನು ಮೊದಲ ಇಲ್ಲಿಗೆ ಬಂದು ನನಗೆ ತಿಳಿ ಯಿಸಿ ಒಳ್ಳೆಯದನ್ನೆ ಮಾಡಿದೆ ಎಲೈ ವಿಪ್ರನೇ ! ನಿನಗೆ ಒಳ್ಳೆಯದನ್ನು ಮಾಡಬೇ ಕೆಂದು ನಾನು ಮಾಡಿದ ಕೆಲಸವು ನನಗೆ ಮಹೋಪದ್ರವಕರವಾಗಿ ಪರಿಣಮಿ ಸಿತು ಅವಳು ಹಗೆಗೊಂಡು ಹೇಗಾದರೂ ನನ್ನನ್ನು ಬಾಧಿಸುವುದಕ್ಕೆ ಕಂಕಣ ವನ್ನು ಕಟ್ಟಿಕೊಂಡಿರುವಂತೆ ತೋರುವುದು ಇನ್ನು ನಿನ್ನ ಸಂಬಂಧವು ನನಗೆ ಬೇಡ ನನ್ನಸಂಬಂಧವು ನಿನಗೆಬೇಡ ನಿನಗೊಂದು ನಮಸ್ಕಾರ ನಿನ್ನ ಹೆಂಡತಿ ಗೊಂದು ವಂದನೆ ಆ ಕ್ರೂರಳಾದ ಚಂಡಿಕೆಯೊಡನೆ ನೀನೇ ಹೊಡೆದಾಡು ಅವಳ ಕಣ್ಗೆ ಬೀಳದಂತೆ ಇಗೋ ! ಈಗಲೇ ನಾನು ದೂರದೇಶಕ್ಕೆಲ್ಲಿಗಾದರೂ ಹೋಗಿ ಬಿಡುವೆನು ಎಂದು ಹೇಳಿ ಭಯಾತಿಶಯದಿಂದ ರಾಜಪುತ್ರಿಯನ್ನು ಬಿಟ್ಟು ಓಡಿ ಹೋದನು ಆಕೆಯು ಸ್ವಸ್ಥತೆಯನ್ನು ಪಡೆದಳು.

ತನ್ನ ಉಪಾಯವು ಫಲಿಸಿದುದಕ್ಕಾಗಿ ಧರ್ಮಶರ್ಮನತ್ಯಂತ ಸಂತೋಷಭರಿತ ಸ್ವಾಂತನಾದನು ಮಧುರಾಪುರಾಧಿಪತಿಯು ತನ್ನ ಮಗಳಮೇಲೆ ಆವಾಹನೆ ಯಾಗಿದ್ದ ಗ್ರಹವು ತೊಲಗಿಹೋದುದರಿಂದ ಆನಂದಪಟ್ಟು ಧರ್ಮಶರ್ಮನನ್ನು ಅಧಿ ಕವಾಗಿ ಗೌರವಿಸಿ ಹೊಗಳಿ ಅನೇಕ ಪಾರಿತೋಷಿಕಗಳನ್ನು ಕೊಟ್ಟು ತನಗೆ ಅಂತಪ್ಪ ಸಹಾಯವನ್ನು ಮಾಡಿದ ಮಿತ್ರನಾದ ದೀರ್ಘಬಾಹುವಿಗೆ ಪ್ರಶಂಸಾ ಪತ್ರವನ್ನು ಬರೆದು ತಕ್ಕ ಮರ್ಯಾದೆಗಳೊಡನೆ ಧರ್ಮಶರ್ಮನನ್ನು ಕುಶಾವತಿಗೆ ಕಳುಹಿಸಿಕೊಟ್ಟನು.

ಆ ಬ್ರಾಹ್ಮಣನು ದೈವಸಹಾಯದಿಂದಲೂ ಯುಕ್ತಿಯಿಂದಲೂ ತಾನು ಹೋದ ಕಾರ್ಯವನ್ನು ಸಾಧಿಸಿ ಕುಶಾವತಿಗೆ ಬಂದು ತನ್ನ ಎರಡನೆಯ ಹೆಂಡತಿ ಯಿಂದ ಸಕಲ ಸೌಖ್ಯಗಳನ್ನು ಅನುಭವಿಸುತ್ತ ರಾಜನಮನ್ನಣೆಗೆ ಪಾತ್ರನಾಗಿ

ಅಪರಿಮಿತ ಧನವನ್ನುಗಳಿಸಿ ಆ ದ್ರವ್ಯವನ್ನು ಧರ್ಮಕಾರ್ಯಗಳಲ್ಲಿ ವಿನಿಯೋಗಿಸುವುದಕ್ಕೆ ಬುದ್ಧಿಯಿದ್ದುದರಿಂದ ನಿರಾಲಂಬಗಳಾದ ಸ್ಥಲಗಳಲ್ಲಿ ಧರ್ಮಶಾಲೆಗಳನ್ನು ಕಟ್ಟಿಸಿ, ದೇವಾಲಯಗಳನ್ನು ನಿರ್ಮಿಸಿ ಹೀಗೆ ತನ್ನ ಅರ್ಥವನ್ನು ಶಾಶ್ವತ ಧರ್ಮಗಳಿಗಾಗಿ ವೆಚ್ಚಮಾಡಿದನು. ಆತನು ಹಾಗೆ ಕಟ್ಟಿದ ಅನೇಕ ಧರ್ಮಶಾಲೆಗಳಲ್ಲಿ ಇದೊಂದು, ದಾರಿಗಳಲ್ಲಿ ಅಲ್ಲಲ್ಲಿ ಅನೇಕ ಬಾವಿಗಳನ್ನು ತೋಡಿಸಿ ದಾರಿಗರಿಗೆ ಜಲವಸತಿಯನ್ನು ಮಾಡಿದನು ಅಲ್ಲಲ್ಲಿ ಗುಂಡುತೋಪುಗಳನ್ನು ಹಾಕಿಸಿದನು ಆ ಧರ್ಮಗಳು ಈಗಲೂ ಸ್ಥಿರವಾಗಿ ನಡೆಯುತ್ತಿರುವುವು ಎಂದಾ ಚಿದಾನಂದಯೋಗಿಯು ಬ್ರಹ್ಮರಾಕ್ಷಸನ ಕಥೆಯನ್ನು ಹೇಳಿದನು ಶಿಷ್ಯನಾ ಕಥೆಯನ್ನು ಕೇಳಿ ತಲೆದೂಗಿ ಮೆಚ್ಚಿ ಕೊಂಡಾಡಿದನು ಆ ರಾತ್ರಿ ಆ ಸತ್ರದಲ್ಲಿಯೇ ಗುರುಶಿಷ್ಯರು ಮಲಗಿ ನಿದ್ರಿಸಿದರು ಉದಯವಾಗುತ್ತಲೇ ಎದ್ದು ಸ್ನಾನಾದಿಕರ್ಮಗಳನ್ನು ಮುಗಿಸಿಕೊಂಡು ಮುಂದಿನ ಪ್ರಯಾಣಕ್ಕೆ ಸಿದ್ಧರಾದರು.

ಇಂತು ಇಪ್ಪತ್ತುಮೂರನೆಯ ಕಥೆ ಮುಗಿದುದು.



## —: ಇಪ್ಪತ್ತುನಾಲ್ಕನೆಯ ದಿನದ ಕಥೆ. :—

ಆಲಂಬಸ್ಸರ್ವಲೋಕಾನಾಂ ನಿರಾಲಂಬಃಸ್ವಯಂಪುಮಾ೯ |
ಧ್ಯಾನಸ್ಯವಿಷಯೋಭೂಯಾತ್ಸದಾನಂದಸ್ಸದಾಮಮ ||

ನಡುಗಾಡಿನ ಧರ್ಮಶಾಲೆಯನ್ನು ಬಿಟ್ಟು ಪ್ರಯಾಣಮಾಡಿದ ಆ ಚಿದಾನಂದ ಸತ್ಯಶೀಲರು ದಾರಿಯಲ್ಲಿ ಹೋಗುತ್ತಿದ್ದ ಸಮಯದಲ್ಲಿ ಪಕ್ಕದಲ್ಲಿ ಕಾಣುತ್ತಿದ್ದ ಒಂದು ನಗರಕ್ಕೆ ಸ್ವಲ್ಪ ದೂರದಲ್ಲಿ ಹಾಳುಬಿದ್ದಿದ್ದ ಒಂದು ದೇವಾಲಯವೂ ಅದರಮುಂದೆ ಒಂದು ಶೂಲಕ್ಕೆ ಹಾಕುವ ಸ್ತಂಭವೂ ಗೋಚರಿಸಿತು.

ಸತ್ಯಶೀಲನು ಆಗ ಅವುಗಳ ವಿಷಯದಲ್ಲಿ ಯಾವ ಮಾತನ್ನೂ ಆಡದೆ ಆ ಕಾಡಿನಲ್ಲಿ ನಡೆದು ನಡೆದು ಮಧ್ಯಾಹ್ನದವೇಳೆಗೆ ಒಂದು ದೊಡ್ಡ ಗ್ರಾಮವನ್ನು ಕಂಡು ಆ ಗ್ರಾಮದಲ್ಲಿ ಒಂದು ಚಾವಡಿಯಲ್ಲಿ ಗುರುವಿನೊಡನೆ ನಿಂತು ಅಡಿಗೆಯನ್ನು ಮಾಡಿದನು ಗುರುಶಿಷ್ಯರಿಗೆ ಭೋಜನವಾಯಿತು ಎಲ್ಲ ಕೆಲಸಗಳನ್ನು ಮುಗಿಸಿಕೊಂಡು ಆ ಸತ್ಯಶೀಲನು ಗುರುವಿನಬಳಿಗೆ ಬಂದು ಇಂತೆಂದನು.

ಸ್ವಾಮಿಾ ! ತಾವು ಮಹಾತ್ಮರು ತಮಗೆ ತಿಳಿಯದ ವಿಷಯುವೇ ಇಲ್ಲವೆಂದರೂ ಅದು ಅತಿಶಯೋಕ್ತಿಯಾಗಲಾರದು. ತಮಗೆ ಅಡಿಗಡಿಗೆ ತೊಂದರೆಗೊಡುವುದೇ ನನ್ನ ಕರ್ತವ್ಯವಾಗಿ ಹೋಗಿದೆ ಏನುಮಾಡಲಿ ? ತಾವು ಶಾಂತಚಿತ್ತರಾಗಿರುವುದರಿಂದ ಏನು ನಾನು ಕೇಳಿದರೂ ಕೋಪಮಾಡಿಕೊಳ್ಳದೆ ಬೇಸರಪಡದೆ ಹೇಳುತ್ತಲೇ ಇರುವಿರಿ ಈ ದಿನದ ದಾರಿಯಲ್ಲಿ ನನಗೊಂದು ವಿಶೇಷ ಸ್ಥಲವು ಗೋಚರಿಸಿತು ತಾವೂ ಅದನ್ನು ನೋಡುತ್ತಲೇ ಬಂದಿರೆಂಬುದನ್ನು ನಾನು

ಬಲ್ಲೆನು ದಯಮಾಡಿ ತದ್ವಿಚಾರವನ್ನು ನನಗೆ ಅಪ್ಪಣೆಗೊಡಿಸಬೇಕೆಂದು ಪ್ರಾರ್ಥಿಸುತ್ತೇನೆ ಎಂದನು. ಚಿದಾನಂದ ಯೋಗಿಯು ಒಂದೆರಡು ನಿಮಿಷ ಸುಮ್ಮನಿದ್ದು ಶಿಷ್ಯನನ್ನು ಕುರಿತು ಎಲೈ ಕುಮಾರ ! ನೀನು ಕೇಳುವ ವಿಷಯವನ್ನು ತಿಳಿದುಕೊಂಡೆನು. ನಾವು ದಾರಿಯಲ್ಲಿ ಬರುತ್ತಿರುವಾಗ ಒಂದು ಪಟ್ಟಣವೂ ಒಂದು ಹಾಳುಗುಡಿಯೂ ಅದಕ್ಕೆ ಸ್ವಲ್ಪ ದೂರದಲ್ಲಿ ಒಂದು ಶೂಲಕ್ಕೆ ಹಾಕುವ ಕೊರಡೂ ಇದ್ದುದನ್ನು ಕಂಡೆವಲ್ಲವೆ ? ನೀನು ತದ್ವಿಚಾರವನ್ನೇ ಕೇಳುತ್ತಿರುವೆ ಆ ಪಟ್ಟಣವು ದಾರಿಗೆ ಸ್ವಲ್ಪ ದೂರದಲ್ಲಿದ್ದುದರಿಂದ ದಾರಿಯನ್ನು ಬಿಟ್ಟು ಮಧ್ಯಾಹ್ನವಾಗುವುದಕ್ಕೆ ಇನ್ನೂ ಸ್ವಲ್ಪ ಹೊತ್ತಿರುವಾಗಲೇ ಅಲ್ಲಿ ಏಕೆ ನಿಲ್ಲಬೇಕೆಂದು ಬಂದುದಾಯಿತು ಆ ಹಾಳುಗುಡಿಯ ಮುಂದೆ ಆ ಶೂಲದ ಸ್ತಂಭವಿರುವುದಕ್ಕೆ ಕಾರಣವನ್ನು ಹೇಳುವೆನು ಲಾಲಿಸು.

## ಜೋಯಿಸನಿಗೆ ಶನಿದೇವರು ಅನುಗ್ರಹಿಸಿದ ಕಥೆ.

ಇಲ್ಲಿಗೆ ಸ್ವಲ್ಪದೂರದಲ್ಲಿ ಒಂದಗ್ರಹಾರದಲ್ಲಿ ಒಬ್ಬ ದೈವಜ್ಞನಿದ್ದನು ಆತನ ಹೆಸರು ಪ್ರಭಾಕರ ಜೋಯಿಸ ಆತನು ಪ್ರತಿದಿನವೂ ತನಗುಂಟಾಗುವ ಗ್ರಹಚಾರ ವಿಧಾನವನ್ನು ಗಣಿತದಿಂದ ನೋಡಿಕೊಳ್ಳುತ್ತಿದ್ದನು. ಒಂದು ದಿನ ತನ್ನ ಜಾತಕವನ್ನು ವಿಮರ್ಶೆಮಾಡುವಾಗ ತನಗೆ ಏಳೂವರೆ ಸಂವತ್ಸರಗಳು ಶನೈಶ್ಚರನು ಆವಾಹನೆಯಾಗಿ ಕಷ್ಟಗಳನ್ನುಂಟುಮಾಡುವಂತೆ ತಿಳಿದುಬಂದುದರಿಂದ ಮಹಾಭಯವನ್ನು ಹೊಂದಿ ತ್ರಿಮೂರ್ತಿಗಳಿಗೂ ಸೈರಿಸಲಸದಳವಾದ ಶನೈಶ್ಚರಸ್ವಾಮಿಯ ಕ್ರೂರತ್ವವನ್ನು ನಾನು ಸೈರಿಸಬಲ್ಲೆನೆ? ಅಕ್ಕಟಾ! ಏನುಮಾಡಲಿ ? ಎಂದು ಚಿಂತಾಕ್ರಾಂತನಾಗಿ ತತ್ಪರಿಹಾರೋಪಾಯವನ್ನರಿಯದೆ ಆ ದೈವವನ್ನೇ ಆಶ್ರಯಿಸಲು ನಿಶ್ಚಯಿಸಿಕೊಂಡು ತದೇಕನಿಷ್ಠಾಗರಿಷ್ಠನಾಗಿ ಆ ಛಾಯಾಪುತ್ರನನ್ನು ಕುರಿತು ಘೋರತಪಸ್ಸನ್ನು ಮಾಡಲಾರಂಭಿಸಿದನು. ಕೆಲವು ದಿನಗಳಬಳಿಕ ಆತನು ಆ ಜೋಯಿಸನ ತಪಸ್ಸಿಗೆಮೆಚ್ಚಿ ಪ್ರತ್ಯಕ್ಷವಾಗಿ ಎಲೈ ಬ್ರಾಹ್ಮಣೋತ್ತಮ ! ನೀನು ಭಕ್ತಿಪೂರ್ವಕವಾಗಿ ಮಾಡಿದ ತಪಸ್ಸಿಗೆ ಮೆಚ್ಚಿದೆನು ಯಾವ ವರವನ್ನು ಪಡೆವುದಕ್ಕೆ ನನ್ನನ್ನು ಕುರಿತು ತಪಸ್ಸು ಮಾಡಿದೆ ? ನಿನಗೆ ವರವನ್ನು ಕೊಡುವುದಕ್ಕೆ ಬಂದಿರುವೆನು ? ಏನುಬೇಕು ? ಕೇಳು ಎಂದನು. ಆ ಜ್ಯೋತಿಷ್ಕನು ದೇವ ! ಮಹಾನುಭಾವ ! ನನ್ನ ರಾಶಿಗೆ ನೀನು ದ್ವಾದಶಸ್ಥಾನಕ್ಕೆ ಬಂದಿರುವೆ ? ಆದುದರಿಂದ ನಿನ್ನ ವೇದೆಯು ನನಗೆ ಏಳೂವರೆ ಸಂವತ್ಸರಗಳು ತಪ್ಪುವುದಿಲ್ಲವೆಂದು ತಿಳಿದುಕೊಂಡು ಭೀತಿಗ್ರಸ್ತನಾಗಿರುವೆನು ನಿನ್ನ ದಾರುಣತೆಯನ್ನು ತಿಳಿದುಕೊಳ್ಳುವುದಕ್ಕೆ ನನ್ನಿಂದಾಗದು ಸೈರಿಸಿಕೊಂಡಿರಲಾರೆನು ದಯಮಾಡಿ ನಿನ್ನ ವೀಕ್ಷಣವು ನನ್ನಮೇಲೆ ಪ್ರಸರಿಸದಂತೆ

ಅನುಗ್ರಹಿಸಬೇಕೆಂದು ಬೇಡುವೆನು ಎಂದು ಪುನಃ ಪುನರ್ನಮಸ್ಕಾರಗಳನ್ನು ಮಾಡಿ ಪ್ರಾರ್ಥಿಸಿದನು.

ಶನೈಶ್ಚರನು ಮಾತುಗಳನ್ನು ಕೇಳಿ ಅಬ್ಬಾ! ಅದು ಹೇಗೆ ಸಾಧ್ಯವಾದೀತು? ಪ್ರತಿಯೊಂದು ಗ್ರಹವೂ ಭಚಕ್ರದಲ್ಲಿ ಆಯಾಸ್ಥಾನವನ್ನು ಪಡೆದಾಗ ಸುಖವೋ ದುಃಖವೋ ಪ್ರಾಪ್ತವಾಗಬೇಕಾದ್ದು ಈಶ್ವರನಿಯಾಮಕವಾಗಿದೆ ಆ ಫಲಗಳನ್ನು ತಪ್ಪಿಸುವುದಕ್ಕೆ ಯಾರಿಗೆ ಸಾಧ್ಯ? ನೀನು ಕೇಳಿದಂತೆ ವರವನ್ನು ಕೊಡುವುದಕ್ಕಾಗುವುದೆ? ಕೊಟ್ಟರೆ ಲೋಗರು ನನ್ನನ್ನು ಲಕ್ಷ್ಯದಲ್ಲಿಡುವರೆ? ಆದರೂ ನೀನಿಷ್ಟು ಕಷ್ಟಪಟ್ಟು ತಪಸ್ಸುಮಾಡಿದುದರಿಂದಲೂ ವರವನ್ನು ಕೊಡುತ್ತೇನೆಂದು ನಾನು ವಾಗ್ದಾನಮಾಡಿದುದರಿಂದಲೂ ನಾನು ಹಿಡಿದು ವೇಧಿಸಬೇಕಾಗಿದ್ದ ಏಳೂವರೆ ಸಂವತ್ಸರಗಳಲ್ಲಿ ಅರ್ಧಭಾಗವನ್ನು ಬಿಡುವೆನು ಆ ಕಾಲದಲ್ಲಿ ನನ್ನ ವೇಧೆಯು ನಿನಗಿರಲಾರದು ಎಂದು ಹೇಳಿ ಅಂತರ್ಧಾನವನ್ನು ಪಡೆದನು. ಪ್ರಭಾಕರ ಕಾರ್ತಾಂತಿಕನು ಅಷ್ಟುಮಾತ್ರಕ್ಕೆ ತೃಪ್ತಿಹೊಂದದೆ ಮತ್ತೆ ತಪಸ್ಸನ್ನು ಮಾಡಿದನು ಶನಿಯು ಮತ್ತೆ ಪ್ರತ್ಯಕ್ಷವಾಗಿ ಆತನು ಮತ್ತೆಕೋರಿದುದರಿಂದ ಆ ಮೂರೂಮುಕ್ಕಾಲು ವರ್ಷಗಳಲ್ಲಿ ಅರ್ಧಭಾಗವನ್ನು ಬಿಡುವಂತೆ ಹೇಳಿ ಅಂತರ್ಹಿತನಾದನು. ಒಲಿದರೆ ಶನಿಯು ಸ್ಥಿರಸೌಖ್ಯವನ್ನು ಕೊಡುವ ಸ್ವಭಾವದವನೆಂದಾ ಮೌಹೂರ್ತಿಕನು ಬಲ್ಲನೆಂದುದರಿಂದ ಆತನನ್ನು ಕುರಿತು ಮತ್ತೆಮತ್ತೆ ತಪಸ್ಸುಮಾಡಿ ಪ್ರತ್ಯಕ್ಷಮಾಡಿಕೊಂಡು ಆತನಿಂದ ಸ್ವಲ್ಪ ಸ್ವಲ್ಪ ಭಾಗವನ್ನೆ ಕಡಿಮೆಮಾಡಿಸುತ್ತ ಬಂದು ಕೊನೆಗೆ ಏಳೂವರೆಗಳಿಗೆ ಅಂದರೆ ಒಂದು ಯಾಮವಾದರೂ ಶನಿವೇಧೆಯನ್ನು ಪಡೆಯಲೇಬೇಕೆಂಬ ತೀರ್ಮಾನವನ್ನು ಹೊಂದಿದನು. ಆತನು ತನ್ನಲ್ಲಿ ಆ ಸಪ್ತಮಗ್ರಹವು ಆವೇಶಿಸುವ ದಿನದಲ್ಲಿ ಉಷಃಕಾಲಕ್ಕೆಯೇ ಎದ್ದು ಸ್ನಾನಾದಿವಿಧಿಗಳನ್ನು ತೀರಿಸಿಕೊಂಡು ವಿಜನಸ್ಥಲದಲ್ಲಿ ಕುಳಿತುಕೊಂಡು ಒಂದು ಕಲಶವನ್ನಿಟ್ಟು ಶನಿಯನ್ನಾವಾಹನೆಮಾಡಿ ಷೋಡಶೋಪಚಾರಗಳಿಂದರ್ಚಿಸಿ "ಶ್ರಯೇಽಹಂ ಸೂರ್ಯತನಯಂ ಛಾಯಾಪುತ್ರಂಮಹೋದಯಂ | ಕಾಲಂಸರ್ವಾರ್ಥದಾತಾರಂ ದೀರ್ಘಾಯುಃಪ್ರದಮೀಶ್ವರಂ || ಪಾಹಿಪಾಹಿಕೃಪಾಂಭೋಧೇ ಮಂದಾಮಂದಸುಖಪ್ರದ | ಆಧಿವ್ಯಾಧ್ಯಾದಿರಹಿತಂ ಕೃತ್ವಾಮಾಂವರದಪ್ರಭೋ ||" ಎಂದು ಧ್ಯಾನಿಸಿ ತತ್ಪರಿಮಿತಕಾಲವನ್ನು ಕಳೆಯಲೆಣಿಸಿ ತನ್ನ ವಸ್ತ್ರಗಳನ್ನು ಮಡಿಚೀಲದಲ್ಲಿಟ್ಟು ಕೌಂಕುಳಲ್ಲಿ ಸೇರಿಸಿಕೊಂಡು ದೂರಸ್ಥವಾದ ಒಂದು ಕಾಡಿಗೆ ಹೋಗುತ್ತ ಬಿಸಿಲು ಹೆಚ್ಚಾದುದರಿಂದ ದಾಹಗೊಂಡು ನಾಲಗೆ ಒಣಗುತ್ತಿರಲು ನೀರನ್ನು ಹುಡುಕಿಕೊಂಡು ಹೋದನು ಜಲಾಶಯವೆಲ್ಲಿಯೂ ಕಾಣಲಿಲ್ಲ ಹಾಗೆಯೇ ಆಯಾಸಗೊಂಡು ಸ್ವಲ್ಪ ದೂರ ಹೋಗಲಾಗಿ ಅಲ್ಲಿ ಒಂದೆಡೆಯಲ್ಲಿ ಒಂದು ಕರಿಬೂಜುಹಣ್ಣಿನ ತೋಟ

ವನ್ನು ಕಂಡನು. ಆ ಸಮಯದಲ್ಲಿ ತೋಟದ ಒಡೆಯನಲ್ಲಿಯೇ ಇದ್ದುದರಿಂದ ಆ ಬ್ರಾಹ್ಮಣನಾತನಬಳಿಗೆ ಹೋಗಿ ಧರ್ಮವಾಗಿ ಒಂದು ಹಣ್ಣನ್ನು ಕೊಟ್ಟು ನನ್ನ ಬಾಯಾರಿಕೆಯನ್ನು ಹೋಗಲಾಡಿಸಬೇಕೆಂದು ಆತನನ್ನು ಪ್ರಾರ್ಥಿಸಲಾಗಿ ಆ ತೋಟದವನೊಂದು ಹಣ್ಣನ್ನು ಕೊಟ್ಟನು. ಆ ವಿಪ್ರನದನ್ನು ಹೆಚ್ಚಿ ಅರ್ಧ ವನ್ನು ತಿಂದು ದಾಹವನ್ನು ಹೋಗಲಾಡಿಸಿಕೊಂಡು, ಉಳಿದರ್ಧವನ್ನು ಬಾಯಾರಿಕೆಯುಂಟಾದಾಗ ತಿನ್ನಬೇಕೆಂದು ತನ್ನ ಮಡಿಯ ಚೀಲದಲ್ಲಿಟ್ಟು ಭದ್ರವಾಗಿ ಕಟ್ಟಿಕೊಂಡು ಹೊರಟನು. ದಾರಿಯಲ್ಲಿ ಒಂದು ಹಾಳುಗುಡಿಯು ಕಾಣಿಸಲು ಅಲ್ಲಿ ಜನರಾರೂ ಇಲ್ಲದಿದ್ದುದರಿಂದ ಅಲ್ಲಿ ಕುಳಿತುಕೊಂಡು ಶನಿಯನ್ನು ಧ್ಯಾನಿಸುತ್ತಿದ್ದನು ಸಮಯಪ್ರೊದಗಿತು ಶನಿ ಆತನಲ್ಲಿ ಆವೇಶಿಸಿದನು ತನಗೆ ಶನಿಬಾಧೆಯುಂಟಾಗುವ ಸಮಯವನ್ನರಿತಿದ್ದ ಆ ದೈವಜ್ಞನು ನಿಶ್ಚಲಚಿತ್ತನಾಗಿ ಕಣ್ಣಳನ್ನು ಮುಚ್ಚಿಕೊಂಡು ತದೇಕ ನಿಷ್ಠಾಗರಿಷ್ಠನಾಗಿ ಛಾಯಾಸುತನನ್ನು ಧ್ಯಾನಿಸುತ್ತ ಯಾಮವೊಂದು ಯಾವಾಗ ಕಳೆವುದೋ ಎಂದು ನಿರೀಕ್ಷಿಸುತ್ತಿದ್ದನು. ಹೀಗೆ ಆತನು ಧ್ಯಾನಪ್ರವೃತ್ತಿಯಿಂದಿರುವ ಸಮಯದಲ್ಲಿ ಒಂದು ವಿಶೇಷವು ನಡೆಯಿತು ಏನೆಂದರೆ:—

ಅಲ್ಲಿಗೆ ಸಮೀಪದಲ್ಲಿ ಒಂದು ಪಟ್ಟಣವಿದ್ದಿತು ಪುನ್ನಾಗಸತ್ವನೆಂಬ ರಾಜನು ಆ ನಗರವನ್ನಾಳುತ್ತಿದ್ದನು. ಆ ದಿನ ಸ್ವಲ್ಪ ಹೊತ್ತಾದಮೇಲೆ ಆ ಭೂಪಾಲನ ಏಕಮಾತ್ರ ಪುತ್ರನು ಪಂಚವಾರ್ಷಿಕ ಬಾಲನು ಸರ್ವಾಲಂಕಾರ ಭೂಷಿತನಾಗಿ ಅರಮನೆಯ ಬಾಗಿಲಲ್ಲಿ ಆಡಿಕೊಳ್ಳುತ್ತ ಇದ್ದಕ್ಕಿದ್ದ ಹಾಗೆಯೇ ಕಣ್ಣಿಗೆ ಕಾಣದೆ ಹೋದನು. ಆಗ ಅದನ್ನರಿತು ರಾಜಾಮಾತ್ಯ ಭೃತ್ಯಾದಿಗಳು ಗಾಬರಿಬಿದ್ದು ಪಟ್ಟಣದಲ್ಲೆಲ್ಲ ಹುಡುಕಿಸಿದರು ಎಲ್ಲಿಯೂ ದೊರೆಯಲಿಲ್ಲ ಆಗ ರಾಜನು ಅಧಿಕವಾದ ದುಃಖವನ್ನು ಹೊಂದಿ ಆ ಬಾಲಕನನ್ನು ಹುಡುಕಿತರಲಿಕ್ಕೆ ದಿಕ್ಕುದಿಕ್ಕಿಗೂ ಸೇವಕರನ್ನು ಕಳುಹಿಸಿಕೊಟ್ಟನು. ರಾಜನಿಂದ ಕಳುಹಲ್ಪಟ್ಟ ಭಟರಲ್ಲಿ ಕೆಲರು ಕಾಡುಕಡೆಗೂ ಮತ್ತೆ ಕೆಲರು ಊರುಮುಂದಣ ಕೆರೆ ಕುಂಟೆ ಬಾವಿ ಮೊದಲಾದಕಡೆಗೂ ಮತ್ತೆ ಹಲವರು ತೋಟ ಗದ್ದೆ ತೋಪು ಮೊದಲಾದವುಗಳಕಡೆಗೂ ಹುಡುಕಿಕೊಂಡು ಹೋದರು ಮೊದಲಿನ ಎರಡು ಪಂಗಡದವರೂ ಮಗು ದೊರೆಯಲಿಲ್ಲವೆಂದು ಬರಿದಾಗಿ ಬಂದುಬಿಟ್ಟರು ಮೂರನೆಯ ಪಂಗಡದವರತ್ತಿತ್ತ ಹುಡುಕುತ್ತ ಹೋಗಿಹೋಗಿ ಪ್ರಭಾಕರ ಜೋಯಿಸನಿದ್ದ ಹಾಳುಗುಡಿಯ ಮುಂಗಕ್ಕೆ ಬಂದು ಅದರಲ್ಲಿ ಕಣ್ಣುಗಳನ್ನು ಮುಕುಳಿಸಿ ಕುಳಿತುಕೊಂಡಿದ್ದ ಆ ಬ್ರಾಹ್ಮಣನನ್ನು ಅಕಸ್ಮಾತ್ತಾಗಿ ನೋಡಿದರು ಎಂದೋ ಯಾವನೋ ಯಾವ ಕಾರಣದಿಂದಲೋ ಕಟ್ಟಿಸಿದ್ದು ಕಾಲಕ್ರಮದಿಂದ ಶಿಥಿಲಾವಸ್ಥೆಯನ್ನು ಪಡೆದಿರುವ ಆ ಹಾಳುಗುಡಿಯಲ್ಲಿ ನಿರ್ಜನಪ್ರದೇಶದಲ್ಲಿ ಆ ವಿಪ್ರ

ನೇಕಾಕಿಯಾಗಿರುವುದಕ್ಕೆ ಕಾರಣವೇನೆಂದಾಲೋಚಿಸಿ ಸಂಶಯಪಟ್ಟು ಕಣ್ಣ ಳನ್ನು ಮುಚ್ಚಿಕೊಂಡಿರುವ ಆತನನ್ನು ಸಮೀಪಿಸಿ ನೋಡುತ್ತಿರಲು ಆಗ ಒಂದು ಅದ್ಭುತದೃಶ್ಯವು ಅವರ ಕಣ್ಗಳಿಗೆ ಗೋಚರಿಸಿತು. ಏನೆಂದರೆ—ಅದಕ್ಕೆ ಮೊದ ಲಾ ಮಹೀಸುರನು ತನಗೆ ತೋಟದವನು ಕೊಟ್ಟ ಹಣ್ಣಿನಲ್ಲಿ ಅರ್ಧವನ್ನು ತಿಂದು ಉಳಿದರ್ಧವನ್ನು ಮಡಿಚೀಲದಲ್ಲಿಟ್ಟುಕೊಂಡಿದ್ದನಷ್ಟೆ? ಆ ಚೀಲವನ್ನು ಆತನು ತನ್ನ ಮುಂದೆ ಇರಿಸಿಕೊಂಡು ಧ್ಯಾನನಿಷ್ಠನಾಗಿರುತ್ತಿರಲು, ಆಹಣ್ಣಿನ ಅರ್ಧ ಭಾಗದಿಂದ ನೀರು ಸೋರಿ ಚೀಲವು ಒದ್ದೆಯಾಗಿ ಹೊರಕ್ಕೆ ಆರಸವು ಸೋರು ತ್ತಿದ್ದಿತು. ಅದು ಆ ರಾಜಭಟರ ನೇತ್ರಗಳಿಗೆ ರಕ್ತದಂತೆ ಕಾಣಿಸಿತು. ಅವರು ಸಂದೇಹಪಟ್ಟು ಇದೇನಿದು? ಈತನು ಬ್ರಾಹ್ಮಣನಲ್ಲವೆ? ಈತನ ಮಡಿಚೀಲ ದಿಂದ ನೆತ್ತರು ಸೋರುತ್ತಿರುವುದಕ್ಕೆ ಕಾರಣವೇನು? ಮಾಂಸವನ್ನಿಟ್ಟುಕೊಂಡಿ ರುವನೇ ಚೀಲದಲ್ಲಿ? ಈತನು ಬ್ರಾಹ್ಮಣನಲ್ಲವೆ? ಚೀಲದಲ್ಲಿ ಏನಿರುವುದೋ ತಿಳಿದುಕೊಳ್ಳೋಣ ಎಂದು ಆಲೋಚಿಸಿ ಸದ್ದುಮಾಡದಂತೆ ಮೆಲ್ಲಗೆ ಹೋಗಿ ಚೀಲವನ್ನು ತಂದು ಬಿಚ್ಚಿನೋಡಿದರು.

ಸತ್ಯಶೀಲನೇ! ಹೇಳುವುದೇನು? ಆ ಮಡಿಚೀಲದಲ್ಲಿದ್ದ ಅರ್ಧಹಣ್ಣು ಆಭರಣ ಸಹಿತವಾಗಿ ಕುತ್ತಿಗೆಯವರೆಗೆ ಕೊಯ್ಯಲ್ಪಟ್ಟ ರಾಜಪುತ್ರನಾದ ಬಾಲ ಕನ ತಲೆಯಾಗಿ ಕಾಣಿಸಿತು. ಶನಿಯ ಮಹಿಮೆಯನ್ನು ನೋಡಿದೆಯಾ? ಹಣ್ಣಿನ ಅರ್ಧಭಾಗದಿಂದ ಸೋರುತ್ತಿದ್ದ ನೀರು ರಕ್ತವಾಗಿ ಗೋಚರಿಸಿತು. ಇನ್ನೇನಾ ಗಬೇಕು? ಈ ಬ್ರಾಹ್ಮಣನು ರಾಜಪುತ್ರನ ಆಭರಣಗಳನ್ನಪಹರಿಸುವುದಕ್ಕಾಗಿ ಆ ಬಾಲಕನನ್ನು ತಂದು ಕುತ್ತಿಗೆಯನ್ನು ಕಡಿದು ಮುಂಡವನ್ನೆಲ್ಲಿಯೋ ಅಚ್ಛಾ ದಿಸಿ ಆಭರಣಗಳನ್ನು ತೆಗೆದುಕೊಂಡು ತಲೆಯನ್ನು ಬಿಸುಡಬೇಕೆಂದಿರುವಷ್ಟರಲ್ಲಿ ನಾವು ಬಂದುದಂ ಕಂಡು ಆ ಶಿರಸ್ಸನ್ನು ಮಡಿಚೀಲದಲ್ಲ ಕಟ್ಟಿಟ್ಟು ಮಹಾಸಾ ಧುಪುರಷನಂತೆಯೂ ತಾನಾವುದನ್ನೂ ಕಾಣದವನಂತೆಯೂ ಮೌನವಾಗಿ ಕಣ್ಣು ಮುಚ್ಚಿಕೊಂಡು ಕುಳಿತಿರುವನು. ಇವನು ನಿಶ್ಚಯವಾಗಿಯೂ ರಾಜಪುತ್ರನನ್ನು ಕೊಂದವನೇಸರಿ ಎಂದಾ ರಾಜಭಟರು ನಿಶ್ಚಯಿಸಿ ಆಗ್ರಹಂಗೊಂಡು ಎಲಾ! ಚೋರಾಗ್ರಣಿಯೇ! ಬಾಲಹಂತನೇ! ಸುಂದರನೂ ಸುಕುಮಾರನೂ ಆದ ಬಾಲ ಕನನ್ನು ವಧಿಸಲು ನಿನಗೆ ಹೇಗೆ ಕೈ ಬಂತು? ಪಾಪಾತ್ಮಾ! ಧನಾಶೆಯಿಂದ ಎಂತಪ್ಪ ಕ್ರೂರಕೃತ್ಯವನ್ನಾಚರಿಸಿದೆ? ನಿನ್ನನ್ನು ವಧಿಸಿ ನಿನ್ನ ಮಾಂಸವನ್ನು ನಾಯಿನರಿ ಕಾಗೆ ಹದ್ದುಗಳಿಗೆ ಹಾಕಿದರೂ ನಿನ್ನ ತಪ್ಪಿಗೆ ತಕ್ಕ ಶಿಕ್ಷೆ ಆಗಲಾ ರದು ಎಂದು ನಾನಾ ದುರ್ಭಾಷೆಗಳಾಡುತ್ತ ಒದೆಯುತ್ತ ಆತನನ್ನು ಹಿಡಿದು ಕಟ್ಟಿ ಶಿರಸ್ಸಮೇತವಾದ ಆ ಚೀಲವನ್ನು ತೆಗೆದುಕೊಂಡು ನಿರಪರಾಧಿಯಾದ ಆ ಬ್ರಾಹ್ಮಣನನ್ನು ಕರೆದುಕೊಂಡು ರಾಜನಬಳಿಗೆಹೋಗಿ, ತಾವು ಕಂಡುದನು

ಮತ್ತು ನಡೆದ ಕ್ರಮವನ್ನು ಕೂಡ ತಿಳಿಯಿಸಿ ಈ ಪಾಪಿಷ್ಠನು ಒಡವೆಗಳನ್ನು ಅಪಹರಿಸುವುದಕ್ಕಾಗಿ ಈ ಕ್ರೂರಕೃತ್ಯವನ್ನು ಮಾಡಿರುವನು. ರಾಜಪುತ್ರನ ತಲೆಯು ಈ ಚೀಲದಲ್ಲಿರುವುದು. ಎಂದು ಹೇಳಿ ಆ ಚೀಲವನ್ನು ಸಭೆಯನಡುವೆ ಇಟ್ಟರು.

ಆ ನುಡಿಗಳನ್ನು ಕೇಳಿದ ಸಭ್ಯರು ಹರಿಹರೀ! ಎಂದು ಕಿವಿಗಳನ್ನು ಮುಚ್ಚಿಕೊಂಡರು. ಮತ್ತು ಆ ಬ್ರಾಹ್ಮಣನನ್ನು ಹಲವುಬಗೆಯಿಂದ ದೂಷಿಸಿದರು. ಅರಸನಾದರೋ ರಕ್ತಸಿಕ್ತವಾಗಿದ್ದ ಆ ಚೀಲವನ್ನು ನೋಡಿ, ತನ್ನಮುದ್ದುಕುವರನ ಶಿರಸ್ಸನ್ನು ಕಣ್ಣಿಂದ ನೋಡಲಾರದೆ ಕಂಬನಿಗಳನ್ನು ಸುರಿಸುತ್ತ, ಸೇವಕರ ಮಾತುಗಳನ್ನು ನಂಬಿ ಅವರೊಡನೆ, ಭಟರುಗಳಿರಾ! ನಾನು ಬಾಲಕನ ತಲೆಯನ್ನು ಈ ಹಾಳುಕಣ್ಣುಗಳಿಂದ ನೋಡಲಾರೆನು. ನೀವು ಹೇಳಿದುದೇ ಸಾಕು. ಈ ಶಿಶುಹಂತಕನನ್ನು ಎಲ್ಲಿಂದ ನೀವು ಹಿಡಿದುತಂದಿರೋ, ಆಸ್ಥಲಕ್ಕೆ ಇವನನ್ನು ಕರೆದುಕೊಂಡುಹೋಗಿ ನೀವು ಹೇಳಿದ ಆ ಹಾಳುಗುಡಿಯಮುಂದೆ ಒಂದು ಶೂಲಸ್ತಂಭವನ್ನು ನೆಟ್ಟು ಪಾಪವರ್ತನನೂ ಕ್ರೂರಚಿತ್ತನೂ ಆದ ಇವನನ್ನು ಬ್ರಾಹ್ಮಣನೆಂದು ಭಾವಿಸದೆ ಶೂಲಕ್ಕೆ ಹಾಕಿರಿ. ಮುಮ್ಮಾತಿಗೂ ಆಜ್ಞಾಪಿಸಿರುವೆನು ಎಂದು ನುಡಿದು ಪುತ್ರಮರಣ ಶೋಕಾನಲತಪ್ತನಾಗಿ ಓಲಗವನ್ನು ಬಿಟ್ಟು ಅಂತಃಪುರಕ್ಕೆ ತೆರಳಿದನು.

ಪಾಪ! ಆಬ್ರಾಹ್ಮಣನೇನುತಾನೆ ಮಾಡಿಯಾನು? ಮೊದಲಿಂದ ಕೊನೆಯವರೆಗೂ ನಡೆದ ಕೆಲಸಗಳೆಲ್ಲವೂ, ಶನಿಭಗವಾನನ ಮಹಿಮೆಯಿಂದ ನಡೆದವುಗಳೆಂದು ತಿಳಿದವನಾದುದರಿಂದ, ಯಾರೇನು ಹೇಳಿದರೂ, ಯಾರೇನುಮಾಡಿದರೂ ಹೆದರದೆ ಪ್ರತ್ಯುತ್ತರವನ್ನು ಹೇಳದೆ ದೃಢಸಂಕಲ್ಪನಾಗಿ ಶನೈಶ್ಚರ ಧ್ಯಾನವನ್ನು ಎಡೆಬಿಡದೆ ಮಾಡುತ್ತ ಅವರು ಮಾಡುವ ನಿಂದಾಪ್ರಹರಾದಿಗಳಿಗೊಳಗಾಗಿ ಸುಮ್ಮನಿದ್ದನು. ಆ ಸ್ಥಿತಿಯಲ್ಲಿ ತಾನೇನು ಹೇಳಿದರೂ ಲಾಭವುಂಟಾಗದೆಂದು ತಿಳಿದೇ ಪಡಿನುಡಿಯನ್ನು ಕುಡದೆ ಎಲ್ಲಾಬಾಧೆಗಳನ್ನೂ ಅನುಭವಿಸುತ್ತಿದ್ದನು.

ಬಳಿಕ ರಾಜಾಜ್ಞೆಯಂತೆ ಆ ಹಾಳು ಗುಡಿಯಮುಂದೆ ಒಂದು ಸ್ತಂಭವು ನೆಡಲ್ಪಟ್ಟಿತು. ಸೇವಕರು ಬ್ರಾಹ್ಮಣನ ಮುಖಕ್ಕೆ ಮಸಿಯನ್ನು ಬಳಿದು ಸುಣ್ಣದ ಬೊಟ್ಟುಗಳನ್ನಿಟ್ಟು ಕತ್ತೆಯಮೇಲೆ ಹಿಮ್ಮುಖವಾಗಿ ಕುಳ್ಳಿರಿಸಿ ವಿಕಾರವಾದ ಅಲಂಕಾರವನ್ನು ಮಾಡಿ ಒಬ್ಬ ಸೇವಕನಾತನ ಮುಖದಮೇಲೆ ಸಗಣಿಯ ನೀರನ್ನು ಚೆಲ್ಲುತ್ತಿರಲು ಮುಂಗಡೆಯಲ್ಲಿ ಮತ್ತೊಬ್ಬನು ತಮ್ಮಟೆಯನ್ನು ಬಾರಿಸುತ್ತ ನಡೆಯುತ್ತಿರಲು, ಆ ಬಾಹ್ಮಣ ಜನ್ಮವನ್ನು ಪಡೆದು ಪಾಪಕ್ಕಂಜದೆ ಧನಾಶೆಯಿಂದ ರಾಜಪುತ್ರನನ್ನು ಕೊಂದ ಬಾಲಘಾತುಕನನ್ನು ಈದಿನ ಶೂಲಕ್ಕೆ

ಹಾಕುತ್ತೇವೆ. ಯಾವನಾದರೆ ಇಂಥ ಕ್ರೂರಕೃತ್ಯವನ್ನು ಮಾಡುವನೋ ಅವನಿಗೆ ಇದೇ ಶಿಕ್ಷೆಯು ಪ್ರಾಪ್ತವಾಗುವುದು ಎಂದು ಗಟ್ಟಿಯಾಗಿ ಸಾರುತ್ತಿದ್ದರು. ಹೀಗೆ ಪಟ್ಟಣದ ಎಲ್ಲ ಬೀದಿಗಳಲ್ಲಿಯೂ ಮೆರೆವಣಿಗೆಯನ್ನು ಮಾಡಿದರು.

ನಗರನಿವಾಸಿಗಳು ಈ ಬ್ರಾಹ್ಮಣನೇ ಘೋರಕೃತ್ಯವನ್ನು ಮಾಡಿದನಲ್ಲ! ಎಂತಹಪಾಪಿ ಎಂದು ಮನಬಂದಂತಾಡುತ್ತ ಅಸಹ್ಯಪಟ್ಟರು. ಕೋಪದಿಂದ ಆತನನ್ನು ಥೂಥೂ ಯೆಂದುಗುಳಿದರು. ನಟಿಕೆಗಳನ್ನು ಮುರಿದರು. ಕೆಲವರಾತನ ಮೋರೆಯನ್ನು ನೋಡಬಾರದೆಂದು ಬಾಗಿಲುಗಳನ್ನು ಹಾಕಿಕೊಂಡು ಮನೆಗಳಲ್ಲಿಯೇ ಇದ್ದರು. ರಾಜಸೇವಕರೀಪ್ರಕಾರವಾಗಿ ಊರು ಮೆರವಣಿಗೆಯನ್ನು ಮಾಡಿ ಹಾಳುದೇವಾಲಯದ ಮುಂದಿರುವ ಶೂಲಸ್ತಂಭದ ಬಳಿಗೆ ಕರೆದುಕೊಂಡು ಹೋದರು. ಅದುವರೆಗೂ ಆಬ್ರಾಹ್ಮಣನೊಂದು ಮಾತನ್ನೂ ಆಡಿದವನಲ್ಲ.

ಸೇವಕರಾತನನ್ನೆತ್ತಿ ಶೂಲಕ್ಕೆ ಹಾಕುವುದಕ್ಕೆ ಪ್ರಯತ್ನಮಾಡುತ್ತಿದ್ದರು. ಆ ವಿನೋದವನ್ನು ನೋಡುವುದಕ್ಕಾಗಿ ಅನೇಕರು ಅಲ್ಲಿಗೆ ಬಂದು ಸುತ್ತಲೂ ನಿಂದು ನೋಡುತ್ತಿದ್ದರು. ಆಸಮಯದಲ್ಲಿ ಅಂತಃಪುರದ ದಾದಿಯೊಬ್ಬಳು ಆಡಿಸುವುದಕ್ಕಾಗಿ ಆ ರಾಜಕುಮಾರನನ್ನು ಉಪವನಕ್ಕೆ ಕರೆದುಕೊಂಡು ಹೋಗಿದ್ದು ಅರಮನೆಗೆ ಕರೆತಂದಳು. ಆಗ್ಗೆ ಒಂದು ಯಾಮವು (೭½ ಗಳಿಗೆ= ೩ ತಾಸು) ಕಳೆದುದರಿಂದ ಶನೈಶ್ಚರನು ಆ ಬ್ರಾಹ್ಮಣನನ್ನು ಬಿಟ್ಟು ಹೋದನು. ಸತ್ತು ಹೋದಂತೆ ಭಾವಿಸಿದ್ದ ಆ ರಾಜಪುತ್ರನು ಸಂತೋಷದಿಂದ ಅರಮನೆಗೆ ಬಂದುದನ್ನು ನೋಡಿ, ಆ ಕಲಕಲಧ್ವನಿಯನ್ನೇನೆಂದು ಹೇಳೋಣ! ಎಲ್ಲರೂ ಆಶ್ಚರ್ಯಮಗ್ನರಾದರು. ರಾಜನೂ ಅಧಿಕ ವಿಸ್ಮಯಪಟ್ಟು ಅದುವರೆಗೆ ನಡೆದ ಕೃತ್ಯಗಳೆಲ್ಲವೂ ಸ್ವಪ್ನದಂತೆ ತೋರುತ್ತಿರಲು, ಅತಿತ್ವರೆಯಿಂದ ಮಂತ್ರಿಯನ್ನು ಕರೆದು ಬಲುಬೇಗನೆ ಹೋಗಿ ಆ ಬ್ರಾಹ್ಮಣನನ್ನು ಶೂಲಕ್ಕೆ ಹಾಕಿದಂತೆ ಮಾಡಿ ಆತನನ್ನು ಕರೆದುಕೊಂಡುಬಾ ಎಂದಾಜ್ಞಾಪಿಸಿದನು. ಮಂತ್ರಿಯು ಆ ನಿಮಿಷದಲ್ಲಿಯೇ ಕುದುರೆಯನ್ನು ಹತ್ತಿ ಓಡಿಸಿಕೊಂಡುಹೋಗಿ ದೂರದಿಂದಲೇ ತಾಳಿ! ತಾಳಿ! ಬೇಡ! ಬೇಡ! ಶೂಲಕ್ಕೆ ಹಾಕಬೇಡಿ ಆ ಬ್ರಾಹ್ಮಣನನ್ನು ಎಂದು ಕೈಯಿಂದ ಸನ್ನೆಯನ್ನು ಮಾಡುತ್ತ ಸಮೀಪಿಸಿ, ಶೂಲಾರೋಹಣಮಾಡಿಸುವುದಕ್ಕೆಂದು ಆತನಿಗೆ ಕಟ್ಟಿದ್ದ ಕಟ್ಟುಗಳನ್ನೆಲ್ಲ ಬಿಚ್ಚಿ ಕರೆದುಕೊಂಡುಬಂದು ಸ್ನಾನವನ್ನು ಮಾಡಿಸಿ ಮಡಿಬಟ್ಟೆಗಳನ್ನುಡಿಸಿ ರಾಜನ ಬಳಿಗೆ ಕರೆದುತಂದು ಬಿಟ್ಟರು. ರಾಜನಾತನನ್ನು ನೋಡುತ್ತಲೇ ತಾನು ಮಾಡಿಸಿದ ಕಾರ್ಯಗಳನ್ನು ಕುರಿತು ಖಿನ್ನನಾಗಿ ತತ್ಕಾರಣವನ್ನರಿಯಲಾರದೆ ಸ್ತಬ್ಧನಾದನು. ಜನರೆಲ್ಲರೂ ಗುಂಪುಕೂಡಿ ಬಂದಾತನನ್ನು ನೋಡುತ್ತ ಕಣ್ಣೀರಿಟ್ಟು ಅಯ್ಯೋ! ಪಾಪ! ನಿರಪರಾಧಿಯಾದ

ಈತನನ್ನು ರಾಜಭಟರೆಷ್ಟು ಹಿಂಸಿಸಿದರು! ಎಂದಾಡಿಕೊಂಡರು. ಆಗ ರಾಜನು ಅಯ್ಯಾ ಬ್ರಾಹ್ಮಣೋತ್ತಮನೆ! ನನ್ನ ಕುಮಾರನು ಸುಖವಾಗಿರುವನು. ನಿನ್ನ ಮಡಿಯಚೀಲದಲ್ಲಿ ಕುಮಾರನ ತಲೆಯಿರುವುದೆಂದು ಸೇವಕರು ಹೇಳಿದರು. ಶಿಶುಹತ್ಯವನ್ನು ಮಾಡಿದವನೆಂದು ಬಗೆದು ನಿನಗೆ ಘೋರಶಿಕ್ಷೆಯನ್ನು ವಿಧಿಸಿದೆನು ನೀನು ಯಾವ ಮಾತನ್ನಾಗಲಿ ಆಡದೆ ಸುಮ್ಮನಿದ್ದೆ. ಪ್ರಾಣಾಂತ ಶಿಕ್ಷೆಯನ್ನು ವಿಧಿಸಿದರೂ ಸ್ವಲ್ಪವಾದರೂ ಚಿಂತಾಕ್ರಾಂತನಾಗದೆ ಇದ್ದೆ. ನಮಗೀ ಭ್ರಾಂತಿ ಯುಂಟಾಗುವುದಕ್ಕೆ ಕಾರಣವಾವುದೋ! ತಿಳಿಯದು. ಆ ವಿಚಾರವನ್ನು ನೀನೆ ಹೇಳಬೇಕಲ್ಲದೆ ಮತ್ತೆ ಯಾರಿಗೂ ಗೋಚರವಾಗದು. ದಯವಿಟ್ಟು ಅವಿಚಾರ ದಿಂದ ಮಾಡಿದ ನನ್ನ ಅಪರಾಧವನ್ನು ಕ್ಷಮಿಸಿ ತತ್ಕಾರಣವನ್ನು ಹೇಳಬೇಕು ಎಂದು ಅತ್ಯಂತ ವಿನಯದಿಂದ ಬೇಡಿಕೊಂಡನು.

ಆ ಪ್ರಭಾಕರಜ್ಯೋತಿಷ್ಕನು ಕಿರುನಗೆಯನ್ನು ಬೀರುತ್ತ ತಾನು ತನಗೆ ಸಂಭವಿಸಬಹುದಾದ ಶನಿವೇಧೆಯನ್ನು ತಿಳಿದುಕೊಂಡುದು ಮೊದಲಾಗಿ ಆಗಿನ ವರೆಗೆ ನಡೆದ ಚರಿತ್ರವನ್ನೆಲ್ಲ ವಿವರವಾಗಿ ಹೇಳಿ, ರಾಜಪುಂಗವ! ಒಂದು ಜಾವದವರೆಗೆ ಶನೈಶ್ಚರನು ನನ್ನನ್ನು ಬಾಧಿಸುವಂತೆ ಹೇಳಿದ್ದುದರಿಂದ ಆಮಹಾ ತ್ಮನು ನನ್ನಲ್ಲಿ ಆವೇಶಿಸುತ್ತಲೇ ನಿನ್ನ ಕುಮಾರನು ಯಾರಿಗೂ ಕಾಣಿಸದೆ ಹೋದನು. ನನ್ನ ಮಡಿಚೀಲದಲ್ಲಿದ್ದ ಹಣ್ಣಿನ ಅರ್ಧವು ತಲೆಯಾಗಿ ಮಾರ್ಪಟ್ಟು ಅದರಿಂದ ಸೋರುತ್ತಿದ್ದ ನೀರು ರಕ್ತವಾಗಿ ತೋರಿಬಂದಿತು, ಆಗ ಆ ಸೇವಕರು ನನ್ನನ್ನು ನಿನ್ನ ಕುಮಾರನನ್ನು ಕೊಂದವನನ್ನಾಗಿ ಭಾವಿಸಿ, ನಿನ್ನ ಸಮುಕ್ಷಮಕ್ಕೆ ತಂದರು. ಈ ರಹಸ್ಯವು ತಿಳಿಯದಿದ್ದುದರಿಂದ ನನಗೆ ನೀನು ಶಿಕ್ಷೆಯನ್ನು ವಿಧಿ ಸಿದೆಯಲ್ಲದೆ ಬೇರೆಯಲ್ಲ, ನನ್ನನ್ನು ಶೂಲಕ್ಕೆ ಹಾಕುವುದಕ್ಕೆ ಮೊದಲೇ ಏಳೂ ವರೆ ಗಳಿಗೆಯು ಮುಗಿಯಿತು, ನನ್ನನ್ನು ಶನಿಯು ಬಿಟ್ಟುಹೋದನು, ಬಳಿಕ ಎಲ್ಲವೂ ಮಾರ್ಪಟ್ಟಿತು. ನಿನ್ನ ಮಗನು ಮನೆಗೆ ಬಂದನು. ಇದೆಲ್ಲವೂ ಶನಿ ಪ್ರಭಾವದಿಂದಾದ ನಾಟಕವು. ನನ್ನಿಂದ ಯಾವದೋಷವೂ ಇಲ್ಲ. ಆ ಸಮಯ ದಲ್ಲಿ ನಾನೇನು ಹೇಳಿದರೂ ಪ್ರಯೋಜನವಿಲ್ಲವೆಂದರಿತೇ ನಾನು ತೂಷ್ಣೀಂ ಭಾವ ವನ್ನು ವಹಿಸಿದ್ದೆನು. ಎಂದು ಎಲ್ಲ ವಿಚಾರವನ್ನೂ ಹೇಳಿ ಮುಗಿಸಿದನು.

ಆ ವೃತ್ತಾಂತವನ್ನು ಕೇಳಿದವರೆಲ್ಲರೂ ಆಶ್ಚರ್ಯಪಟ್ಟು ಶನೈಶ್ಚರನ ಶಕ್ತಿ ಯನ್ನು ಬಹಳವಾಗಿ ಕೊಂಡಾಡಿದರು. ನಿರಪರಾಧಿಯಾದ ಬ್ರಾಹ್ಮಣನಿಗೆ ಉಂಟಾದ ಅವಮಾನವನ್ನು ಕುರಿತು ಬಹಳವಾಗಿ ಸಂಕಟಪಟ್ಟರು. ರಾಜನು ತಾನು ಆ ಬ್ರಾಹ್ಮಣನಿಗೆ ಮಾಡಿದ ಅಪಕೃತಿಗಾಗಿ ಬಹು ಖೇದವನ್ನು ಹೊಂದಿ ಅನೇಕವಿಧವಾದ ಬಹುಮತಿಗಳನ್ನು ಕೊಟ್ಟು ಕಳುಹಿಸಿದನು. ಆ ಬ್ರಾಹ್ಮಣನು ಮನೆಗೆ ಬಂದು ಪ್ರಾಯಶ್ಚಿತ್ತಾದಿ ಕರ್ಮಗಳಿಂದ ಶುದ್ಧನಾಗಿ ಜೀವಮಾನ

ಪರ್ಯಂತರವಾಗಿ ಶನಿದೇವರನ್ನು ಪೂಜಿಸುತ್ತ ನಿತ್ಯವೂ ಶನಿಧ್ಯಾನ್ಯವನ್ನು ಮಾಡುತ್ತ ಸುಖವಾಗಿದ್ದನು.

ಸತ್ಯಶೀಲನೇ! ಅದು ಮೊದಲಾಗಿ ಹಾಳುಗುಡಿಯಮುಂದೆ ನೆಟ್ಟ ಶೂಲದ ಕಂಬವು ಈಗಲೂ ಹಾಗೆಯೇ ಇರುವುದು. ಇದಿಲ್ಲಿರುವುದಕ್ಕೆ ಪ್ರಭಾಕರ ದೈವಜ್ಞನೇ ಕಾರಣವು ಎಂದು ಚಿದಾನಂದ ಮುನಿಯು ಹೇಳಲು ಸತ್ಯಶೀಲನು ಆನಂದಪರವಶನಾದನು.

ಇಂತು ಇಪ್ಪತ್ತುನಾಲ್ಕನೆಯ ಕಥೆ ಮುಗಿದುದು.



—: ಇಪ್ಪತ್ತೈದನೆಯ ದಿನದ ಕಥೆ :—

ನಮಸ್ತ್ರಿಭುವನೋತ್ಪತ್ತಿ ಸ್ಥಿತಿಸಂಸಾರಹೇತವೇ |
ವಿಷ್ಣವೇಪಾರಸಂಸಾರ ಪಾರೋತ್ತರಣಸೇತವೇ ||

ಗುರುಶಿಷ್ಯರು ಆ ದಿನವಲ್ಲಿಯೇ ಇದ್ದು ಇಷ್ಟಾಲಾಪಗಳಿಂದ ಆ ರಾತ್ರಿಯ ಒಂದು ಯಾಮವನ್ನು ಕಳೆದು ನಿದ್ದೆಮಾಡಿ ಅರುಣೋದಯಕ್ಕೆ ಮೊದಲೆ ಎದ್ದು ಸ್ನಾನಾದಿಕಾರ್ಯಗಳನ್ನು ಮುಗಿಸಿಕೊಂಡು ಪ್ರಯಾಣವಾಗಿ ಅರಣ್ಯಮಾರ್ಗವಾಗಿ ಹೋಗುತ್ತ ಸ್ವಲ್ಪಹೊತ್ತು ಹತ್ತುವವೇಳೆಗೆ ಬಳಲಿ ಆ ದಿನದ ಪ್ರಯಾಣವನ್ನು ಅಷ್ಟಕ್ಕೆಯೇ ನಿಲ್ಲಿಸಲಿಚ್ಛಿಸಿ, ಆ ಮಹಾರಣ್ಯದಲ್ಲಿ ಬಹು ವಿಶಾಲವಾಗಿದ್ದ ಒಂದು ಆಲದಮರದಡಿಯಲ್ಲಿಳಿದು ಅಲ್ಲಿಗೆ ಅನತಿದೂರದಲ್ಲಿ ಹರಿಯುವ ಒಂದು ಹೊಳೆಯನ್ನು ಕಂಡು ಸಂತೋಷಪಟ್ಟು ಅಲ್ಲಿ ಮಾಧ್ಯಾಹ್ನಿಕ ಕೃತ್ಯಗಳನ್ನು ನಿರ್ವರ್ತಿಸಿದರು.

ಚಿದಾನಂದಯೋಗಿಯು ವಟವಿಟಪಿಚ್ಛಾಯೆಯಲ್ಲಿ ಕುಳಿತುಕೊಂಡನು ಸತ್ಯಶೀಲನು ನೀರನ್ನು ತಂದು ಅಡಿಗೆಯನ್ನು ಮಾಡಿದನು ಗುರುಶಿಷ್ಯರು ಸುಖವಾಗಿ ಊಟಮಾಡಿ ಆ ಮರದ ನೆಳಲಲ್ಲಿ ವಿಶ್ರಮಿಸಿಕೊಂಡರು ಚಿದಾನಂದಯೋಗಿಯು ಆಸನಬದ್ಧನಾಗಿ ಧ್ಯಾನಾರೂಢನಾದನು. ತನ್ನೊಡನೆ ಸಂಭಾಷಿಸುವುದಕ್ಕೆ ಯಾರೂ ಇಲ್ಲದಿದ್ದುದರಿಂದ ಈ ಕಾಡಿನಲ್ಲಿರುವ ಆಶ್ಚರ್ಯವಿಷಯಗಳನ್ನು ನೋಡಿಕೊಂಡು ಬರುವ ಉದ್ದೇಶದಿಂದ ಹೊರಟು ಅಲ್ಲಲ್ಲಿ ತಿರುಗಿ ಸ್ವಲ್ಪದೂರದಲ್ಲಿ ಒಂದು ಮಹಾಪ್ರಾಸಾದವನ್ನು ಕಂಡು ಆಶ್ಚರ್ಯಪಟ್ಟು ಒಂದು ಪ್ರಾಸಾದವು ಈ ಮಹಾರಣ್ಯದಲ್ಲಿರಲು ಕಾರಣವೇನೆಂಬುದನ್ನು ತಿಳಿದುಕೊಳ್ಳಬೇಕೆಂಬ ಉತ್ಸಾಹದಿಂದ ತ್ವರೆಯಾಗಿ ಗುರುಸನ್ನಿಧಿಗೆಬಂದು ಆವೇಳೆಗೆ ಧ್ಯಾನವಿಮುಖನಾಗಿದ್ದ ಆತನನ್ನು ನೋಡಿ ತಾನು ನೋಡಿದ ಆ ಮಹಾಪ್ರಾಸಾದದ ವಿಚಾರವನ್ನು ಹೇಳಿ, ಮಹಾತ್ಮಾ! ಸಾರ್ವಭೌಮರ ವಾಸಕ್ಕೆ ಅರ್ಹವಾಗಿರುವ ಹಿಂದುಪ್ಪರಿಗೆಯು ಈ ಕಾಡಿನ ನಡುವೆ ಇರುವುದು ಅದು ಜನಶೂನ್ಯ

ವಾಗಿದ್ದರೂ ಅಚ್ಚಳಿಯದಂತಿರುವುದಲ್ಲದೆ ಬಲುಸೊಗಸಾಗಿರುವುದು ಅವರ ನೆಲೆಯನ್ನು ತಿಳಿಯಬೇಕೆಂದು ನನ್ನ ಮಾನಸವು ತವಕಿಸುತ್ತಿರುವುದು ತತ್ಕಥೆಯನ್ನು ನನಗಾದ್ಯಂತವಾಗಿ ಹೇಳಬೇಕೆಂದು ಬೇಡಿಕೊಂಡನು ಋಷಿಸತ್ತ್ವನು ಹೇಳಲಾರಂಭಿಸಿದನು.

## ಸೌದಾಮನಿಯ ವೃತ್ತಾಂತ.

ಒಂದಾನೊಂದು ಕಾಲದಲ್ಲಿ ಮಣಿಭದ್ರನೆಂಬ ಒಬ್ಬ ರಾಜನುಂಟು ಆತನು ವಿಲಾಸಾಭಿಲಾಷಿಯಾದುದರಿಂದ ಈ ಕಾಡಿನಲ್ಲಿ ಈ ಹರ್ಮ್ಯವನ್ನು ನಿರ್ಮಾಣ ಮಾಡಿಸಿ ತಾನಲ್ಲಿ ವಾಸಮಾಡುತ್ತಿದ್ದನು. ಆತನಿಗೆ ನಾಗವಲ್ಲಿ ಎಂಬ ಹೆಂಡತಿಯೂ ಸೌದಾಮನಿಯೆಂಬ ಒಬ್ಬ ಕುಮಾರಿಯೂ ಇದ್ದರು ಸೌದಾಮನಿಯು ಅನುಪಮಾನ ಸೌಂದರ್ಯವತಿಯಾದುದರಿಂದ ಮಾತಾಪಿತೃಗಳು ಬಲುಅಕ್ಕರೆಯಿಂದ ಸಾಕುತ್ತಬಂದರು ಆಕೆಗೆ ಯೌವನಾವಿರ್ಭಾವವುಂಟಾಯಿತು ತಾಯಿತಂದೆಗಳು ಆ ಕನ್ಯೆಗೆ ತಕ್ಕವರನನ್ನು ಸಂಪಾದಿಸಬೇಕೆಂದು ಅನೇಕ ಪ್ರಯತ್ನಗಳನ್ನು ಮಾಡುತ್ತಿದ್ದರು.

ಸತ್ಯಶೀಲನೆ ! ಲೋಕದಲ್ಲಿ ಹೆಣ್ಣುಮಕ್ಕಳನ್ನು ಹೆತ್ತವರಿಗೆ ಬಹುಚಿಂತೆಗಳುತ್ಪನ್ನವಾಗುವುವು ಅನುಭವವಂತನಾದ ಒಬ್ಬ ಕವಿಯು ಹೀಗೆ ಹೇಳಿರುತ್ತಾನೆ.
" ಜಾತೇತಿಕನ್ಯಾ ಮಹತೀಹಿಚಿಂತಾ ಕಸ್ಯಪ್ರದೇಯೇತಿ ಮಹಾನ್ವಿತರ್ಕಃ |
ದತ್ತಾಸುಖಂಯಾಸ್ಯತಿ ವಾನವೇತಿ ಕನ್ಯಾಪಿತೃತ್ವಂ ಖಲುನಾಮಕಷ್ಟಂ ॥ "
ಅಂದರೆ ಹೆಣ್ಣುಕೂಸು ಹುಟ್ಟಿತೆಂದರೆ ಚಿಂತೆಯಧಿಕವಾಗುವುದು ವಯಸ್ಸು ಬಂದಬಳಿಕ ಯಾರಿಗೆ ಕೊಡಬೇಕೆಂಬ ಚಿಂತೆ ಕೊಟ್ಟಬಳಿಕ ನನ್ನ ಮಗಳು ಸುಖವಾಗಿರುವಳೋ ಇಲ್ಲವೋ ಎಂಬ ಚಿಂತೆ ಈ ಪ್ರಕಾರವಾಗಿ ಹೆಣ್ಣುಕೂಸನ್ನು ಹೆತ್ತ ತಾಯಿತಂದೆಗಳಿಗೆ ತುಂಬ ಕಷ್ಟವೇ ಬರುವುದು.

ಬಳಿಕ ತಂದೆತಾಯಿಗಳ ಅತಿಪ್ರೇಮಕ್ಕೆ ಆಶ್ರಯವಾದ ಆ ಸೌದಾಮನಿಯು ಒಂದು ದಿನದಲ್ಲಿ ತನ್ನ ಗೆಳತಿಯರನ್ನು ಕರೆದುಕೊಂಡು ವನಕ್ಕೆಹೋಗಿ ಅಲ್ಲಿ ವಿಹಾರಮಾಡುತ್ತ ಅಲ್ಲಲ್ಲಿರುವ ಮಂಜುಲ ಲತಾಕುಂಜಪುಂಜಂಗಳಂ ಕಂಡು ಸಂತೋಷಪಡುತ್ತ ಒಂದು ಸರೋವರದಬಳಿಗೆ ಬಂದಳು. ಅತ್ತಲೊಂದುಕಡೆ ಒಬ್ಬ ರಕ್ಕಸನು ಕಾಡಿನಲ್ಲಿರುವ ಮೃಗಂಗಳಂ ಭಕ್ಷಿಸುತ್ತ ಮಾರ್ಗವಶದಿಂದ ರಾಜಕುಮಾರಿಯಿರುವ ಸರೋವರದಬಳಿಗೆ ಬಂದನು. ವ್ಯಾಘ್ರಮುಖನೆಂಬ ಆ ರಾಕ್ಷಸನು ಆ ರಾಜಕನ್ಯಕೆಯನ್ನು ನೋಡಿ ಮೋಹಪರವಶನಾಗಿ ಆಕೆಯನ್ನು ಹಿಡಿದು ಕೌಂಕುಳಲ್ಲಿರುಕಿಸಿಕೊಂಡು ಆಕಾಶಕ್ಕೆಹಾರಿ ಸ್ವೇಚ್ಛೆಯಿಂದ ಹೊರಟುಹೋದನು. ಬಳಿಕ ಆಕೆಯ ಗೆಳತಿಯರೆಲ್ಲರೂ ಬಹಳವಾಗಿ ದುಃಖಿಸಿ ತ್ವರೆಯಾಗಿ ರಾಜನಬಳಿಗೆ ಬಂದು ನಡೆದ ವೃತ್ತಾಂತವನ್ನು ತಿಳಿಯಪಡಿಸುತ್ತಲೇ ಆ

ರಾಜನು ನಿರ್ವೇದವನ್ನು ಹೊಂದಿ ಮೂರ್ಛಿತನಾದನು ಅಂತಃಪುರವೆಲ್ಲವೂ ದುಃಖಸಾಗರದಲ್ಲಿ ಮುಳುಗಿದುದರಿಂದ ಸರ್ವಶೂನ್ಯವಾಗಿರುವಂತೆ ತೋರುತ್ತಿದ್ದಿತು.

ಮಣಿಭದ್ರನು ತನ್ನ ಪುತ್ರಿಕೆಯನ್ನು ರಾಕ್ಷಸತ್ವದಿಂದ ಅಪಹರಿಸಿಕೊಂಡು ಹೋದವನು ವ್ಯಾಘ್ರಮುಖನೆಂಬ ರಾಕ್ಷಸ ರಾಜನೆಂದು ತಿಳಿದವನಾಗಿ ಚತುರಂಗಬಲದೊಡನೆ ದಂಡಯಾತ್ರೆಯನ್ನು ಮಾಡಿ ಅವನ ಪಟ್ಟಣವಾದ ವಿಶಾಲನಗರವನ್ನು ಮುತ್ತಿದನು ವ್ಯಾಘ್ರಮುಖನು ಮಣಿಭದ್ರನ ಸಮರಸನ್ನಾಹೋದಂತವನ್ನು ಕೇಳಿ ತನ್ನ ಸೇನೆಗಳನ್ನು ಕೂಡಿಸಿಕೊಂಡು ಮಣಿಭದ್ರನನ್ನು ಇದಿರಿಸಲು ಸಿದ್ಧನಾದನು ವಿಶಾಲನಗರವು ಮಂದರಪರ್ವತಪ್ರಾಂತದ ದುರ್ಗಮವಾದ ಕಾಡಿನಲ್ಲಿತ್ತು ವ್ಯಾಘ್ರಮುಖನು ತನ್ನ ಪಟ್ಟಣವನ್ನು ಮುತ್ತಿದ್ದ ರಾಜನ ಸೈನ್ಯವನ್ನು ನಡುಗಾಡಿನವರೆಗೆ ಅಟ್ಟಿಬಿಟ್ಟನು. ರಾಜನು ಸ್ವಲ್ಪವಾದರೂ ಹಿಮ್ಮೆಟ್ಟದೆ ಸೇನೆಯನ್ನು ಪ್ರೋತ್ಸಾಹಿಸಿ ನಿಲ್ಲಿಸಲು ಆ ಕಾಡಿನಲ್ಲಿ ಇರ್ಕಡೆಯ ಸೈನ್ಯಗಳಿಗೆ ಯುದ್ಧವು ಪ್ರಾರಂಭವಾಯಿತು ಉಭಯಪಕ್ಷಗಳಲ್ಲಿಯೂ ರೋದೋಂತರಾಳವು ಭೇದಿಸುವಹಾಗೆ ಸಿಂಹನಾದವನ್ನು ಮಾಡುತ್ತಿದ್ದರು ರಣದುಂದುಭಿಗಳು ಮೊಳಗುತ್ತಿದ್ದುವು ಮಣಿಭದ್ರನು ತಾನೆ ಸೇನಾಧಿಪತಿಯಾಗಿ ತಮ್ಮ ಸೈನಿಕರನ್ನು ಹುರಿಗೊಳಿಸುತ್ತ ಖಡ್ಗಧಾರಿಯಾಗಿ ಶತ್ರುಗಳನ್ನು ರೂಪುಗೆಡಿಸುತ್ತಿದ್ದನು ಮಣಿಭದ್ರನ ಹಾವಳಿಗೆ ತತ್ತಳಿಸಲಾರದೆ ರಾಕ್ಷಸಸೇನೆಗಳು ಪಲಾಯನಸೂಕ್ತಪಾರಾಯಣಕ್ಕೆ ಪ್ರಾರಂಭಿಸಿದುವು ಆಗ ವ್ಯಾಘ್ರಮುಖನು ಮಾಯಾಯುಕ್ತವಾದ ಯುದ್ಧವನ್ನು ಮಾಡಲು ನಿಶ್ಚಯಿಸಿದನು ಒಮ್ಮೆ ಮಾರುತಪಥಕ್ಕೆ ಹಾರಿ ಮೇಘಗಳ ಮರೆಯಲ್ಲಿದ್ದು ರಕ್ತವರ್ಷವನ್ನು ಸುರಿಯಿಸಿ ಪರಪಕ್ಷದವರಿಗೆ ತನ್ನ ಇರುವಿಕೆಯು ತಿಳಿಯದಂತಿರುತ್ತ ಬಾಣವರ್ಷವನ್ನು ಕರೆದು ಮಣಿಭದ್ರನ ಸೇನೆಯನ್ನು ಕಳವಳಗೊಳಿಸಿದನು.

ತನ್ನ ಸೇನೆಗಳು ಹೀಗೆ ಛಿನ್ನಭಿನ್ನಗಳಾಗಿರುತ್ತಿರಲು ಮಣಿಭದ್ರನು ಓಹೋ! ಈ ವ್ಯಾಘ್ರಮುಖನು ಮಾಯಾಬಲಸಂಪನ್ನನು. ಹೇಗಾದರೂ ಇವನನ್ನು ಗೆಲ್ಲಲೇಬೇಕು ಎಂದು ಬಗೆದು 'ಅವಕ್ರಪರಾಕ್ರಮದಿಂದ ಕಾಳಗವನ್ನು ಮಾಡಿ ರಕ್ಕಸನ ದಂಡನ್ನು ಖಂಡಿಸಿ ಕೊನೆಗೆ ಯುದ್ಧಭೂಮಿಯಲ್ಲಿಯೇ ಪಂಚತ್ವವನ್ನು ಪಡೆದನು. ಹೀಗೆ ತನ್ನ ಹಗೆಯು ಸತ್ತುದರಿಂದ ಉಕ್ಕಿಸೊಕ್ಕಿದ ಆ ರಕ್ಕಸನ ಕಕ್ಕಸಪಡೆಯು ಮಣಿಭದ್ರನ ಭವನವನ್ನು ಪೊಕ್ಕು ಅಲ್ಲಿದ್ದ ಎಲ್ಲರನ್ನೂ ಸೆರೆಯಲ್ಲಿಡಿಸಿದನು. ತನ್ನ ಭರ್ತಾರನಳಿದನೆಂಬ ವರ್ತಮಾನವನ್ನು ಚಾರರಿಂದ ಕೇಳಿದ ನಾಗವಲ್ಲಿಯು ಕೂಡಲೇ ವಿಷವನ್ನು ಕುಡಿದು ಪ್ರಾಣಗಳನ್ನು ಬಿಟ್ಟಳು.

ಅಯ್ಯೋ! ಪಾಪ! ಸೌದಾಮನಿಯು ತನ್ನ ತಾಯ್ತಂದೆಗಳನ್ನು ಹಾಗೆ ಹೋಗ ಲಾಡಿಸಿಕೊಂಡವಳಾಗಿ ಮಹಾಚಿಂತಾಭರದಿಂದ ಮೈಮರೆದು ಬಿದ್ದಿದ್ದಳು.

ವ್ಯಾಘ್ರಮುಖನು ಯುದ್ಧದಲ್ಲಿ ಜಯವನ್ನು ಪಡೆದು ತನ್ನ ಸೈನಿಕರಿಗೆ ಉಚಿತವಾದ ಬಹುಮಾನವನ್ನು ಕೊಟ್ಟು ಅವರ ಪರಾಕ್ರಮಗಳನ್ನು ಶ್ಲಾಘಿಸಿ ಬೀಳ್ಕೊಟ್ಟನು. ಬಳಿಕ ಅವನಾ ಮಣಿಭದ್ರನ ಭವನದಲ್ಲಿಯೇ ವಾಸಮಾಡುತ್ತ ಆ ಸೌದಾಮನಿಗೆ ತಕ್ಕ ಪರಿವಾರವನ್ನು ನಿಯಮಿಸಿ ತನ್ನನ್ನು ಮದುವೆಯಾ ಗೆಂದು ಆಕೆಯನ್ನು ನಿರ್ಬಂಧಿಸುತ್ತಿದ್ದನು. ಆ ಕನ್ಯೆಯುವನಲ್ಲಿ ಅಸಹ್ಯಭಾವದಿಂ ದಿರುತ್ತ ಅವನೊಡನೆ ಇಗೋ! ಮದುವೆಯಾಗೆಂದು ನಿರ್ಬಂಧಿಸಿದೆಯಾದರೆ ವಿಷ ವನುಂಡೋ, ಉರುಳನ್ನು ಹಾಕಿಕೊಂಡೋ, ಬಾವಿಯಲ್ಲಿ ಬಿದ್ದೋ ಪ್ರಾಣಗ ಳನ್ನು ಕಳೆದುಕೊಳ್ಳುವೆನು ಎಂದು ಹೇಳಲು, ಆಗಲಿ! ಇನ್ನೂ ಕೆಲವು ದಿನಗಳು ಕಳೆಯಲಿ ನೋಡುವೆನು ಎಂದು ಬಗೆದು ಆಬಳಿಕ ಆಕೆಯನ್ನು ಬಲಾತ್ಕರಿಸುವು ದನ್ನು ಬಿಟ್ಟನು.

ಹಾಗೆ ಕೆಲವು ದಿನಗಳು ಕಳೆದುವು. ಒಂದಾನೊಂದು ದಿನದಲ್ಲಿ ಆ ರಾಕ್ಷ ಸರೆಲ್ಲರೂ ತಮ್ಮ ಕುಲದೇವತೆಯನ್ನು ಪೂಜಿಸುವುದಕ್ಕಾಗಿ ಅನತಿದೂರದಲ್ಲಿರುವ ಒಂದು ಕೊಳದ ಬಳಿಗೆ ಹೋಗಿ, ರಕ್ತ ಮಾಂಸ ಕೊಬ್ಬು ಮೊದಲಾದುವನ್ನೂ ಬಗೆಬಗೆಯಾದ ಮಧ್ಯಗಳನ್ನೂ ತಂದು ದೇವತೆಗೆ ನಿವೇದನವನ್ನುಮಾಡಿ, ತತ್ಪ್ರ ಸಾದವನ್ನು ಭಕ್ಷಿಸಿ ಮದದಿಂದ ಮೈಮರೆತವರಾಗಿ, ಹೋಯೆಂದು ಗಟ್ಟಿಯಾಗಿ ಅರಚುತ್ತ ಮನಸ್ಸುಬಂದಂತೆ ಕುಣಿಯುತ್ತ ಆನಂದದಿಂದಿದ್ದರು. ವ್ಯಾಘ್ರ ಮುಖನೂ ಅವರೊಡನೆ ಸೇರಿ ನರ್ತಿಸುತ್ತಿದ್ದನು.

ಅತ್ತಲೊಬ್ಬ ರಾಜಪುತ್ರನು ದೈವಿಕವಾಗಿ ಆ ಕಾಡಿನಲ್ಲಿ ಸಂಚರಿಸುತ್ತ ಇಂದಿರಾಮಂದಿರಂ ಎಂದು ಮೇಲ್ಗಡೆಯಲ್ಲಿ ಲೇಖಿಸಿರುವ ಪ್ರಾಕಾರದ್ವಾರವನ್ನು ನೋಡಿ, ಅಲ್ಲಿ ಯಾವ ಸೇವಕರೂ ಇಲ್ಲದಿರುವುದನ್ನು ಕುರಿತು ಆಶ್ಚರ್ಯವನ್ನು ತಾಳಿ, ಅಲ್ಲಿನ ವಿಶೇಷಗಳನ್ನು ನೋಡಲಿಚ್ಛೆಯುಳ್ಳವನಾಗಿ ಆ ದ್ವಾರವನ್ನು ದಾಟಿ ಆ ಸುಂದರಮಂದಿರದ ಶಿಲ್ಪಕಲ್ಪನಾಚಾತುರ್ಯವನ್ನು ನೋಡುತ್ತ ನಡೆದು ಸೌದಾಮನಿಯ ನಿಕೇತನಕ್ಕೆ ಬಂದನು. ಆ ಕನ್ಯೆಯು, ತನ್ನ ಮನೆಗೆ ಬಂದ ಆರುಚಿರ ಶರೀರನನ್ನು ನೋಡಿ ವರನನ್ನಾಗಿ ಭಾವಿಸಿ, ಅಯ್ಯೋ! ಇವನನ್ನು ಕಂಡರೆ ರಾಜಕುಮಾರನಾಗಿ ತೋರುತಿರುವನಲ್ಲ! ಅಡಿಗೆಯಮನೆಗೆ ಮೊಲವು ನುಗ್ಗಿಬಂದ ಹಾಗೆ ಈ ರಕ್ಕಸನ ನಿವಾಸಕ್ಕಿವನು ಬಂದಿರುವನಲ್ಲ! ಮುಂದೆ ಏನಾ ಗುವುದೋ ಕಾಣೆನಲ್ಲ! ಎಂದು ಮನಸ್ಸಿನಲ್ಲಿ ಆಲೋಚಿಸಿ ಭಯಪಟ್ಟು ಅವನನ್ನು ಕಂಡಿಂತೆಂದಳು.

ಪುರುಷೋತ್ತಮ ! ನೀನೇತಕ್ಕೆ ಇಲ್ಲಿಗೆ ಬಂದೆ ? ಇದಸುರನಿವಾಸವೆಂದು ನೀನು ತಿಳಿಯಲಿಲ್ಲವೇನೋ ! ಅಯ್ಯೋ ! ಪಾಪ ! ಆರ್ಯವರ್ಯ ! ಇದು ವ್ಯಾಘ್ರಮುಖನೆಂಬ ರಕ್ಕಸನಯಿಕ್ಕೆ ಅವನು ಇಷ್ಟರಲ್ಲಿಯೇ ಬರುವನು ನಿನ್ನನ್ನು ಕಂಡರೆ ಉಪಹಾರವನ್ನಾಗಿ ಉಪಯೋಗಿಸಿಕೊಳ್ಳುವನಲ್ಲ ! ನೀನೀಗಲೆ ನಿನ್ನ ಪ್ರಾಣಗಳನ್ನು ಕಾಪಾಡಿಕೊಳ್ಳುವುದಕ್ಕೆ ಉಪಾಯವನ್ನು ಹುಡುಕಿಕೊ ಎಂದಳು ಬಳಿಕ ಅವರಿಬ್ಬರಿಗೂ ಸಂಭಾಷಣೆಯು ಹೀಗೆ ನಡೆಯಿತು.

ವೀರಕೇಸರಿ—ಏನೆಂದೆ ? ಪ್ರಾಣವನ್ನು ಕಾಪಾಡಿಕೊಳ್ಳುವುದಕ್ಕೆ ಉಪಾಯವನ್ನು ಹುಡುಕಿಕೊಳ್ಳಲೆ ? ಸುದತೀಮಣಿ ! ನಾನು ಜನ್ಮಿಸಿರುವುದು ಕ್ಷತ್ರಿಯವಂಶದಲ್ಲಿ ಶೂರಸಿಂಹನೆಂಬ ರಾಜನಪುತ್ರನು ನಾನು ನನ್ನನ್ನು ಅನ್ವರ್ಥನಾಮನಾದ ವೀರಕೇಸರಿಯೆಂದು ತಿಳಿ ಇದಲ್ಲದೆ ಧನುರ್ವಿದ್ಯಾವಿಶಾರದನಾದ " ವಿದ್ಯಾಶರಧಿ " ಎಂಬ ಬ್ರಾಹ್ಮಣೋತ್ತಮನ ಶಿಷ್ಯನು ಇಂತಪ್ಪ ನನಗೆ ರಾಕ್ಷಸನ ನಿವಾಸವೆಂದಮಾತ್ರಕ್ಕೆ ಹೆದರಿಕೆಯುಂಟಾಗುವುದೆ ? ರಾಕ್ಷಸನು ಬಂದರೆಯೇ ಅಲ್ಲ ಯುದ್ಧದಲ್ಲಿ ಘಾಲಾಕ್ಷನು ಬಂದರೂ ಲಕ್ಷ್ಯವಿಡುವನಲ್ಲ.

ಸೌದಾಮನಿ—ಶೂರಾಗ್ರಗಣ್ಯ ! ನೀನು ಶೌರ್ಯಶಾಲಿಯಲ್ಲವೆಂದಾಗಲಿ, ಧೈರ್ಯವಂತನಲ್ಲವೆಂದಾಗಲಿ ನಾನು ಹೇಳಲಿಲ್ಲ ನೀನು ಶೌರ್ಯಧೈರ್ಯನಿಧಿಯೇ ಆಗಬಹುದು ಅವನು ಸಾಮಾನ್ಯ ದಾನವನಲ್ಲ ರಾಕ್ಷಸರು ಮನುಷ್ಯ ಭಕ್ಷಕರಲ್ಲವೆ ? ಅವರಲ್ಲಿ ಮಹಾಬಲಿಷ್ಠನೆಂದು ಖ್ಯಾತಿಪಡೆದಿರುವನು ನನ್ನ ತಂದೆಯು ಅಸಹಾಯಶೂರನು ಆತನುಸಹಿತವಾಗಿ ಇವನೊಡನೆ ಯುದ್ಧಮಾಡಿ ಮಡಿದನು ರಾಕ್ಷಸರು ಮಾಯಾವಿಗಳಾದುದರಿಂದ ಮಾನವರವರಮುಂದೆ ನಿಲ್ಲಲಾರರು.

ವೀರಕೇಸರಿ—ಸುಂದರಿ ! ಏಕೆ ಹೆದರುವೆ ? ರಾಮನು ಮಾನವನಲ್ಲವೆ ? ಮಾನವರಲ್ಲಿ ಮಂತ್ರಪೂತಗಳಾದ ಬಾಣಗಳಿರುವುದಿಲ್ಲವೆ ?

ಸೌದಾಮನಿ—ಪುರುಷಾಗ್ರಣಿ ! ನನ್ನೊಡನೆ ವಿವಾದವಕ್ಕರೆಯಿಲ್ಲ ಅವನು ಆಕಾಶದಲ್ಲಿನಿಂತು ಯುದ್ಧಮಾಡುವನಾದುದರಿಂದ ಜಾಗರೂಕತೆಯಿಂದ ವರ್ತಿಸಬೇಕೆಂದರಿಕೆ ಮಾಡಿದೆನಲ್ಲದೆ ಬೇರೆಯಲ್ಲ ನಾನೀರಕ್ಕಸನಿಂದ ನಿರ್ಬಂಧಿಸಲ್ಪಟ್ಟಿರುವೆನು ನಾನು ರಾಜಪುತ್ರಿ ನನ್ನಸಲುವಾಗಿ ಯುದ್ಧಮಾಡಿಯೇ ನನ್ನ ಜನಕನು ಸತ್ತುದು ನನ್ನನ್ನೀಕ್ರೂರನಿಂದ ಮುಕ್ತಳನ್ನಾಗಿಮಾಡಿ ನಿನ್ನ ಸೇವಕಳನ್ನಾಗಿ ಪರಿಗ್ರಹಿಸಬೇಕೆಂದು ಬೇಡುವೆನು.

ರಾಜನಂದನನಾ ಲತಾಂಗಿಯ ನುಡಿಗಳನ್ನು ಕೇಳಿ ಆಕೆಯ ಸೌಂದರ್ಯಕ್ಕೆ ಮೋಹಿಸಿ ಗಾಂಧರ್ವವಿಧಿಯಿಂದಾಕೆಯನ್ನು ಸ್ವೀಕರಿಸಿ ಆ ರಕ್ಕಸನನು

ಹೇಗೆ ಕೊಲ್ಲಬೇಕೆಂಬುದನ್ನು ಕುರಿತು ಆಲೋಚಿಸುತ್ತಿದ್ದನು. ಆಗ ಆ ಕಾಮಿನೀರತ್ನವು ಪತಿಯ ಇಂಗಿತವನ್ನರಿತು ನಾಥ! ನೀನಾರಕ್ಕಸನ ಮಾಯಾಯುದ್ಧದಲ್ಲಿ ಸಿಕ್ಕದಿರಲು ಸಾಧ್ಯವಲ್ಲ ನೀನು ಕೇಳುವುದಾದರೆ ನಾನೊಂದು ಆಲೋಚನೆಯನ್ನು ಹೇಳುವೆನು ಏನೆಂದರೆ—ನಾನು ತಂದೆಯ ಮನೆಯಲ್ಲಿರುವಾಗ ದಮನನೆಂಬ ಒಬ್ಬ ಮುನಿಯನ್ನು ಉಪಚರಿಸಿದುದರಿಂದ ಆತನು ನನ್ನಮೇಲೆ ಕರುಣಿಸಿ ಒಂದು ಮಂತ್ರವನ್ನುಪದೇಶಿಸಿರುವನು ಆ ಮಂತ್ರದ ಬಲದಿಂದ ನಾನು ನಿನ್ನನ್ನು ಒಂದು ಪುಷ್ಪದ ಆಕೃತಿಗೆ ಮಾರ್ಪಡಿಸಿ ತಲೆಯಲ್ಲಿ ಧರಿಸಿಕೊಳ್ಳುವೆನು. ಅವನು ಬಂದಾಗ ಅವನಿಗೆ ಅಧೀನಳಾಗದಂತೆ ಪ್ರತಿಭಟಿಸಿದ್ದ ನಾನು ಅವನನ್ನು ಪ್ರೀತಿಸಿದಂತೆ ನಟಿಸಿ ಅವನ ಪ್ರಾಣರಹಸ್ಯವನ್ನರಿತುಕೊಳ್ಳುವೆನು. ಬಳಿಕ ನೀನು ಆ ರಹಸ್ಯವನ್ನು ತಿಳಿದು ಅವನನ್ನು ಕೊಂದರೆ ನಾವಿಬ್ಬರೂ ಸುಖವನ್ನು ಪಡೆಯಬಹುದು ಎಂದಳು. ರಾಜಪುತ್ರನಾಮಾತನ್ನು ಒಪ್ಪಿದನು.

ಆ ವ್ಯಾಘ್ರಮುಖನು ಮಾರನೆಯದಿನವೇ ಮನೆಗೆ ಬಂದನು. ಆಗ ಸೌದಾಮನಿಯು ಮೊದಲಿನಂತಲ್ಲದೆ ಕಿರುನಗೆಯನ್ನು ಸೂಸಿ ಮನ್ಮಥನ ಬಾಣಗಳನ್ನು ಧಿಕ್ಕರಿಸುವ ವಿಲಾಸಯುಕ್ತವಾದ ಕಡೆಗಣ್ಣೋಟವನ್ನು ಅವನಮೇಲೆ ಪ್ರಸರಿಸಿ ಮೃದುವಚನಗಳಿಂದ ಅವನನ್ನುಪಚರಿಸಿದಳು.

ಸತ್ಯಶೀಲ! ಹೇಳಬೇಕೆ ಆಗ ಅವನ ಸಂತೋಷವನ್ನು, ಅವಳ ಮಾತುಗಳಿಗೆ ಹಿಗ್ಗಿಹೋದನು. (ಸ್ತ್ರೀಭಿಃ ಕಸ್ಯನಖಂಡಿತಂ ಭುವಿಮನಃ) ಯಾವನ ಮನಸ್ಸುತಾನೆ ಸ್ತ್ರೀಯರ ಚೇಷ್ಟೆಗಳಿಂದ ಚಲಿಸದಿರುವುದು? ಬಳಿಕ ಆ ನಿಶಾಚರನಾಥನು (ಎನ್ನುವ ವೇಳೆಗೆ ಸತ್ಯಶೀಲನು ತಡೆದು) ಸ್ವಾಮಿಾ! ನಿಶಾಚರನ ಮಾತಂತಿರಲಿ! "ಸ್ತ್ರೀಭಿಃ ಕಸ್ಯನಖಂಡಿತಂ ಭುವಿಮನಃ" ಎಂದು ಹೇಳಿದಿರಲ್ಲ! ಇದು ನಿಜವೇ? ಹಾಗಾದರೆ ಜಿತೇಂದ್ರಿಯರೇ ಪ್ರಪಂಚದಲ್ಲಿಲ್ಲವೆ? ಎಂದು ಕೇಳಲು ಆಗ ಚಿದಾನಂದ ಮುನಿಯಿಂತೆಂದನು.

(1) "ವಿಶ್ವಾಮಿತ್ರ ಪರಾಶರ ಪ್ರಭೃತಯೋ ವಾತಾಂಬು ಪರ್ಣಾಶನಾ |
ಸ್ತೇಪಿಸ್ತ್ರೀಮುಖಪಂಕಜಂ ಸುಲಲಿತಂ ದೃಷ್ಟ್ವೈವ ಮೋಹಂಗತಾಃ ||
ಶಾಲ್ಯನ್ನಂ ಸಘೃತಂ ಪಯೋದಧಿಮುಖಂ ಭುಂಜಂತಿಯೇಮಾನವಾ |
ಸ್ತೇಷಾಮಿಂದ್ರಿಯ ನಿಗ್ರಹೋ ಯದಿಭವೇ ದ್ವಿಂಧ್ಯಃ ಪ್ಲವೇತ್ಸಾಗರೇ ||

ಎಂಬ ನೀತಿಶ್ಲೋಕವನ್ನು ಕೇಳಿಲ್ಲವೆ ಸತ್ಯಶೀಲ? ವಿಶ್ವಾಮಿತ್ರ ಪರಾಶರಾದಿ ಮಹರ್ಷಿಗಳು ಅರಣ್ಯಗಳಲ್ಲಿದ್ದು ಗಾಳಿ ಎಲೆ, ಹಣ್ಣುಕಾಯಿ, ಗೆಡ್ಡೆಗೆಣಸು ಮೊದಲಾದುವನ್ನು ತಿನ್ನುತ್ತ ತಪಸ್ಸುಮಾಡುತ್ತಿದ್ದವರು. ಅರಣ್ಯಗಳಲ್ಲಿ ಸ್ತ್ರೀಸಂಚಾರವೆತ್ತಣದು? ಅಂಥವರೇ ಎಂದೋ ಒಂದುದಿನ ಮನೋಹರವಾದ ಸ್ತ್ರೀಯರ ಮುಖವನ್ನು ಕಂಡು ಅವರನ್ನು ಮೋಹಿಸಿ ಅವರಿಗೆ ವಶರಾಗಿ ತಪೋ

ಭಂಗವನ್ನು ಪಡೆದರು. ಹೀಗಿರುವಾಗ ತುಪ್ಪ, ಹಾಲು, ಮೊಸರು ಮೊದಲಾದ ವುಗಳೊಂದಿಗೆ ಶಾಲ್ಯನ್ನವನ್ನು ಮಾಂಸಾದಿಗಳನ್ನು ತಿಂದು ಕೊಬ್ಬಿರುವವನು ಇಂದ್ರಿಯಗಳನ್ನು ಗೆಲ್ಲುವುದೆಂದರೆ, ವಿಂಧ್ಯಪರ್ವತವು ಸಮುದ್ರದಲ್ಲಿ ತೇಲು ವುದು ಎಂದಹಾಗಲ್ಲವೆ? ಕುಮಾರ! ಆದುದರಿಂದಲೇ ವ್ಯಾಸರು “ಮಾತ್ರಾ ಸ್ವಸ್ರಾ ದುಹಿತ್ರಾ ವಾ ನೈಕಶಯ್ಯಾಸನೋ ಭವೇತ್। ಬಲವಾನಿಂದ್ರಿಯಗ್ರಾ ಮೋ ವಿದ್ವಾಂಸಮಪಿಕರ್ಷತಿ” ಎಂದು ಹೇಳಿರುವನು. ಅಂದರೆ ತಾಯಿಯೊಡ ನಾಗಲಿ, ತಂಗಿಯೊಡನಾಗಲಿ, ಮಗಳೊಡನೆಯೇ ಆಗಲಿ ಒಂದು ಹಾಸಿಗೆಯ ಮೇಲೆಯೋ ಇಲ್ಲವೆ ಮಣೆಯಮೇಲೆಯೋ ಎಲ್ಲಿಯೇ ಆಗಲಿ ಕುಳಿತುಕೊಳ್ಳಬಾ ರದು. ಏಕೆಂದರೆ–ಬಲವಂತಗಳಾದ ಇಂದ್ರಿಯಗಳು ಎಂತಪ್ಪ ವಿದ್ವಾಂಸನನ್ನಾ ಗಲಿ ಸ್ತ್ರೀಯರಕಡೆಗೆ ಎಳೆದುಬಿಡುತ್ತವೆಯೆಂದರ್ಥವು ಇದಕ್ಕೆ ಒಂದು ಉದಾ ಹರಣೆಯೂ ಇರುವುದು ಕೇಳು.

ಜೈಮಿನಿ ಮುನಿಯು ವ್ಯಾಸಮುನಿಗಳ ಶಿಷ್ಯನು. ಮಹಾ ವಿದ್ವಾಂಸನು, ಮೀಮಾಂಸಾಶಾಸ್ತ್ರವನ್ನು ಬರೆದವನು. ಜ್ಞಾನಿ. ಈತನೊಂದು ದಿನದಲ್ಲಿ ಶಿಷ್ಯ ರಿಗೆ ಪಾಠವನ್ನು ಹೇಳುತ್ತಿರುವಾಗ ಮೇಲೆ ಹೇಳಿದ ಶ್ಲೋಕವನ್ನು ಹೇಳುತ್ತ ಛೀ! ಛೀ! ವ್ಯಾಸರು ಮತ್ತು ಮನುವೂ ಈ ಶ್ಲೋಕದಲ್ಲಿ ಪ್ರಮಾದಪಟ್ಟಿರುವರು “ಬಲವಾನಿಂದ್ರಿಯಗ್ರಾಮೋ ವಿದ್ವಾಂಸಂ ನಾಪಕರ್ಷತಿ” ಎಂದು ಬರೆಯಬೇ ಕಾದುದನ್ನು “ವಿದ್ವಾಂಸಮಪಿಕರ್ಷತಿ” ಎಂದು ಬರೆದಿರುವನು. ಉಂಟೆ? ವಿದ್ವಾಂಸನನ್ನು ಇಂದ್ರಿಯಗಳೇನು ಮಾಡಿಯಾವು? ಎಂದು ಹೇಳಿದರಂತೆ ವ್ಯಾಸ ರಿಗೆ ಈ ವರ್ತಮಾನವು ಹೇಗೋ ತಿಳಿಯಿತು. ಆಗ ಅವರು ಪರೀಕ್ಷಿಸಬೇಕೆಂದು ಬಗೆದು ಒಂದುದಿನದ ಸಂಜೆಯಹೊತ್ತಿನಲ್ಲಿ ಲೋಕೋನ್ನತ ಸೌಂದರ್ಯಶೋಭಿ ತೆಯಾದ ಒಬ್ಬ ಯುವತಿಯ ರೂಪವನ್ನು ಧರಿಸಿ ಜೈಮಿನಿಯ ಆಶ್ರಮಕ್ಕೆ ಬಂದರು. ಆ ವೇಳೆಗೆ ಜೈಮಿನಿಯು ಶಿಷ್ಯರ ಪಾಠವನ್ನು ಮುಗಿಸಿ ಅವರನ್ನವರ ವರ ಗುಡಿಸಲುಗಳಿಗೆ ಕಳುಹಿಸಿ ತಾನೊಬ್ಬನುಮಾತ್ರ ತನ್ನ ಪರ್ಣಶಾಲೆಯಲ್ಲಿ ದ್ದನು. ಆಗ ಆ ಸ್ತ್ರೀವ್ಯಕ್ತಿಯು ಆತನ ಕಣ್ಗೆ ಗೋಚರಿಸಿತು. ಮುನಿಯು ಆಕೆಯನ್ನು ಕಂಡು, ಆದರದಿಂದ ಎಲೌ ಸುಂದರಿ! ನೀನಾರು? ಈ ಸಂಜೆಯಲ್ಲಿ ಸಿನುಕಲುಮಳೆ ಹನಿಯುತ್ತಿರುವಲ್ಲಿ ನೀನಿತ್ತಲೇಕೆ ಬಂದೆ? ಒಳಕ್ಕೆ ಬಂದು ಮಳೆ ನಿಲ್ಲುವವರೆಗೂ ಇದ್ದು ಬಳಿಕ ನಿನ್ನ ವಸತಿಗೆ ಹೋಗು ಎಂದು ಹೇಳಿದನು. ಆಕೆಯು ಸ್ವಾಮಿ! ನಾನೊಬ್ಬ ಕನ್ಯಕೆಯು ಯಾರಾದರೇನು? ದಾರಿತಪ್ಪಿ ಇತ್ತ ಬಂದೆನು. ಈಗಲೇ ಹೋಗಬೇಕು ಎಂದಳು. ಆ ಮೆಲ್ನುಡಿಗಳನ್ನು ಕೇಳಿದ ಮುನಿಗೆ ಮನಸ್ಸು ಸ್ವಲ್ಪಮಾತ್ರ ಜೋಲುಬಿದ್ದಿತು. ಆಗ ಎಲೌ ಯುವತಿ! ಅಷ್ಟು ವಸರವೇನು? ಒಳಕ್ಕೆ ಬಂದು ಹಿಂದಿಷ್ಟು ಕುಳಿತುಕೊಳ್ಳಬಾರದೆ ಎಂದನು.

ಆ ಕನ್ಯೆ ನಸುನಗುತ್ತ ಒಳಕ್ಕೆಹೋದಳು. ಆ ಮುಗುಳುನಗೆಯು ಆತನನ್ನು ಮರುಳನನ್ನಾಗಿ ಮಾಡಿತು. ಮನ್ಮಥಬಾಧೆಗೆ ಗುರಿಪಡಿಸಿತು. ಹಿಂದರಹಿಂದೊಂದಾಗಿ ಮನ್ಮಥಾವಸ್ಥೆಗಳು ಏರುತ್ತ ಬಂದುವು. ಮುನಿಯು ತಡೆಯಲಾರದೆ ಬೇಡಿಕೊಂಡನು, ತನ್ನ ಇಷ್ಟವನ್ನು ಸಲ್ಲಿಸೆಂದು ಆಗ ಆಕೆಯಿಂತೆಂದಳು ಮುನೀಶ್ವರನೆ! ನೀನು ನನ್ನ ಮಾತಿನಂತೆ ನಡೆದರೆ ನಾನು ನಿನ್ನ ವಶಳಾಗುವೆನು. ಕೇಳು ನನ್ನ ಸಂಕಲ್ಪವೊಂದುಂಟು. ಅದೇನಂದರೆ—ನನ್ನಿಂದ ವರಿಸಲ್ಪಡಬೇಕಾದವನು ಯಾರೇ ಆಗಲಿ ಬತ್ತಲೆಯಾಗಿ ಬಾಗಬೇಕು. ನಾನವನಮೇಲೆ ಕುದುರೆಯನ್ನೇರಿದಂತೆ ಏರಬೇಕು. ಕಶೆಯಿಂದ ಹೊಡೆಯುತ್ತಿರಬೇಕವನನ್ನು. ಅವನು ಒಂದಶ್ವತ್ಥವೃಕ್ಷವನ್ನು ನೂರಾವೃತ್ತಿ ಪ್ರದಕ್ಷಿಣ ಮಾಡಬೇಕು. ಆಬಳಿಕ ನಾನವನ ವಶವಾಗುವೆನು. ಇದೇ ನನ್ನ ಸಂಕಲ್ಪವು. ಶಪಥವು ಎಂದು ಹೇಳಲು,

ಮುನಿಯು ಕೇಳಿ ಕಾಮತಾಪವನ್ನು ತಡೆಯಲಾರದುದರಿಂದ ಹಾಗೆಯೇ ಆಗಲೆಂದು ಒಪ್ಪಿ ಬತ್ತಲೆಯಾಗಿ ಬಾಗಿದನು ಆಕೆಯೊಂದು ಕೋರಡೆಯನ್ನು ತೆಗೆದುಕೊಂಡು ಆತನಮೇಲೆ ಹತ್ತಿ ಅಲ್ಲಿದ್ದ ಒಂದರಳಿಯ ಮರವನ್ನು ಸುತ್ತುವಂತೆ ಹೇಳಿದಳು ತಾನು ಕೋರಡೆಯಿಂದ ಛಟ್ಟನೆ ಹೊಡೆಯುತ್ತ ಬಂದಳು ಒಂದು ನೂರು ಸುತ್ತುಗಳಾದುವು. ಬಳಿಕ "ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿಕರ್ಷತಿ! ಕರ್ಷತಿ!! ಕರ್ಷತ್ಯೇವ!!!" ಎಂದು ಹೇಳುತ್ತ ಆತನ ಬೆನ್ನುಮೇಗಣಿಂದ ಚೆಕ್ಕನೆ ದುಮುಕಿದಳು. ಆ ಜೈಮಿನಿಯು ನಿಂತು ನೋಡುವಷ್ಟರಲ್ಲಿ ಆ ಸುಂದರಿಯು ಅದೃಶ್ಯಳಾಗಿ ಜಟಾಧಾರಿಗಳೂ ಪುಂಡ್ರಶೋಭಿತಫಾಲರೂ ಆದ ವ್ಯಾಸರು ಗೋಚರಿಸಿದರು. ಜೈಮಿನಿಯು ಚಕಿತನಾಗಿ ವಸ್ತ್ರವನ್ನು ಧರಿಸಿ ಗುರುವಿನಬಳಿಗೆ ಬಂದು ಆಚಾರ್ಯ! ನಾನಪರಾಧಿಯಾದೆನು "ವಿದ್ವಾಂಸಮಪಿಕರ್ಷತಿ" ಎಂಬ ಪಾಠವೇ ಸಾಧುವಾದುದು ನನ್ನ ಅಪರಾಧವನ್ನು ಕ್ಷಮಿಸಬೇಕು ಎಂದು ಪಾದಗಳಮೇಲೆ ಬಿದ್ದು ಬೇಡಿಕೊಂಡನು. ಆಗ ವ್ಯಾಸರು ವತ್ಸ! ಜೈಮಿನಿ! ಸ್ತ್ರೀಯು ಮಾಯಾಸ್ವರೂಪವು ಮಾಯೆಯನ್ನು ಗೆದ್ದವರಿಗೆ ಮತ್ತಾವತೊಡಕೂ ಇರುವುದಿಲ್ಲ 1 ಬ್ರಹ್ಮನು "ಕಾಂತೆ, ಕನಕ" ಎಂಬೀ ಎರಡನ್ನು ಮೋಹಿಸುವಂತೆ ಮಾಡಿರುವನು ಇವೆರಡರಲ್ಲಿಯೂ ಆಸಕ್ತನಾಗದಿದ್ದರೆ ಅವನು ಪರಮೇಶ್ವರನಿಗೆ ಸಮಾನು ನಿತ್ಯವೂ ಸದಾಚಾರಸಂಪನ್ನನಾಗಿ ಪಂಚಯಜ್ಞಗಳನ್ನು ಮಾಡುತ್ತ ನಿಷ್ಠನಾಗಿದ್ದರೂ ಮನಸ್ಸನ್ನು ತನ್ನ ಅಧೀನದಲ್ಲಿಟ್ಟುಕೊಳ್ಳದಿದ್ದರೆ ಅಂಥವನನ್ನು ಶಾಸ್ತ್ರಗಳೇನುತಾನೆ ಮಾಡಬಲ್ಲುವು ಅವನ ಜೀವಿತ

1 "ವೇಧಾದ್ವೇಧಾಭ್ರಮಂಚಕ್ರೇ ಕಾಂತಾಸುಕನಕೇಷುಚ।
ತಾಸುತೇಷ್ವಪ್ಯನಾಸಕ್ತಃ ಸಾಕ್ಷಾದ್ಭರ್ಗೋನರಾಕೃತಿಃ॥"

ದಿಂದ ಪ್ರಯೋಜನವೇನು ಲಾಲಿಸು 2 ಸ್ತ್ರೀಯು ಉರಿಯುತ್ತಿರುವ ಅಗ್ನಿಗೆಸಮಾನಳು ಪುರುಷನು ತುಪ್ಪದಕುಂಭಕ್ಕೆ ಸಮಾನನು ಆದುದರಿಂದ ಘೃತವನ್ನೂ ವಹ್ನಿಯನ್ನೂ ಒಂದುಕಡೆ ಇಡಬಾರದು ಬಲವಂತಗಳಾದ ಇಂದ್ರಿಯಗಳು ವಿದ್ವಾಂಸನನ್ನುಕೂಡ ಆಕರ್ಷಿಸುವುದೆಂಬುದನ್ನು ಅನುಭವದಿಂದ ತಿಳಿದುಕೊಂಡೆಯಲ್ಲವೆ? ಇನ್ನಾದರೂ ಎಚ್ಚರದಿಂದಿರು ಎಂದು ನುಡಿದು ಅಂತರ್ಹಿತನಾದನು ಜೈಮಿನಿಯು ತನ್ನ ಸ್ಥಿತಿಯನ್ನು ಸ್ಮರಿಸಿ ನಾಚಿಕೆಯನ್ನು ಪಡೆದನು.

ಸತ್ಯಶೀಲನೆ! "ಬಲವಾನಿಂದ್ರಿಯಗ್ರಾಮೋ ವಿದ್ವಾಂಸಮಪಿಕರ್ಷತಿ" ಎಂಬುದು ಸತ್ಯವೆಂದು ಈಗ ತಿಳಿದುಕೊಂಡೆಯಲ್ಲವೆ? ಇನ್ನು ಪ್ರಕೃತವಾದ ಕಥೆಯನ್ನು ಹೇಳುವೆನು ಕೇಳು.

ಆ ನಿಶಾಚರನಾಥನು ಬಹಳವಾಗಿ ಸಂತೋಷಿಸಿ ಸರೋಜಪತ್ರನೇತ್ರೆ! ನಿನ್ನನ್ನು ತಂದಂದಿನಿಂದ ಒಂದು ದಿನವಾದರೂ ನಗುತ್ತ ನಲಿಯುತ್ತ ನನ್ನೊಡನೆ ಮಾತನಾಡಿದವಳಲ್ಲ ನನ್ನ ಅದೃಷ್ಟವು ಫಲಿಸುವ ಕಾಲವು ಬಂದಂತೆ ತೋರುವುದು ಈ ದಿನವು ನನ್ನನ್ನು ಕೃಪಾಕಟಾಕ್ಷದಿಂದ ನೋಡಿ ಸರಸವಚನಗಳಿಂದ ನನ್ನನ್ನು ಆನಂದಗೊಳಿಸಿದೆಯಲ್ಲವೆ? ಇದೇ ಸುದಿನವು ನನ್ನ ಭಾಗ್ಯವೇ ಭಾಗ್ಯವು ನಿನ್ನ ಪಾಣಿಗ್ರಹಣವನ್ನು ಮಾಡಲು ನನ್ನ ಮನಸ್ಸು ತವಕಿಸುತ್ತಿರುವುದು ತ್ವರೆಯಾಗಿ ನನ್ನ ಮನೋರಥವನ್ನು ನೆರವೇರಿಸುವ ಭಾರವು ನಿನ್ನದು ಹೇಗೆ ಮಾಡಿದರೂ ಮಾಡು ಎಂದು ನುಡಿದನು ಬಳಿಕ ಕಾರ್ಯಾರ್ಥಿನಿಯಾದ ಆ ಕಾಂತೆಯು ಅವನನ್ನು ವಂಚಿಸುವುದಕ್ಕಿದೇ ಸಮಯವೆಂದರಿತು ಅನುರಾಗವನ್ನು ಅಭಿನಯಿಸುತ್ತ ಒಂದೆರಡು ತಾಸಿನವರೆಗೆ ಸರಸವಾಗಿ ಮಾತನಾಡುತ್ತಿದ್ದು ಬಳಿಕ ಮೆಲ್ಲನೆ ಅವನೊಡನೆ ಹೀಗೆಂದಳು.

ಪ್ರಿಯ! ಭವದ್ವಿರಹಿತವಾದ ಈ ದಿನತ್ರಯವನ್ನು ಹೇಗೆ ಕಳೆದೆನೋ ಭಗವಂತನೇ ಬಲ್ಲನು ಆಗ ಒಂದೊಂದು ಗಳಿಗೆಯೂ ಒಂದೊಂದು ಯುಗವಾಗಿ ಪರಿಣಮಿಸಿದ್ದಿತು ನನ್ನನ್ನು ಈ ಬಗೆಯಾಗಿ ಒಬ್ಬಳನ್ನೆ ಬಿಟ್ಟು ಹೋದುದರಿಂದ ಬಹಳವಾಗಿ ಹೆದರಿ ನಿನ್ನ ಆಗಮನವನ್ನೇ ನಿರೀಕ್ಷಿಸುತ್ತಿದ್ದೆನು. ನೀನಾದರೋ ಘೋರಾರಣ್ಯದಲ್ಲಿ ನಿರಂತರವೂ ಸಂಚಾರಮಾಡುತ್ತಿರುವೆ. ಮನೆಗೆ ಬರುವುದು ತಡವಾದರೆ ನನ್ನೆದೆಯು ಡಮುಗುಟ್ಟುವುದು ನಿನಗೆ ಯಾವ ಅಪಾಯವು ಯಾರಿಂದುಂಟಾದೀತೋ, ಎಂದು ಕಳವಳಿಸುವುದು. ಆದುದರಿಂದ ನೀನು ಯಾವಾಗಲೂ ಸಾಯುಧನಾಗಿರಬೇಕೆಂದು ಬೇಡುವೆನ, ಎಂದು ನುಡಿದಳು, ಆಗ ಅವನು ಪ್ರೇಯಸೀ! ಲೋಕದಲ್ಲಿ ಯಾರೂ ನನ್ನನ್ನು ಕೊಲ್ಲಲಾರರು ನನ್ನ

2 ತಪ್ತಾಂಗಾರಸಮಾನಾರೀ ಘೃತಕುಂಭಸಮಃಪುಮಾನ್ ।
ತಸ್ಮಾದ್ಘೃತಂಚವಹ್ನಿಂಚ ನೈಕತ್ರಸ್ಥಾಪಯೇದ್ಬುಧಃ ॥

ಪ್ರಾಣಗಳಿಗೆ ಆಧಾರವಾದ ಒಂದು ಗಿಣಿಯು ಸಪ್ತಸಮುದ್ರಗಳಿಗಾಚೆಯಿರುವ ಒಂದು ದ್ವೀಪದಲ್ಲಿ ಒಂದು ವಟವೃಕ್ಷದ ಪೊಟ್ಟರೆಯಲ್ಲಿ ಒಂದು ಬರಣಿಯಲ್ಲಿರುವುದು ಅಲ್ಲಿಗೆ ಎಂತಹ ಬಲಿಷ್ಠರೂ ಹೋಗಲಾರರು ಆ ದ್ವೀಪವು ಸಿಂಹವ್ಯಾಘ್ರಾದಿ ಮಹಾ ಕ್ರೂರಮೃಗಗಳಿಂದ ಆವೃತವಾಗಿರುವುದು ಹಾಗೆ ನಾನು ಆಲದಮರದ ಕೋಟರದಲ್ಲಿಟ್ಟಿರುವ ಆ ಭರಣಿಗೆ ನನ್ನಲ್ಲಿ ಅನುರಾಗವುಳ್ಳ ಅನೇಕ ಭೂತಪ್ರೇತ ಪಿಶಾಚಗಳನ್ನು ಕಾವಲಿಟ್ಟಿರುವೆನು ಆದುದರಿಂದ ನಾನೆಲ್ಲಿಗೆಹೋದರೂ ನಾನು ಬರುವುದು ಸಾವಕಾಶವಾದರೂ ನೀನು ಭಯಪಡಬೇಕಾದುದಿಲ್ಲ ಎಂದು ಹೇಳಿದನು. ಆ ಸೌದಾಮನಿಯು ಪ್ರಿಯಾ ! ನನಗೆ ಬಹಳ ಸಂತೋಷವಾಯಿತು ನನಗೆ ಬೇಕಾದುದು ನಿನ್ನ ಪ್ರಾಣದಭದ್ರತೆ ಎಂದು ಹೇಳಲು ಅವನಾಮಾತುಗಳನ್ನು ಕೇಳಿ ಅವನಿಗೆ ಬೇರೆ ಕೆಲಸವಿದ್ದುದರಿಂದ ಆಕೆಯನ್ನುಬಿಟ್ಟು ಹೊರಟುಹೋದನು ಅವನು ಹೊರಟು ಹೋದಕೂಡಲೆ ಪುಷ್ಪರೂಪನಾಗಿದ್ದ ರಾಜಕುಮಾರನನ್ನು ರಾಜಕುಮಾರನನ್ನಾಗಿಯೇ ಮಾರ್ಪಡಿಸಿ ರಾಕ್ಷಸನ ಪ್ರಾಣರಹಸ್ಯವನ್ನು ತಿಳಿಸಿದಳು ಆತನು ತನ್ನ ಅಭಿಪ್ರಾಯವನ್ನು ಸೌದಾಮನಿಗೆ ತಿಳಿಯಿಸಿ, ಧೈರ್ಯವನ್ನವಲಂಬಿಸಿ ಅವಳಿಂದ ಬೀಳ್ಕೊಂಡು ಕಾರ್ಯಾರ್ಥಿಯಾಗಿ ಹೊರಟು ಅನೇಕ ನದೀನದಗಳನ್ನೂ ಭಯಂಕರಗಳಾದ ಕಾಡುಬೀಡುಗಳನ್ನೂ ಬೆಟ್ಟಗುಟ್ಟಗಳನ್ನೂ ಅತಿಕ್ರಮಿಸಿ ನಡೆದನು ಬಳಿಕ ಒಂದು ದಿನವಲ್ಲಿ ಒಂದು ಋಷ್ಯಾಶ್ರಮವು ದೊರೆಯಿತು ಆತನದನ್ನು ಪ್ರವೇಶಿಸಿ ಋಷಿಯನ್ನುಕಂಡು ಭಯಭಕ್ತಿಗಳಿಂದ ಆತನಿಗೆ ನಮಸ್ಕಾರವನ್ನು ಮಾಡಲು ಆತನು ರಾಜಪುತ್ರನನ್ನು ಉಚಿತರೀತಿಯಿಂದ ಆದರಿಸಿ ಅಯ್ಯಾ ! ನೀನು ಒಂದಾನೊಂದು ಕಾರ್ಯಾರ್ಥಿಯಾಗಿ ಬಂದಿರುವುದನ್ನು ನಾನು ಬಲ್ಲೆ ನಿನ್ನ ಶೌರ್ಯ ಸಾಹಸಗಳು ನನಗೆ ಗೊತ್ತುಂಟು ಇಗೋ ! ಈ ಮಂತ್ರದಂಡವನ್ನು ಪರಿಗ್ರಹಿಸು ಇದು ನಾನುಪದೇಶಿಸುವ ಮಂತ್ರವನ್ನು ಉಚ್ಚಾರಣೆಮಾಡಿ ಧರಿಸಲ್ಪಟ್ಟರೆ ಧರಿಸಿದವನು ಮತ್ತಾವ ಪ್ರಾಣಿಗೂ ಕಾಣದೆ ಅವನ ಇಚ್ಛಾನುಸಾರವಾಗಿ ನಡೆಯುವಂತೆ ಅನುಕೂಲಪಡಿಸುವಂಥ ಮಹಾಮಹಿಮೆಯುಳ್ಳದು ಇದನ್ನು ಭದ್ರವಾಗಿರಿಸು ಎಂದು ನುಡಿದು ಮಂತ್ರೋಪದೇಶವನ್ನು ಮಾಡಿ ಬೀಳ್ಕೊಟ್ಟನು. ರಾಜಪುತ್ರನು ಮಂತ್ರದಂಡಗಳನ್ನು ಬಹು ನಿಯಮದಿಂದ ಸ್ವೀಕರಿಸಿ ಮುನಿಯಿಂದ ಅಪ್ಪಣೆಯನ್ನು ಪಡೆದು ಪ್ರಯಾಣ ಮಾಡಿದನು ಆತನು ನಡೆದುನಡೆದು ಸಮುದ್ರತೀರವನ್ನು ಸೇರಿ ಸಮುದ್ರತರಣೋಪಾಯವನ್ನರಿಯದೆ ತಿರುಗಿತಿರುಗಿ ಬೇಸತ್ತು ಒಂದಾಲದ ಮರವನ್ನು ಕಂಡು ಆ ಮರದ ಶೀತಲಚ್ಛಾಯೆಯಲ್ಲಿ ವಿಶ್ರಮಿಸಿಕೊಂಡನು.

ಆತನು ಹಾಗೆ ವಿಶ್ರಮಿಸಿಕೊಂಡಿರುತ್ತಿರಲು ಆ ವೃಕ್ಷದಮೇಲೆ ವಾಸಿಸುತ್ತಿರುವ ಎರಡು ಮುದಿಹಕ್ಕಿಗಳು ಆ ಪಥಿಕನನ್ನು ನೋಡಿದುವು ಆಗ ಹೆಣ್ಣುಹಕ್ಕಿಯು ಗಂಡುಹಕ್ಕಿಯನ್ನು ಕುರಿತು ನಾಥಾ ! ಈ ರಾಜಪುತ್ರನು ಬಹಳವಾಗಿ ಬಳಲಿದ್ದರೂ ತನ್ನ ಹೆಂಡತಿಯಮೇಲಣ ಮೋಹದಿಂದ ಈ ಮಹಾಸಮುದ್ರವನ್ನು ದಾಟಲು ಆಲೋಚಿಸಿ ತವಕಿಸುತ್ತಿರುವನು. ಇವನು ಹೇಗೆ ನಿರಪಾಯವಾಗಿ ಈ ಸಮುದ್ರವನ್ನು ದಾಟಬಲ್ಲನು ? ಯಾವುದಾದರೊಂದುಪಾಯವುಂಟೆ ಈ ಸಮುದ್ರತರಣಕ್ಕೆ ? ಎಂದು ಕೇಳಿತು ಆಗ ಗಂಡುಹಕ್ಕಿ ತನ್ನ ಪತ್ನಿಯನ್ನು ನೋಡಿ ಪ್ರಿಯೆ ! ಸಮುದ್ರವನ್ನಪಾಯವಿಲ್ಲದೆ ದಾಟಬೇಕಾದರೆ ಒಂದುಪಾಯವುಂಟು ಅಗೋ ! ನೋಡು ಅಲ್ಲಿ ಕಾಣಿಸುತ್ತಿರುವ ಹಳದಿಯಹೂವಿನ ಮೂಲಿಕೆಯನ್ನು ಆಮೂಲಾಗ್ರವಾಗಿ ಅರೆದು ರಸವನ್ನು ತೆಗೆದು, ಆ ರಸವನ್ನು ಪಾದಗಳಿಗೆ ಬಳಿದುಕೊಂಡು ಕಣ್ಣುಗಳನ್ನು ಮುಚ್ಚಿ ತಾನು ಹೋಗಬೇಕಾಗಿರುವ ಸ್ಥಲವನ್ನು ಮನಸ್ಸಿನಲ್ಲಿ ನೆನೆದರೆ ಒಂದೆರಡು ನಿಮಿಷಗಳಲ್ಲಿ ಆ ಸ್ಥಲವನ್ನು ಸೇರಬಹುದು ಈರೀತಿಯಾಗಿ ಮಾಡಿದರೆ ರಾಜಕುಮಾರನೀತನು ಗಂತವ್ಯಸ್ಥಲವನ್ನು ಸುಲಭವಾಗಿ ಸೇರುವನು ಎಂದು ಹೇಳಿತು ಅರಸು ಮಗನಿಗೆ ಪಕ್ಷಿಭಾಷೆಯು ತಿಳಿಯುತ್ತಿದ್ದುದರಿಂದ ಅದರ ಮಾತನ್ನು ಕೇಳಿ ಆ ಹಳದಿಯ ಬಣ್ಣದ ಹೂವಿನ ಮೊಳಕೆಗಳಿರುವ ತಾವಿಗೆಹೋಗಿ ನೋಡಿದನು ಅಲ್ಲಿ ಎರಡು ಮೊಳಕೆಗಳುಮಾತ್ರ ಇದ್ದುವು ಒಂದು ಮೊಳಕೆಯನ್ನು ತನ್ನ ಅಂಗಿಯಲ್ಲಿ ಭದ್ರಪಡಿಸಿಕೊಂಡು ಮತ್ತೊಂದು ಮೊಳಕೆಯನ್ನು ಅರೆದು ಆ ರಸವನ್ನು ಪಾದಗಳಿಗೆ ಬಳಿದುಕೊಂಡು ಕಣ್ಣುಗಳನ್ನು ಮುಚ್ಚಿಕೊಂಡು ರಾಕ್ಷಸನ ಪ್ರಾಣಗಳನ್ನು ಭದ್ರಗೊಳಿಸಿರುವ ದ್ವೀಪಕ್ಕೆ ಹೋಗಬೇಕು ಎಂದು ಮಂತ್ರೋಚ್ಚಾರಣಪೂರ್ವಕವಾಗಿ ಸ್ಮರಿಸಿದನು ಬಳಿಕ ಒಂದೆರಡು ನಿಮಿಷಗಳು ಸುಮ್ಮನಿದ್ದು ಕಣ್ಣುಗಳನ್ನು ತೆರೆಯುವಷ್ಟರಲ್ಲಿ ತಾನು ಬಯಸಿದ ದ್ವೀಪದಲ್ಲಿದ್ದನು ವೀರಕೇಸರಿಯು ಹಿಡಿಯಲಾರದಷ್ಟು ಸಂತೋಷದಿಂದ ತನ್ಮಯನಾಗಿ ತನ್ನ ಭದ್ರತೆಯನ್ನು ಕುರಿತು ಸ್ವಲ್ಪ ಅಜಾಗರೂಕತೆಯಿಂದಿದ್ದನು ಅಲ್ಲಿ ಕಾವಲಿದ್ದ ಭೂತವು ರಾಜಕುಮಾರನನ್ನ ನೋಡಿ ವಿಸ್ಮಯಪಟ್ಟು ಗಟ್ಟಿಯಾಗಿ ಕೂಗಿಕೊಂಡು ತನ್ನವರನ್ನು ಕರೆಯಿತು ಮತ್ತು ಆತನನ್ನು ಕೊಂದುತಿನ್ನುವುದಕ್ಕೆ ಮೇಲೆಬಿತ್ತು ಅಷ್ಟರಲ್ಲಿ ವೀರಕೇಸರಿಯು ಜಾಗರೂಕನಾಗಿ ತನ್ನಬಳಿಯಲ್ಲಿದ್ದ ಮಂತ್ರದಂಡವನ್ನು ಸ್ಮರಿಸಿ ಮಂತ್ರವನ್ನುಚ್ಚರಿಸಿ ಶತ್ರುಗಳ ನೇತ್ರಗಳಿಗೆ ಅಗೋಚರನಾದನು. ಆಮೇಲೆ ಭೂತಸಮೂಹವು ಬಂದು ಅಲ್ಲಿ ಯಾರೂ ಕಾಣದಿದ್ದುದರಿಂದ ಕನಸೋ ಕಳವಳವೊ ಎಂದು ಭಾವಿಸಿ ಎಲ್ಲಿನವರಲ್ಲಿ ಹೊರಟುಹೋದರು. ರಾಜಕುಮಾರನು ವಟವೃಕ್ಷ ಕೋಟರದಲ್ಲಿದ್ದ ಗಿಣಿಯ ಭರಣಿಯನ್ನು ವಶಪಡಿಸಿಕೊಂಡು ತನ್ನಂಗಿಯಲ್ಲಿ

ಭದ್ರಪಡಿಸಿಕೊಂಡಿದ್ದ ಮತ್ತೊಂದು ಮೂಲಿಕೆಯ ಮೊಳಕೆಯನ್ನು ಈಚೆಗೆ ತೆಗೆದು ಅರೆದು ತದ್ರಸವನ್ನು ಪಾದಗಳಿಗೆ ಬಳಿದುಕೊಂಡು ಸೌದಾಮನಿಯಿರುವ ಕೊಟ್ಟಡಿಗೆ ಹೋಗಬೇಕು ಎಂದು ಮನಸ್ಸಿನಲ್ಲಿ ಸ್ಮರಿಸುವಷ್ಟರಲ್ಲಿ ಒಂದೆರಡು ನಿಮಿಷಗಳಲ್ಲಿ ಸೌದಾಮನಿಯ ಪಕ್ಕದಲ್ಲಿ ತಾನಿದ್ದನು. ಆ ಸುಂದರೀ ರತ್ನವು ಅಕಸ್ಮಾತ್ತಾಗಿ ತನ್ನಪಕ್ಕದಲ್ಲಿನಿಂದ ನಾಥನನ್ನು ಕಂಡು ಬಹು ಸಂತೋಷದಿಂದ ನಮಸ್ಕರಿಸಿ ಆಹಾರಾದ್ಯುಪಚಾರಗಳನ್ನು ಮಾಡಿ ಹೋದ ವಿಷಯವನ್ನು ಕುರಿತು ಪ್ರಸ್ತಾವಿಸಲಾಗಿ ಆ ಪುರುಷೋತ್ತಮನು ತಾನು ಹೋಗಿಬಂದ ಎಲ್ಲ ಸಮಾಚಾರವನ್ನೂ ತಿಳಿಯಿಸಿ ತನ್ನಲ್ಲಿ ಭದ್ರಪಡಿಸಿಕೊಂಡಿದ್ದ ಶುಕಸಹಿತಮಾದ ಕರಂಡವನ್ನು ತೋರಿಸಿದನು. ಆ ಕಾಂತಾಮಣಿಯು ಭಳಿ ! ಭಳೀ ! ನನ್ನ ತಂದೆಯನ್ನುಕೊಂದ ಶತ್ರುವನ್ನು ನಾನು ಕೊಲ್ಲುವೆನೆಂದು ಹೇಳಿ ಬರಣಿಯನ್ನು ತೆರೆದು ಅದರಲ್ಲಿದ್ದ ಗಿಣಿಯನ್ನೀಚೆಗೆ ತೆಗೆದು ಅದರ ಕಾಲ್ಗಳನ್ನೆಳೆಯಲಾರಂಭಿಸಿದಳು. ವ್ಯಾಘ್ರಮುಖನು ತನ್ನ ಪ್ರಾಣಗಳಿಗೆ ಆಧಾರವಾದ ಶುಕವು ಸೌದಾಮನಿಯ ಹಸ್ತಗತವಾಗಿರುವುದನ್ನು ಹೇಗೋ ತಿಳಿದು ಅವಳನ್ನು ಕುಟ್ಟಿ ಕೊಲ್ಲುವೆನೆಂದು ಓಡಿಬರಲಾರಂಭಿಸಿದನು. ಆದರೆ ಸೌದಾಮನಿಯು ಆ ಗಿಣಿಯ ಬಲಗಾಲನ್ನು ಬಳಿಕ ಎಡಗಾಲನ್ನು ಆಮೇಲೆ ರಕ್ಕೆಗಳನ್ನೂ ತರುವಾಯ ಕಂಠವನ್ನೂ ಮುರಿದು ಕೊಂದುಬಿಟ್ಟಳು. ಆಕೆಯು ಹಾಗೆ ಮಾಡುವಾಗ ಕೈಕಾಲುಗಳ ಸ್ವಾಧೀನತೆಯು ತಪ್ಪಿತು ಗಿಣಿಯು ಸತ್ತಕೂಡಲೆ ವ್ಯಾಘ್ರಮುಖನ ಶರೀರವು ಚೈತನ್ಯರಹಿತವಾಗಿ ನೆಲದಮೇಲೆ ಉರುಳಿತು ಬಳಿಕ ವೀರಕೇಸರಿಯು ಖಡ್ಗವನ್ನು ಧರಿಸಿ ಮಂತ್ರದಂಡಮಹಿಮೆಯಿಂದ ಅದೃಶ್ಯನಾಗಿ ಆ ರಾಕ್ಷಸನ ಸೈನ್ಯಗಳನ್ನೆಲ್ಲ ಯಮನಪಟ್ಟಣಕ್ಕೆ ಅತಿಥಿಗಳನ್ನಾಗಿ ಮಾಡಿದನು.

ಹೀಗೆ ಆ ವೀರಕೇಸರಿಯು ಆ ಕನ್ಯಾರತ್ನದ ಸೆರೆಯನ್ನು ಬಿಡಿಸಿದವನಾಗಿ ಆಕೆಯನ್ನು ತನ್ನೊಡನೆ ಕರೆದುಕೊಂಡು ತಂದೆಯ ಸಾನ್ನಿಧ್ಯವನ್ನು ಸೇರಿ, ತಾನಾಕೆಯನ್ನು ಗಾಂಧರ್ವವಿಧಿಯಿಂದ ಮದುವೆಯಾಗಿರುವುದನ್ನರಿಕೆಮಾಡಿ, ಸಾಷ್ಟಾಂಗವಂದನೆಯನ್ನು ಮಾಡಿದನು. ಶೂರಸಿಂಹನು ಸೌದಾಮನಿಯ ತನುರುಚಿಯನ್ನು ಕಂಡು ಮೆಚ್ಚಿ ಕುಮಾರನಿಗೆ ವಿದ್ಯುಕ್ತವಾಗಿ ಪರಿಣಯಂಗೆಯ್ದು ಯೌವರಾಜ್ಯಾಭಿಷೇಕವನ್ನು ಮಾಡಿ ತರುವಾಯ ಕೆಲಸಂವತ್ಸರಗಳಿಗೆ ರಾಜ್ಯಭಾರವನ್ನು ವೀರಕೇಸರಿಯ ಮೇಲಿಟ್ಟು ತಾನು ವಾನಪ್ರಸ್ಥಾಶ್ರಮವನ್ನು ಸ್ವೀಕರಿಸಿದನು. ವೀರಕೇಸರಿಯು ಸೌದಾಮನಿಯುಂ ಕೂಡಿ ಸಕಲ ಭೋಗಗಳನ್ನನುಭವಿಸುತ್ತಿದ್ದನು. ಸತ್ಯಶೀಲನೆ! ತಿಳಿಯಿತೇ ನಿನಗಾಭವನದ ವೃತ್ತಾಂತವು ಅದನ್ನಾರು ಶುಭ್ರಗೊಳಿಸುತ್ತಿರುವರೆಂದು ನೀನು ಕೇಳುವೆಯೋ ? ವೀರಕೇಸ

ಕೆಲವು ದಿನಗಳಿದ್ದು ಮತ್ತೆ ರಾಜಧಾನಿಗೆ ಹೋದನು. ಇದಾಗಿ ಕೆಲವು ದಿನಗಳೇ ಆಗಿರುವುದರಿಂದ ಹೀಗೆ ನವೀನವಾಗಿ ಕಾಣುತ್ತಿರುವುದು ಎಂದು ಹೇಳಿ ಚಿದಾನಂದಮುನಿಯು ತನ್ನ ಅಂತೇವಾಸಿಯನ್ನು ಸಂತೋಷಸಾಗರದಲ್ಲಿ ಮುಳುಗಿಸಿದನು. ಗುರುಶಿಷ್ಯರು ಆರಾತ್ರಿಯಲ್ಲಿಯೇ ಇದ್ದು ಸುಖವಾಗಿ ನಿದ್ರಿಸಿದರು.

ಇಂತು ಇಪ್ಪತ್ತೈದನೆಯ ಕಥೆ ಮುಗಿದುದು.



## —: ಇಪ್ಪತ್ತಾರನೆಯ ದಿನದ ಕಥೆ :—

ಸಕಲಾವರಣಾತೀತ ನಿರಾಲಂಬ ನಭಾವನ |
ಮಹಾವಿಭೂತಿ ಸಂಸ್ಥಾನ ನಮಸ್ತೇ ಪುರುಷೋತ್ತಮ ||

ಚಿದಾನಂದ ಸತ್ಯಶೀಲರು ವಟವಿಟಪಿಚ್ಛಾಯೆಯಲ್ಲಿಯೇ ಆ ರಾತ್ರಿಯನ್ನು ಕಳೆದು, ಅರುಣೋದಯಕ್ಕೆ ಮೊದಲೆ ಎದ್ದು ಸಮೀಪದ ತೊರೆಯಲ್ಲಿ ಸ್ನಾನವನ್ನು ಮಾಡಿ ಸಂಧ್ಯಾದ್ಯನುಷ್ಠಾನಗಳನ್ನು ತೀರಿಸಿಕೊಂಡು, ಅನೇಕ ಕೆರೆತೊರೆಗಳನ್ನೂ ಹಳ್ಳತಿಟ್ಟಗಳನ್ನೂ ಕಾಡುಮೇಡುಗಳನ್ನೂ ದಾಟಿ ಒಂದು ಪಟ್ಟಣವನ್ನು ಸೇರಿದರು. ಗುರುವು ಶಿಷ್ಯನಕೈಗೆ ಚಿನ್ನದ ನಾಣ್ಯವೊಂದನ್ನು ಕೊಟ್ಟು ಆದಿನದ ಊಟಕ್ಕೆ ಬೇಕಾಗುವ ಸಾಮಗ್ರಿಯನ್ನು ತರುವಂತಾಜ್ಞಾಪಿಸಿದನು. ಸತ್ಯಶೀಲನಾ ನಾಣೆಯುವನ್ನು ತೆಗೆದುಕೊಂಡು ಹೋಗಿ ಒಂದಂಗಡಿಯಲ್ಲಿ ಅವಶ್ಯವಾದ ಸಂಬಾರಗಳನ್ನು ಕೊಂಡು ಬರುತ್ತಿರುವಾಗ ದಾರಿಯಲ್ಲಿ ಒಂದು ಚಾವಡಿಯಲ್ಲಿ ಮರದ ಒಂದು ಪ್ರತಿಮೆಯನ್ನು ಕಂಡು, ಸ್ವಲ್ಪಹೊತ್ತಿನವರೆಗೆ ಎವೆಯಿಕ್ಕದಂತೆ ನೋಡುತ್ತಿದ್ದು, ಆ ಸ್ತ್ರೀವಿಗ್ರಹವು ಆ ಚಾವಡಿಯಲ್ಲಿರುವುದಕ್ಕೆ ಕಾರಣವೇನೆಂದು ಅಲ್ಲಿದ್ದ ಕೆಲವರನ್ನು ಕೇಳಿದನು. ಅವರು ಅಯ್ಯಾ! ನಮಗೆ ಆ ಪ್ರತಿಮೆಯ ವಿಚಾರವಾಗಿ ಏನೂ ತಿಳಿಯದು. ಆದರೆ ಇದು ಅನೇಕ ಸಂವತ್ಸರಗಳಿಂದಲೂ ಈ ಚಾವಡಿಯಲ್ಲಿರುವಂತೆ ನಮ್ಮ ಹಿರಿಯರು ಹೇಳುತ್ತಿದ್ದರೆಂದು ಹೇಳಿದರು. ಸತ್ಯಶೀಲನು ತನ್ನಲ್ಲಿ ಈ ದಾರುಮಯ ವಿಗ್ರಹದ ವಿಚಾರವು ಈ ಪಟ್ಟಣದವರಿಗೆ ಸ್ವಲ್ಪವೂ ತಿಳಿದಿಲ್ಲವಲ್ಲ! ನಮ್ಮ ಗುರುಗಳು ನಿಸ್ಸಂದೇಹವಾಗಿ ಹೇಳಿಬಿಡುವರು. ಅವರೇಸರಿ ಇಂಥವುಗಳ ವಿಚಾರವನ್ನು ಹೇಳುವುದಕ್ಕೆ ಎಂದು ಬಗೆದು ನೇರವಾಗಿ ತಾನಿಳಿದಿರುವ ಸ್ಥಳಕ್ಕೆ ಬಂದನು. ಸ್ಥಲವು ಎಲ್ಲ ವಿಷಯಗಳಲ್ಲಿಯೂ ಅನುಕೂಲವಾಗಿದ್ದುದರಿಂದ ತ್ವರೆಯಾಗಿ ಅಡಿಗೆಮಾಡಿ ಗುರುಗಳಿಗೆ ಬಡಿಸಿ ತಾನೂ ಭುಜಿಸಿದನು. ದಾರಿಯನ್ನು ನಡೆದ ಬಳಲಿಕೆಯನ್ನು ಕೊಂಚ ಮಟ್ಟಿಗೆ ಕಳೆದುಕೊಂಡು ಕುಳಿತಿದ್ದ ಚಿದಾನಂದಮುನಿಯ ಬಳಿಯಲ್ಲಿ ಕುಳಿತು ಸತ್ಯಶೀಲನು ಸ್ವಾಮಿ! ತಾವು ಸರ್ವಜ್ಞರು. ನಾನಿಂದು ಭೋಜನ ಸಾಮಗ್ರಿಯನ್ನು ತರುವುದಕ್ಕೆಂದು ಅಂಗಡಿಬೀದಿಗೆ ಹೋಗಿದ್ದೆನಷ್ಟೆ? ಬರುತ್ತ ದಾರಿಯ

ಲ್ಲಿದ್ದ ಒಂದು ಚಾವಡಿಯಲ್ಲಿ ಅತಿ ಸೌಂದರ್ಯದಿಂದ ತೀರಿರುವ ದಾರುಮಯವಾದ ಒಂದು ಸ್ತ್ರೀವಿಗ್ರಹವನ್ನು ಕಂಡೆನು. ಆ ವಿಗ್ರಹ ವಿಚಾರದಲ್ಲಿ ಪ್ರಶ್ನೆಮಾಡಲು ಅಲ್ಲಿದ್ದ ಯಾರೂ ಸರಿಯಾದ ಉತ್ತರವನ್ನು ಕೊಡಲಿಲ್ಲ. ದಯವಿಟ್ಟು ಅದರ ಕಥೆಯನ್ನು ಹೇಳಬೇಕೆಂದು ಬೇಡುತ್ತೇನೆ ಎಂದು ಕೇಳಲಾಗಿ ಯೋಗಿವರ್ಯನು ತತ್ಕಥೆಯನ್ನು ಹೀಗೆ ಹೇಳಲಾರಂಭಿಸಿದನು.

## ದಾರುವಿಗ್ರಹದ ಕಥೆ.

ಪೂರ್ವಕಾಲದಲ್ಲಿ ಬಲದೇವಪುರವೆಂಬೊಂದು ನಗರವಿದ್ದಿತು. ಅದು ಸಮಸ್ತ ಶಾಸ್ತ್ರಗಳಲ್ಲಿ ನಿಷ್ಣಾತರಾದ ಬ್ರಾಹ್ಮಣೋತ್ತಮರಿಂದಲೂ ಶೌರ್ಯ ದುರಂಧರರಾದ ಕ್ಷತ್ರಿಯ ವೀರರಿಂದಲೂ, ಕುಬೇರನನ್ನು ಅಲ್ಲಗಳೆವ ವಣಿಕ್ಪ್ರ ಮುಖರಿಂದಲೂ, ಆ ತ್ರಿವರ್ಣದವರಿಗೂ ದಾಸರಾಗಿ ಅವರ ಸೇವೆಯಲ್ಲಿ ಆಸಕ್ತ ರಾದ ಜಘನ್ಯಜರಿಂದಲೂ ಪ್ರಕಾಶಿಸುತ್ತಿದ್ದಿತು. ಆ ನಗರದಲ್ಲಿ ವೇದವೇದಾಂಗ ಗಳನ್ನು ಸಾಂಗವಾಗಿ ಓದಿ, ಮಂತ್ರಶಾಸ್ತ್ರಗಳಲ್ಲಿ ನೈಪುಣ್ಯವನ್ನು ಪಡೆದಿರುವ ಪರಾಶರನೆಂಬ ಧರಾಮರನೊಬ್ಬನಿದ್ದನು. ಆತನು ದೊಡ್ಡ ವಿದ್ವಾಂಸನಾದು ದರಿಂದ ತನ್ನ ವಿದ್ಯೆಯನ್ನು ಪ್ರಚಾರಪಡಿಸಿ ಬಿರುದುಗಳನ್ನು ಸಂಪಾದಿಸಬೇ ಕೆಂಬ ಇಚ್ಛೆಯುಳ್ಳವನಾಗಿ ಒಂದು ಶುಭದಿನದಲ್ಲಿ ಪ್ರಯಾಣಮಾಡಿ ಕಾಶೀಪಟ್ಟ ಣಕ್ಕೆ ಹೋಗುತ್ತ ದಾರಿಯಲ್ಲಿ ನಡುವೆ ವೇದಪುರವೆಂಬ ಪಟ್ಟಣವೊಂದನ್ನು ಪ್ರವೇಶಿಸಿ ಒಂದು ಧರ್ಮಶಾಲೆಯಲ್ಲಿಳಿದನು. ಭೋಜನಾನಂತರದಲ್ಲಿ ಒಂದು ಜಗುಲಿಯಮೇಲೆ ವಿಶ್ರಮಿಸಿಕೊಂಡಿದ್ದನು. ಆಗ ಆ ಮಾರ್ಗದಲ್ಲಿ ಒಬ್ಬ ಬಡ ಗಿಯು ಹೋಗುತ್ತಿದ್ದು ಸತ್ರದ ಹೊರಗೆ ಜಗುಲಿಯಮೇಲೆ ಮಲಗಿರುವ ಆ ಬ್ರಾಹ್ಮಣನನ್ನು ಸಮೀಪಿಸಿ ನಮಸ್ಕರಿಸಿ ಸ್ವಾಮಿ! ತಾವು ಯಾರು? ಎಲ್ಲಿಗೆ ಹೋಗಬೇಕೆಂದು ಬಂದು ಇಲ್ಲಿ ತಂಗಿರುವಿರಿ? ತಮ್ಮ ನಾಮಧೇಯವೇನು? ಎಂದು ವಿನಯದಿಂದ ಪ್ರಶ್ನೆಮಾಡಿದನು. ಆಗ ಆ ಭೂಸುರೋತ್ತಮನು, ಅಯ್ಯಾ! ನನ್ನ ನಿವಾಸಸ್ಥಲವು ಬಲದೇವಪುರವು. ನಾನು ಬ್ರಾಹ್ಮಣ ಕುಲದ ವನು. ನನ್ನ ಹೆಸರು ಪರಾಶರಭಟ್ಟಾರಕನು. ಕಾಶೀಪಟ್ಟಣಕ್ಕೆ ಹೋಗಬೇ ಕೆಂದು ಹೊರಟು ಈ ಮಧ್ಯಾಹ್ನದಲ್ಲಿ ಇಲ್ಲಿ ನಿಂತೆನು ಎಂದು ನುಡಿದನು.

ಬಳಿಕ ಆ ಬಡಗಿಯವನು ಅಧಿಕವಾದ ಭಕ್ತಿಯಿಂದ ಮಹಾತ್ಮರೇ! ವಿಶ್ವ ನಾಥಸ್ವಾಮಿಯ ದರ್ಶನವನ್ನು ಮಾಡಬೇಕೆಂಬ ಕುತೂಹಲವು ನನಗೆ ಬಹುದಿನ ಗಳಿಂದಲೂ ಇರುವುದು. ನನಗೆ ಹೆಂಡತಿ ಮಕ್ಕಳು, ಬಂಧುಗಳು ಮೊದಲಾಗಿ ಯಾರೂ ಇರುವುದಿಲ್ಲ. ನನ್ನನ್ನು ಶಿಷ್ಯನನ್ನಾಗಿ ಅಂಗೀಕರಿಸಿ ವಾರಣಾಸಿಗೆ ಕರೆ ದುಕೊಂಡು ಹೋಗಬೇಕೆಂದು ಬಹುವಿಧವಾಗಿ ಬೇಡಿಕೊಂಡನು. ಪರಾಶರ ಭಟ್ಟನು ಅವನ ವಿನಯಪೂರ್ವಕವಾದ ನುಡಿಗಳನ್ನು ಕೇಳಿ, ಒಬ್ಬನೇ ದಾರಿ

ಯಲ್ಲಿ ಹೋಗಬಾರದೆಂದು ಹಿರಿಯರು ಹೇಳುವರು. ಈಗ ಈ ಶೂದ್ರನು ನನ್ನೊಡನೆ ವಿಶ್ವೇಶ್ವರನ ದರ್ಶನಕ್ಕೆ ಬರುತ್ತೇನೆಂದು ಹೇಳುತ್ತಿರುವನು. ಒಂಟಿಯಾಗಿ ಹೋಗುವುದು ನನಗೂ ಕಷ್ಟವಾಗಿ ತೋರುವುದು. ಆಗಲಿ, ಇವನನ್ನು ಕರೆದುಕೊಂಡು ಹೋಗುವೆನು ಎಂದಾಲೋಚಿಸಿ ಅವನ ಶಿಷ್ಯತ್ವವನ್ನಂಗೀಕರಿದನು. ಬಳಿಕ ಆ ಬಡಗಿಯವನು ಚಿತ್ರಕುಶಲನೆಂದು ತನ್ನನ್ನು ಕರೆವರೆಂದು ಹೇಳಿ ತನ್ನ ಮೂಟೆಯನ್ನು ಕಂಕುಳಲ್ಲಿಟ್ಟು ಪರಾಶರಭಟ್ಟನೊಡನೆ ಹೊರಟನು.

ಹೀಗೆ ಅವರಿರ್ವರು ಬಹು ಶ್ರಮಪಟ್ಟು ನಡೆಯುತ್ತ ಕೆಲವುದಿನಗಳಲ್ಲಿ ಜಾತವರ ನಗರವೆಂಬ ಒಂದು ಪಟ್ಟಣವನ್ನು ಸೇರಿ ಅಲ್ಲಿದ್ದ ಒಂದು ಧರ್ಮಸತ್ರದಲ್ಲಿ ನಿಂತು ಅಂದಿನ ಪ್ರಯಾಣವನ್ನು ಸಾಕುಮಾಡಿದರು. ಆ ವಿದ್ವದ್ವರಿಷ್ಟನು ಸ್ನಾನಸಂಧ್ಯಾದಿ ಕೃತ್ಯಗಳನ್ನು ಮುಗಿಸುನವೇಳೆಗೆ ಚಿತ್ರಕುಶಲನು ಅಂಗಡಿಗೆ ಹೋಗಿ ಅಂದಿಗೆ ಬೇಕಾದ ಅಕ್ಕಿ, ಬೇಳೆ, ಉಪ್ಪು, ತುಪ್ಪ ಮೊದಲಾದ ಪದಾರ್ಥಗಳನ್ನು ಕೊಂಡು ತಂದನು. ಬಳಿಕ ಪರಾಶರಭಟ್ಟನು ಅಡಿಗೆಯನ್ನು ಮಾಡಿ ತಾನು ತಿಂದು ಶಿಷ್ಯನಿಗೂ ಊಟಕ್ಕೆ ಬಡಿಸಿ ಭೋಜನಾನಂತರದಲ್ಲಿ ಒಂದು ವೇದಿಕೆಯಮೇಲೆ ಇಬ್ಬರೂ ಕುಳಿತುಕೊಂಡಿದ್ದರು. ಆ ದಾರಿಯಲ್ಲಿ ಹೋಗುತ್ತಿದ್ದ ಚಿತ್ರಗಾರನೊಬ್ಬನು ಪಂಡಿತಾಗ್ರಣಿಯನ್ನು ಕಂಡು ಮಹಾನುಭಾವನನ್ನಾಗಿ ಊಹಿಸಿ ನಮಸ್ಕರಿಸಿ ತಾವೆಲ್ಲಿಗೆ ಹೋಗುವುದಕ್ಕಾಗಿ ಇಲ್ಲಿಗೆ ಬಂದಿರೆಂದು ಕೇಳಲು ಆ ಭಟ್ಟಾರಕನು ಕಾಶೀಪುರಕ್ಕೆ ಹೋಗುವೆನೆಂದು ಹೇಳಿದನು. ಆ ಚಿತ್ರಗಾರನು ಕೂಡ ತೀರ್ಥಯಾತ್ರಾಭಿಗಮನ ಸಮುತ್ಸಾಹಿತ ಚಿತ್ತನಾಗಿ, ಸವಿನಯವಾಗಿ ತನ್ನನ್ನೂ ಶಿಷ್ಯನನ್ನಾಗಿ ಪರಿಗ್ರಹಿಸಬೇಕೆಂದು ಕೇಳಿಕೊಳ್ಳಲು, ಆ ವಿದ್ವದ್ವರೇಣ್ಯನು ವಿನಯವಾಗಿ ಶಿಷ್ಯತ್ವವನ್ನು ಕೋರುತ್ತಿರುವ ಆ ಚಿತ್ರಗಾರನನ್ನು ನೋಡಿ ಸಾದರವಾಗಿ ಇಂತೆಂದನು. ಅಯ್ಯಾ! ನೀನಿಷ್ಟು ಬೇಡಿಕೊಳ್ಳಬೇಕೆ? ಸಮಸ್ತಪಾಪ ಪರಿಹಾರಕನಾದ ಆ ವಿಶ್ವೇಶ್ವರನು ಸಮಸ್ತರಿಗೂ ವಂದನೀಯನಲ್ಲವೆ? ಆದರೆ ನೀನು ಸಂಸಾರಬಂಧವನ್ನೆಲ್ಲ ಹರಿದುಕೊಂಡಲ್ಲವೆ ಬರಬೇಕು? ಆದುದರಿಂದ ನಿನ್ನ ಭಾರ್ಯಾಪುತ್ರರಿಗೆ ತಕ್ಕ ವಸತಿಯನ್ನೇರ್ಪಡಿಸಿ ಮನೆಯಲ್ಲಿ ಬಿಟ್ಟುಬಾ. ನಿನ್ನ ಹೆಸರೇನೋ ಹೇಳುವೆಯಾ? ಎಂದು ಕೇಳಿದನು. ಅವನು ನನ್ನಹೆಸರು ಕಲಾವಿಚಕ್ಷಣನೆಂದು, ನನ್ನ ಹೆಂಡತಿಯು ಕೆಲತಿಂಗಳುಗಳ ಹಿಂದೆ ಮೃತಳಾದಳು. ನನ್ನ ಕುಮಾರನು ಪ್ರಾಪ್ತವಯಸ್ಕನಾಗಿರುವುದರಿಂದ ಸಂಸಾರನಿರ್ವಹಣಭಾರವನ್ನು ಅವನಮೇಲೆ ಹೊರಿಸಿ ಆಗಲೇ ಐದಾರುತಿಂಗಳುಗಳಾಗಿರುವುವು. ನನ್ನ ಸಂಸಾರದ ವಿಚಾರವಾಗಿ ತಾವು ಸಂದೇಹಪಡಬೇಕಾದ ಪ್ರಕೃತವಿರುವುದಿಲ್ಲ ಎಂದಾ ಚಿತ್ರಗಾರನು ಹೇಳಿ ಪ್ರಯಾಣಕ್ಕೆ ಬೇಕಾದ

ವಸ್ತ್ರಾದಿ ಸಮಸ್ತ ಸಾಮಗ್ರಿಗಳನ್ನೂ ತೆಗೆದುಕೊಂಡು ಪರಾಶರ ಭಟ್ಟನನ್ನು ಅನುಸರಿಸಿ ಹೊರಟನು.

ಬಳಿಕ ಆ ಮೂವರೂ ಪ್ರಯಾಣವಾಗಿ ಸ್ವಲ್ಪದೂರದವರೆಗೆ ಹೋಗುವ ವೇಳೆಗೆ ಮಧ್ಯಾಹ್ನವಾಯಿತು, ಅಲ್ಲಿ ಒಂದು ಹಳ್ಳಿಯ ಸಮೀಪದಲ್ಲಿದ್ದ ಅಲ್ಲಿದ್ದ ಒಂದು ಕೊಳದಬಳಿ ಭೋಜನಾದಿಗಳನ್ನು ತೀರಿಸಿಕೊಂಡು ಒಡನೆಯೇ ಪ್ರಯಾಣವಾದರು. ಕೆಲವು ದಿನಗಳು ನಡೆದುನಡೆದು ರಾಜಘಟ ಎಂಬೊಂದು ಪಟ್ಟಣವನ್ನು ಕಂಡು ದೀರ್ಘಪ್ರಯಾಣದಿಂದಾದ ಬಳಲಿಕೆಯಿಂದ ಅಲ್ಲಿ ಎರಡು ಮೂರು ದಿನಗಳಿರಬೇಕೆಂದು ನಿಶ್ಚಯಿಸಿ ಅಲ್ಲಿ ನಿಂತರು. ಆ ಪಟ್ಟಣದಲ್ಲಿ ಒಂದು ಸತ್ರವಿದ್ದಿತು. ಅದನ್ನು ಧರ್ಮಗುಪ್ತನೆಂಬ ಒಬ್ಬ ವೈಶ್ಯಸತ್ತಮನು ಕಟ್ಟಿಸಿ ತಾನೇ ಅತಿಥಿಗಳನ್ನಾದರಿಸುತ್ತ ಅದನ್ನು ಕಾಪಾಡಿಕೊಂಡಿದ್ದನು. ಆದುದರಿಂದ ಆತನು ಪರಾಶರಭಟ್ಟನನ್ನು ಸಮೀಪಿಸಿ ದಯಮಾಡಿ ಧರ್ಮಶಾಲೆಗೆ ಬಂದು ನಾನು ಮಾಡುವ ಅತಿಥಿಸತ್ಕಾರಗಳನ್ನಂಗೀಕರಿಸಬೇಕೆಂದು ಬೇಡಿಕೊಂಡನು. ಆ ಧರ್ಮಗುಪ್ತನ ಸಾಧುತ್ವಕ್ಕೆ ಬಹಳವಾಗಿ ಸಂತೋಷಪಟ್ಟು ಆ ಪರಾಶರ ಭಟ್ಟನು ಧರ್ಮಶಾಲೆಯಲ್ಲಿದ್ದು ಆತನಿತ್ತ ಆತಿಥ್ಯವನ್ನು ಸ್ವೀಕರಿಸಿ ವಣಿಕ್ಪತಿಯ ಗುಣಗಳನ್ನು ತನ್ನ ಶಿಷ್ಯರೊಡನೆ ಹೇಳಿ ಪ್ರಶಂಸಿದನು.

ಧರ್ಮಗುಪ್ತನು ಪರಾಶರಭಟ್ಟನನ್ನು ನೋಡಿ, ಮಹಾಮಹಿಮನನ್ನಾಗಿ ಭಾವಿಸಿ, ನಮ್ರಶಿರಸ್ಕನಾಗಿ ಆತನನ್ನು ಕೇಳಿ, ಆತನು ತನ್ನ ಶಿಷ್ಯದ್ವಯದೊಡನೆ ಕಾಶಿಕಾಪುರಕ್ಕೆ ಹೋಗುವರೆಂದು ತಿಳಿದುಕೊಂಡು, ತಾನೂ ವಿಶ್ವನಾಥದರ್ಶನವನ್ನು ಮಾಡಲು ಕುತೂಹಲವುಳ್ಳವನಾಗಿ ತನಗಿರುವ ಅಭಿಲಾಷೆಯನ್ನು ಭೂಸುರೋತ್ತಮನಿಗೆ ತಿಳಿಯಿಸಿ ಸತ್ಸಾಂಗತ್ಯವದುವರೆಗೆ ತನಗೆ ದೊರೆಯದಿದ್ದುದರಿಂದ ತನ್ನ ಆಸೆಯು ನೆರವೇರದಿದ್ದಿತೆಂದೂ ಅನುಗ್ರಹಿಸಿ ತನ್ನನ್ನು ಕೂಡ ಕರೆದುಕೊಂಡು ಹೋಗಬೇಕೆಂದೂ ಪ್ರಾರ್ಥಿಸಲು ಆ ಭೂಸುರವರ್ಯನು ಆತನನು ತನ್ನೊಡನೆ ಕರೆದುಕೊಂಡು ಹೋಗುವುದಕ್ಕೆ ಒಪ್ಪಿಕೊಂಡನು.

ಬಳಿಕ ಆ ಧರ್ಮಗುಪ್ತನು ತನ್ನ ತಮ್ಮನಾದ ಸಮುದ್ರಗುಪ್ತನಿಗೆ ಧರ್ಮಶಾಲಾಧಿಕಾರವನ್ನು ಕೊಟ್ಟು ಜಾಗರೂಕತೆಯಿಂದ ತಮ್ಮತಮ್ಮ ಕೆಲಸಗಳನ್ನು ಮಾಡಿಕೊಂಡಿರುವಂತೆ ಸೇವಕರಿಗೆ ಆಜ್ಞಾಪಿಸಿ, ಕಾಶೀಕ್ಷೇತ್ರಕ್ಕೆ ಹೋಗುವುದು ತನ್ನ ಪೂರ್ವಜನ್ಮದ ಪುಣ್ಯವಿಶೇಷದಿಂದ ಲಭಿಸಿದ ಫಲವೆಂದು ಬಗೆದು ಪರಾಶರ ಭಟ್ಟನ ಬಳಿಗೆ ಬಂದನು.

ಹೀಗೆ ಪರಾಶರನೂ, ಚಿತ್ರಕುಶಲನೂ, ಕಲಾವಿಚಕ್ಷಣನೂ, ಧರ್ಮಗುಪ್ತನೂ ಪುಣ್ಯಯಾತ್ರೆಗೆಂದು ಪಯಣವಾಗಿ ಒಂದು ದೊಡ್ಡ ಕಾಡಿನನಡುವೆ ಹೋಗುತ್ತಿದ್ದರು. ಸ್ವಲ್ಪ ದೂರದವರೆಗೆ ಹೋಗುವವೇಳೆಗೆ ಸೂರ್ಯನು ಅಪರಾ

ದ್ರಿಯನ್ನು ಸೇರಿದನು. ಅದನ್ನು ನೋಡಿ ಪರಾಶರ ಭೂಸುರೋತ್ತಮನು ಶಿಷ್ಯತ್ರಯವನ್ನು ಕುರಿತು ಎಲೈ ಶಿಷ್ಯರೇ ! ಇಗೋ ! ಸಂಜೆಯಾಯಿತು ಈ ದಿನದ ಪ್ರಯಾಣವಿಷ್ಟು ಸಾಕು ಅಗೋ ಅಲ್ಲಿ ಒಂದು ಕಿರುದೊರೆಯು ಹರಿಯುತ್ತಿರುವುದು ಅಲ್ಲಿ ವಿಶ್ರಮಿಸೋಣ ಎಂದು ಹೇಳಲು ಆ ಮೂವರೂ ಒಪ್ಪಿಕೊಂಡರು. ಆ ನದಿಯ ಪಕ್ಕದಲ್ಲಿರುವ ಒಂದಾಲದ ಮರದ ಕೆಳಗೆ ನಾಲ್ವರೂ ನಿಂತರು ಬ್ರಾಹ್ಮಣೋತ್ತಮನು ಸ್ನಾನಾದ್ಯನುಷ್ಠಾನಗಳನ್ನು ಮುಗಿಸಿಕೊಂಡು ಅಡಿಗೆಯನ್ನು ಮಾಡಿ ತಾನು ಊಟಮಾಡಿ ಶಿಷ್ಯರಿಗೂ ಬಡಿಸಿದನು ಎಲ್ಲರ ಭೋಜನವೂ ಮುಗಿಯಿತು ಆವೇಳೆಗೆ ಆ ಕಾಡೆಲ್ಲ ಅಂಧಕಾರಬಂಧುರವಾಯಿತು ಚಳಿ ಬಾಧೆಯು ಅಧಿಕವಾಗಿಯೇ ಇದ್ದಿತು ಬಡಗಿಯಾದ ಚಿತ್ರಕುಶಲನು ಸುತ್ತಮುತ್ತಲಿನ ಕೆಲವು ಪುಳ್ಳೆಗಳನ್ನಾರಿಸಿತಂದು ಉರಿಯಿಸಿ ಬೆಳಕು ಮಾಡಿದನು ಎಲ್ಲರೂ ಬೆಂಕಿಯಮುಂದೆ ಕುಳಿತು ಚಳಿಯಬಾಧೆಯನ್ನು ಕಡಿಮೆ ಮಾಡಿಕೊಂಡರು.

ವೈಶ್ಯಶಿಖಾಮಣಿಯಾದ ಧರ್ಮಗುಪ್ತನು ಉಳಿದ ಮೂವರನ್ನು ನೋಡಿ ನೀವೆಲ್ಲರೂ ನನ್ನ ವಿಜ್ಞಾಪನೆಯೊಂದನ್ನು ಲಾಲಿಸಬೇಕು ಇದು ಘೋರವಾದ ಕಾಡು ಹುಲಿ, ಕರಡಿ, ಸಿಂಹ ಮೊದಲಾದ ಕಾಡುಮೃಗಗಳಿಗೆ ಇದು ಬೀಡು ಎಲ್ಲರೂ ನಿದ್ರಿಸಿದರೆ ನಮಗೆ ಅಪಾಯವು ಸಂಭವಿಸುವುದು ಹಾಗೆ ಅಪಾಯವು ಸಂಭವಿಸದೆ ಇರಬೇಕಾದರೆ ಒಂದೊಂದು ಯಾಮದಲ್ಲೊಬ್ಬೊಬ್ಬರು ಎಚ್ಚರಿಕೆಯಿಂದ ಕಾವಲಿರಬೇಕು ಈ ವಿಷಯದಲ್ಲಿ ನಿಮ್ಮ ಆಶಯವೇನು ? ಎಂದನು ಎಲ್ಲರೂ ಒಪ್ಪಿಕೊಂಡರು. ಪ್ರಥಮ ಯಾಮದಲ್ಲಿ ಚಿತ್ರಕುಶಲನೂ ದ್ವಿತೀಯ ಯಾಮದಲ್ಲಿ ಕಲಾವಿಚಕ್ಷಣನೂ ತೃತೀಯ ಯಾಮದಲ್ಲಿ ಧರ್ಮಗುಪ್ತನೂ ಕಾವಲಿರುವುದಕ್ಕೆ ಒಪ್ಪಿದರು ನಾಲ್ಕನೆ ಯಾಮದ ಕಾವಲು ಪರಾಶರಭಟ್ಟನದಾಯಿತು ಆ ಪ್ರಕಾರವಾಗಿ ವರ್ಧಕಿಯು ಮೊದಲನೆಯ ಯಾಮದಲ್ಲಿ ಎಚ್ಚತ್ತಿದ್ದನು ಉಳಿದ ಮೂವರೂ ಮಲಗಿ ನಿದ್ರಿಸಿದರು.

ಬಳಿಕ ಆ ಬಡಗಿಯು ಉಳಿದವರೆಲ್ಲರೂ ನಿದ್ರಿಸುತ್ತಿರಲು ತಾನೊಬ್ಬನೇ ಎದ್ದಿರುವುದಕ್ಕೆ ಬೇಸರಪಟ್ಟು ನಿದ್ದೆಬಾರದಿರುವುದಕ್ಕೆ ಯಾವುದಾದರೊಂದು ಕೆಲಸವನ್ನು ಕಲ್ಪಿಸಿಕೊಳ್ಳುವ ಉದ್ದೇಶದಿಂದ ಆ ಕಾಡಿನಲ್ಲಿ ತಾವಿಳಿದಿರುವ ಸ್ಥಳಕ್ಕೆ ಒಂದೆರಡುಮಾರಿನ ದೂರದಲ್ಲಿ ಬಿರುಗಾಳಿಯಿಂದ ಬೇರುಗಳೊಡನೆ ಉರುಳಿಕೊಂಡಿರುವ ಒಂದು ಗಂಧದ ಮರವನ್ನು ನೋಡಿ ಸಂತೋಷಿಸಿ ಅದರಲ್ಲಿ ತನಗೆ ಬೇಕಾದ ಭಾಗವನ್ನು ಕೊಯ್ದುಕೊಂಡು ಬಂದು ತನ್ನ ಕಲಾಕೌಶಲ್ಯವನ್ನು ತೋರ್ಪಡಿಸಿ ಒಂದು ಸ್ತ್ರೀಪ್ರತಿಮೆಯನ್ನು ಮೂರುತಾಸಿನೊಳಗಾಗಿಯೇ ತೀರ್ಮಾನ ಮಾಡಿದನು ಕಾಲು ಕೈಗಳು ಮುಖವು ಮೊದಲಾದ ಸಕಲಾವಯವಗಳೂ ವರ್ಣನಾತೀತವಾಗಿ ರಚಿಸಲ್ಪಟ್ಟುವಾಗಿದ್ದುವು ಅದನ್ನು ತಾವು

ಮಲಗುವ ಸ್ಥಲಕ್ಕೆ ಅನತಿದೂರದ ಒಂದು ಮರಕ್ಕೆ ಹೊಂದಿಸಿಟ್ಟು ತನ್ನ ಜಾವವು ಕಳೆಯಲ್ಪಾಗಿ ಚಿತ್ರಕಾರನನ್ನೆಬ್ಬಿಸಿ ಚೆನ್ನಾಗಿ ಕಾವಲಿರುವಂತೆ ಅವನಿಗೆ ಹೇಳಿ ತಾನು ಮಲಗಿದನು.

ಬಳಿಕ ಆ ಚಿತ್ರಗಾರನು ಕಣ್ಗಳನ್ನುಜ್ಜಿಕೊಳ್ಳುತ್ತ ಎದ್ದು ನೀರನ್ನು ಮುಕ್ಕುಳಿಸಿ ನೀರಿನಿಂದ ಕಣ್ಣುಗಳನ್ನೊರಸಿಕೊಂಡು ಬೆಂಕಿಯಸಮೀಪಕ್ಕೆ ಹೋಗಿ ಮೈಯನ್ನು ಕಾಸಿಕೊಳ್ಳುತ್ತ ಕುಳಿತು ತೂಕಡಿಸುತ್ತಿದ್ದು ಬೆಂಕಿಯಹತ್ತಿರ ಕುಳಿತು ತೂಂಕಡಿಸುವುದಪಾಯವೆಂದು ಬಗೆದು ಎದ್ದು ಅತ್ತಿತ್ತ ಓಡಿಯಾಡ ತೊಡಗಿದನು ಆಗ ಮರಕ್ಕೆ ಹೊಂದಿಸಿಟ್ಟ ವಿಗ್ರಹವು ಅವನ ಕಣ್ಗಳಿಗೆ ಗೋಚರಿಸಿತು ಅವನಾಪ್ರತಿಮೆಯನ್ನು ಕಂಡು ಆಹಾ ! ವನದೇವತೆಯುಬಂದೀ ಮರದಡಿಯಲ್ಲಿ ಕುಳಿತಿರುವಳು ಎಂದು ಭಾವಿಸಿ ಭಯಪಟ್ಟು ದೇವೀಸ್ತವವನ್ನು ಮಾಡಲಿಕ್ಕೆ ಮೊದಲಿಟ್ಟನು ಎಷ್ಟುಹೊತ್ತಿನವರೆಗೆ ನೋಡಿದರೂ ಕೈಕಾಲುಗಳನ್ನಲುಗಿಸದೆ ಸ್ತಂಭೀಭೂತವಾಗಿರುವುದನ್ನು ನೋಡಿ ವೀತಭಯನಾಗಿ ಮೆಲ್ಲಮೆಲ್ಲನೆ ಸಮೀಪಕ್ಕೆ ಹೋಗಿನೋಡಲು ಅದು ದಾರುವಿಗ್ರಹವಾಗಿತ್ತು ಅವನುಪಟ್ಟ ಆಶ್ಚರ್ಯಕ್ಕೆ ಮೇರೆಯೇ ಇಲ್ಲ ಓಹೋ ! ಇದು ಚಿತ್ರಕುಶಲನ ಶಿಲ್ಪಚಾತುರ್ಯವಲ್ಲದೆ ಬೇರೆಯಲ್ಲ ಇಲ್ಲದಿದ್ದರೆ ನಾವು ಮಲಗುವುದಕ್ಕೆ ಮುಂಚೆ ಇಲ್ಲಿಲ್ಲದ ಈ ವಿಗ್ರಹವೆಲ್ಲಿಂದ ಬಂತು ? ಎಂದು ಬಗೆದುದಲ್ಲದೆ ಆಗಲಿ ! ಆ ತಕ್ಷಕನು ಮೆಚ್ಚುವಂತೆ ನಾನೂ ನನ್ನ ಕಲಾನೈಪುಣ್ಯವನ್ನು ತೋರುವೆನು ನನಗೂ ಮೂರುತಾಸುಗಳ ವಿರಾಮವುಂಟಲ್ಲವೆ ? ಎಂದಾಲೋಚಿಸಿ ಸರ್ವಸ್ತೋತ್ರಾರ್ಹವಾಗುವಂತೆ ತಾನದಕ್ಕೆ ಬಣ್ಣವನ್ನಿಟ್ಟನು. ಸತ್ಯಶೀಲನೇ ! ಏನು ಹೇಳಲಿ ? ಆ ಬಣ್ಣವು ದೇವತಾಸ್ತ್ರೀಯರ ಮೈಬಣ್ಣವನ್ನು ಹೋಲುತ್ತಿದ್ದುದರಿಂದ ದೂರದಿಂದ ನಿಂದು ನೋಡಿದರೆ ಯಾರೋ ಅಪ್ಸರಸ್ತ್ರೀಯೊಬ್ಬಳಿಲ್ಲಿ ಕುಳಿತಿರುವಳೆಂಬ ಭಾವನೆಯೇ ತೋರುವಹಾಗಿದ್ದಿತು ಹೀಗೆ ಚಿತ್ರಕಾರನು ಬಣ್ಣಿಸುವಷ್ಟರಲ್ಲಿ ತನ್ನ ಸರದಿಯು ಮುಗಿದುದರಿಂದ ಮೂರನೆಯವನಾದ ಸೆಟ್ಟಿಯನ್ನೆಬ್ಬಿಸಿ ಕಾವಲಿಟ್ಟು ತಾನು ಮಲಗಿ ಗಾಢನಿದ್ರಾಪರವಶನಾದನು. ಧರ್ಮಗುಪ್ತನೆದ್ದು ಸಂಪೂರ್ಣ ನಿದ್ರೆಯಿಲ್ಲದಿದ್ದುದರಿಂದ ಆಕಳಿಸುತ್ತ ಮೈಮುರಿಯುತ್ತ ಕಣ್ಗಳನ್ನುಜ್ಜುತ್ತ ಮುಖಪ್ರಕ್ಷಾಲನೆಯನ್ನು ಮಾಡಿಕೊಂಡು ಪಾದಚ್ಛಾಯೆಯನ್ನು ಹಾಕುತ್ತಿದ್ದು ಮರದಡಿಯಲ್ಲಿದ್ದ ತತ್ಪ್ರತಿಮೆಯನ್ನು ನೋಡಿ ಭಯಭ್ರಾಂತನಾಗಿ ಹೇಗೋ ಧೈರ್ಯಗೊಂಡು ಸಮೀಪಕ್ಕೆ ಹೋಗಿ ಪ್ರತಿಮೆಯೆಂದು ತಿಳಿದು ಅದಕ್ಕೆ ತನ್ನಲ್ಲಿದ್ದ ಅಮೂಲ್ಯ ವಸ್ತ್ರಾಭರಣಗಳನ್ನು ಧಾರಣಮಾಡಿದನು ಆವೇಳೆಗೆ ಅವನ ಸರದಿಯ ಯಾಮವು ಪೂರ್ಣವಾಯಿತು ಆದುದರಿಂದ ಅವನು ಪರಾಶರ ಭೂಸುರನನ್ನು ಎಚ್ಚರಗೊಳಿಸಿ ತಾನು ಮಲಗಿ ನಿದ್ರಿಸಿದನು.

ನಾಲ್ಕನೆಯ ಯಾಮದಲ್ಲಿ ಆ ವಿದ್ವದ್ವತಂಸನೆದ್ದು ನದಿಗೆಹೋಗಿ ಸ್ನಾನಾದಿಗಳನ್ನಾಚರಿಸಿ, ಬೆಂಕಿಯಬಳಿಯಲ್ಲಿ ಕುಳಿತು ಬೆಂಕಿಯನ್ನು ಕಾಸಿಕೊಳ್ಳುತ್ತಾ ತರುಮೂಲದಲ್ಲಿರುವ ವಿಗ್ರಹವನ್ನು ನೋಡಿ ಕಾಲವನ್ನು ಕಳೆವುದಕ್ಕೋಸುಗವಾಗಿ ತನ್ನ ಶಿಷ್ಯರು ತಮ್ಮತಮ್ಮ ಯಾಮಗಳಲ್ಲಿ ಮಾಡಿದ ಕೆಲಸವಿದೆಂದು ತಿಳಿದು, ಇದಕ್ಕೆ ತನ್ನಿಂದಾಗಬಹುದಾದ ಕೆಲಸವನ್ನು ತಾನು ಮಾಡಬೇಕೆಂದು ಬಗೆದು ತನ್ನ ಮನಸ್ಸಿನಲ್ಲಿ ಸಂಕಲ್ಪಿಸಿಕೊಂಡನು. ವಿಗ್ರಹವು ನಿಜವಾದ ಸ್ತ್ರೀಯಂತೆ ಗೋಚರಿಸುತ್ತಿದ್ದುದರಿಂದಲೂ ತಕ್ಕಸೊಬಗು ಅತ್ಯದ್ಭುತಕಾರಿಯಾಗಿದ್ದುದರಿಂದಲೂ, ಆ ಸೊಬಗಿಗೆ ತಕ್ಕಂತೆ ವಸ್ತ್ರಾಭರಣಗಳಿಂದ ಅಲಂಕರಿಸಲ್ಪಟ್ಟಿದ್ದುದರಿಂದಲೂ ಇದಕ್ಕೆ ಪ್ರಾಣಪ್ರತಿಷ್ಠೆಮಾಡಿ ಚೈತನ್ಯವನ್ನುಂಟು ಮಾಡಿದರೆ ಆ ಮರಗೆಲಸದವನು, ಆ ಚಿತ್ರಗಾರನು, ಆ ವೈಶ್ಯನು ಮಾಡಿದ ಕೆಲಸವು ಸಾರ್ಥಕವಾಗುವುದೆಂದು ಆ ಬ್ರಾಹ್ಮಣನಾಲೋಚಿಸಿದವನಾಗಿ ಹಸ್ತದಲ್ಲಿ ನೀರನ್ನು ತೆಗೆದುಕೊಂಡು ಪ್ರಾಣಪ್ರದವಾದ ಒಂದು ಮಂತ್ರವನ್ನುಚ್ಚರಿಸಿ ಆ ಪ್ರತಿಮೆಯ ಮೇಲೆ ಚೆಲ್ಲಿದೊಡನೆಯೇ ಆ ವಿಗ್ರಹವು ಚೆಲ್ವಿಕೆಯ ಗಣಿಯಾದ ರಮಣಿಯಾದಳು ಹಾಗೆ ಬ್ರಹ್ಮಸೃಷ್ಟಿಗೆ ಪ್ರತಿಸೃಷ್ಟಿಯೆನಿಸುವ ಆ ಯುವತಿಯು ಆ ವಿದ್ವದ್ವರೇಣ್ಯನಿಗೆ ನಮಸ್ಕಾರಮಾಡಿ ಸ್ವಾಮಿಾ ! ನನ್ನ ಕರ್ತವ್ಯವೇನಾದರೂ ಉಂಟೆ ? ಎಂದು ಕೇಳಿ ಆತನ ಅನುಮತಿಯನ್ನು ಪಡೆದು ಪಕ್ಕದಲ್ಲಿ ಕುಳಿತುಕೊಂಡು ಮಾತಾಡುತ್ತಿದ್ದಳು ಅಷ್ಟರಲ್ಲಿ ಸೂರ್ಯೋದಯವಾಯಿತು ಶಿಷ್ಯರೆದ್ದರು. ಅವರು ಪ್ರಾತಃಕಾಲದಕೃತ್ಯಗಳನ್ನು ಮುಗಿಸಿಕೊಂಡು ಬಂದು ಗುರುವಿನೊಡನೆ ಸಂಭಾಷಿಸುತ್ತ ಕುಳಿತಿರುವ ಈ ಸುಂದರಿಯಾರೆಂದಾಲೋಚಿಸತೊಡಗಿದರು ಮರಗೆಲಸದವನು ತಾನು ಹಿಂದಿನ ರಾತ್ರಿಯಲ್ಲಿ ಮಾಡಿಟ್ಟ ಪ್ರತಿಮೆಯನ್ನು ಸ್ಮರಿಸಿ ಹುಡುಕಲಾರಂಭಿಸಿದನು. ಕಲಾವಿಚಕ್ಷಣನು ಆ ಚಿತ್ರಕುಶಲನನ್ನು ಕಂಡು ಅವನು ಹಾಗೆ ಹುಡುಕುತ್ತಿರುವುದಕ್ಕೆ ಕಾರಣವನ್ನು ತಿಳಿದುಕೊಂಡು ಆ ಪ್ರತಿಮೆಗೆ ತಾನು ಬಣ್ಣವನ್ನು ತೊಡೆದೆನೆಂದು ಹೇಳಿ ತಾನುಕೂಡ ಆ ವಿಗ್ರಹಕ್ಕಾಗಿ ಹುಡುಕತೊಡಗಿದನು. ಧರ್ಮಗುಪ್ತನಾದರೋ ಆ ಪ್ರತಿಮೆಯು ಕಾಣದೆಹೋದುದರಿಂದ ಅವರಲ್ಲಲ್ಲಿ ಹುಡುಕಿತ್ತಿರುವರೆಂದು ತಿಳಿದು ಅಕಟಾ ! ನಾನು ಅಮೂಲ್ಯ ಒಡವೆಗಳನ್ನೂ ವಸ್ತ್ರಗಳನ್ನೂ ಇಟ್ಟಿದ್ದೆನಲ್ಲ ! ಅವೆಲ್ಲವೂ ಹೋಯಿತಲ್ಲಾ ! ಎಂದು ದುಃಖಿಸಿ ವಿಚಾರಿಸಲಾರಂಭಿಸಿದನು.

ಪರಾಶರ ಭಟ್ಟಾರಕನು ತನ್ನ ಶಿಷ್ಯರ ಅವಸ್ಥೆಯನ್ನು ಕಂಡು ಅಯ್ಯಾ ! ನೀವೇಕೆ ವ್ಯಥೆಪಡುತ್ತಿರುವಿರಿ ನನ್ನೊಡನೆ ಮಾತಾಡುತ್ತಿರುವ ಈ ಮುಗ್ಧೆಯೇ ಆ ಪ್ರತಿಮೆಯು ನಾನು ನಾಲ್ಕನೆಯ ಯಾಮದಲ್ಲಿ ನಿದ್ರೆಯಿಂದೆಚ್ಚತ್ತವನು ಸ್ನಾನಾದಿಕೃತ್ಯಗಳನ್ನು ತೀರಿಸಿಕೊಂಡುಬಂದು ಸಮಸ್ತ ವಸ್ತ್ರಾಭರಣಭೂಷಿತೆ

ಯಾದ ಈ ಪ್ರತಿಮೆಯನ್ನು ನೋಡಿ ಅದರ ಅಂದಚಂದಗಳಿಗೆ ಮೆಚ್ಚಿ ಪ್ರಾಣಪ್ರತಿಷ್ಠೆಯನ್ನು ಮಾಡಿ ನಿಜವಾದ ಸ್ತ್ರೀಯಾಗುವಂತೆ ಮಾಡಿದೆನು ಎಂದು ನುಡಿದು ಅವರನ್ನು ಸಂತೈಸಿದನು ಆ ಮಾತುಗಳನ್ನು ಕೇಳಿ ಆತನ ಶಿಷ್ಯರೆಲ್ಲರೂ ಅಪರಿಮಿತವಾದ ಆನಂದವನ್ನು ಪಡೆದರು ಸ್ವಲ್ಪಕಾಲದವರೆಗೆ ಅವರಲ್ಲಿ ಪರಸ್ಪರವಾಗಿ ಸಂತೋಷಸೂಚಕಗಳಾದ ಸಂಭಾಷಣೆಗಳೇ ನಡೆದುವು.

ಬಳಿಕ ಆ ಬಡಗಿ ಚಿತ್ರಕುಶಲನು ಹೀಗೆಂದಾಲೋಚಿಸಿದನು ಆಹಾ ! ಈ ನನ್ನ ಗುರುವು ನನಗೆಷ್ಟು ಮೋಸವನ್ನು ಮಾಡಿದನು ? ಈ ಸುಂದರೀಮಣಿಯ ಜನ್ಮಕ್ಕೆ ಕಾರಣಭೂತನು ನಾನೇ ಅಲ್ಲವೆ ? ಇದನ್ನರಿಯದೆ ಈತನು ಈ ಯುವತಿಯನ್ನು ತಾನೇ ಪರಿಗ್ರಹಿಸಲಿಚ್ಛೆಯುಳ್ಳವನಂತೆ ಕಾಣುತ್ತಿರುವನಲ್ಲ ! ಇದು ಧರ್ಮವೆ ? ಎಂದಾಲೋಚಿಸಿ ಕ್ಷುದ್ರಮಾನವನಾದುದರಿಂದ ಆ ಕಾಂತಾರತ್ನವನ್ನು ತನಗೆಯೇ ಕೊಡಬೇಕೆಂದು ಜಗಳವಾಡಿದನು ಚಿತ್ರಕಾರನು ನನಗೂ ಈ ಪ್ರತಿಮೆಯಲ್ಲಿ ಭಾಗವಿರುವುದೆಂದನು ಮತ್ತು ಈ ಪ್ರತಿಮೆಗೆ ನಾನು ಬಣ್ಣವನ್ನು ಹಾಕಿರುವೆನಾದುದರಿಂದ ಈ ಸ್ತ್ರೀಯು ನನ್ನವಳೆಂದು ವಿವಾದಮಾಡಿದನು ಅವರಿಬ್ಬರನ್ನೂ ನೋಡಿ ಧರ್ಮಗುಪ್ತನು ನಾನು ಸರ್ವಭೂಷಣ ಭೂಷಿತಳನ್ನಾಗಿ ಮಾಡಿರುವೆನು ಆದುದರಿಂದ ಅವರಿಬ್ಬರಿಗಿಂತಲೂ ನನಗೆ ಬಾಧ್ಯತೆಯು ಅಧಿಕವಾಗಿರುವುದು ನನಗೆಯೇ ಆ ಕಾಂತೆಯನ್ನು ಒಪ್ಪಿಸಬೇಕೆಂದು ಹೇಳಿದನು ತನ್ನ ಶಿಷ್ಯರೇ ಹೀಗೆ ಜಗಳವಾಡುತ್ತಿರುವುದನ್ನು ಆ ದ್ವಿಜೋತ್ತಮನು ನೋಡಿ ಆ ಮೂವರನ್ನೂ ಬಳಿಗೆ ಕರೆದು ನೀವೆಲ್ಲರೂ ಹೀಗೆ ಜಗಳವಾಡುವುದು ಉಚಿತವಲ್ಲ ಇಲ್ಲಿಗೆ ಸಮೀಪದಲ್ಲಿ ಒಬ್ಬ ನ್ಯಾಯಾಧಿಪತಿಯಿರುವನು ನಾವೆಲ್ಲರೂ ಅಲ್ಲಿಗೆ ಹೋಗೋಣ ಆತನು ಧರ್ಮಮೂರ್ತಿಯೇ ಹೊರತು ಬೇರೆಯಲ್ಲ ಆತನು ಮಾಡುವ ನಿರ್ಣಯದಪ್ರಕಾರವಾಗಿ ನಾವೆಲ್ಲರೂ ನಡೆಯುವ ಎಂದು ಹೇಳಿದನು ಎಲ್ಲರೂ ಆ ಮಾತನ್ನಂಗೀಕರಿಸಿದರು ಬಳಿಕ ಆ ನಾಲ್ವರೂ ಹೊರಟು ಆ ಗ್ರಾಮವನ್ನು ಸೇರಿ ನ್ಯಾಯಾಧಿಪತಿಯಲ್ಲಿ ಕಲಹಕಾರಣವನ್ನು ಬಿನ್ನವಿಸಿ ನಮ್ಮ ಕಲಹದಲ್ಲಿ ಧರ್ಮವನ್ನರಿತು ನ್ಯಾಯವನ್ನು ತೀರ್ಮಾನ ಮಾಡಬೇಕೆಂದು ಕೇಳಿಕೊಂಡರು.

ಆ ನ್ಯಾಯಾಧಿಪತಿಯು ಅವರ ವೃತ್ತಾಂತವನ್ನು ಸಾಂಗವಾಗಿ ಕೇಳಿ ತನಗೆತೋರಿದ ನ್ಯಾಯವನ್ನು ಈರೀತಿಯಾಗಿ ತಿಳಿಸಿದನು ಮರಗೆಲಸವನ್ನು ಮಾಡುವುದರಲ್ಲಿ ನಿಪುಣನಾದ ಈ ಚಿತ್ರಕುಶಲನು ದಾರುವಿಗ್ರಹವನ್ನು ಮಾಡದಿದ್ದರೆ ಆ ಕಾಂತಾಜನ್ಮಕ್ಕೆಯೇ ಅವಕಾಶವಿರುತ್ತಿರಲಿಲ್ಲ ಚಿತ್ರಕಾರನಾದ ಈ ಕಲಾವಿಚಕ್ಷಣನು ಅನುವಾಗಿ ಬಣ್ಣವನ್ನು ತೊಡೆಯದಿದ್ದರೆ ಆತನ್ನಿಗೆ ಆತನೂ ವಿಲಾಸವುಂಟಾಗುತ್ತಿರಲಿಲ್ಲ ವೈಶ್ಯಕುಲಮಣಿಯಾದ ಧರ್ಮಗುಪ್ತನದಕ್ಕೆ ವಸ್ತ್ರ

ಭೂಷಣಗಳನ್ನಿಟ್ಟು ಅಲಂಕರಿಸದೆ ಇದ್ದಿದ್ದರೆ ವಿನೋದಕ್ಕಾಗಿ ಎಲ್ಲರೂ ಆ ಪ್ರತಿಮೆಯನ್ನು ನೋಡಿ ಹೊರಟುಹೋಗುತ್ತಿದ್ದರು. ಹೀಗೆ ಈ ಮೂರುಮಂದಿಯೂ ಈ ಪ್ರತಿಮೆಯು ಸಜೀವವಾದುದೆಂಬ ಭ್ರಾಂತಿಯನ್ನುಂಟು ಮಾಡುವುದಕ್ಕೆ ಸಮವಾದ ಕಾರ್ಯಭಾರವನ್ನು ವಹಿಸಿರುವರು ಎಂದಾ ನ್ಯಾಯಾಧಿಪತಿಯು ಹೇಳಿದುದಲ್ಲದೆ ಆ ವಿಗ್ರಹದಲ್ಲಿ ಚೈತನ್ಯವನ್ನುಂಟು ಮಾಡಿದಬಗ್ಗೆ ಆ ಬ್ರಾಹ್ಮಣೋತ್ತಮನನ್ನು ಶ್ಲಾಘಿಸಿ ಪ್ರತಿಮೆಯೇ ಇಲ್ಲದಿದ್ದರೆ ಪ್ರಾಣಗಳನ್ನು ಕೊಡುವಷ್ಟು ಶಕ್ತಿಯುಳ್ಳವನಾಗಿದ್ದರೂ ಈ ಬ್ರಾಹ್ಮಣನು ತನ್ನ ಮಹಿಮೆಯನ್ನು ಯಾವುದರಲ್ಲಿ ಉಪಯೋಗಿಸುತ್ತಿದ್ದನು. ಆದುದರಿಂದ ಈ ಯುವತೀಮಣಿಯು ಬಾಧ್ಯತೆಯು ನಾಲ್ಕುಮಂದಿಗೂ ಉಂಟು ಆದರೆ ಒಬ್ಬ ಸ್ತ್ರೀಯನ್ನು ನಾಲ್ಕು ಮಂದಿ ಭೋಗಿಸುವುದೆಂದರೆ ಧರ್ಮವಿರುದ್ಧವಾಗಿರುವುದರಿಂದ ಅದು ಸಲ್ಲದು ಆದುದರಿಂದ ನಿಮ್ಮಲ್ಲಿ ಯಾರಿಗೂ ಈ ಯುವತಿಯು ತಕ್ಕವಳಲ್ಲ ಹೊಂದಲರ್ಹತೆಯೂ ಇಲ್ಲ ಯಾರಿಗೂ ಬಾಧ್ಯತೆಯಿಲ್ಲದ ವಸ್ತುವು ಯಾರಿಗೆ ಸೇರಬೇಕು? ಪಂಡಿತಾಗ್ರಣೀ! ನಿನಗೆ ತಿಳಿಯದೆ? "ರತ್ನಹಾರೀತುಪಾರ್ಥಿವಃ" ಎಂದು ಆದಕಾರಣದಿಂದ ಈ ಯುವತಿಯು ರಾಜನಿಗೆ ಸೇರಬೇಕಾದವಳು ಇವಳನ್ನು ರಾಜನಿಗೆ ನೀವೆಲ್ಲರೂ ಒಪ್ಪಿಸತಕ್ಕದು ಅದಾಗದಿದ್ದರೆ ನಾನು ಒಪ್ಪಿಸುವೆನು ನಿಮ್ಮನಿಮ್ಮ ದಾರಿಯಲ್ಲಿ ನೀವು ಹೋಗಿರೆಂದಾಜ್ಞಾಪಿಸಿದನು.

ಪರಾಶರ ಭಟ್ಟಾರಕನಿಗೆ ಕೋಪೋದ್ರೇಕವುಂಟಾಯಿತು ಒಡನೆಯೇ ಏನು? ನಾವು ರಾಜನಿಗೆ ಒಪ್ಪಿಸಬೇಕೆ? ಅದಾಗದಾಗದು ನೀವು ಒಪ್ಪಿಸುವಿರಾದರೆ ಹೇಗೆ ಒಪ್ಪಿಸುವಿರೋ ನೋಡುವೆನು! ಎಂದು ನುಡಿದು ಉದ್ವಾಪನ ಮಂತ್ರವನ್ನು ಉಚ್ಚರಿಸಿ ಮಂತ್ರೋದಕವನ್ನಾ ಕಾಂತೆಯಮೇಲೆ ಎರಚಿದನು ಆಗಲೆ ಆ ನಿತಂಬಿನಿಯು ಬೊಂಬೆಯಾದಳು. ಧರ್ಮಗುಪ್ತನು ಉಸಿರಿಲ್ಲದ ಆ ಪ್ರತಿಮೆಯನ್ನು ಕಂಡು ಕೂಡಲೆ ತಾನಿಟ್ಟಿದ್ದ ವಸ್ತ್ರಾಭರಣಗಳನ್ನು ಸುಲಿದುಕೊಂಡು ಪಲಾಯನವಾದನು ಉಳಿದುದೇನಿರುವುದು? ಬರಿಯ ದಾರುವಿಗ್ರಹವು ಮಾತ್ರವೇ ಚಿತ್ರಕುಶಲನೂ ಕಲಾವಿಚಕ್ಷಣನೂ ಬೆಪ್ಪುಮೋರೆಯನ್ನು ಹಾಕಿಕೊಂಡು ತಮ್ಮ ದುರ್ಬುದ್ಧಿಗೆ ತಕ್ಕಫಲವು ಪ್ರಾಪ್ತವಾಯಿತೆಂದು ಪಶ್ಚಾತ್ತಾಪಪಟ್ಟು ಮತ್ತೆ ಪರಾಶರ ಭಟ್ಟಾರಕನೊಡನೆ ಸೇರುವುದಕ್ಕೆ ಮುಖವಿಲ್ಲದೆ ತಮ್ಮತಮ್ಮ ದಾರಿಯನ್ನು ಹಿಡಿದರು ಕೇಳಿದೆಯಾ ಸತ್ಯಶೀಲನೇ? ನೀನು ನೋಡಿದ ಮರದ ಬೊಂಬೆಯು ಕಥೆಯಿದು ಎಂದು ತತ್ಪ್ರತಿಮಾ ವೃತ್ತಾಂತವನ್ನು ಸಾಂಗವಾಗಿ ತಿಳಿಯಿಸಿ ಚಿದಾನಂದನಾನಂದದಿಂದ ಆ ರಾತ್ರಿ ಶಿಷ್ಯನೊಡನಲ್ಲಿಯೇ ಮಲಗಿ ನಿದ್ರಿಸಿದನು.

ಇಂತು ಇಪ್ಪತ್ತಾರನೆಯ ಕಥೆ ಮುಗಿದುದು.



## —: ಇಪ್ಪತ್ತೇಳನೆಯ ದಿನದ ಕಥೆ :—

ಶ್ರೀಧಾಮ್ನಿದುಗ್ಧೋದಧಿ ಪುಂಡರೀಕೇ |
ಯಶ್ಚಂಚರೀಕ ಶ್ರಿಯಮಾತನೋತಿ |
ನೀಲೋತ್ಪಲ ಶ್ಯಾಮಲದೇಹಕಾಂತಿಂ |
ತಮಾದಿದೇವಂ ಭಗವಂತಮೀಡೇ ||

ಗುರುಶಿಷ್ಯರು ಉಷಃಕಾಲದಲ್ಲಿ ಎದ್ದು ಕಾಲೋಚಿತಕೃತ್ಯಗಳನ್ನು ಪೂರಯಿಸಿಕೊಂಡು ದಕ್ಷಿಣಾಭಿಮುಖವಾಗಿ ನಡೆಯುತ್ತಹೋಗಿ ಮಧ್ಯಾಹ್ನವಾಗುವ ವೇಳೆಗೆ ಒಂದು ಗ್ರಾಮವನ್ನು ಸೇರಿ ಒಂದು ಧರ್ಮಶಾಲೆಯಲ್ಲಿಳಿದರು ಸತ್ಯಶೀಲನು ಅಡಿಗೆಗೆ ಬೇಕಾದ ಸಾಮುಗ್ರಿಯನ್ನು ತರುವುದಕ್ಕಾಗಿ ಒಂದಂಗಡಿಗೆ ಹೋಗಲು ಗುರುವಿನಾಜ್ಞೆಯನ್ನು ಪಡೆದು ಹೊರಟನು. ಚಿದಾನಂದಯೋಗಿಯು ಮಾಧ್ಯಾಹ್ನಿಕಕೃತ್ಯಗಳನ್ನು ಮಾಡುವುದಕ್ಕಾಗಿ ಮತ್ತೆ ಸ್ನಾನವನ್ನುಮಾಡಿ ಸಂಧ್ಯೋಪಾಸನೆಯನ್ನು ನೆರವೇರಿಸಿ ಒಂದು ಸ್ಥಲದಲ್ಲಿ ಕುಳಿತು ಜಪವನ್ನು ಮಾಡಿಕೊಳ್ಳುತ್ತಿದ್ದನು. ಸತ್ಯಶೀಲನು ಆ ಗ್ರಾಮದಲ್ಲಿರುವ ವಿನೋದಸ್ಥಲಗಳನ್ನು ನೋಡಬೇಕೆಂಬ ಕುತೂಹಲದಿಂದ ಊರಿನಲ್ಲೆಲ್ಲ ಸುತ್ತಿದನು ಆಗ ಒಂದು ಮನೆಯಮುಂದೆ ಒಂದು ಸಮಾಧಿಯಿರುವುದನ್ನು ಕಂಡು ಅತ್ಯಾಶ್ಚರ್ಯಚಿತ್ತನಾಗಿ ಆಹ ! ಇದೇನಚ್ಚರಿ ? ಎಂತಹ ಮೂಢನಾದರೂ ಮನೆಯಮುಂದೆ ಗೋರಿಯನ್ನು ಮಾಡಿಕೊಳ್ಳುವುದುಂಟೆ ಎಂದಾಲೋಚಿಸಿದನು ಬಳಿಕ ಸಮಿಪಕ್ಕೆ ಹೋಗಿ ನೋಡಿ ಅಯ್ಯೋ ! ಇದೆಂತಹ ಸಮಾಧಿ ? ಸಂಪೂರ್ಣವಾಗಿ ಮುಚ್ಚಿಬಿಡದೆ ಇದರ ಒಂದುಕಡೆ ಒಂದು ರಂಧ್ರವನ್ನು ದೊಡ್ಡದಾಗಿ ಬಿಟ್ಟಿರುವರಲ್ಲ ! ಏನು ಕಾರಣವಿರಬಹುದು ಎಂದು ತನ್ನಲ್ಲಿ ವಿತರ್ಕಿಸಿಕೊಂಡು ಅಡಿಗೆಯನ್ನು ತ್ವರೆಯಾಗಿ ಮಾಡಬೇಕಾಗಿದ್ದುದರಿಂದ ಅಂಗಡಿಗೆ ಹೋಗಿ ಸಾಮುಗ್ರಿಯನ್ನು ಬೇಗನೆಕೊಂಡು ಹಿಂದಿರುಗಿ ಧರ್ಮಶಾಲೆಗೆ ಬಂದು ಅಡಿಗೆಯನ್ನು ಸಿದ್ಧಪಡಿಸಿ ಯೋಗೀಶ್ವರನು ತಪೋನಿರತನಾಗಿದ್ದುದರಿಂದ ಆತನ ಬಹಿರ್ಮುಖತೆಯನ್ನು ನಿರೀಕ್ಷಿಸುತ್ತ ಕುಳಿತಿದ್ದನು. ಆತನು ತಪೋನಿಯತಿಯನ್ನು ಸಾಕುಮಾಡಿದಬಳಿಕ ಗುರುವಿಗೆಬಡಿಸಿ ಆತನ ಭೋಜನವಾದ ತರುವಾಯ ತಾನೂಉಂಡು ಆತನಿಗೆ ನಮಸ್ಕಾರಮಾಡಿ ಕುಳಿತಿದ್ದನು. ಯೋಗೀಶ್ವರನು ಸತ್ಯಶೀಲನ ಮುಖವನ್ನು ನೋಡಿ ಆತನ ಇಂಗಿತವನ್ನರಿತು ಮುಗುಳುನಗೆಯಿಂದ ಆತನನ್ನು ಪ್ರಶ್ನೆ ಮಾಡಲು ಆತನು ತಾನು ನೋಡಿದ ಸಮಾಧಿಯ ವಿಚಾರವನ್ನೂ ತನಗುಂಟಾಗಿರುವ ಸಂದೇಹವನ್ನೂ ತಿಳಿಯಿಸಿ ತನ್ನ ಸಂಶಯವನ್ನು ಹೋಗಲಾಡಿಸಬೇಕೆಂದು ಪ್ರಾರ್ಥಿಸಲು ತತ್ಕಥಾ ವೃತ್ತಾಂತವನ್ನು ಮುಂದೆ ಹೇಳುವಂತೆ ಹೇಳಲುಪಕ್ರಮಿಸಿದನು.

## ಕಳ್ಳನು ಕಳ್ಳನನ್ನು ವಂಚಿಸಿದ ಕಥೆ.

ದಕ್ಷಿಣದೇಶದಲ್ಲಿ ತಂಜಾನಗರವೆಂಬೊಂದು ಪಟ್ಟಣವಿರುವುದು. ಆ ನಗರದಲ್ಲಿ ಬ್ರಾಹ್ಮಣಾದಿ ಸಮಸ್ತವರ್ಣದವರೂ ತತ್ತದ್ವರ್ಣೋಚಿತ ಧರ್ಮಗಳನ್ನು ಸ್ವಲ್ಪವೂ ಮೀರದೆ ಪರಿಪಾಲಿಸಿಕೊಂಡು ಬರುತ್ತಿರುವರು. ಸಮಸ್ತರೂ ಸಕಲೈಶ್ವರ್ಯ ಸಂಪನ್ನರಾಗಿಯೂ ಸಂತೋಷನಿಲಯರಾಗಿಯೂ ವರ್ತಿಸುತ್ತಿರುವರು. ಆಪತ್ತನವು ಸರ್ವವಿದ್ಯಾ ನಿಕೇತನವಾಗಿದ್ದಿತು. ಅರವತ್ತುನಾಲ್ಕು ವಿದ್ಯೆಗಳಲ್ಲಿಯೂ ಪಾರಮ್ಯವನ್ನು ಪಡೆದಿರುವ ಮಹಾತ್ಮರಾಪುಟಭೇದನದಲ್ಲಿರುವರೆಂದರೆ ಅತಿಶಯೋಕ್ತಿಯಾಗಲಾರದು. ಭೋಜರಾಜನ ಧಾರಾನಗರದಂತೆ ಆ ಪಟ್ಟದಲ್ಲಿ ಸಮಸ್ತವರ್ಣದವರೂ ವಿದ್ಯಾವಂತರಾಗಿದ್ದರು. ಚೋರತ್ವವು ಅರವತ್ತುನಾಲ್ಕುವಿದ್ಯೆಗಳಲ್ಲಿ ಒಂದಲ್ಲವೆ? ಅದನ್ನು ಒಬ್ಬನಭ್ಯಾಸಮಾಡಿ ತಸ್ಕರಶಿರೋಮಣಿ ಎಂಬ ಪಟ್ಟವನ್ನು ಪಡೆದಿದ್ದನು. ಅಂತಹ ಅಸಮಾನಪ್ರತಿಭೆಯು ಮತ್ತಾವ ಚೋರನಿಗೂ ಇರಲಿಲ್ಲ. ಹೀಗೆ ಅಪ್ರತಿಮ ಸಾಮರ್ಥ್ಯದಿಂದ ಶೋಭಿಸುವ ಇವನು ತನ್ನ ವಿದ್ಯೆಯಲ್ಲಿ ತನಗಿಂತಲೂ ಅಧಿಕನಾದವನು ಯಾವನಾದರೂ ಇರುವನೇ? ಎಂದು ಆಲೋಚಿಸಿ ವಿಚಾರಿಸತೊಡಗಿದನು. ಇವನ ಹೆಮ್ಮೆಯನ್ನು ಭಗ್ನಗೊಳಿಸುವುದಕ್ಕೋ ಎಂಬಂತೆ ಉತ್ತರದೇಶದಲ್ಲಿ ಜಂನಗರವೆಂಬ ಒಂದು ಪಟ್ಟಣದಲ್ಲಿ ಚೌರ್ಯಚತುರನೆಂಬೊಬ್ಬ ಬೇಡರೊಡೆಯನಿರುವನೆಂದು ತಿಳಿದು, ಅವನನ್ನು ನೋಡಲಿಚ್ಛೆಯುಳ್ಳವನಾಗಿ ಒಂದು ಕಾಗದವನ್ನು ಬರೆದು ಒಬ್ಬ ಭಟನಕೈಗೆ ಕೊಟ್ಟು ಜಂನಗರಕ್ಕೆ ಕಳುಹಿಸಿಕೊಟ್ಟನು. ಅವನು ಕೆಲವು ದಿನಗಳು ಪ್ರಯಾಣಮಾಡಿ ಜಂನಗರವನ್ನು ಸೇರಿ ಆಕಾಗದವನ್ನು ಚೌರ್ಯಚತುರನಿಗೆ ಕೊಟ್ಟನು. ಅವನು ಅದನ್ನು ಹೀಗೆ ಓದಿಕೊಂಡನು:—

ಸ್ವಸ್ತಿ ಶ್ರೀಯುತ ಚೌರ್ಯಚತುರನ ಸನ್ನಿಧಿಗೆ

ತಂಜಾನಗರದಲ್ಲಿರುವ ತಸ್ಕರಶಿರೋಮಣಿಯ ವಿಜ್ಞಾಪನೆಗಳು. ಉಭಯ ಕುಶಲ ಅನಂತರಂ, ಅಯ್ಯಾ! ನಿನ್ನ ವಿದ್ಯಾಬಲದಿಂದುಂಟಾಗಿರುವ ನಿನ್ನಕೀರ್ತಿಯು, ದಿಕ್ಕುದಿಕ್ಕುಗಳಲ್ಲಿಯೂ ವ್ಯಾಪಿಸಿರುವುದನ್ನು ಕೇಳಿ ಅತ್ಯಂತ ಸಂತೋಷದಿಂದ ನಿನ್ನನ್ನು ನೋಡಿ ನಲಿಯಬೇಕೆಂಬ ಅಭಿಪ್ರಾಯದಿಂದ ಈ ಯುವನಾಮ ಸಂವತ್ಸರ ಶ್ರಾವಣ ಶುದ್ಧ ೨ ನೆಯ ದಿನವೇ ಇಲ್ಲಿಂದ ಪ್ರಯಾಣಮಾಡಿರುತ್ತೇನೆ. ಮಳೆಗಾಲವಾದುದರಿಂದಲೂ ನಿನ್ನ ನಿವಾಸಸ್ಥಾನವು ಬಹು ದೂರವಾಗಿರುವುದರಿಂದಲೂ ನಾನಲ್ಲಿಗೆ ಸೇರಬೇಕಾದರೆ ಹೆಚ್ಚು ಕಡಿಮೆ ಹದಿನೈದು ದಿನಗಳಾಗಬಹುದು. ಅಂದರೆ ಗಣಪತಿಯ ಹಬ್ಬದಹೊತ್ತಿಗೆ ಬಂದು ಸೇರುವೆನೆಂದು ಭಾವಿಸುತ್ತೇನೆ. ಮನೆಯಲ್ಲಿ ಅತ್ತಿಗೆಯವರಿಗೆ ನನ್ನ ನಮಸ್ಕಾರಗಳನ್ನು ಹೇಳುವುದು.

ಬಳಿಕ ಚೌರ್ಯಚತುರನು ಮಹಾತ್ಮಾ! ನೀನು ನನ್ನ ಮನೆಗೆ ಅತಿಥಿಯಾಗಿ ಬರುವುದರಿಂದ ನನ್ನ ಮನೆಯು ಪವಿತ್ರವಾಯಿತು. ನಾನು ಧನ್ಯನಾದೆನು. ಇದು ನನ್ನ ಪೂರ್ವಜನ್ಮ ಸುಕೃತವು. ಗಣಪತಿಯ ಹಬ್ಬಕ್ಕೆ ನಿನ್ನ ಆಗಮನವನ್ನು ನಿರೀಕ್ಷಿಸುತ್ತಿದೇನೆ ಎಂದು ತಕ್ಕ ಮರ್ಯಾದಾ ಪುರಸ್ಸರವಾಗಿ ಪತ್ರವನ್ನು ಬರೆದು ಅದೇ ಭಟನವಶಕ್ಕೆ ಕೊಟ್ಟು ಕಳುಹಿದನು. ಅವನು ಅದನ್ನು ಆ ತಸ್ಕರಶಿರೋಮಣಿಗೆ ತಂದುಕೊಟ್ಟನು ಅವನು ಓದಿಕೊಂಡು ಸಂತೋಷಿಸಿದನು.

ಹೀಗೆ ಆಹ್ವಾನವನ್ನು ಪಡೆದ ತಂಜಾನಗರದ ಸ್ತೇನಪ್ರಮುಖನು ಪ್ರಯಾಣ ಮಾಡಿ ತಾನು ಮೊದಲು ಬರೆದಿದ್ದ ಪ್ರಕಾರ ಗಣಪತಿಯಹಬ್ಬಕ್ಕೆ ಸರಿಯಾಗಿ ಜಂನಗರವನ್ನು ಸೇರಿದನು. ಚೌರ್ಯಚತುರನು, ತಸ್ಕರಶಿರೋಮಣಿಯ ಆಗಮನವನ್ನು ಮೊದಲೆ ತಿಳಿದಿದ್ದುದರಿಂದ ಅದಕ್ಕೆ ಮೊದಲೆ ಎರಡು ಮೊಲಗಳನ್ನು ಸಂಪಾದಿಸಿ, ಒಂದನ್ನು ಪಾಕಶಾಲೆಯಲ್ಲಿ ಕಟ್ಟಿಹಾಕಿ ಆದಿನದಲ್ಲಿ ಮಾಡಬೇಕಾದ ಅಡಿಗೆಯ ವಿಚಾರವನ್ನು ತನ್ನ ಹೆಂಡತಿಗೆ ಹೇಳಿ ಇನ್ನೂ ಕೆಲವು ಯುಕ್ತಿಯುಕ್ತವಾದ ವಚನಗಳನ್ನು ಕೂಡ ಹೇಳಿ ತಸ್ಕರಶಿರೋಮಣಿಯನ್ನು ಇದಿರ್ಗೊಳ್ಳುವದಕ್ಕಾಗಿ ಮತ್ತೊಂದು ಮೊಲವನ್ನು ಕಂಕುಳಲ್ಲಿಟ್ಟುಕೊಂಡು ಅವನು ಬರುವ ಮಾರ್ಗದಲ್ಲಿ ತದಾಗಮವನ್ನು ನಿರೀಕ್ಷಿಸುತ್ತಿದ್ದನು. ಅವನು ತಾನು ಬರೆದಿದ್ದ ಹೊತ್ತಿಗೆ ಸರಿಯಾಗಿ ಬರಲಾಗಿ ಚೌರ್ಯಚತುರನು ಅವನಿಗೆ ಸ್ವಾಗತವನ್ನು ಕೊಟ್ಟು ಕಂಕುಳಲ್ಲಿದ್ದ ಮೊಲವನ್ನು ಹೊರಕ್ಕೆ ತೆಗೆದು, ಅದರೊಡನೆ ನದಿಆದಲ್ಲಿ ಮಾಡಬೇಕಾದ ಅಡಿಗೆಯ ವಿಧಾನವನ್ನು ಹೇಳಿ, ಹೋಗು ನನ್ನ ಹೆಂಡತಿಗೆ ಈ ನನ್ನ ಮಾತನ್ನು ಹೇಳು ಎಂದು ಅದನ್ನು ಕೆಳಕ್ಕೆ ಬಿಟ್ಟನು. ಒಡನೆಯೇ ಅದು ಕಣ್ಣಿಗೆ ಕಾಣದೆ ತನ್ನ ದಾರಿಯಿಂದ ಹೊರಟುಹೋಯಿತು. ಕಳ್ಳರಿಬ್ಬರೂ ಗ್ರಾಮದಲ್ಲಿ ಅಲ್ಲಲ್ಲಿರುವ ವಿನೋದಸ್ಥಳಗಳನ್ನು ನೋಡುತ್ತ ಭೋಜನಸಮಯಕ್ಕೆ ಸರಿಯಾಗಿ ಮನೆಗೆ ಹೋದರು. ಚೌರ್ಯಚತುರನು ತನ್ನ ಹೆಂಡತಿಯನ್ನು ನೋಡಿ, ಇಂದು ಯಾವ ಅಡಿಗೆಯನ್ನು ಮಾಡಿರುವೆ? ಎಂದು ಪ್ರಶ್ನೆಮಾಡಿದನು. ಅವಳು ಮೊಲವು ಹೇಳಿದಂತೆ ಎಲ್ಲ ಅಡಿಗೆಯನ್ನೂ ಸಿದ್ಧಗೊಳಿಸಿರುವೆನು. ಎಂದು ಉತ್ತರವನ್ನಿತ್ತಳು.

ತಸ್ಕರಶಿರೋಮಣಿಯು ಅವಳು ಹೇಳಿದ ಮಾತುಗಳನ್ನು ಕೇಳಿ, ತನಗಿದಿರಾಗಿ ಒಂದು ಮೊಲವು ಕಟ್ಟಲ್ಪಟ್ಟಿರುವುದನ್ನು ನೋಡಿ, ಆಹಾ! ಏನಿದು ವಿಚಿತ್ರವು! ಮೊಲವು ತನ್ನೊಡೆಯನು ಹೇಳಿದ ಮಾತುಗಳನ್ನು ಅವನ ಹೆಂಡತಿಗೆ ಹೇಳಿರುವುದಲ್ಲ! ಅವಳಾಮೇರೆಗೆ ಅಡಿಗೆಯನ್ನು ಸಿದ್ಧಪಡಿಸಿರುವಳಲ್ಲ! ಎಂದಾಶ್ಚರ್ಯಮಗ್ನನಾಗಿ ಆಮೊಲವನ್ನು ತನಗೆ ಕೊಡೆಂದು ಚೌರ್ಯಚತುರನನ್ನು

ಬೇಡಿಕೊಂಡನು. ಅವನು ತನ್ನ ಮನಸ್ಸಿನಲ್ಲಿ ಭಾಪು ! ಇವನು ನನ್ನ ಬಲೆಯಲ್ಲಿ ಬಿದ್ದನು. ಇನ್ನಿವನನ್ನು ಸುಲಭವಾಗಿ ಸೋಲಿಸುವೆನು ಎಂದಾಲೋಚಿಸಿ ಅತ್ಯಂತ ಸಂತೋಷವನ್ನುಹೊಂದಿ, ತನ್ನಮನಸ್ಸಿನ ಸ್ಥಿತಿಯನ್ನು ಹೊರಗೆಡಹದೆ ಆ ಮೊಲ ವನ್ನು ಕೊಡುವುದಕ್ಕಿಷ್ಟವಿಲ್ಲದವನಂತೆ ನಟಿಸುತ್ತ ಅವನನ್ನು ನೋಡಿ, ಅಣ್ಣಾ! ನಾನನೇಕ ಶ್ರಮಗಳಿಗೊಳಗಾಗಿ ಒಬ್ಬ ಸಿದ್ಧಪುರುಷನನ್ನಾಶ್ರಯಿಸಿ ಬಹುಕಾಲದ ವರೆಗೆ ಶುಶ್ರೂಷೆಮಾಡಿ ಈ ಮೊಲವನ್ನು ಸಂಪಾದಿಸಿರುವೆನು. ಇದಕ್ಕೆ ನಾಲ್ಕು ಸಾವಿರ ನಿಷ್ಕಗಳನ್ನು ಆತನಿಗೆ ಕೊಟ್ಟಿರುವೆನು. ಇದರ ಸಹಾಯದಿಂದಲೇ ನಾನು ಸಮಸ್ತ ಕಾರ್ಯಗಳನ್ನೂ ಸಾಧಿಸುತ್ತಿರುವೆನು, ಇಲ್ಲದಿದ್ದರೆ ನನ್ನ ಕಾರ್ಯ ಗಳೆಲ್ಲವೂ ಕೆಟ್ಟುಹೋಗುವುವು. ಪ್ರಾಣವನ್ನಾದರೂ ಕೊಡಬಲ್ಲೆನಲ್ಲದೆ ಇದನ್ನು ಮಾತ್ರ ಕೊಡಲಾರೆನು ಎಂದನು

ತಸ್ಕರಶಿರೋಮಣಿಯು ಅವನ ಮಾತುಗಳೆಲ್ಲ ಸತ್ಯವೆಂದು ನಂಬಿ ಅದನ್ನು ಹೇಗಾದರೂ ಪಡೆಯಬೇಕೆಂಬ ಮನಸ್ಸಿನಿಂದ, ಮಿತ್ರನೇ ! ನಾನಾ ನಾಲ್ಕು ಸಾವಿರ ನಿಷ್ಕಗಳನ್ನು ಕೊಡುವೆನು. ಅನುಗ್ರಹಿಸಿ ಇದನ್ನು ಕೊಟ್ಟುಬಿಡಬೇಕು. ಕೊಡುವುದೂ ತೆಗೆದುಕೊಳ್ಳುವುದೂ ಮೈತ್ರಿಯ ಧರ್ಮವಲ್ಲವೆ? ಎಂದು ಹಲವು ಬಗೆಯಿಂದ ಕೇಳಿಕೊಂಡನು. ಚೌರ್ಯಚತುರನು ಸ್ನೇಹಿತನ ಮನಸ್ಸನ್ನು ನೋಯಿಸುವುದಕ್ಕೆ ಇಷ್ಟವಿಲ್ಲದವನಂತೆ ನಟಿಸಿ ನಾಲ್ಕುಸಾವಿರ ನಿಷ್ಕಗಳನ್ನು ತೆಗೆದುಕೊಂಡು ಆ ಮೊಲವನ್ನು ಅವನಿಗೆ ಕೊಟ್ಟನು. ಊಟ ಉಪಚಾರಗಳಾ ದುವು ಮತ್ತೆ ಚೌರ್ಯಚತುರನು ಆ ಮೊಲವನ್ನು ಹಿಂದಕ್ಕೆ ಕೊಡಬೇಕೆಂದು ಕೇಳುವನೋ ಏನೋ ಎಂಬ ಹೆದರಿಕೆಯಿಂದ ತಸ್ಕರಶಿಖಾಮಣಿಯು ಆ ದಿನವೇ ಹೊರಟು ಕತಿಪಯ ದಿನಗಳಿಗೆ ತನ್ನ ಪಟ್ಟಣದ ಹೊಲವನ್ನು ಸೇರಿ, ಕಂಕುಳ ಲ್ಲಿದ್ದ ಮೊಲವನ್ನು ಕೆಳಕ್ಕೆ ಇಳಿಸಿ, ಎಲೈ ಮೊಲವೇ ! ನಾನು ಬಂದಿರುವೆನೆಂದೂ ಅಡಿಗೆಯನ್ನು ಸಿದ್ಧಗೊಳಿಸೆಂದೂ ನನ್ನ ಹೆಂಡತಿಯೊಡನೆ ಹೇಳು ಎಂದು ಮೊಲ ವನ್ನು ಬಿಟ್ಟನು ಅದು ನಿರ್ಬಂಧದಿಂದ ಬಿಡುಗಡೆಯನ್ನು ಪಡೆದುದಕ್ಕೆ ಸಂತೋ ಷಿಸಿ ಹಾರುತ್ತ ಓಡಿಹೋಗಿ ಕಾಡನ್ನು ಸೇರಿತು. ಪೂರ್ವಭಾವಿಯಾಗಿಯೇ ನನ್ನ ಆಗಮನವನ್ನು ತಿಳಿಸಿ ಅಡಿಗೆಮಾಡೆಂದು ನನ್ನ ಹೆಂಡತಿಯೊಡನೆ ಹೇಳುವು ದಕ್ಕೆ ಮೊಲವನ್ನು ಕಳುಹಿಸಿಕೊಟ್ಟೆನೆಂಬ ಧೈರ್ಯದಿಂದ ಅವನು ಊರಲ್ಲಿ ಸ್ನೇಹಿತರನ್ನು ವಿಚಾರಿಸುವುದಕ್ಕೆ ಹೋಗಿ ಊರಲ್ಲೆಲ್ಲ ತಿರುಗಿ ಸಾಯಂಕಾಲಕ್ಕೆ ಮನೆಗೆ ಹೋದನು ಮೊಲದಮೂಲಕ ಹೇಳಿಕಳುಹಿದಂತೆ ಪಾಕವನ್ನು ಸಿದ್ಧ ಗೊಳಿಸಿರುವೆಯಾ ? ಎಂದು ತನ್ನ ಹೆಂಡತಿಯನ್ನು ಕೇಳಿದನು.

ತನ್ನ ಗಂಡನು ಗ್ರಾಮದಲ್ಲಿಲ್ಲವೆಂದು ತಸ್ಕರಶಿರೋಮಣಿಯ ಹೆಂಡತಿಯು ತನಗೆಮಾತ್ರ ಅಡಿಗೆಮಾಡಿ ಉಂಡಿದ್ದ ಆ ತರುಣಿಯು ಮೊಲವನ್ನು ತನ್ನಲ್ಲಿಗೆ

ಕಳುಹಿಸಿಕೊಟ್ಟಂತೆಯೂ, ಅಂದಿನ ಅಡಿಗೆಯನ್ನು ಸಿದ್ಧಗೊಳಿಸಿರುವಂತೆ ಆ ಮೊಲದಮೂಲಕ ಹೇಳಿದ್ದಂತೆಯೂ ನುಡಿಯುತ್ತಿರುವ ತನ್ನ ಗಂಡನನ್ನು ನೋಡಿ ಇವನಿಗೆ ಹುಚ್ಚು ಹಿಡಿಯಿತೆಂದೂ ತನ್ನನ್ನು ಹೊಡೆವುದಕ್ಕೆ ಬರುವನೆಂದೂ ಭಾವಿಸಿ ಹುಣಿಸೆಯ ಕಟ್ಟಿಗೆಯೊಂದನ್ನು ತಂದು ಅವನಮೇಲೆ ಪ್ರಯೋಗಿಸಲು ಜ್ಞಾಗಿಸಲು ಆ ಚೋರಾಗ್ರಣಿಯು ತಾನು ಜಂನಗರದ ಕಳ್ಳನಿಂದ ಮೋಸಗೊಳಿಸಲ್ಪಟ್ಟೆನೆಂದು ತಿಳಿದು, ತನ್ನ ಹೆಂಡತಿಗೆ ಸಮಾಧಾನವನ್ನು ಹೇಳಿ ಊಟವನ್ನು ಮಾಡಿ ತನ್ನನ್ನಾಬಗೆಯಿಂದ ವಂಚಿಸಿದ ಚೌರ್ಯಚತುರನನ್ನು ಕೊಲ್ಲಲೇಬೇಕೆಂದು ನಿಶ್ಚಯಿಸಿ ಹರಿತವಾದ ಕತ್ತಿಯೊಂದನ್ನು ನಡುಕಟ್ಟಿನಲ್ಲಿಟ್ಟುಕೊಂಡು ಮತ್ತೆ ಪ್ರಯಾಣಮಾಡಿ ಕೆಲವು ದಿನಗಳಲ್ಲಿ ಜಂನಗರವನ್ನು ಸೇರಿದನು.

ಚೌರ್ಯಚತುರನು ತನ್ನಿಂದ ವಂಚಿತನಾದ ತಸ್ಕರಶಿರೋಮಣಿಯು ನನ್ನ ವಂಚನೆಯನ್ನು ತಿಳಿದುಕೊಂಡು ಮತ್ತೆ ಬರಲೇ ಬರುವನೆಂದೂ ಮತ್ತೊಂದು ಶಶವನ್ನು ಸಂಪಾದಿಸಿಟ್ಟು ಈಸಲವೂ ಅವನನ್ನು ವಂಚಿಸಬೇಕೆಂದು ಆಲೋಚಿಸಿ ಒಂದು ಚಕ್ಕಳದ ಚೀಲದಲ್ಲಿ ರಕ್ತವನ್ನು ತುಂಬಿ ರಹಸ್ಯವಾಗಿ ತನ್ನ ಅಂಗಿಯಲ್ಲಿ ಬಚ್ಚಿಟ್ಟುಕೊಂಡು ತನ್ನ ಹೆಂಡತಿಯನ್ನು ಕರೆದು ಮುಂದೆ ತಂಜಾನಗರದ ಕಳ್ಳನುಬಂದರೆ ಆಗ ಮಾಡಬೇಕಾದ ವಿಧಾನವನ್ನು ಚೆನ್ನಾಗಿ ಬೋಧಿಸಿ ಅವನ ಬರವನ್ನು ನಿರೀಕ್ಷಿಸುತ್ತಿದ್ದನು. ತಂಜಾನಗರದ ಚೋರವರ್ಯನು ಹಿಡಿಯಲಾರದಷ್ಟು ಕೋಪದಿಂದ ಕತ್ತಿಯನ್ನು ಝಳಿಪಿಸುತ್ತ ಉಗ್ರದೃಷ್ಟಿಯಿಂದ ಜಂನಗರದ ಕಳ್ಳನನ್ನು ನೋಡಿ ಎಲಾ ? ನರಾಧಮಾ ! ಸಮಾನಧರ್ಮವುಳ್ಳವನಾಗಿ ನಿನ್ನೊಡನೆ ಸ್ನೇಹದಿಂದಿರಬೇಕೆಂದು ಬಗೆದುಬಂದ ನನ್ನನ್ನು ವಂಚಿಸಿದೆಯಲ್ಲವೆ ? ಅದಕ್ಕೆ ತಕ್ಕ ಫಲವನ್ನು ಪಡೆ ಎಂದು ಕತ್ತಿಯನ್ನು ಹಿರಿದವನನ್ನು ಹೊಡೆಯಲಿಕ್ಕೆ ಹೋಗುವಷ್ಟರಲ್ಲಿ ಆ ಜಂನಗರದವನು ಅವನನ್ನು ಮುಗುಳುನಗೆಯಿಂದ ಸಂತೈಸುತ್ತ, ಅಣ್ಣಾ! ಕೋಪಕ್ಕೆ ಹೋದಮೂಗು ಶಾಂತಕ್ಕೆಬರುವುದೆ? ವಿಮರ್ಶೆಯಿಲ್ಲದೆ ದುಡುಕಬಾರದು ಸೈರಿಸು ! ಸೈರಿಸು !! ಕೇಳು ನಿನಗೆ ಕೊಟ್ಟ ಮೊಲವನ್ನು ನೀನು ಊರಿಗೆ ತೆಗೆದುಕೊಂಡು ಹೋಗದೆ ಗ್ರಾಮದ ಹೊಲಬಿನಲ್ಲಿ ಬಿಟ್ಟೆಯೆಂದೂ, ನಿನ್ನ ಹೆಂಡತಿ ಯಾವಳೋ ತನಗೆ ತಿಳಿಯಲಿಲ್ಲವೆಂದೂ ನಿನ್ನ ಗ್ರಾಮದಲ್ಲೆಲ್ಲ ಸುತ್ತಿಸುತ್ತಿ ಬಳಲಿಬಂದೆನೆಂದೂ ಅದೇ ನನ್ನೊಡನೆ ಹೇಳಿತು ಇಗೋ ನೋಡು ಅದಿಲ್ಲಿರುವುದು ಎಂದು ತೋರಿಸಿದನು. ನಿನಗಾದ ತೊಂದರೆಯಬಗ್ಗೆ ನನ್ನನ್ನು ಕ್ಷಮಿಸಬೇಕೆಂದು ಬೇಡಿಕೊಂಡನು ಮತ್ತೆ ಈ ಮೊಲವನ್ನು ತೆಗೆದುಕೊಂಡು ಹೋಗೆಂದು ಪ್ರಾರ್ಥಿಸಿದನು.

ಚೌರ್ಯಚತುರನು ತಂಜಾನಗರದವನನ್ನು ಹೀಗೆ ಶಾಂತಿಗೊಳಿಸಿ ಹೆಂಡತಿಯನ್ನು ಕರೆದು ನನ್ನ ಮಿತ್ರನಿಗೆ ಔತಣವನು ಮಾಡು ಎಂದು ಹೇಳಿದನು ಅವಳು

ಕೋಪೋದ್ರೇಕವನ್ನಭಿನಯಿಸಿ ಸರಿ ! ಸರಿ ! ದಿನದಿನಕ್ಕೊಬ್ಬೊಬ್ಬನನ್ನು ಕರೆದು ಕೊಂಡು ಬಂದು ಔತಣವನ್ನು ಮಾಡೆಂದರೆ ನಾನು ಮಾಡುವುದೇನು ? ನನ್ನಿಂದಾಗದು ಎಂದು ಮನಸ್ಸುಬಂದಹಾಗೆ ನಿಂದಿಸಿದಳು. ಆಗ ಅವನೂಕೂಡ ಬಹಳವಾಗಿ ಕೋಪಗೊಂಡವನಂತೆ ನಟಿಸಿ ಎಲೆ ರಂಡೆ ! ಹೇಳಿದ ಕೆಲಸವನ್ನುಮಾಡದೆ ಧಿಕ್ಕರಿಸಿ ಮಾತನಾಡುವೆಯಾ ? ಎಂದು ಕತ್ತಿಯೊಂದನ್ನು ತೆಗೆದುಕೊಂಡು ಹೋಗಿ ಅವಳ ಕುತ್ತಿಗೆಯನ್ನು ಕತ್ತರಿಸುವವನಂತೆ ತೋರ್ಪಡಿಸುತ್ತ, ರಹಸ್ಯವಾಗಿ ತನ್ನ ಅಂಗಿಯಲ್ಲಿ ಬಚ್ಚಿಟ್ಟದ್ದ ರಕ್ತದಚೀಲವನ್ನು ಅವಳ ಕುತ್ತಿಗೆಯ ಮೇಲಿಟ್ಟು ಕತ್ತಿಯಿಂದ ಅದನ್ನು ಸೀಳಿ ರಕ್ತಸಿಕ್ತಗಳಾದ ಹಸ್ತಗಳಿಂದ ಅಡಿಗೆಯ ಮನೆಯಿಂದ ಹೊರಕ್ಕೆ ಬಂದನು. ಆ ಹೆಂಗಸು ಸ್ವಲ್ಪಹೊತ್ತು ಕೈಕಾಲುಗಳನ್ನು ನೆಲಕ್ಕೆಬಡಿಯುತ್ತಲಿದ್ದು ಸತ್ತವಳಂತೆ ನಿಶ್ಚೇಷ್ಟಿತೆಯಾದಳು. ತಂಜಾನಗರದವನು ಅತ್ಯಾಶ್ಚರ್ಯಪಟ್ಟನು. ಅಲ್ಪಾಪರಾಧಕ್ಕಿಷ್ಟು ದೊಡ್ಡಶಿಕ್ಷೆಯೇ ಅಯ್ಯೋಪಾಪ! ಎಂದುಕೊಂಡನು. ಚೌರ್ಯಚತುರನು ಕೋಪವನ್ನು ಬಿಟ್ಟವನಂತೆ ನಟಿಸಿ ಅಡಿಗೆಯಮನೆಯ ಕಡೆ ನೋಡಿ ಗಯ್ಯಾಳಿಯಿವಳು ಏನುಮಾಡುವುದು ನನ್ನ ಹಣೆಯಬರಹವಿದು ಎಂದು ಗೊಣಗುತ್ತ ಕೊಟ್ಟಡಿಯೊಳಕ್ಕೆ ಹೋಗಿ ಒಂದು ದೊಣ್ಣೆಯನ್ನು ತಂದು ಅಡಿಗೆಯ ಮನೆಯನ್ನು ಹೊಕ್ಕು, ಆ ದೊಣ್ಣೆಯನ್ನವಳೆದೆಯ ಮೇಲಿಟ್ಟು ಏಳು ! ಏಳು !! ಎಂದೆರಡುಸಾರಿ ಹೇಳಿದನು. ಕೂಡಲೇ ಅವಳು ಆಗಳೆ ಚೇತರಿಸಿಕೊಂಡವಳಂತೆ ಎದ್ದು ರಕ್ತವನ್ನು ಒರಸಿಕೊಳ್ಳುತ್ತ ಮೆಲ್ಲಗೆ ಹೋಗಿ ಅಡಿಗೆಯ ಪ್ರಯತ್ನ ಮಾಡುವವಳಂತೆ ನಟಿಸಿದಳು. ತಸ್ಕರಶಿರೋಮಣಿಯು ಆ ಚರ್ಯೆಗಳೆಲ್ಲವನ್ನೂ ನೋಡಿ ಹೋದ ಪ್ರಾಣವನ್ನು ಬರಮಾಡಿದ ಆ ದೊಣ್ಣೆಯಮೇಲೆ ಆಸೆಯುಳ್ಳವನಾಗಿ ಅದನ್ನು ತನಗೆ ಕೊಡಬೇಕೆಂದು ಕೇಳಲಾಗಿ ಚೌರ್ಯಚತುರನದಕ್ಕೆ ಆರುಸಾವಿರ ನಿಷ್ಕಗಳನ್ನು ಕೊಟ್ಟರುವೆನೆಂದು ಹೇಳಿ ಆ ಮೊತ್ತವನ್ನು ಅವನಿಂದ ತೆಗೆದುಕೊಂಡು ಆ ದೊಣ್ಣೆಯನ್ನವನಿಗೆ ಕೊಟ್ಟನು. ಆ ದೊಣ್ಣೆಯನ್ನೂ ಮೊಲವನ್ನೂ ತೆಗೆದುಕೊಂಡು ಆ ಮಂದಮತಿ ತನ್ನ ಊರಿಗೆ ಹೋದನು. ಅವನು ತನ್ನ ಮನೆಯನ್ನು ಸೇರಿ ತನ್ನ ಹೆಂಡತಿಯನ್ನು ಕರೆದು ಆ ದಿನದಲ್ಲಿ ಮಾಡಬೇಕಾದ ಅಡಿಗೆಯನ್ನು ಅಸಂಖ್ಯಾಕವಾಗಿ ಹೇಳಲು ಅವಳಾವರೆಗೆ ಯಾವಯಾವ ಕೆಲಸಗಳನ್ನೋ ಮಾಡಿ ಬಳಲಿದ್ದುದರಿಂದ ನಾನಾ ಅಡಿಗೆಯನ್ನು ಮಾಡಲಾರೆನು. ಅನ್ನವನ್ನು ಮಾಡುವುದೇ ಎಷ್ಟೋ ಕಷ್ಟವಾಗಿರುವುದು. ಅದನ್ನೀಗ ನೀನೆ ಮಾಡಿಕೊ ಎಂದು ಗಟ್ಟಿಯಾಗಿ ನುಡಿದು ಜಗಳವಾಡಿ ಹೊರಕ್ಕೆ ಹೋಗುವಷ್ಟರಲ್ಲಿ ತಸ್ಕರಶಿರೋಮಣಿಯು ಅವಳ ಕೂದಲನ್ನು ಹಿಡಿದೆಳತಂದು ಒಂದು ಚೂರಿಯಿಂದ ಅವಳ ಕುತ್ತಿಗೆಯನ್ನು ಕುಯ್ದು ಬಿಟ್ಟನು. ರಕ್ತಪ್ರವಾಹವು ಮನೆಯಲ್ಲೆಲ್ಲ ಹರಿಯಿತು. ಸ್ವಲ್ಪಹೊತ್ತಿನ ಮೇಲೆ

ಪಶ್ಚಾತ್ತಾಪವನ್ನು ಹೊಂದಿ ಜಂನಗರದ ಕಳ್ಳನು ಕೊಟ್ಟಿದ್ದ ದಂಡವನ್ನು ತಂದು ಅವಳ ಎದೆಯಮೇಲಿಟ್ಟು ಅವನ ಮಾತಿನಂತೆ ಏಳು! ಏಳು!! ಎಂದನು ಸತ್ತವ ಳೇಳುವಳೆ? ಅವಳೇಳಲಿಲ್ಲ. ಬಳಿಕ ಅವಳು ಸತ್ತಳೆಂದು ತಿಳಿದು ಬಹಳವಾಗಿ ದುಃಖಿಸಿ ಜಂನಗರದ ಆ ದುಷ್ಟಚೋರನನ್ನು ಕೊಂದಲ್ಲದೆ ಹಿಂದಕ್ಕೆ ಬರುವುದಿಲ್ಲ ವೆಂದು ಶಪಥವನ್ನುಮಾಡಿ ಬಲುಬೇಗನೆ ಹೊರಟು ಎಂಟು ದಿನಗಳಲ್ಲಿಯೇ ಅವನ ಊರನ್ನು ಸೇರಿದನು.

ಚೌರ್ಯಚತುರನು ಬಹುಬುದ್ಧಿವಂತನಾದುದರಿಂದ ನನ್ನಿಂದ ಎರಡು ಸಾರಿ ಮೋಸಹೋದ ತಸ್ಕರಶಿರೋಮಣಿ ಇಂದೋ ನಾಳೆಯೋ ಬಂದುಬಿಡು ವನು ನನ್ನನ್ನು ಕಂಡರೆ ಕೊಂದೇಹಾಕುವನು, ಸಂಶಯವಿಲ್ಲ ಎಂದಾಲೋಚಿಸಿ ಪೂರ್ವಭಾವಿಯಾಗಿಯೇ ಮನೆಯಮುಂದೆ ಒಂದು ಸಮಾಧಿಯನ್ನು ಕಟ್ಟಿಸಿ ಅದ ರೊಳಗೆ ತಾನು ಕುಳಿತುಕೊಂಡು ಉಸಿರಾಡುವುದಕ್ಕಾಗಿ ಒಂದು ಪಕ್ಕದಲ್ಲಿ ರಂಧ್ರವೊಂದನ್ನು ದೊಡ್ಡದಾಗಿ ಬಿಟ್ಟು ಹೆಂಡತಿಯನ್ನು ಕರೆದು ಇದೊ ಕೇಳು, ತಂಜಾನಗರದ ಕಳ್ಳನು ಇಂದೋ ನಾಳೆಯೋ ಬರುವನು. ಅವನ ಮುಖವನ್ನು ನೋಡುತ್ತಲೇ ಅಳುವುದಕ್ಕೆ ಪ್ರಾರಂಭಮಾಡು. ಏತಕ್ಕೆ ರೋದಿಸುವೆಯೆಂದು ಪ್ರಶ್ನೆಮಾಡಿದರೆ ಅಯ್ಯೋ! ನೀನು ನಿನ್ನ ಗ್ರಾಮದದಾರಿ ಹಿಡಿಯುತ್ತಲೇ ನನ್ನ ಗಂಡನು ಸತ್ತುಹೋದನು. ಇಗೋ! ದೂರಕ್ಕೆ ಸಾಗಿಸುವುದಕ್ಕೆ ಅವಕಾಶವಿಲ್ಲ ದಿದ್ದುದರಿಂದ ಮನೆಯಮುಂದೆಯೇ ಸಮಾಧಿಯನ್ನು ಮಾಡಿದುದಾಯಿತು. ಅನಾಥಳಾದೆನು ಎಂದು ಹೇಳುತ್ತ ಅಳು ಎಂದು ಹೇಳಿ ತಾನಾ ಸಮಾಧಿಯ ಲ್ಲಿಯೇ ಇದ್ದು ಆ ರಂಧ್ರದಿಂದ ಆಹಾರವನ್ನು ತೆಗೆದುಕೊಳ್ಳುತ್ತಿದ್ದನು.

ಆ ಚೋರಾಗ್ರಣಿಯು ಆಗ್ರಹೋದಗ್ರನಾಗಿ ಬಂದೊಡನೆಯೇ ತನ್ನ ಗಂಡನ ಉಪದೇಶದಂತೆ ಹೋ! ಎಂದಳಲಾರಂಭಿಸಿದಳು. ತನ್ನ ಗಂಡನು ಸತ್ತ ನೆಂದು ಬಿಕ್ಕಿಬಿಕ್ಕಿ ರೋದಿಸಿದಳು. ಅನಾಥಳಾದೆನೆಂದು ಸಂಕಟಪಟ್ಟಳು. ಬೇಕಾದಷ್ಟು ಚೇಷ್ಟೆಗಳನ್ನು ಮಾಡಿದಳು. ಬಂದಿದ್ದ ಚೋರನು ನಿಜವೆಂದು ನಂಬಿ ಕೋಪವನ್ನು ಬಿಟ್ಟು ತನ್ನಲ್ಲಿ ಹೇಗೂ ಸತ್ತಿರುವನಲ್ಲವೆ? ನಾನಿನ್ನು ಮಾಡು ವುದೇನು? ಎಂದು ಬಗೆದು ತಂಜಾನಗರಕ್ಕೆ ಹೊರಟುಹೋದನು. ಚೌರ್ಯಚ ತುರನಾದರೋ ತಾನಾ ಜಂನಗರದಲ್ಲಿರುವುದಪಾಯಕರವೆಂದು ಆಲೋಚಿಸಿ ತನ್ನ ಹೆಂಡತಿಮಕ್ಕಳೊಡನೆ ಕಾಶೀಪಟ್ಟಣಕ್ಕೆ ಹೊರಟುಹೋದನು.

ಸತ್ಯಶೀಲನೇ ಕೇಳಿದೆಯಾ ರಂಧ್ರಸಮಾಧಿ ವೃತ್ತಾಂತವನ್ನು? ಕಳ್ಳನಿಗೆ ಕಳ್ಳನಲ್ಲವೆ ಜಂನಗರದ ಕಳ್ಳನು? ಹೀಗೆಯೇ ಎಲ್ಲ ವಿಷಯಗಳಲ್ಲಿಯೂ ಒಬ್ಬರಿ ಗಿಂತಲೂ ಮತ್ತೊಬ್ಬರು ಅಧಿಕರಾಗಿಯೇ ಇರುವರು. ಪ್ರಪಂಚದಲ್ಲಿ ನಾನೇ ಅಧಿಕನೆಂದು ಗರ್ವಪಡಬಾರದು ಎಂದಾ ಚಿದಾನಂದನನು ಹೇಳಿ ಶಿಷ್ಯನನ್ನು

ಸಂತೋಷಗೊಳಿಸಿದನು. ಆದಿನದ ರಾತ್ರಿ ಗುರುಶಿಷ್ಯರು ಆ ಧರ್ಮಶಾಲೆಯಲ್ಲಿಯೇ ಮಲಗಿ ನಿದ್ರಿಸಿದರು.

ಇಂತು ಇಪ್ಪತ್ತೇಳನೆಯ ಕಥೆ ಮುಗಿದುದು.



## —: ಇಪ್ಪತ್ತೆಂಟನೆಯ ದಿನದ ಕಥೆ :—

ಮಂಗಲಾಯತನಾಲೋಕ ಮಂಗಲಾನಾಥವಂದಿತ |
ಮಂಗಲಂದೇಹಿಲೋಕಾನಾ ಮಂಗಲಂಬಿತಕೌಸ್ತುಭ ||

ಚಿದಾನಂದ ಸತ್ಯಶೀಲರು ಉದಯದಲ್ಲೆದ್ದು ಪ್ರಾತಃಕಾಲೋಚಿತ ನಿತ್ಯಕರ್ಮಗಳನ್ನು ಮುಗಿಸಿದರು. ಬಳಿಕ ಚಿದಾನಂದಮುನಿಯು ಸತ್ಯಶೀಲನನ್ನು ಕಂಡು, ವತ್ಸ! ಸತ್ಯಶೀಲ! ರಾಮೇಶ್ವರಕ್ಷೇತ್ರವು ಸಮಿಾಪಿಸಿತು. ನಾವಿನ್ನು ಪ್ರಯಾಣಮಾಡುವ ಎಂದು ನುಡಿದು ದಂಡಕಮಂಡಲುಗಳನ್ನು ತೆಗೆದುಕೊಂಡು ಶಿಷ್ಯನೊಡನೆ ಪ್ರಯಾಣಮಾದನು. ದಾರಿಯಿಂದ ನಡೆಯುತ್ತ ಸತ್ಯಶೀಲನು ತನ್ನ ಗುರುವನ್ನು ನೋಡಿ, ಸ್ವಾಮಿಾ! ರಾಮೇಶ್ವರಕ್ಷೇತ್ರದಲ್ಲಿ ಯಾವಯಾವ ತೀರ್ಥಗಳಿರುವುವು ದಯಮಾಡಿ ಹೇಳಬೇಕು ಎಂದು ಕೇಳಲು ಯೋಗೀಶ್ವರನು ಹೀಗೆ ಹೇಳಿದನು.

ಕುಮಾರ! ಲಾಲಿಸು, ದೇವೀಪಟ್ಟಣವೆಂಬ ನವಪಾಷಾಣತೀರ್ಥವೂ, ದರ್ಭಶಯನ (ತಿರುಪುಲ್ಲಾಣಿ) ದಲ್ಲಿ ಚಕ್ರತೀರ್ಥವೂ ಪರಮಪಾವನವಾದುವು. ಅಲ್ಲಿ ಪದ್ಮಾವತೀ ಸಮೇತನಾದ ಜಗನ್ನಾಥಸ್ವಾಮಿಯೂ, ದರ್ಭಶಯನದಲ್ಲಿ ಶ್ರೀರಾಮರೂ ಬಿಜಯಮಾಡಿರುವರು. ಆ ತೀರ್ಥಗಳಲ್ಲಿ ಮಿಂದಬಳಿಕ ಅವರನ್ನು ದರ್ಶಿಸಿ ಪೂಜೋಪಚಾರಗಳನ್ನು ಸಮರ್ಪಿಸಬೇಕು. ಉತ್ತರಕೋಶ ಗಂಗಾವರುಣತೀರ್ಥವು, ಮಾರ್ಗದಲ್ಲಿ ಕ್ಷೀರತೀರ್ಥವು, ಭೇತಾಳತೀರ್ಥವು, ವೆತ್ತಿಲಮಂಟಪದಲ್ಲಿ ಪಾಪನಾಶನೀತೀರ್ಥವು, ಪಾಂಬನದಲ್ಲಿ ಭೈರವತೀರ್ಥವು, ಕಪಿತೀರ್ಥವು, ಸೀತಾತೀರ್ಥವು, ಮಂಗಳತೀರ್ಥವು, ಋಣಮೋಚನತೀರ್ಥವು, ಏಕಾಂತರಾಮಸ್ವಾಮಿ ಸನ್ನಿಧಿಯಲ್ಲಿ ಅಮೃತವಾಪೀತೀರ್ಥವು. ರಾಮೇಶ್ವರದಲ್ಲಿ ಲಕ್ಷ್ಮಣತೀರ್ಥವು, ರಾಮನಾಥಸ್ವಾಮಿಯ ಆಲಯದಲ್ಲಿ ಮಾಧವತೀರ್ಥ, ನಲತೀರ್ಥ, ನೀಲತೀರ್ಥ, ಗವಯತೀರ್ಥ, ಗವಾಕ್ಷತೀರ್ಥ, ಗಂಧಮಾದನತೀರ್ಥ, ಅಗ್ನಿತೀರ್ಥ, ಅಗಸ್ತ್ಯತೀರ್ಥ, ಮಹಾಲಕ್ಷ್ಮೀತೀರ್ಥ, ಗಾಯತ್ರೀತೀರ್ಥ, ಸಾವಿತ್ರೀತೀರ್ಥ, ಸರಸ್ವತೀತೀರ್ಥ, ಚಕ್ರತೀರ್ಥ, ಶಿವತೀರ್ಥ, ಸಾಧ್ಯಾಮೃತತೀರ್ಥ, ಶಂಖತೀರ್ಥ, ಗಯಾತೀರ್ಥ, ಗಂಗಾತೀರ್ಥ, ಯಮುನಾತೀರ್ಥ, ಸೂರ್ಯತೀರ್ಥ, ಚಂದ್ರತೀರ್ಥ, ಬ್ರಹ್ಮಹತ್ಯಾವಿಮೋಚನತೀರ್ಥ, ಸರ್ವತೀರ್ಥ, ಜಟಾತೀರ್ಥ, ರಾಮತೀರ್ಥ, ಸುಗ್ರೀವತೀರ್ಥ, ಅಂಗದತೀರ್ಥ, ಜಾಂಬವತೀರ್ಥ,

ಧರ್ಮತೀರ್ಥ, ಭೀಮತೀರ್ಥ, ಅರ್ಜುನತೀರ್ಥ, ನಕುಲತೀರ್ಥ, ಸಹದೇವ ತೀರ್ಥ, ಬ್ರಹ್ಮತೀರ್ಥ, ದ್ರೌಪದೀತೀರ್ಥ, ಹನುಮತೀರ್ಥ ಮೊದಲಾದ ಅಸಂಖ್ಯಾಕ ತೀರ್ಥಗಳುಂಟು. ಇದಲ್ಲದೆ ಶ್ರೀರಾಮ ಧನುಷ್ಕೋಟಿಯಲ್ಲಿ ರತ್ನಾಕರ ಮಹೋದಧಿ ಸಂಗಮದಲ್ಲಿ ಸೇತುತೀರ್ಥವುಂಟು.

ಯಾತ್ರಿಕರು ಮೇಲೆಹೇಳಿದ ಸರ್ವತೀರ್ಥಗಳಲ್ಲಿ ಸ್ನಾನಗಳನ್ನು ಮಾಡಿ ಆಯಾ ತೀರ್ಥಗಳಲ್ಲಿ ತೀರ್ಥಶ್ರಾದ್ಧಾದಿಗಳನ್ನು ಭಕ್ತಿಪೂರ್ವಕವಾಗಿ ಮಾಡಿ ಪರ್ವತವರ್ಧನ್ಯಂಬಾಸಮೇತನಾದ ಶ್ರೀ ರಾಮನಾಥಸ್ವಾಮಿಯನ್ನು ಸಂದರ್ಶಿಸಿ ಗಂಗಾಭಿಷೇಕವನ್ನು ಮಾಡಿಸಬೇಕು. ಹಾಗೆ ಮಾಡುವವರಿಗೆ ಇಹಲೋಕದಲ್ಲಿ ಪುತ್ರಪೌತ್ರಾದಿಸಂಪದವುಂಟಾಗುವುದಲ್ಲದೆ ಪರದಲ್ಲಿ ಕೈವಲ್ಯಸಿದ್ಧಿಯುಂಟಾಗುವುದರಲ್ಲಿ ಸಂದೇಹವೆಳ್ಳಷ್ಟಾದರೂ ಇಲ್ಲ. ಸತ್ಯಶೀಲನೇ! ಈ ತೀರ್ಥಗಳ ಮಾಹಾತ್ಮ್ಯವೂ, ಸಾಗರ ಮಾಹಾತ್ಮ್ಯವೂ ಸೇತುಪುರಾಣದಲ್ಲಿ ಚೆನ್ನಾಗಿ ಹೇಳಲ್ಪಟ್ಟಿರುವುವು. ಸೇತುದರ್ಶನ ಫಲವು ಪುರಾಣದಲ್ಲಿ "ರಾವೇಣ ಯತ್ಕೃತಾ ರೇಖಾ ಧನುಷಾ ಕ್ಷಾರಸಾಗರೇ ॥ ಮುಕ್ತಿಸ್ತದ್ದರ್ಶನಾದೇವ ನಜಾನೇ ಸ್ನಾನಜಂ ಫಲಂ ॥ ರಾಮಚಂದ್ರ ಧನುಷ್ಕೋಟ್ಯಾ ಕೃತಾಂರೇಖಾಂ ತು ಪಶ್ಯತಿ ॥ ಅನೇನ ಕ್ಲೇಶನಿರ್ಮಗ್ನಂ ಗರ್ಭವಾಸಂ ನಪಶ್ಯತಿ ॥" ಶ್ರೀರಾಮನಿಂದ ಲವಣೋದಧಿಯಲ್ಲಿ ಮಾಡಲ್ಪಟ್ಟಿರುವ ಧನುಸ್ಸಿನ ರೇಖೆಯನ್ನು ನೋಡಿದಮಾತ್ರದಿಂದಲೇ ಮುಕ್ತಿಯು ಲಭಿಸುವುದು ಸ್ನಾನಮಾಡಿದರೆ ಯಾವ ಫಲವುಂಟೋ ಅದನ್ನು ತಿಳಿಯಲಾಗದು, ಯಾವನು ರಾಮಚಂದ್ರಮೂರ್ತಿಯ ಧನುಸ್ಸಿನ ಕೊನೆಯಿಂದ ರಚಿಸಲ್ಪಟ್ಟಿರುವ ರೇಖೆಯನ್ನು ದರ್ಶಿಸುವನೋ ಅವನಿಗೆ ಗರ್ಭವಾಸದುಃಖವು ಪ್ರಾಪ್ತವಾಗುವುದಿಲ್ಲ ಎಂದು ಹೇಳಲ್ಪಟ್ಟಿರುವುದು ಮತ್ತು "ಗಣ್ಯಂತೇಪಾಂಸವೋಭೂಮೌ ಗಣ್ಯನ್ತೇರವಿತಾರಕಾಃ । ಸೇತುದರ್ಶನಜಂಪುಣ್ಯಂ ಶೇಷೇಣಾಪಿನ ಗಣ್ಯತೇ ॥" ಭೂಮಿಯಲ್ಲಿರುವ ಮಳಲಿನ ರೇಣುಗಳನ್ನಾದರೂ ಆಗಸದಲ್ಲಿರುವ ನಕ್ಷತ್ರಗಳನ್ನಾದರೂ ಲೆಕ್ಕಿಸಬಹುದು ಸೇತುದರ್ಶನದಿಂದುಂಟಾಗುವ ಪುಣ್ಯವನ್ನು ಶೇಷನಿಂದಲೂ ಲೆಕ್ಕಿಸಲಾಗದು ಎಂದು ಹೇಳಲ್ಪಟ್ಟಿದೆ ಎಂದಿಂತು ಮಾತಾಡಿಕೊಂಡು ಬರುತ್ತಿರುವಷ್ಟರಲ್ಲಿ ರಾಮೇಶ್ವರವು ಸಮೀಪಿಸಿತು.

ಯಾವುದು ದಕ್ಷಿಣದೇಶದ ಪುಣ್ಯಕ್ಷೇತ್ರಗಳಲ್ಲಿ ಪ್ರಧಾನವಾದುದೋ ರಾಮಲಿಂಗೇಶ್ವರನನ್ನು ದರ್ಶಿಸಿ ಎಲ್ಲಪಾಪಗಳನ್ನೂ ಎಲ್ಲಿ ಕಳೆದುಕೊಳ್ಳುವರೋ ಯಾವ ಯಾತ್ರೆಯನ್ನು ಮಾಡಿದವರಿಗೆ ಧರ್ಮಾರ್ಥ ಕಾಮಮೋಕ್ಷಗಳೆಂಬ ಪುರುಷಾರ್ಥಗಳು ಕರಬದರ ಸದೃಶಗಳೋ, ಅಂತಪ್ಪ ರಾಮೇಶ್ವರಕ್ಷೇತ್ರವನ್ನು ಪ್ರವೇಶಿಸಿ ಲಕ್ಷ್ಮಣತೀರ್ಥದಲ್ಲಿ ಸ್ನಾನಮಾಡಿ ಆಹ್ನಿಕಕ್ರಿಯೆಗಳನ್ನು ನಿರ್ವರ್ತಿಸಿ, ಸಮಸ್ತ ತೀರ್ಥಗಳಲ್ಲಿಯೂ ಮಿಂದು ಯಥೋಚಿತ ತೀರ್ಥಶ್ರಾದ್ಧಗಳನ್ನು ಮಾಡಿ ತಾವು

ತಂದಿರುವ ಗಂಗಾತೀರ್ಥವನ್ನು ತೆಗೆದುಕೊಂಡು ರಾಮಲಿಂಗೇಶ್ವರ ದೇವಾಲಯಕ್ಕೆ ಹೋಗಿ ಪ್ರದಕ್ಷಿಣಪೂರ್ವಕವಾಗಿ ಪ್ರಾಕಾರವನ್ನು ಪ್ರವೇಶಿಸಿ ವಿನಾಯಕ, ಚಂಡೀಶ್ವರ, ನಂದೀಶ್ವರ, ಭೃಂಗೀಶ್ವರಾದಿ ಪ್ರಮಥರನ್ನು ಸಂದರ್ಶಿಸಿ ನಮಸ್ಕಾರವನ್ನು ಮಾಡಿ, ದೇವಾಲಯವನ್ನು ಪ್ರವೇಶಿಸಿ ಪರಮಪಾವನ ಲಿಂಗಮೂರ್ತಿಯಾಗಿ ಕಣ್ಮನಂಗಳ್ಗೆ ಅನಿರ್ವಾಚ್ಯವಾದ ಆನಂದವನ್ನು ಬೀರುತ್ತಿರುವ ರಾಮಲಿಂಗಸ್ವಾಮಿಗೆ ಪಾವನವಾದ ಗಂಗಾತೋಯದಿಂದ ಅಭಿಷೇಕವನ್ನು ಮಾಡಿ, ಭಯಭಕ್ತಿಗಳತಿಶಯಿಸುತ್ತಿರಲು ಷೋಡಶೋಪಚಾರ ಪೂಜೆಗಳನ್ನು ಗೈದು ಬಗೆಬಗೆಯಿಂದ ಸ್ತುತಿಸಿ, ಅರ್ಚಕರಿತ್ತ ತೀರ್ಥಪ್ರಸಾದಗಳನ್ನು ಸ್ವೀಕರಿಸಿ ಆ ದಿನವನ್ನು ಫಲಾಹಾರವಿಹಾರಗಳಿಂದ ಕಳೆದು, ಆ ಮಹಾಕ್ಷೇತ್ರದ ಮತ್ತು ದೇವಾಲಯ ಮಂಟಪಪ್ರಾಕಾರ ಗೋಪುರಾದಿಗಳ ವಿಶೇಷಗಳನ್ನೂ ಮಹಿಮೆಯನ್ನೂ ಬಣ್ಣಿಸುತ್ತ ಆ ರಾತ್ರಿಯನ್ನು ಕಳೆದರು.

ಮಾರನೆಯ ದಿನದಲ್ಲಿ ಸೂರ್ಯೋದಯಕ್ಕೆ ಮೊದಲೇ ಎದ್ದು ಕಾಲ್ಯೋಚಿತ ಕ್ರಿಯೆಗಳನ್ನು ನಿರ್ವರ್ತಿಸಿ ಅಲ್ಲಲ್ಲಿರುವ ಸಕಲ ತೀರ್ಥಗಳಲ್ಲಿಯೂ ಸ್ನಾನಮಾಡಿ ಆ ಆ ದೇವರುಗಳನ್ನು ಸೇವಿಸಿ ಅಲ್ಲಿಗೆ ಒಂದು ಗಾವುದದ ದೂರದಲ್ಲಿರುವ ಧನುಷ್ಕೋಟಿಗೆ ಹೋಗಿ, "........ಸನ್ನಿಧೌ ಮಮ ಸಮಸ್ತ ಪಾಪಕ್ಷಯಾರ್ಥಂ ಶ್ರೀರಾಮ ಧನುಷ್ಕೋಟ್ಯಾಂ ಮಹೋದಧಿ ರತ್ನಾಕರ ಸ್ನಾನಮಹಂಕರಿಷ್ಯೇ" ಎಂದು ಮಹಾ ಸಂಕಲ್ಪಪೂರ್ವಕವಾಗಿ ಸೇತುಸ್ನಾನವನ್ನಾಚರಿಸಿ, ಅಲ್ಲಿ ಮಾಡಬೇಕಾದ ಕಾರ್ಯಗಳನ್ನೆಲ್ಲವನ್ನೂ ಮುಗಿಯಿಸಿ ಮತ್ತೆ ರಾಮೇಶ್ವರಕ್ಕೆ ಬಂದು, ಪೂರ್ವೋಕ್ತಕ್ರಮವಾಗಿ ರಾಮಲಿಂಗಮೂರ್ತಿಯನ್ನು ಸೇವಿಸುತ್ತ ಪರಮಾನಂದಮಗ್ನಮಾನಸರಾಗಿ ಆ ಪುಣ್ಯಕ್ಷೇತ್ರದಲ್ಲಿ ಐದು ದಿನಗಳಿದ್ದು ಬಳಿಕ ಶೇಷಾಹಿಭೂಷಣನೂ, ಸಕಲ ಲೋಕಶಂಕರನೂ, ಭಕ್ತವಶಂಕರನೂ ಆದ ಶಂಕರನನ್ನು ಪುನರ್ದರ್ಶನಪೂಜಾ ಪ್ರಣಾಮಪೂರ್ವಕವಾಗಿ ಸೇವಿಸಿ, ಪ್ರಯಾಣ ಮಾಡಿ ಅಲ್ಲಿಂದ ಕ್ರಮಕ್ರಮವಾಗಿ ನಡೆಯುತ್ತ ಹೊರಟು ಕೆಲವು ದಿನಗಳಿಗೆ ಶೇಷಾಚಲ ಗುಹಾಂತರಪ್ರದೇಶವನ್ನು ಸೇರಿದರು.

ಬಳಿಕ ಯೋಗಿವರ್ಯನಾದ ಚಿದಾನಂದನು ತನ್ನನ್ನತ್ಯಂತ ಭಕ್ತಿಯಿಂದಲೂ ತ್ರಿಕರಣಶುದ್ಧಿಯಿಂದಲೂ ಸೇವಿಸುತ್ತಿದ್ದ ಸತ್ಯಶೀಲನಲ್ಲಿ ಬಹಳವಾದ ಪ್ರೀತಿಯುಳ್ಳವನಾಗಿ ಆತನಿಗೆ ತತ್ತ್ವೋಪದೇಶವನ್ನು ಮಾಡಿ ಸಕಲ ವೇದಾಂತರಹಸ್ಯ

ಗಳನ್ನು ತಿಳಿಯಿಸಿದನು. ಸತ್ಯಶೀಲನು ಧನ್ಯನಾಗಿ ಚಿದಾನಂದಗುರುವನ್ನು ಎಡೆ ಬಿಡದೆ ಸೇವಿಸುತ್ತಿದ್ದು ಜನ್ಮರಾಹಿತ್ಯಕ್ಕಾಗಿ ಅಲ್ಲಿಯೇ ನಿಷ್ಠಾಗರಿಷ್ಠನಾಗಿ ತಪಸು ಮಾಡುತ್ತಿದ್ದನು.

ಇಂತು ವಿಚಿತ್ರ ಕಥಾಪ್ರಪಂಚಂ ಸಂಪೂರ್ಣಂ.

ಶ್ರೀ ಸೀತಾಲಕ್ಷ್ಮಣ ಭರತ ಶತ್ರುಘ್ನ ಹನುಮತ್ಸಮೇತ
ಶ್ರೀರಾಮಚಂದ್ರಾರ್ಪಣಮಸ್ತು.

ಕಾಲೇವರ್ಷತುಪರ್ಜನ್ಯಃ ಪೃಥಿವೀಸಸ್ಯಶಾಲಿನೀ |
ದೇಶೋಽಯಂಕ್ಷೋಭರಹಿತ ಸ್ಸಜ್ಜನಾಸ್ಸಂತುನಿರ್ಭಯಾಃ ||

ವೃ|| ಚಿತ್ರಕಥಾಪ್ರಪಂಚಮಿದು ಸಂಕಲಿತಂವರಗಾಧಿಸೂನುಸ |
ತ್ಸತ್ರಮನಾಳ್ದದಾಶರಥಿ ಗರ್ಪಿತಮಾಗಿರೆಕೇಶವಾಖ್ಯಭಾ |
ಷಾತ್ರಯವೇದಿಯಿಂ ಯುವನಭಶ್ಯುಚಿಪಕ್ಷ ತೃತೀಯೆಯೊಳ್ ಶುಭ |
ಶತ್ರುಗುರೂಕ್ತವಾಸರದೊಳಾ ರವಿತಾರಮಿದಿರ್ಕೆಧಾತ್ರಿಯೊಳ್ ||

ಭದ್ರಂ ಶುಭಂ ಮಂಗಳಂ.

